# ಕನ್ನಡ ವಾರ್ಷಿಕ
# ೧೯೯೩

ಗೌರವ ಪ್ರತಿ.

ಸಂಪಾದಕ

**ಡಾ. ಕರೀಗೌಡ ಬೀಚನಹಳ್ಳಿ**




**ಪ್ರಸಾರಾಂಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೨೧

**Kannada Varshika : 1993** (Kannada Year Book : 1993)
Edited, Compiled & Published by Dr. Karigowda Beechanahalli, Director of Prasaranga, Kannada University, Hampi, Vidyaranya, Kamalapura - 583 221, Karnataka.

Pages: xii + 404. First Impression : 1995. Rs. 90.00

K 039 5487 KUH 1993



**ಪ್ರಕಾಶಕರು**
ನಿರ್ದೇಶಕ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ - ೫೮೩ ೨೨೧
ದೂರವಾಣಿ : ೦೮೩೯೪ - ೫೧೩೩೭

**ಮುಖಚಿತ್ರ - ರೇಖಾಚಿತ್ರ**
ಕೆ. ಮಕಾಳಿ

ಬೆಲೆ : ೯೦.೦೦

**ಮುದ್ರಕರು**
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
ಜೆ. ಪಿ. ನಗರ ೨ನೇ ಹಂತ
ಬೆಂಗಳೂರು – ೫೬೦ ೦೭೮
ಫೋನ್ : ೬೪೨೧೦೨

# ನಿವ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ-ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ

ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ ಎಂದರೂ ತಪ್ಪಲ್ಲ. ಈ ದೃಷ್ಟಿಯಿಂದ ಕೆಲವು ಮಹತ್ವದ ಪ್ರಕಟಣೆಗಳು ಹೊರಬರಲಿವೆ.

'ಕನ್ನಡ ವಾರ್ಷಿಕ' ಆಯಾಯಾ ವರ್ಷದ ಕರ್ನಾಟಕದ ಸಂಸ್ಕೃತಿಯ ಸಾಧನೆಗಳನ್ನು ಸೂಕ್ಷ್ಮವಾಗಿ ಗುರುತಿಸುವ ಗುರಿಯನ್ನು ಹೊಂದಿದೆ. ಪ್ರತಿವರ್ಷ ಪ್ರಕಟವಾಗುವ 'ಕನ್ನಡ ವಾರ್ಷಿಕ'ಕೇವಲ ಸಾಧನೆಗಳ ಅಭಿವ್ಯಕ್ತಿಗಳ ಪಟ್ಟಿ ಮಾತ್ರವಾಗದೆ, ಆಯಾಯಾ ವರ್ಷದ ಸಾಧನೆಗಳ ಹಿಂದಿರುವ ಸಾಂಸ್ಕೃತಿಕ ನೆಲೆಗಳನ್ನೂ ಸಾಹಿತ್ಯಕ ಅನನ್ಯತೆಯನ್ನೂ ಅರಿಯುವ ಪ್ರಯತ್ನವಾಗಿದೆ.

ಪ್ರಸ್ತುತ 'ಕನ್ನಡ ವಾರ್ಷಿಕ ೧೯೯೩'ಕೃತಿಯನ್ನು ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರು ಸಂಪಾದಿಸಿ ಕೊಟ್ಟಿದ್ದಾರೆ. ಕನ್ನಡ ವಾರ್ಷಿಕ ಯೋಜನೆಯ ಹಿಂದಿರುವ ಆಶಯವನ್ನು ಅವರು ಸಮರ್ಥವಾಗಿ ಗ್ರಹಿಸಿ ಈ ಕೃತಿಯನ್ನು ಸಿದ್ಧಪಡಿಸಿದ್ದಾರೆ. ಕರ್ನಾಟಕದ ಒಂದು ವರ್ಷದ ಸಾಹಿತ್ಯಕ ಸಾಧನೆ ಮತ್ತು ಸಾಂಸ್ಕೃತಿಕ ಅಭಿವ್ಯಕ್ತಿಗಳನ್ನು ಗುರುತಿಸಿ ಅವುಗಳನ್ನು ಕುರಿತು ವಿವಿಧ ತಜ್ಞರಿಂದ ಬರೆಯಿಸಿ, ಸಂಯೋಜಿಸಿ ಕೊಡುವ ಕೆಲಸ ಕಡಿಮೆಯದ್ದಲ್ಲ; ಡಾ.ಕರೀಗೌಡರು ಈ ಕಷ್ಟವನ್ನು ನಿಭಾಯಿಸಿ, ತಮ್ಮ ಶ್ರದ್ಧೆ ಹಾಗೂ ಶ್ರಮದಿಂದ 'ಕನ್ನಡ ವಾರ್ಷಿಕ-೧೯೯೩'ಕೃತಿಯನ್ನು ಅಚ್ಚುಕಟ್ಟಾಗಿ ರೂಪಿಸಿದ್ದಾರೆ. ಅವರಿಗೆ ಕನ್ನಡದ ಪ್ರಖ್ಯಾತ ಲೇಖಕರು, ವಿದ್ವಾಂಸರು ಲೇಖನ ನೀಡಿ ಈ ಕೃತಿಯ ಯಶಸ್ಸಿಗೆ ಕಾರಣರಾಗಿದ್ದಾರೆ. ಅವರೆಲ್ಲರಿಗೂ ನನ್ನ ಕೃತಜ್ಞತೆಗಳು.

**ಚಂದ್ರಶೇಖರ ಕಂಬಾರ**
ಕುಲಪತಿಗಳು

# ಸಂಪಾದಕೀಯ

ಈಗಾಗಲೇ ಕನ್ನಡ ವಾರ್ಷಿಕ ೧೯೯೧ ಮತ್ತು ೧೯೯೨ ಪ್ರಕಟವಾಗಿ ವಿದ್ವಾಂಸರ ಮೆಚ್ಚಿಗೆಗೆ ಪಾತ್ರವಾಗಿವೆ. ಇದೀಗ ಈ ಮಾಲೆಗೆ 'ಕನ್ನಡ ವಾರ್ಷಿಕ ೧೯೯೩' ಸೇರ್ಪಡೆಯಾಗುತ್ತಿದೆ. ಈ ಕೃತಿಯೊಳಗೆ ಒಂದು ವರ್ಷದ ಕರ್ನಾಟಕದ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಸಾಧನೆಯ ವಿವರಗಳಿವೆ; ಕನ್ನಡ ಸಂಸ್ಕೃತಿಯನ್ನು ರೂಪಿಸುವಲ್ಲಿ ಪ್ರಧಾನ ಪಾತ್ರ ವಹಿಸಿರುವ ಸೃಜನಶೀಲ ಅಭಿವ್ಯಕ್ತಿಯ ವಿವಿಧ ವಿನ್ಯಾಸಗಳನ್ನೂ ಆಶಯಗಳನ್ನೂ ಒಂದು ಚೌಕಟ್ಟಿಗೆ ತಂದು ಇದನ್ನೊಂದು ಸ್ವತಂತ್ರ ಕೃತಿಯನ್ನಾಗಿ ರೂಪಿಸಲು ಪ್ರಯತ್ನಿಸಿದ್ದೇನೆ. ೧೯೯೩ನೇ ವರ್ಷದ ಕರ್ನಾಟಕದ ಆಗುಹೋಗುಗಳನ್ನು ಈ ರೀತಿ ಸಮಗ್ರವಾಗಿ ದಾಖಲಿಸುವ ಬಗೆ ಇತರ ವಿಶ್ವವಿದ್ಯಾಲಯಗಳು ಈವರೆಗೆ ನಡೆಸಿದ ರೀತಿಗಿಂತ ಭಿನ್ನವಾಗಿದೆ ಎಂದು ನಂಬಿದ್ದೇನೆ.

'ಕನ್ನಡ ವಾರ್ಷಿಕ ೧೯೯೩' ರಲ್ಲಿ ಮುಖ್ಯವಾಗಿ ನಾಲ್ಕು ಭಾಗಗಳಿವೆ. ಮೊದಲನೆಯ ಭಾಗವು ಕರ್ನಾಟಕದ ವಿದ್ಯಮಾನಗಳು, ಶೈಕ್ಷಣಿಕ ಸಂವಾದಗಳು, ಪ್ರಮುಖ ಸಂಗತಿಗಳು ಹಾಗೂ ಸಾಂಸ್ಕೃತಿಕ ಅನುಭವದ ಆಗುಹೋಗುಗಳನ್ನು ಒಳಗೊಂಡಿದೆ; ಎರಡನೆಯ ಭಾಗವು ಚಿತ್ರಕಲೆ, ರಂಗಭೂಮಿ, ಕ್ರೀಡೆ ಹಾಗೂ ಸಾಹಿತ್ಯ ಪ್ರಕಾರಗಳ ಸಮೀಕ್ಷೆಯನ್ನು ಒಳಗೊಂಡಿದೆ; ಮೂರನೆಯ ಭಾಗದಲ್ಲಿ ಇತಿಹಾಸದ ಕೆಲವು ಅಪೂರ್ವ ನೆನಪುಗಳನ್ನು ವರ್ತಮಾನದ ಜೊತೆ ಜೋಡಿಸಲಾಗಿದೆ; ನಾಲ್ಕನೆಯ ಭಾಗದಲ್ಲಿ ಕನ್ನಡ ನಾಡು, ನುಡಿಗೆ ಸಂದ ಗೌರವಗಳನ್ನು, ಹೊರನಾಡ ಕನ್ನಡಿಗರ ಸಾಂಸ್ಕೃತಿಕ ಚಟುವಟಿಕೆಗಳನ್ನು ಹಾಗೂ ಅಗಲಿದ ಗಣ್ಯರ ಕಿರುಪರಿಚಯವನ್ನು ದಾಖಲಿಸಲಾಗಿದೆ. ಇದು ಅನೇಕ ಕ್ಷೇತ್ರಗಳ ಒಂದು ವರ್ಷದ ಮಾಹಿತಿ ಮತ್ತು ವ್ಯಾಖ್ಯಾನವನ್ನು ಒಂದೇ ಕಡೆ ಸಮ್ಯಕ್ ದೃಷ್ಟಿಯಿಂದ ಕಟ್ಟಿಕೊಡುವ ಕನ್ನಡದ ಪ್ರಮುಖ ಪ್ರಕಟಣೆಯಾಗಿದೆ.

ಲೋಕದ ವಿವರಗಳನ್ನು ಮಾಹಿತಿಗಳನ್ನಾಗಿ ಪರಿವರ್ತಿಸುತ್ತಿರುವ ಇಂದಿನ ಯುಗದಲ್ಲಿ ಮತ್ತೆ ಅದೇ ಮಾಹಿತಿಗಳನ್ನು ಜ್ಞಾನದ ತಿಳುವಳಿಕೆಯನ್ನಾಗಿ ಪರಿವರ್ತಿಸಿ ಓದುಗರ ಮುಂದೆ ಇಟ್ಟಿರುವುದಕ್ಕೆ ಈ ಕೃತಿ ಸಾಕ್ಷಿಯಾಗಿದೆ. ಈ ದೃಷ್ಟಿಯಿಂದ ಒಂದು ರೀತಿಯಲ್ಲಿ ಎಲ್ಲಾ ಮಾಹಿತಿಗಳನ್ನು ಒಳಗೊಂಡು ವಿವೇಚಿಸಿರುವ ಈ 'ವಾರ್ಷಿಕ' ಶಾಲಾ ಕಾಲೇಜು ಗ್ರಂಥಾಲಯಗಳಲ್ಲಿ ಇರಲೇಬೇಕಾದ ಕೃತಿ.

ನನ್ನನ್ನು ಈ ಜವಾಬ್ದಾರಿಯುತವಾದ ಕೆಲಸಕ್ಕೆ ತೊಡಗಿಸಿದವರು ನಮ್ಮ ಮಾನ್ಯ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರರು ಮತ್ತು ಕುಲಸಚಿವರಾದ ಡಾ. ಕೆ. ವಿ. ನಾರಾಯಣ ಅವರು. ಈ ಪುಸ್ತಕದ ಸಿದ್ಧತೆಯ ಎಲ್ಲಾ ಹಂತದಲ್ಲೂ ಸಲಹೆ, ಮಾರ್ಗದರ್ಶನ ನೀಡಿದ ಇವರಿಗೆ ನಾನು ತುಂಬಾ ಕೃತಜ್ಞನಾಗಿದ್ದೇನೆ.

ಈ ಕೃತಿಯ ಸಂಯೋಜನೆಗೆ ನನ್ನ ಸಹದ್ಯೋಗಿಗಳೂ ಅನೇಕ ಗೌರವಾನ್ವಿತ ಲೇಖಕರೂ ಕಾರಣರಾಗಿದ್ದಾರೆ. ಸಕಾಲದಲ್ಲಿ ಲೇಖನ, ಛಾಯಾಚಿತ್ರ, ಭಾವಚಿತ್ರಗಳನ್ನು ನೀಡಿದ್ದಾರೆ. ಇಲ್ಲಿನ ಎಲ್ಲಾ ಲೇಖಕರಿಗೂ ನನ್ನ ವಂದನೆಗಳು.

ಈ ಕೃತಿಯ ನಿರ್ಮಾಣದ ಹಂತದಲ್ಲಿ ವಿವಿಧ ರೀತಿಯಲ್ಲಿ ಸಲಹೆ ಸಹಕಾರ ನೀಡಿದ ಗೆಳೆಯರಾದ ಹಿ.ಚಿ. ಬೋರಲಿಂಗಯ್ಯ, ಮಲ್ಲೇಪುರಂ ಜಿ. ವೆಂಕಟೇಶ್, ಜಿ.ಜಯಕುಮಾರ್, ಕೆ. ಜಿ. ವಾಸುಕಿ ಅವರಿಗೆ, ಈ ಕೃತಿಯ ಸಂಪಾದನಾ ಕಾರ್ಯದಲ್ಲಿ ಉದ್ದಕ್ಕೂ ನನ್ನೊಡನೆ ಪ್ರೀತಿಯಿಂದ ಸಹಕರಿಸಿದ ಕಿರಿಗೆಳೆಯ ವೆಂಕಟೇಶ ಇಂದ್ವಾಡಿ ಅವರಿಗೆ, ಅಂದವಾದ ಮುಖಚಿತ್ರ ಹಾಗೂ ಒಳಗಿನ ರೇಖಾಚಿತ್ರಗಳನ್ನು ರಚಿಸಿದ ಕಲಾವಿದ ಕೆ. ಮಕಾಳಿ ಅವರಿಗೆ, ಪುಸ್ತಕದ ಕರಡನ್ನು ತಿದ್ದಿ ಅದಕ್ಕೆ ಒಂದು ರೂಪ ಕೊಟ್ಟ ಶ್ರೀಧರ ರಾವ್ ಪಿಸ್ಸೆ ಹಾಗೂ ಅಂದವಾಗಿ ಮುದ್ರಿಸಿಕೊಟ್ಟ ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್‌ನ ಮಹಿಮಯ್ಯನವರಿಗೆ ನನ್ನ ನಮಸ್ಕಾರ.

**ಕರೀಗೌಡ ಬೀಚನಹಳ್ಳಿ**
ಸಂಪಾದಕ

# ಪರಿವಿಡಿ

## ಭಾಗ ೧
## ಅನುಭವದ ಆಗು-ಹೋಗು

## ಭಾಗ ೨
## ಅಭಿವ್ಯಕ್ತಿಯ ಹುಡುಕಾಟ

## ಭಾಗ ೩
## ಅಂದು ಇಂದು ಜೋಡಿಸುವ ನೆನಪು



## ಭಾಗ ೪
## ಸಂಕೀರ್ಣ

## VI ಅಗಲಿದ ಗಣ್ಯರು

# ಭಾಗ — ೧

## ಅನುಭವದ ಆಗು - ಹೋಗು

* ಕನ್ನಡ ವಿಶ್ವವಿದ್ಯಾಲಯ : ೧೯೯೩
* ಪರಿಸರ
* ವಿಜ್ಞಾನ - ತಂತ್ರಜ್ಞಾನ
* ಹೈನುಗಾರಿಕೆ
* ವೈದ್ಯಕೀಯ
* ಕೃಷಿ - ತೋಟಗಾರಿಕೆ
* ರಾಜಕಾರಣ
* ಶಿಕ್ಷಣ
* ಪ್ರಶಸ್ತಿ ವಿಜೇತರು

# ಕನ್ನಡ ವಿಶ್ವವಿದ್ಯಾಲಯ-೧೯೯೩

*ಸಂಗ್ರಹ* : *ಎಂ.ಎಂ. ಶಿವಪ್ರಕಾಶ್*

## ಕಮ್ಮಟಗಳು

ವಿಶ್ವವಿದ್ಯಾಲಯದ ಪಿಎಚ್. ಡಿ. ವಿದ್ಯಾರ್ಥಿಗಳ ಸಂಶೋಧಕರ ಕಮ್ಮಟ ೧೯೯೩ರ ಜನವರಿ ೨೮ ರಿಂದ ಫೆಬ್ರವರಿ ೩, ೯೩ ರವರೆಗೆ ನಡೆಯಿತು. ೧೨ ವಿದ್ಯಾರ್ಥಿಗಳು ಪಾಲ್ಗೊಂಡಿದ್ದ ಈ ಕಮ್ಮಟವನ್ನು ಕುಲಪತಿ ಡಾ. ಚಂದ್ರಶೇಖರ ಕಂಬಾರರು ಉದ್ಘಾಟಿಸಿ, ವಿದ್ವಾಂಸರನ್ನು ಕೆರಳಿಸಿ ಅವರಿಂದ ಉತ್ತಮಿಕೆಯನ್ನು ಪಡೆಯಬೇಕೆಂದು ವಿದ್ಯಾರ್ಥಿಗಳಿಗೆ ಸಲಹೆ ನೀಡಿದರು. ಅಧ್ಯಯನದ ವಿಧಿವಿಧಾನಗಳ ಬಗ್ಗೆ ವಿಶ್ವವಿದ್ಯಾಲಯದ ವಿದ್ವಾಂಸರು ಚರ್ಚೆ, ಉಪನ್ಯಾಸಗಳ ಮೂಲಕ ಉಪಯುಕ್ತ ಮಾರ್ಗದರ್ಶನ ನೀಡಿದರು.

## ಅಧ್ಯಯನ ಶಿಬಿರ

ವಿಶ್ವವಿದ್ಯಾಲಯದ ಮೊದಲ ತಂಡದ ಪಿಎಚ್. ಡಿ. ವಿದ್ಯಾರ್ಥಿಗಳ ಎರಡನೆಯ ಅಧ್ಯಯನ ಶಿಬಿರವನ್ನು ದಿನಾಂಕ ೨೦.೬.೯೩ ರಿಂದ ೨೫.೬.೯೩ರವರೆಗೆ ನಡೆಸಲಾಯಿತು. ಈ ಶಿಬಿರದಲ್ಲಿ ಕನ್ನಡ ಸಾಹಿತ್ಯದ ಪುನರ್‌ಮೌಲ್ಯೀಕರಣ, ಮಹಿಳಾ ಅಧ್ಯಯನಗಳು, ಕನ್ನಡ ಜಾನಪದ, ಸಾಂಸ್ಕೃತಿಕ ನೀತಿ ಮತ್ತು ಅಧ್ಯಯನಗಳಲ್ಲಿ ದೇಶಿಯ ಮಾದರಿಗಳು ಎಂಬ ವಿಷಯಗಳ ಕುರಿತು ವಿಶೇಷ ಉಪನ್ಯಾಸಗಳು ಹಾಗೂ ಚರ್ಚೆಗಳನ್ನು ನಡೆಸಲಾಯಿತು. ಪ್ರತಿದಿನದ ಗೋಷ್ಠಿಗಳಲ್ಲಿ ಸಂಶೋಧನ ವಿದ್ಯಾರ್ಥಿಗಳು ತಮ್ಮ ಅಧ್ಯಯನದ ಸಮಸ್ಯೆಗಳ ಬಗ್ಗೆ ಟಿಪ್ಪಣಿ ಮಂಡಿಸುವುದರ ಜೊತೆಗೆ ಚರ್ಚೆಗೆ ತಮ್ಮನ್ನು ತೊಡಗಿಸಿಕೊಂಡರು.

## ಸಮಾಜ ವಿಜ್ಞಾನಗಳ ಹವ್ಯಾಸಿ ಸಂಶೋಧಕರ ಕಮ್ಮಟ

ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯವು ಚರಿತ್ರೆ ವಿಭಾಗದ ವತಿಯಿಂದ ೪.೧೦.೯೩ ರಿಂದ ೯.೧೦.೯೩ ರವರೆಗೆ ಹವ್ಯಾಸಿ ಸಂಶೋಧಕರ ಕಮ್ಮಟವನ್ನು ಏರ್ಪಡಿಸಿತ್ತು. ಈ ಕಮ್ಮಟವನ್ನು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಡಾ. ಎಂ. ಎಂ. ಕಲಬುರ್ಗಿಯವರು ಉದ್ಘಾಟಿಸಿ, ಜನರ ಬಳಿಗೆ ಹೋಗದ ಸಂಶೋಧನೆ ಜನರಿಂದ ದೂರವಾಗಿಯೇ ಉಳಿಯಿತು. ಆದ್ದರಿಂದ

ಸಂಶೋಧನೆಯನ್ನು ಜನರ ನಡುವೆ ಕೊಂಡೊಯ್ದು ಅದಕ್ಕೆ ಜನಪ್ರಿಯತೆ ತಂದುಕೊಡುವ ಕೆಲಸವನ್ನು ಕನ್ನಡ ವಿಶ್ವವಿದ್ಯಾಲಯ ಮಾಡಬೇಕೆಂದು ಸೂಚಿಸಿದರು.

ಆರ್ಯೀಕರಣದ ಶೋಧನೆಗೆ ಆಸಕ್ತಿ ಕೊಡುವುದರ ಬದಲು ದ್ರಾವಿಡೀಕರಣದ ಸಂಶೋಧನೆಗೆ ಹೆಚ್ಚು ಒತ್ತು ನೀಡಬೇಕೆಂದು. ಸಂಶೋಧನೆಗೆ ದೇಸೀವಾದವನ್ನು ಅಳವಡಿಸಿಕೊಂಡು ಸತ್ಯವನ್ನು ಹೇಳುವ ಕೆಲಸವನ್ನು ಇನ್ನು ಶುರು ಮಾಡಬೇಕಾಗಿದೆಯೆಂದು ಡಾ. ಕಲಬುರ್ಗಿಯವರು ಹೇಳಿದರು. ಕುಲಪತಿ ಡಾ. ಚಂದ್ರಶೇಖರ ಕಂಬಾರರು ಸಭೆಯ ಅಧ್ಯಕ್ಷತೆ ವಹಿಸಿದ್ದರು.

ಆರು ದಿನಗಳ ಕಾಲ ನಡೆದ ವಿಜ್ಞಾನಿಗಳ ಹವ್ಯಾಸಿ ಸಂಶೋಧಕರ ಕಮ್ಮಟದ ಮುಕ್ತಾಯ ಸಮಾರಂಭದ ಅತಿಥಿಗಳಾಗಿ ಖ್ಯಾತ ಚರಿತ್ರಕಾರ ಡಾ. ಯು. ಸೂರ್ಯನಾಥ ಕಾಮತ್ ಅವರು ಆಗಮಿಸಿದ್ದರು. ಸಮಾಜ ವಿಜ್ಞಾನವು ಈಗ ನಿರ್ಲಕ್ಷಿತ ಕ್ಷೇತ್ರವಾಗಿದೆ. ಅದನ್ನು ಚೈತನ್ಯ ಕೊಟ್ಟು ಬೆಳಸಬೇಕಾಗಿದೆ ಎಂದು ಹೇಳಿದ ಅವರು ಸಂಶೋಧನೆಯ ಒಳನೋಟಗಳನ್ನು ಪಡೆಯುವಲ್ಲಿ ಹವ್ಯಾಸಿ ಸಂಶೋಧಕರು ಗಮನ ಹರಿಸಬೇಕೆಂದರು. ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಕುಲಪತಿಯವರು ವಹಿಸಿದ್ದರು.

## ಶಿಬಿರಗಳು

### ಸಾಂಪ್ರದಾಯಿಕ ಕಲಾ ಶಿಬಿರ

ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾವಿಭಾಗ ಕರ್ನಾಟಕದ ಸಾಂಪ್ರದಾಯಿಕ ಕಲಾ ಪ್ರಕಾರವನ್ನು ಪ್ರೋತ್ಸಾಹಿಸುವ ಸಲುವಾಗಿ ಫೆಬ್ರವರಿ ೧೮ ರಿಂದ ಮಾರ್ಚ್ ೨, ೯೩ರ ವರೆಗೆ ಸಾಂಪ್ರದಾಯಿಕ ಕಲಾ ಶಿಬಿರವನ್ನು ಏರ್ಪಡಿಸಿತ್ತು. ಈ ಶಿಬಿರದಲ್ಲಿ ರಾಜ್ಯದ ಸುಪ್ರಸಿದ್ಧ ಸಾಂಪ್ರದಾಯಿಕ ಕಲಾವಿದರು ಭಾಗವಹಿಸಿ ಸ್ವತಃ ಚಿತ್ರಗಳನ್ನು ಬಿಡಿಸಿ ತಮ್ಮ ಕಲಾ ನೈಪುಣ್ಯತೆಯನ್ನು ಪ್ರದರ್ಶಿಸಿದರು. ಈ ಸಾಂಪ್ರದಾಯಿಕ ಕಲಾ ಶಿಬಿರ ಸಂಶೋಧನಾ ಅಭ್ಯರ್ಥಿಗಳಿಗೆ ಪೂರಕವಾದ ಮಾಹಿತಿಯನ್ನು ನೀಡಿತು.

ಈ ಶಿಬಿರದ ಸಮಾರೋಪ ಭಾಷಣ ಮಾಡಿದ ಖ್ಯಾತ ನಿರ್ದೇಶಕರಾದ ಶ್ರೀ ಬಿ. ವಿ. ಕಾರಂತರು 'ಯಾವ ಅಂಧಾಭಿಮಾನವಿಲ್ಲದೆ ಕನ್ನಡದ ಕೆಲಸ ವ್ಯಾಪಕವಾಗಿ ಆಗಬೇಕಾಗಿರುವುದರಿಂದ ಕನ್ನಡ ವಿಶ್ವವಿದ್ಯಾಲಯದ ಅವಶ್ಯಕತೆ ಇದೆ. ಹಾಗೂ ಕನ್ನಡ ವಿಶ್ವವಿದ್ಯಾಲಯ ರಾಷ್ಟ್ರಮಟ್ಟದಲ್ಲಿ, ವಿಶ್ವಮಟ್ಟದಲ್ಲಿ ತಲೆ ಎತ್ತಿ ನಿಲ್ಲಲಿ' ಎಂದು ಹಾರೈಸಿದರು.

ಒಟ್ಟಾರೆ ೧೪ ದಿನ ನಡೆದ ಈ ಶಿಬಿರದಲ್ಲಿ ವಿಜಯ ಹಾಗರ ಗುಂಡಿಗಿ, ಜೆ.ಎಂ. ಎಸ್.ಮಣಿ, ಎಸ್.ಎಚ್. ನಾಗರಾಜು, ಕೆ. ಜಿ. ಮುರುಗೇಶಪ್ಪ, ರಾಮು ನರಸಯ್ಯ, ಎಂ.ವಿ. ಕಂಬಾರ, ದೊರೆಸ್ವಾಮಿ ಕಲಾವಿದರು ಭಾಗವಹಿಸಿದ್ದರು.

**ರಂಗ ನಿರ್ದೇಶನ ಶಿಬಿರ**

ಕನ್ನಡ ವಿಶ್ವವಿದ್ಯಾಲಯ ಮೇ ಒಂದರಿಂದ ಒಂದು ವಾರ ಕಾಲ ರಂಗ ನಿರ್ದೇಶನ ಶಿಬಿರವನ್ನು ಏರ್ಪಡಿಸಿತ್ತು. ಇದು ರಂಗಭೂಮಿಯ ಇತಿಹಾಸದಲ್ಲೇ ಮೊದಲ ಬಾರಿಗೆ ನಡೆದ ಪ್ರಯತ್ನ.

ನಾಟಕಕಾರ ಹಾಗೂ ಮಾಜಿ ಸಚಿವರಾದ ಶ್ರೀ ಎಂ. ಪಿ. ಪ್ರಕಾಶರು ಮೇ ಒಂದರಂದು ವಿಶ್ವವಿದ್ಯಾಲಯದಲ್ಲಿ ಜ್ಯೋತಿ ಬೆಳಗಿಸುವುದರ ಮೂಲಕ ರಂಗ ನಿರ್ದೇಶನ ಶಿಬಿರವನ್ನು ಉದ್ಘಾಟಿಸಿ, ''ಪ್ರಾದೇಶಿಕ ರಂಗಭೂಮಿ ಸಂಸ್ಕೃತ ನಾಟಕಗಳ ಪ್ರಭಾವದಿಂದ ಹೆಚ್ಚು ಪ್ರಚಾರಕ್ಕೆ ಬರಲಿಲ್ಲ. ಅದೊಂದು ದುರಂತ. ನಾಟಕದ ಅಭಿವ್ಯಕ್ತಿಯಲ್ಲಿ ನಿರ್ದೇಶನ, ಕಲಾವಿದನ ಹಾಗೂ ನಾಟಕಕಾರನ ಔಚಿತ್ಯಗಳು ಗಮನಾರ್ಹ. ಈ ಶಿಬಿರವು 'ನಿರ್ದೇಶನ'ಕ್ಕೆ ಒತ್ತುಕೊಟ್ಟಿದೆ. ಇದೊಂದು ಹೊಸ ವರ್ತುಲ. ಈ ಬಗ್ಗೆ ಶಿಬಿರವು ಹೆಚ್ಚು ಬೆಳಕು ಚೆಲ್ಲಬೇಕು. ಈ ಶಿಬಿರವು ರಂಗ ಪ್ರಗತಿಗೆ ಸ್ಫೂರ್ತಿಯಾಗಲಿ'' ಎಂದು ತಮ್ಮ ಆಶಯ ವ್ಯಕ್ತಪಡಿಸಿದರು.

''ರಂಗ ನಿರ್ದೇಶಕರನ್ನು ಒಂದೆಡೆ ಸೇರಿಸಿ ರಂಗಭೂಮಿಯ ನಿರ್ದೇಶನದ ವಿವಿಧ ಮುಖಗಳ, ಸ್ತರಗಳ ಕುರಿತು ತಮ್ಮ ಅನುಭವ ಮತ್ತು ಚಿಂತನೆಗಳನ್ನು ಮಂಡಿಸಿ, ಚರ್ಚಿಸಲು ಈ ಶಿಬಿರದಲ್ಲಿ ಅವಕಾಶ ಮಾಡಿಕೊಡಲಾಗಿದೆ. ಹೀಗೆ ಶಿಬಿರದ ನಿರ್ದೇಶಕರು ಮತ್ತು ಶಿಬಿರಾರ್ಥಿಗಳು ಸಂವಾದಿಸಿದ ವಿಚಾರಗಳನ್ನು ದಾಖಲಿಸಿಕೊಳ್ಳುವ ಕ್ರಿಯೆ ಪ್ರತಿನಿತ್ಯವು ನಡೆಯುತ್ತದೆ. ಈ ವಿಧವಾಗಿ ಕನ್ನಡ ವಿಶ್ವವಿದ್ಯಾಲಯವು ವಾರದವರೆಗೆ ನಿರ್ದೇಶನದ ಬಗ್ಗೆ ಏರ್ಪಡಿಸಿ, ನಡೆಸುತ್ತಿರುವ ಈ ಶಿಬಿರವು ಭಾರತದಲ್ಲಿಯೇ ಪ್ರಥಮ ಪ್ರಯತ್ನವಾಗಿದೆ'' ಎಂದು ರಂಗಭೂಮಿಯ ಖ್ಯಾತ ನಿರ್ದೇಶಕರಾದ ಶ್ರೀ ಬಿ. ವಿ. ಕಾರಂತರು ಅಭಿಪ್ರಾಯಪಟ್ಟರು. ಶ್ರೀ ಕಾರಂತರು ಒಂದು ವಾರ ಕಾಲ ಶಿಬಿರದಲ್ಲಿದ್ದು ಯುವ ನಿರ್ದೇಶಕರಿಗೆ ರಂಗಭೂಮಿಯ ಇತಿಹಾಸ, ನಿರ್ದೇಶನ, ರಂಗ ಪ್ರಯೋಗ ಇತ್ಯಾದಿ ವಿಷಯಗಳನ್ನು ಪರಿಚಯಿಸಿದರು. ಕಾರಂತರ ನೇತೃತ್ವದಲ್ಲಿ ನಡೆದ ಈ ಶಿಬಿರ 'ಅನುಭವ ಹಂಚಿಕೆಯ ಕಮ್ಮಟವೇ ಆಗಿತ್ತು'.

**ಭಾಷಾಶಾಸ್ತ್ರದ ಶಿಶಿರ ಶಾಲೆ**

''ಉನ್ನತ ಶಿಕ್ಷಣ, ಆಡಳಿತ ಮತ್ತು ಮಾಧ್ಯಮಗಳ ಬಳಕೆಗೆ ಕನ್ನಡವನ್ನು ಸನ್ನದ್ಧಗೊಳಿಸಬೇಕೆಂಬ ಒತ್ತಾಯ ಬಹುದಿನದ್ದು. ನಿಘಂಟುಗಳ ರಚನೆಯಾಗಬೇಕು, ಪರಿಭಾಷೆ ರೂಪಗೊಳ್ಳಬೇಕು, ಭಾಷೆಯ ಹೊಸ ಬಳಕೆಗಳ ಮೌಲ್ಯಮಾಪನ ನಡೆಯಬೇಕು. ಇದರಿಂದಾಗಿ ಭಾಷೆಯ ವ್ಯಾಕರಣ ಶೈಲಿ, ವಾಕ್ಯರಚನೆ, ಪದಕೋಶ ಈ ಎಲ್ಲಾ ಹಂತಗಳಲ್ಲೂ ಬದಲಾವಣೆಗಳಾಗತೊಡಗಿವೆ. ಇವೆಲ್ಲವನ್ನು ದಾಖಲುಗೊಳಿಸ ಬೇಕಾಗಿದೆ, ವಿವರಿಸಬೇಕಾಗಿದೆ. ಶೈಕ್ಷಣಿಕ ಅವಕಾಶಗಳು ವಿಸ್ತಾರಗೊಂಡು ಹಲವು ಸ್ತರಗಳ ಜನರು ಕಲಿಯುತ್ತಿರುವ ಇಂದಿನ ಸಂದರ್ಭದಲ್ಲಿ, ಕನ್ನಡ ಭಾಷಾಶಾಸ್ತ್ರದ ಶಿಶಿರಶಾಲೆ ಪ್ರಮುಖವಾದ ಚಟುವಟಿಕೆಯಾಗಬೇಕಾಗಿದೆ. ಇವೆಲ್ಲಾ ಕಾರ್ಯಗಳಿಗೂ

ಆಧುನಿಕ ಭಾಷಾಶಾಸ್ತ್ರದಲ್ಲಿ ತರಬೇತಿ ಪಡೆದಿರುವ ತಜ್ಞರ ಅವಶ್ಯಕತೆ ಇದೆ'' ಎಂಬುದನ್ನು ಕನ್ನಡ ವಿಶ್ವವಿದ್ಯಾಲಯ ಮನಗಂಡಿತು. ಕರ್ನಾಟಕ ಭಾಷಾಶಾಸ್ತ್ರದ ವಲಯದಲ್ಲಿ ನಡೆಯುತ್ತಿರುವ ಸಂಶೋಧನೆ ತೀರಾ ಕನಿಷ್ಠ ಪ್ರಮಾಣದ್ದು ಹಾಗೂ ಬಳಕೆಯಾಗುತ್ತಿರುವ ವಿಧಾನಗಳು ಸುಮಾರು ಅರ್ಧ ಶತಮಾನದಷ್ಟು ಹಳೆಯವು. ಕಳೆದ ನಾಲ್ಕೈದು ದಶಕಗಳಲ್ಲಿ ಭಾಷಾಶಾಸ್ತ್ರ ದಾಪುಗಾಲು ಇಟ್ಟು ಮುನ್ನುಗ್ಗಿ ನಡೆದಿದೆ. ನಮ್ಮ ಪಠ್ಯಪುಸ್ತಕ, ಪಠ್ಯಕ್ರಮ, ಸಂಶೋಧನೆ, ಬರಹ ಈ ಹೊಸ ಪರಿವರ್ತನೆಗಳಿಗೆ ಒಗ್ಗಿಕೊಂಡಿಲ್ಲ. ದಿನಕಳೆದಂತೆ ಭಾಷಾಶಾಸ್ತ್ರದ ಹೊಸ ನೆಲೆಗಳನ್ನು ಎಟುಕಿಸಿಕೊಳ್ಳುವುದು ಕಷ್ಟವಾಗುತ್ತಲೇ ನಡೆದಿದೆ. ಈ ದುಸ್ಸಾಧ್ಯ ಪ್ರಯತ್ನದಲ್ಲಿ ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಸಿದ 'ಶಿಶಿರಶಾಲೆ' ಒಂದು ಯಶಸ್ವಿ ಪ್ರಯತ್ನ. ಇದು ೨೭ ದಿನಗಳ ಕಾಲ ನಡೆಯಿತು. ಕರ್ನಾಟಕದ ಮತ್ತು ಹೊರರಾಜ್ಯಗಳಿಂದ ಸುಮಾರು ೧೫ ವಿದ್ಯಾರ್ಥಿಗಳು ಈ ಶಾಲೆಯಲ್ಲಿ ಭಾಗವಹಿಸಿದ್ದರು.

**ಶಿಶಿರ ಶಾಲೆಯ ಉದ್ಘಾಟನೆ**

ಕನ್ನಡ ವಿಶ್ವವಿದ್ಯಾಲಯ ವ್ಯವಸ್ಥೆಗೊಳಿಸಿದ್ದ ಕನ್ನಡ ಭಾಷಾಶಾಸ್ತ್ರದ ಶಿಶಿರಶಾಲೆಯನ್ನು ಭಾರತೀಯ ಭಾಷಾಶಾಸ್ತ್ರದ ಧೀಮಂತರಲ್ಲೊಬ್ಬರಾದ ಪ್ರಾಧ್ಯಾಪಕ ಶ್ರೀ ಭ. ಕೃಷ್ಣಮೂರ್ತಿ ಅವರು ನವೆಂಬರ ೯೩ ರಂದು ಉದ್ಘಾಟಿಸಿ, ''ಪ್ರಾದೇಶಿಕ ಭಾಷಾ ವಿಶ್ವವಿದ್ಯಾಲಯಕ್ಕೆ ಒಂದು ವಿಶಿಷ್ಟಸ್ಥಾನವಿದೆ. ಐತಿಹಾಸಿಕ ಪ್ರಸಿದ್ಧವಾದ ತುಂಗಭದ್ರಾ ನದಿಯ ದಂಡೆಯಲ್ಲಿರುವ ಹಂಪಿಯಲ್ಲಿ ಈ ವಿಶ್ವವಿದ್ಯಾಲಯವನ್ನು ಸ್ಥಾಪಿಸಿರುವುದು ಸಾಂಸ್ಕೃತಿಕವಾಗಿ, ಸಾಹಿತ್ಯಕವಾಗಿ ಸ್ವಾಗತಾರ್ಹವಾಗಿದೆ. ಕನ್ನಡ ಭಾಷೆಯ ಅಭಿವೃದ್ಧಿಯ ಬಗ್ಗೆ ಕನ್ನಡ ವಿಶ್ವವಿದ್ಯಾಲಯಕ್ಕೆ ಹೆಚ್ಚಿನ ಹೊಣೆಗಾರಿಕೆಯಿದೆ. ಕನ್ನಡ ಭಾಷೆಯನ್ನು ಎಲ್ಲಾ ರಂಗಗಳಲ್ಲಿಯೂ ಬಲಿಷ್ಠವಾದ ಭಾಷೆಯನ್ನಾಗಿ ಬಳಸಲು ಅದಕ್ಕೆ ಪೂರಕವಾದ ಅನೇಕ ಶಬ್ದಕೋಶ, ಪದಕೋಶ ಹಾಗೂ ನುಡಿಗಟ್ಟುಗಳನ್ನು ಸಿದ್ಧಪಡಿಸಿ ಪ್ರಕಟಿಸಬೇಕು. ಕನ್ನಡ ವಿಶ್ವವಿದ್ಯಾಲಯ ಇಂತಹ ಅನೇಕ ಕೋಶಗಳನ್ನು ನಿರ್ಮಾಣ ಮಾಡುತ್ತಿರುವ ಇಲ್ಲಿಯ ಅಧ್ಯಯನ ಭಾಷಾಶಾಸ್ತ್ರದ ಕ್ಷೇತ್ರಕ್ಕೆ ಅಮೂಲ್ಯ ಸೇರ್ಪಡೆಯಾಗುವುದರಲ್ಲಿ ಸಂದೇಹವಿಲ್ಲ. ಕರ್ನಾಟಕದಲ್ಲಿ ಭಾಷೆಯನ್ನು ಕುರಿತು ಶಾಸ್ತ್ರೀಯವಾದ ಅಧ್ಯಯನದ ಅಗತ್ಯತೆ ತುಂಬಾ ಇದೆ. ಆಧುನಿಕ ತಂತ್ರಜ್ಞಾನದ ಸೌಲಭ್ಯಗಳನ್ನು ಬಳಸಿಕೊಂಡು ಕನ್ನಡ ವಿಶ್ವವಿದ್ಯಾಲಯ ಮುನ್ನಡೆಯಲಿ'' ಎಂದು ಆಶಿಸಿದರು.

ಭಾಷಾ ಶಿಶಿರ ಶಾಲೆಯ ನಿರ್ದೇಶಕರಲ್ಲೊಬ್ಬರಾದ ಡಾ. ಕೆ. ವಿ. ನಾರಾಯಣ ಅವರು ಶಿಶಿರ ಶಾಲೆಯ ಸ್ವರೂಪವನ್ನು ವಿವರಿಸಿದರು. '' ಭಾರತದಲ್ಲಿ ಭಾಷಾಕ್ಷೇತ್ರ ತುಂಬಾ ಹಿಂದುಳಿದಿದೆ. ಇಲ್ಲಿ ಮಹತ್ವಪೂರ್ಣ ಅಧ್ಯಯನ ಇನ್ನೂ ಆಗಿಲ್ಲ. ಕನ್ನಡ ವಿಶ್ವವಿದ್ಯಾಲಯದಲ್ಲಿ ಕನ್ನಡ ಭಾಷೆಯನ್ನು ಕುರಿತು ಅಧ್ಯಯನ ಮಾಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ. ಈ ರೀತಿಯ ಶಾಲೆಯನ್ನು ಪ್ರತಿವರ್ಷವೂ ನಡೆಸಬೇಕೆಂದು ನಮ್ಮ ಬಯಕೆಯಾಗಿದೆ'' ಎಂದು ಅವರು ಹೇಳಿದರು.

ಶಿಶಿರ ಶಾಲೆಯಲ್ಲಿ ಧ್ವನಿಶಾಸ್ತ್ರ, ಧ್ವನಿರಚನಾಶಾಸ್ತ್ರ, ವ್ಯಾಕರಣಶಾಸ್ತ್ರ, ಪದರಚನಾಶಾಸ್ತ್ರ, ಭಾಷೆಯ ಕಲಿಕೆ, ಭಾಷೆಯ ಬೋಧನೆ, ದ್ವಿಭಾಷಿಕತೆ, ಸಾಮಾಜಿಕ ಭಾಷಾಶಾಸ್ತ್ರ, ಕನ್ನಡ ಭಾಷೆಯ ಚರಿತ್ರೆ ಮತ್ತು ಪ್ರಭೇದಗಳು - ಈ ಎಲ್ಲಾ ವಲಯಗಳಲ್ಲಿ ತರಗತಿಗಳು ನಡೆದವು. ಈ ಶಾಲೆಯನ್ನು ನಡೆಸಿಕೊಟ್ಟ ಪ್ರಾಧ್ಯಾಪಕ ವರ್ಗಗಳಲ್ಲಿ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಖ್ಯಾತಿಯ ಭಾಷಾ ಶಾಸ್ತ್ರಜ್ಞರು ಇದ್ದರು. ಡಾ. ಇ. ಅಣ್ಣಾಮಲೈ, ಡಾ.ಎಂ. ಚಿದಾನಂದಮೂರ್ತಿ, ಡಾ. ಪ್ರತಿಭಾ ಕಾರಂತ, ಡಾ. ಡಿ. ಎನ್. ಶಂಕರಭಟ್ಟ, ಡಾ. ಯಮುನಾ ಕಾಛ್ರು ಇವರುಗಳಿಂದ ವಿಶೇಷ ಉಪನ್ಯಾಸಗಳು ನಡೆದವು. ವಿದ್ವಾಂಸರುಗಳಾದ ಕೆ. ವಿ. ನಾರಾಯಣ, ಕೆ. ಪಿ. ಭಟ್ಟ, ಪಿ. ವಿ. ಗಿರಿಧರ, ಎಸ್. ಎನ್. ಶ್ರೀಧರ, ಕಮಲ್, ಕೆ. ಶ್ರೀಧರ್. ಕೆ. ಕುಶಾಲಪ್ಪಗೌಡ, ಟಿ. ಎಸ್. ಸತ್ಯನಾಥ ಇವರುಗಳು ತರಗತಿಗಳನ್ನು ನಡೆಸಿಕೊಟ್ಟರು.

ಶಿಶಿರ ಶಾಲೆಯ ಒಂದು ಮುಖ್ಯ ಸಂಗತಿಯೆಂದರೆ, ಶಾಸ್ತ್ರೀಯ ಚರ್ಚೆಯು ಕನ್ನಡ ಭಾಷೆಯಲ್ಲಿ ನಡೆದದ್ದು. ಆಧುನಿಕ ಭಾಷಾಶಾಸ್ತ್ರ ಕುರಿತ ಚರ್ಚೆ ಕನ್ನಡದಲ್ಲಿ ಇದುವರೆಗೂ ನಡೆಯದೇ ಇರುವುದರಿಂದ ಉಪನ್ಯಾಸಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್‌ಗಳನ್ನು ಬೆರಸಿ ಚರ್ಚಿಸಲಾಯಿತು.

**ಶಿಶಿರ ಶಾಲೆಯ ಸಮಾರೋಪ**

ಇಪ್ಪತ್ತಾರು ದಿನಗಳ ಕಾಲ ನಡೆದ ಭಾಷಾ ಶಿಶಿರ ಶಾಲೆಯ ಸಮಾರೋಪ ಸಮಾರಂಭವು ನವೆಂಬರ್ ೨೬, ೧೯೯೩ರಂದು ನಡೆಯಿತು. ಸಮಾರೋಪಕ್ಕೆ ಭಾಷಾಶಾಸ್ತ್ರದ ಪ್ರಾಧ್ಯಾಪಕರು ಮತ್ತು ಜ್ಯೂಬಿಲಿ ಪ್ರಾಧ್ಯಾಪಕರು, ಇಲಿನಾಯ್ ವಿಶ್ವವಿದ್ಯಾಲಯದ ಬ್ರಿಜ್ ಬಿ ಕಾಛ್ರು ಆಗಮಿಸಿದ್ದರು.

ಶ್ರೀ ಬ್ರಿಜ್ ಬಿ ಕಾಛ್ರು ಅವರು ತಮ್ಮ ಉಪನ್ಯಾಸದಲ್ಲಿ ''ಆಧುನಿಕ ಭಾಷಾಶಾಸ್ತ್ರದ ಆರಂಭವನ್ನು ಮೈಸೂರು ವಿಶ್ವವಿದ್ಯಾಲಯದಲ್ಲಿ ಶ್ರೀ ತೀ. ನಂ. ಶ್ರೀ ಮೊದಲು ಮಾಡಿದರು. ಈಗ ಕನ್ನಡ ವಿಶ್ವವಿದ್ಯಾಲಯ ಶಾಸ್ತ್ರೀಯ ನೆಲೆಯಲ್ಲಿ ಆಧುನಿಕ ಭಾಷಾಶಾಸ್ತ್ರಕ್ಕೆ ಕೇಂದ್ರವಾಗಲಿ. ಕನ್ನಡದಲ್ಲಿ ಭಾಷಾಶಾಸ್ತ್ರದ ಚಿಂತನೆ ಬೆಳೆಯಲು ಒಂದು ಪಡೆಯನ್ನು ನಿರ್ಮಿಸಬೇಕಾಗಿದೆ. ಶಿಶಿರ ಶಾಲೆಯ ಒಟ್ಟು ಧ್ವನಿಯನ್ನು ಗಮನಿಸಿದಾಗ ಇದೊಂದು ಯಶಸ್ವಿ ಪ್ರಯೋಗವಾಗಿ ನನಗೆ ಕಂಡು ಬಂದಿದೆ'' ಎಂದರು.

**ಕನ್ನಡ ಸಾಹಿತ್ಯ ಬೋಧನಾ ಶಿಬಿರ**

ಕನ್ನಡ ವಿಶ್ವವಿದ್ಯಾಲಯ ಮೂರು ದಿನಗಳ ಕಾಲ 'ಕನ್ನಡ ಸಾಹಿತ್ಯ ಬೋಧನಾ ಶಿಬಿರ'ವನ್ನು ಏರ್ಪಡಿಸಿತ್ತು. ಜುಲೈ ೨೭ ರಂದು ವಿಶ್ವವಿದ್ಯಾಲಯದ ಕುಲಸಚಿವರಾದ ಡಾ. ಕೆ. ವಿ. ನಾರಾಯಣ ಅವರು ಉದ್ಘಾಟಿಸಿದರು. ಸಮಾರಂಭದಲ್ಲಿ ಕುಲಪತಿ ಡಾ.ಚಂದ್ರಶೇಖರ ಕಂಬಾರ ಅವರು ಉಪಸ್ಥಿತರಿದ್ದರು. ರಾಜ್ಯದ ಬೇರೆ ಬೇರೆ ಜಿಲ್ಲೆಗಳಿಂದ ಬಂದಿದ್ದ ಸುಮಾರು ಇಪ್ಪತ್ತು ಜನ ಪ್ರೌಢಶಾಲಾ ಶಿಕ್ಷಕರು ಈ ಶಿಬಿರದಲ್ಲಿ ಪಾಲ್ಗೊಂಡಿದ್ದರು. ಮೂರು ದಿನಗಳ ಕಾಲ ಕನ್ನಡ ಪದ್ಯ, ಗದ್ಯ ಮತ್ತು ವ್ಯಾಕರಣದ

ಪರಿಕಲ್ಪನೆಗಳ ವಿವಿಧ ನೆಲೆಗಳ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಲಾಗಿತ್ತು. ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು ಉಪನ್ಯಾಸಗಳನ್ನು ನೀಡಿದರು.

**ಭಾಷಾ ಬೋಧನ ಶಿಬಿರ**

ಕನ್ನಡ ವಿಶ್ವವಿದ್ಯಾಲಯ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಯಲ್ಲಿ ಹನ್ನೆರಡು ದಿನಗಳ ಕಾಲ ಕನ್ನಡ ಭಾಷಾ ಬೋಧನಾ ಶಿಬಿರವನ್ನು ಏರ್ಪಡಿಸಿತ್ತು. ಹಗರಿಬೊಮ್ಮನಹಳ್ಳಿ ತಾಲೂಕಿನ ಎರಡುನೂರು ಶಿಕ್ಷಕರು ಇದರಲ್ಲಿ ಭಾಗವಹಿಸಿದ್ದರು. ವಿಶ್ವವಿದ್ಯಾಲಯದ ಅಧ್ಯಾಪಕ ವರ್ಗದವರು ಈ ಶಿಬಿರದಲ್ಲಿ ಪಠ್ಯ, ಬೋಧನೆ ಮತ್ತು ಮೌಲ್ಯಮಾಪನ ಕುರಿತು ಚರ್ಚೆ, ಸಂವಾದಗಳನ್ನು ನಡೆಸಿಕೊಟ್ಟರು.

ವಿಧಾನ ಪರಿಷತ್ ಸದಸ್ಯರಾದ ಶ್ರೀ ಎನ್. ತಿಪ್ಪಣ್ಣ ಅವರು ಶಿಬಿರವನ್ನು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಬಳ್ಳಾರಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಶ್ರೀ ಗುರುಮೂರ್ತಿ ಪೆಂಡಕೂರರು ಆಗಮಿಸಿದ್ದರು. ಕುಲಸಚಿವರಾದ ಡಾ.ಕೆ.ವಿ. ನಾರಾಯಣ ಅವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಯೋಜನಾಧಿಕಾರಿ ಡಾ.ಕರೀಗೌಡ ಬೀಚನಹಳ್ಳಿ ಅವರು ಶಿಬಿರದ ಸ್ವರೂಪವನ್ನು ವಿವರಿಸಿದರು.

ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಮಾನ್ಯ ಕುಲಪತಿಗಳಾದ ಡಾ.ಚಂದ್ರಶೇಖರ ಕಂಬಾರ ಅವರು ವಹಿಸಿದ್ದರು. ಸಮಾರಂಭದಲ್ಲಿ ಸಹಾಯಕ ಶಿಕ್ಷಣಾಧಿಕಾರಿ ಶ್ರೀ ರಾಜೇಂದ್ರ ಪ್ರಸಾದ್ ಮತ್ತು ಕುಂ. ವೀರಭದ್ರಪ್ಪ, ಚಿ. ಶ್ರೀನಿವಾಸರಾಜು, ಮಲ್ಲೇಪುರಂ ಜಿ. ವೆಂಕಟೇಶ್ ಇವರು ಭಾಗವಹಿಸಿದ್ದರು.

**ಪತ್ರಕರ್ತರ ಶಿಬಿರ**

ಬಳ್ಳಾರಿ ಜಿಲ್ಲೆಯ ವೃತ್ತಿನಿರತ ಪತ್ರಕರ್ತರಿಗಾಗಿ, ಕನ್ನಡ ವಿಶ್ವವಿದ್ಯಾಲಯದಲ್ಲಿ ದಿನಾಂಕ ೨೩.೯.೯೩ ರಿಂದ ೨೫.೯.೯೩ ರವರೆಗೆ ಪತ್ರಕರ್ತರ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿತ್ತು. ಮೂರು ದಿನಗಳ ತರಬೇತಿ ಶಿಬಿರವನ್ನು ಕುಲಪತಿ ಡಾ.ಚಂದ್ರಶೇಖರ ಕಂಬಾರರು ಉದ್ಘಾಟಿಸಿದರು. ಕನ್ನಡಪರ ಚಿಂತನೆಗಳು ರಾಷ್ಟ್ರದ ಆಚೆಗೂ ಚರ್ಚಿತವಾಗಬೇಕಾದರೆ ಅದಕ್ಕೆ ಅಗತ್ಯವಾದ ಬೌದ್ಧಿಕ ವಾತಾವರಣ ನಿರ್ಮಾಣವಾಗಬೇಕು. ಕನ್ನಡ ವಿಶ್ವವಿದ್ಯಾಲಯವು ಇಂಥ ಉಪಯುಕ್ತ ವಾತಾವರಣ ನಿರ್ಮಿಸುವ ದಿಸೆಯಲ್ಲಿ ಬೌದ್ಧಿಕ ಪರಿಕರಗಳನ್ನು ಜನರಿಗೆ ಮುಟ್ಟಿಸಲು ಪತ್ರಿಕೆಗಳು ನೆರವಾಗಬೇಕೆಂದು ಕುಲಪತಿಗಳು ಅಭಿಪ್ರಾಯಪಟ್ಟರು.

ಬಳ್ಳಾರಿ ಜಿಲ್ಲೆಯ ಹದಿನೈದಕ್ಕೂ ಹೆಚ್ಚು ಪತ್ರಕರ್ತರು ಭಾಗವಹಿಸಿದ್ದ ಶಿಬಿರದ ಮುಕ್ತಾಯ ಸಮಾರಂಭದ ಮುಖ್ಯ ಅತಿಥಿಗಳಾಗಿ 'ವಾರಪತ್ರಿಕೆ'ಯ ಸಂಪಾದಕ ಶ್ರೀ ಬಿ. ವಿ. ವೈಕುಂಠರಾಜುರವರು ಆಗಮಿಸಿ ''ಸೃಜನಶೀಲ ಬರಹಗಾರ ಪತ್ರಿಕೋದ್ಯಮದಲ್ಲಿ ತೊಡಗಿದಾಗ ಸೃಜನಶೀಲತೆಯನ್ನು ಕಳೆದುಕೊಳ್ಳುತ್ತಾನೆ'' ಎಂದರು. ಸಮಾರಂಭದ ಅಧ್ಯಕ್ಷತೆಯನ್ನು ಕುಲಪತಿಗಳು ವಹಿಸಿದ್ದರು.



ಮೂರು ದಿನಗಳ ಕಾಲ ನಡೆದ ಈ ಶಿಬಿರದಲ್ಲಿ ಪತ್ರಕರ್ತರಾದ ಶ್ರೀ ಸಿ. ವಿ. ರಾಜಗೋಪಾಲ, ಶ್ರೀ ಸುರೇಂದ್ರದಾನಿ, ಶ್ರೀ ಕೆ. ಶ್ರೀಧರ ಆಚಾರ್, ಶ್ರೀ ಅಬ್ಬೂರು ರಾಜಶೇಖರ, ಶ್ರೀ ಗುಡಿಹಳ್ಳಿ ನಾಗರಾಜ, ವಾರ್ತಾ ಇಲಾಖೆಯ ಶ್ರೀ ಕೆ. ಪುಟ್ಟಸ್ವಾಮಿ ಮೊದಲಾದವರು ಪತ್ರಿಕೋದ್ಯಮಕ್ಕೆ ಸಂಬಂಧಿಸಿದಂತೆ ಉಪಯುಕ್ತ ಉಪನ್ಯಾಸಗಳನ್ನು ನೀಡಿದರು.

**ಸಮೂಹ ಶಿಲ್ಪ ಶಿಬಿರ**

ಕನ್ನಡ ವಿಶ್ವವಿದ್ಯಾಲಯದ ಲಲಿತಕಲೆಗಳ ನಿಕಾಯವು ತಂಜಾವೂರಿನ ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರದ ಸಹಯೋಗದೊಂದಿಗೆ ಮೂರು ತಿಂಗಳ ಕಾಲ ನಡೆಸಲಿರುವ 'ಸಮೂಹ ಶಿಲ್ಪ ಶಿಬಿರ'ವನ್ನು ಡಿಸೆಂಬರ್ ೧೫ರಂದು ಹಂಪಿಯಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಅವರು ಉದ್ಘಾಟಿಸಿದರು.

ಮುಖ್ಯ ಅತಿಥಿಯಾಗಿ ಕರ್ನಾಟಕ ಜಾನಪದ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎಚ್. ಎಲ್. ನಾಗೇಗೌಡ ಅವರು ಆಗಮಿಸಿದ್ದರು. ಕುಲಪತಿಗಳು ಅಧ್ಯಕ್ಷತೆ ವಹಿಸಿದ್ದರು.

**ಬಯಲಾಟ ಪ್ರದರ್ಶನ ದಾಖಲಾತಿ -ಸಂವಾದ ಶಿಬಿರ**

ಕನ್ನಡ ವಿಶ್ವವಿದ್ಯಾಲಯದ ಹೊಸ ಆವರಣ 'ವಿದ್ಯಾರಣ್ಯ'ದಲ್ಲಿ ಡಿಸೆಂಬರ್ ೨೪

ರಿಂದ ಐದು ದಿನಗಳ ಕಾಲ ಕರ್ನಾಟಕದ ಬಯಲಾಟಗಳ ಪ್ರದರ್ಶನ, ಪ್ರಾತ್ಯಕ್ಷಿಕೆ ಮತ್ತು ಸಂವಾದ ಶಿಬಿರವನ್ನು ಕನ್ನಡ ವಿಶ್ವವಿದ್ಯಾಲಯದ ಲಲಿತಕಲೆಗಳ ನಿಕಾಯವು ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು ಮತ್ತು ಸಂಗೀತ ನಾಟಕ ಅಕಾಡೆಮಿ ಹೊಸದೆಹಲಿ ಇವುಗಳ ಸಹಕಾರದೊಂದಿಗೆ ಐದು ದಿನಗಳ ಕಾಲ ಏರ್ಪಡಿಸಿತ್ತು. ಈ ಶಿಬಿರವನ್ನು ಡಿಸೆಂಬರ್ ೨೪ ರಂದು ಖ್ಯಾತ ಯಕ್ಷಗಾನ ಕಲಾವಿದ ಕೆರೆಮನೆ ಶಂಭು ಹೆಗ್ಡೆಯವರು ಉದ್ಘಾಟಿಸಿದರು. ಸಭೆಯ ಅಧ್ಯಕ್ಷತೆಯನ್ನು ಕುಲಪತಿ ಡಾ. ಚಂದ್ರಶೇಖರ ಕಂಬಾರ ಅವರು ವಹಿಸಿದ್ದರು. ಈ ಸಂದರ್ಭದಲ್ಲಿ ಕರ್ನಾಟಕದ ಬಯಲಾಟಗಳ ವಿವಿಧ ಪ್ರಕಾರಗಳನ್ನು ಪರಿಚಯಿಸುವ ಐದು ಪ್ರದರ್ಶನಗಳು ನಡೆದವು.

ಡಿಸೆಂಬರ್ ೨೪ ರಿಂದ ೨೮ರ ತನಕ ಸಂಜೆ ೬.೩೦ ಕ್ಕೆ ಎರಡು ಗಂಟೆಗಳ ಕಾಲ ಬಯಲಾಟ ಪ್ರದರ್ಶನ. ಪ್ರದರ್ಶನಕ್ಕೆ ಮೊದಲು ಬಣ್ಣಗಾರಿಕೆಯ ಪ್ರಾತ್ಯಕ್ಷಿಕೆ ಹಾಗೂ ಬಹುಮಾಧ್ಯಮ ದಾಖಲಾತಿ ನಡೆಯಿತು. ಪ್ರತಿದಿನವು ಪ್ರದರ್ಶನವನ್ನು ಕುರಿತು ಕಲಾವಿದರು ಹಾಗೂ ವಿದ್ವಾಂಸರು ಸಂವಾದದಲ್ಲಿ ಪಾಲ್ಗೊಂಡಿದ್ದರು.

ಬಯಲಾಟ ಪ್ರದರ್ಶನ ದಾಖಲಾತಿ ಸಂವಾದ ಶಿಬಿರದ ಸಮಾರೋಪ ಸಮಾರಂಭ ೨೮ ರಂದು ನಡೆಯಿತು. ಸಮಾರೋಪ ಸಮಾರಂಭದ ಮುಖ್ಯ ಅತಿಥಿಯಾಗಿ ಕರ್ನಾಟಕ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕ ಪ್ರೊ. ವೃಷಭೇಂದ್ರ ಸ್ವಾಮಿ ಅವರು ಆಗಮಿಸಿದ್ದರು. ರಂಗನಟ ಶ್ರೀ ಲೋಹಿತಾಶ್ವ ಅವರು ಶಿಬಿರದಲ್ಲಿ ಪಾಲ್ಗೊಂಡಿದ್ದರು. ಕುಲಪತಿ ಡಾ. ಚಂದ್ರಶೇಖರ ಕಂಬಾರ ಅವರು ಅಧ್ಯಕ್ಷತೆ ವಹಿಸಿದ್ದರು.

## ವಿಚಾರ ಸಂಕಿರಣ

### ಕರ್ನಾಟಕದ ಕಲೆ :ಪರಂಪರೆ ಮತ್ತು ಆಧುನಿಕತೆ

ಮಾರ್ಚ್ ೧ ಮತ್ತು ೨ ರಂದು ಕನ್ನಡ ವಿಶ್ವವಿದ್ಯಾಲಯದಲ್ಲಿ 'ಕರ್ನಾಟಕದ ಕಲೆ : ಪರಂಪರೆ ಮತ್ತು ಆಧುನಿಕತೆ' ಬಗ್ಗೆ ಏರ್ಪಡಿಸಿದ್ದ ವಿಚಾರ ಸಂಕಿರಣವನ್ನು ಕನ್ನಡದ ಪ್ರಮುಖ ಲೇಖಕ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಯು. ಆರ್. ಅನಂತಮೂರ್ತಿಯವರು ಉದ್ಘಾಟಿಸಿದರು.

ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದ ಅನಂತಮೂರ್ತಿಯವರು, ''ನಮ್ಮಲ್ಲಿನ ಎಲ್ಲ ಮಾದರಿಗಳನ್ನು ಬಿಟ್ಟು ಪಾಶ್ಚಾತ್ಯ ಮಾದರಿಗಳನ್ನು ತೆಗೆದುಕೊಳ್ಳಲು ಪ್ರಾರಂಭಿಸಿದ್ದು ಇಂದಿನ ದುಸ್ಥಿತಿಗೆ ಕಾರಣ. ನಮ್ಮಲ್ಲಿ ಸಮಗ್ರ ದೃಷ್ಟಿ ಇತ್ತು, ಇದೆ. ಪುರಾಣದಲ್ಲಿ ತತ್ವವಿದೆ. ವೈವಿಧ್ಯತೆ ಇದೆ. ಮ್ಯಾಜಿಕ್ ರಿಯಲಿಸಂ ಭಾಗವತದಲ್ಲಿ ಬಹಳಷ್ಟಿದೆ. ನಮ್ಮಲ್ಲಿನ ಮಹತ್ವವನ್ನು, ನಮ್ಮತನವನ್ನು ಗುರುತಿಸಿಕೊಳ್ಳಲು ಆಗಲಿಲ್ಲ. ವಸಾಹತುಶಾಹಿಯಿಂದ ಹರಡಿರುವ ಕೀಳರಿಮೆಯೇ ಇದಕ್ಕೆ ಕಾರಣ. ಆದ್ದರಿಂದ ಹೊಸ ಸಂವೇದನೆಯಿಂದ ನಮ್ಮಲ್ಲಿ ಏನಿತ್ತು ಎಂಬುದನ್ನು ಗ್ರಹಿಸಬೇಕು. ಯಾವ ಕಲೆಯೂ ಒಂದನ್ನೊಂದು ಬಿಟ್ಟಿರಲಿಲ್ಲ. ಪಾಶ್ಚಾತ್ಯರಿಂದ ಶುದ್ಧತೆಯ ಬೆನ್ನು ಹತ್ತಿ ನಮ್ಮದನ್ನು ಗುರುತಿಸದೇ ಹೋದೆವು. ನಾವು ಪಾಶ್ಚಾತ್ಯರಿಗೆ ಯಕ್ಷಗಾನವನ್ನು ತೋರಿಸುತ್ತಾ,



ಕಾಳಿದಾಸನನ್ನು ಕೈ ಬಿಡುತ್ತಾ ಹೋದೆವು. ಆದ್ದರಿಂದ ಇಂತಹ ಕೀಳರಿಮೆಯನ್ನು ಬಿಟ್ಟು ಹೊಸ ಪ್ರೇರಣೆಯ ಚಿಂತನ ಮಂಥನದೊಂದಿಗೆ ಕಲೆಗಳಲ್ಲಿನ ಸಮಗ್ರತೆಯನ್ನು ಗುರುತಿಸುವ ಕೆಲಸದಲ್ಲಿ ನಮ್ಮನ್ನು ತೊಡಗಿಸಿಕೊಳ್ಳಬೇಕಾಗಿದೆ'' ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕುಲಪತಿ ಡಾ. ಚಂದ್ರಶೇಖರ ಕಂಬಾರರು ಮಾತನಾಡುತ್ತಾ, ''ನಮ್ಮಲ್ಲಿನ ಸಂಶೋಧನೆಗಳು ಬೇರೆ ದೇಶಗಳ ಮಾದರಿಗಳನ್ನು ಅನುಸರಿಸದೆ ಕನ್ನಡಿಗರ ಒಳಿತು, ಕನ್ನಡಿಗರ ಅಗತ್ಯಗಳನ್ನು ಗುರುತಿಸಿ ಸಂಶೋಧನೆ ನಡೆಸುವ ದೃಷ್ಟಿಕೋನ ಹೊಂದಿವೆ. ಹೀಗೆ ವಿಶಿಷ್ಟ ರೀತಿಯ ಸಂಶೋಧನಾ ಕಾರ್ಯ ನಡೆಸಬೇಕೆಂಬುದೇ ನಮ್ಮ ಉದ್ದೇಶ. ಈ ಕೆಲಸವು ಹೆಚ್ಚು ಉಪಯುಕ್ತವೂ ಅರ್ಥಪೂರ್ಣವೂ ಆದ ರೀತಿಯಲ್ಲಿ ಮಾಡಬೇಕೆಂಬ ಆತ್ಮಸ್ಥೈರ್ಯವನ್ನು ವಿಶ್ವವಿದ್ಯಾಲಯ ಹೊಂದಿದೆ'' ಎಂದರು.

**ಸಂಗೀತ ಮತ್ತು ನೃತ್ಯ**

ಶ್ರೀ ಎಸ್. ಎನ್. ಚಂದ್ರಶೇಖರ್ ಅವರ ಅಧ್ಯಕ್ಷತೆಯಲ್ಲಿ ನಡೆದ 'ಸಂಗೀತ ಮತ್ತು ನೃತ್ಯ' ಕುರಿತ ವಿಚಾರಗೋಷ್ಠಿಯಲ್ಲಿ ಡಾ. ರತ್ನಾಶಿವಶಂಕರ್ ಹಾಗೂ ಶ್ರೀಮತಿ ಲಲಿತಾ ಶ್ರೀನಿವಾಸನ್ ವಿಚಾರಪೂರ್ಣ ಪ್ರಬಂಧಗಳನ್ನು ಮಂಡಿಸಿದರು.

**ಚಿತ್ರಕಲೆ ಮತ್ತು ಶಿಲ್ಪಕಲೆ**

ಹಿರಿಯ ಚಿತ್ರ ಕಲಾವಿದ ಶ್ರೀ ಆರ್. ಎಂ. ಹಡಪದ್ ಅವರ ಅಧ್ಯಕ್ಷತೆಯಲ್ಲಿ 'ಚಿತ್ರಕಲೆ ಮತ್ತು ಶಿಲ್ಪಕಲೆ' ಕುರಿತ ವಿಚಾರಗೋಷ್ಠಿಯಲ್ಲಿ ದಾವಣಗೆರೆಯ ಕಲಾ ಶಾಲೆಯ ಅಧ್ಯಾಪಕರಾದ ಶ್ರೀ ಶಂಕರ ಪಾಟೀಲ್ ಹಾಗೂ ಮೈಸೂರಿನ 'ಕಾವಾ'ದ ಅಧ್ಯಾಪಕರಾದ ಶ್ರೀ ವಿಜಯರಾವ್ ತಮ್ಮ ಪ್ರಬಂಧವನ್ನು ಮಂಡಿಸಿದರು.

**ಸಿನೆಮಾ**

ವಿಚಾರಸಂಕಿರಣದ ಎರಡನೆಯ ದಿನ ಕನ್ನಡ ಚಲನಚಿತ್ರ ರಂಗದ ಖ್ಯಾತ ನಿರ್ದೇಶಕ ಗಿರೀಶ್ ಕಾಸರವಳ್ಳಿ ಅವರ ಅಧ್ಯಕ್ಷತೆಯಲ್ಲಿ ಸಿನೆಮಾ ಕುರಿತ ನಡೆದ ವಿಚಾರಗೋಷ್ಠಿಯಲ್ಲಿ ಶ್ರೀ ಸಿ. ಸೀತಾರಾಮ್ ಹಾಗೂ ಎಸ್. ವಿದ್ಯಾಶಂಕರ್ ಪ್ರಬಂಧಗಳನ್ನು ಮಂಡಿಸಿದರು.

**ರಂಗಭೂಮಿ**

ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ. ಕೆ. ಮರುಳಸಿದ್ದಪ್ಪನವರ ಅಧ್ಯಕ್ಷತೆಯಲ್ಲಿ 'ರಂಗಭೂಮಿ' ಬಗ್ಗೆ ವಿಚಾರಸಂಕಿರಣ ನಡೆಯಿತು. ಶ್ರೀ ಅಕ್ಷರ ಮತ್ತು ಶ್ರೀ ಎಸ್. ರಘುನಂದನ್ ಅವರು ಅನುಕ್ರಮವಾಗಿ 'ಭಾರತೀಯ ರಂಗಭೂಮಿ' ಹಾಗೂ 'ಕನ್ನಡ ರಂಗಭೂಮಿ'ಯ ಬಗ್ಗೆ ವಿಚಾರಗಳನ್ನು ಮಂಡಿಸಿದರು.

ಪ್ರತಿಗೋಷ್ಠಿಯ ನಂತರ ಸಂವಾದ ಕಾರ್ಯಕ್ರಮವಿತ್ತು. ಆಯಾಯಾ ಗೋಷ್ಠಿಗಳಲ್ಲಿ ಮಂಡಿತವಾದ ಪ್ರಬಂಧಗಳ ಹಿನ್ನೆಲೆಯಲ್ಲಿ ಮುಕ್ತವಾದ ಚರ್ಚೆ ನಡೆಯಿತು. ಡಾ. ಯು.ಆರ್. ಅನಂತಮೂರ್ತಿ, ಕುಂ.ವೀರಭದ್ರಪ್ಪ, ಡಿ. ಉಮಾಪತಿ, ಡಾ. ಕೆ. ವಿ. ತಿರುಮಲೇಶ್, ಗಿರಡ್ಡಿ ಗೋವಿಂದರಾಜು, ಜಗದೀಶರಾಜಾ, ಪ್ರೊ. ಎಂ. ಎಚ್. ಕೃಷ್ಣಯ್ಯ, ಡಾ. ವಿಜಯಾ, ಮಧು ಉಪಾಧ್ಯಾಯ, ಬಿ. ವಿ. ಕಾರಂತ ಮೊದಲಾದ ಪ್ರಮುಖರು ಸಂವಾದದಲ್ಲಿ ಪಾಲ್ಗೊಂಡಿದ್ದರು.

**ಕನ್ನಡ ಕಾವ್ಯ ಪರಂಪರೆ ಉಪನ್ಯಾಸ ಸಂವಾದ ಗೋಷ್ಠಿ**

ಕನ್ನಡ ವಿಶ್ವವಿದ್ಯಾಲಯ ರೂಪಿಸಿರುವ ವಿಶಿಷ್ಟ ಅಧ್ಯಯನ ಕಾರ್ಯಕ್ರಮ ಮಾರ್ಚ್ ೧೩ ರಿಂದ ೨೦ ರವರೆಗೆ ನಡೆಯಿತು. ಈ ಅಧ್ಯಯನ ಕನ್ನಡದ ಮಹತ್ವದ ಕೃತಿಗಳನ್ನು ಕುರಿತದ್ದಾಗಿತ್ತು. ಕನ್ನಡ ಕಾವ್ಯ ಪರಂಪರೆ, ಈ ಪರಂಪರೆಯ ಮಹತ್ವದ ಕವಿಗಳಾದ ಪಂಪ, ವಚನಕಾರರು, ಹರಿಹರ, ಕುಮಾರವ್ಯಾಸ, ಬೇಂದ್ರೆ, ಕುವೆಂಪು, ಗೋಪಾಲಕೃಷ್ಣ ಅಡಿಗ ಹಾಗೂ ಚಂದ್ರಶೇಖರ ಕಂಬಾರ ಇವರ ಕಾವ್ಯಗಳನ್ನು ಕುರಿತ ಉಪನ್ಯಾಸ ಹಾಗೂ ಸಂವಾದ ನಡೆಯಿತು.

ಕನ್ನಡ ಕಾವ್ಯ ಪರಂಪರೆಯಲ್ಲಿ ಅಭಿವ್ಯಕ್ತಿಗೊಂಡಿರುವ ಸಂಸ್ಕೃತಿಯ ನೆಲೆಗಳ ಬಹುಮುಖಿ ಸ್ವರೂಪದ ಅರಿಯುವಿಕೆಯನ್ನು ಉಪನ್ಯಾಸ ಸಂವಾದ ಗೋಷ್ಠಿಯು ಕೇಂದ್ರವನ್ನಾಗಿಸಿಕೊಂಡಿತ್ತು. ಧರ್ಮದ ಬಗೆಗೆ ಕನ್ನಡ ಕಾವ್ಯ ತೋರುತ್ತಾ ಬಂದಿರುವ

ಧೋರಣೆ, ಭಕ್ತಿ ಪಂಥದ ಸಮಕಾಲೀನತೆ, ಹಿಂಸೆಯನ್ನು ಕುರಿತ ಕನ್ನಡ ಕಾವ್ಯ ಪರಂಪರೆಯ ನಿಲುವುಗಳು, ಕನ್ನಡ ಸಾಹಿತ್ಯದ ಅಭಿವ್ಯಕ್ತಿಯ ಪ್ರಶ್ನೆಗಳು, ವಸಾಹತುಶಾಹಿ ನೆಲೆಗೆ ಕನ್ನಡ ಕಾವ್ಯ ಪ್ರಕಟಿಸಿದ ಸಂಘರ್ಷ, ಪರಿಸರ ಮತ್ತು ಸಾಹಿತ್ಯ ಸಂಸ್ಕೃತಿಯ ಅನನ್ಯತೆಯ ನೆಲೆಗಳನ್ನು ಅಭಿವ್ಯಕ್ತಿಸಲು ಕನ್ನಡ ಕಾವ್ಯ ಹುಟ್ಟುಹಾಕಿಕೊಂಡ ವಾಗ್ವಾದಗಳು ಈ ಉಪನ್ಯಾಸ ಮಾಲಿಕೆಯ ಕೇಂದ್ರವಾಗಿತ್ತು.

ಈ ಉಪನ್ಯಾಸ ಸಂವಾದ ಗೋಷ್ಠಿಯನ್ನು ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯದ ಪ್ರಾಧ್ಯಾಪಕರಾಗಿದ್ದ ಕಿ. ರಂ. ನಾಗರಾಜ ಅವರು ನಡೆಸಿಕೊಟ್ಟರು. ಈ ಗೋಷ್ಠಿಯಲ್ಲಿ ಕನ್ನಡ ಕಾವ್ಯದಲ್ಲಿ ಆಸಕ್ತರಾದ ಎಸ್. ಜಿ. ಸಿದ್ದರಾಮಯ್ಯ, ಅಬ್ದುಲ್ ರಶೀದ್, ಶಿವಮೊಗ್ಗ ಮುನೀರ್, ನಂಗಲಿ ಚಂದ್ರಶೇಖರ, ಕ.ನಂ. ನಾಗರಾಜ, ಬಿ. ಜಯದೇವಪ್ಪ, ವೀಚಿ ಇವರುಗಳೊಂದಿಗೆ ಕನ್ನಡ ವಿಶ್ವವಿದ್ಯಾಲಯದ ಓ. ಎಲ್. ನಾಗಭೂಷಣಸ್ವಾಮಿ, ಟಿ. ಪಿ. ಅಶೋಕ, ಡಾ. ರಹಮತ್ ತರೀಕೆರೆ, ಡಾ. ಕರೀಗೌಡ ಬೀಚನಹಳ್ಳಿ ಇವರುಗಳು ಪಾಲ್ಗೊಂಡಿದ್ದರು.

**'ಗೋರಾ' ಕಾದಂಬರಿ : ವಿಚಾರ ಸಂಕಿರಣ**



ವಿಶ್ವಕವಿ ಶ್ರೀ ರವೀಂದ್ರನಾಥ ಠಾಗೂರರ 'ಗೋರಾ' ಕಾದಂಬರಿಯನ್ನು ಕುರಿತು ಕನ್ನಡ ವಿಶ್ವವಿದ್ಯಾಲಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಯ ಸಂಯುಕ್ತ ಆಶ್ರಯದಲ್ಲಿ ಜುಲೈ ೧೬ರಂದು ಹಂಪಿಯಲ್ಲಿ ವಿಚಾರ ಸಂಕಿರಣವನ್ನು ಏರ್ಪಡಿಸಿತ್ತು. ವಿಚಾರ ಸಂಕಿರಣವನ್ನು ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಯು. ಆರ್. ಅನಂತಮೂರ್ತಿಯವರು ಉದ್ಘಾಟಿಸಿ, ಅಯೋಧ್ಯೆಯ ಘಟನೆಯ ನಂತರದ ಭಾರತದಲ್ಲಿ ಉಂಟಾಗಿರುವ ಗೊಂದಲಮಯ ಸ್ಥಿತಿಯಲ್ಲಿ ಜನತೆಯನ್ನು ಮಾನವ ಸಂಬಂಧಗಳ ಬಗೆಗೆ ಚಿಂತನೆಗೆ ಗುರಿ ಮಾಡುವಂತಹ ವೈಚಾರಿಕ ಮಂಥನಕ್ಕಾಗಿ ಅಕಾಡೆಮಿಯು 'ಗೋರಾ' ಕಾದಂಬರಿಯ ಬಗ್ಗೆ ರಾಷ್ಟ್ರಾದ್ಯಂತ ವಿಚಾರ ಸಂಕಿರಣಗಳನ್ನು ನಡೆಸುತ್ತದೆ ಎಂದರು.

'ಗೋರಾ' ಭಾರತದ ಭಾಷಾ ಸಾಹಿತ್ಯದ ಅಭಿಪ್ರಾಯವಾಗಿದ್ದು, ಭಾರತೀಯ ಕೌಟುಂಬಿಕ ಸಾಮಾಜಿಕ ಸಮಸ್ಯೆಗಳನ್ನೊಳಗೊಂಡ ಕೃತಿಯೆಂದು ಹೇಳಿದರು. ರಾಷ್ಟ್ರೀಯತೆಯನ್ನು ಕಂಡುಕೊಳ್ಳಲು ಹಿಂದಿನಿಂದಲೂ ಒಂದಲ್ಲ ಒಂದು ರೀತಿಯ ಪ್ರಯತ್ನಗಳು ನಡೆಯುತ್ತಲೇ ಇವೆ. ಆದರೂ ಇವತ್ತಿನ ಸಮಸ್ಯೆಗೆ ಪರಿಹಾರ ದೊರೆಯದೆ, ಇಂದು ಬೃಹತ್ ಸಮಸ್ಯೆಯಾಗಿರುವುದರಿಂದಲೇ ಈ ವಿಚಾರ ಸಂಕಿರಣ ಹೆಚ್ಚು ಪ್ರಸ್ತುತವಾಗಿದೆ ಎಂದರು. ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರರು 'ಗೋರಾ' ಕಾದಂಬರಿಯು ಭಾರತೀಯರ ಮಾನಸಿಕ ಸ್ಥಿತಿಯನ್ನು ಪ್ರತಿಬಿಂಬಿಸುವ ಕೃತಿಯಾಗಿರುವುದರಿಂದ ಭಾಷೆಗಳ ಮಧ್ಯೆ ನಡೆಯುವ ಇಂದಿನ ಚರ್ಚೆಗೆ ಹೆಚ್ಚಿನ ಮಹತ್ವವಿದೆ ಎಂದರು.

ಮುಖ್ಯ ಅತಿಥಿಗಳಾಗಿ ಬೆಂಗಳೂರು ದೂರದರ್ಶನ ಕೇಂದ್ರದ ನಿರ್ದೇಶಕರಾದ ಶ್ರೀ ಅನೀಸ್ ಉಲ್ ಹಕ್ ಅವರು ಆಗಮಿಸಿದ್ದರು. ಇದೇ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ಪ್ರಸಾರಾಂಗ ಹೊರತಂದ ಶ್ರೀತತ್ತ್ವನಿಧಿ (ಇಂಗ್ಲಿಷ್ ಆವೃತ್ತಿ) ಗೊಂದಲಿಗರ ದೇವೇಂದ್ರಪ್ಪನ ಆಟಗಳು, ಭಾಷಾಂತರ, ಕೀಟಗಳು ಬದುಕುವ ದಾರಿ-- ಪುಸ್ತಕಗಳನ್ನು ಕುವೆಂಪು ವಿಶ್ವವಿದ್ಯಾನಿಲಯದ ನಿವೃತ್ತ ಕುಲಪತಿ ಡಾ. ಶಾಂತಿನಾಥ ದೇಸಾಯಿ ಅವರು ಬಿಡುಗಡೆ ಮಾಡಿದರು.

ಶ್ರೀ ಅನೀಸ್ ಉಲ್ ಹಕ್ ಅವರ ಅಧ್ಯಕ್ಷತೆಯಲ್ಲಿ 'ಗೋರಾ ಅಧ್ಯಯನದ ನೆಲೆಗಳು' ಬಗ್ಗೆ ಮೊದಲ ಗೋಷ್ಠಿ ನಡೆಯಿತು. 'ಗೋರಾ ಮತ್ತು ಭಾರತೀಯ ಸಾಹಿತ್ಯ'ದ ಬಗ್ಗೆ ಪ್ರೊ. ಕೀರ್ತಿನಾಥ ಕುರ್ತಕೋಟಿ, 'ವಸಾಹತುಶಾಹಿಯ ಅನುಭವದ ಹಿನ್ನೆಲೆಯಲ್ಲಿ ಗೋರಾ'ದ ಬಗ್ಗೆ ಪ್ರೊ. ಕಿ. ರಂ. ನಾಗರಾಜ, 'ಹಿಂದುತ್ವದ ಕಲ್ಪನೆ ಮತ್ತು ಗೋರಾ' ಎಂಬ ವಿಷಯವಾಗಿ ಪ್ರೊ. ಜಿ. ಎಚ್. ನಾಯಕ ಅವರು ಪ್ರಬಂಧಗಳನ್ನು ಮಂಡಿಸಿದರು.

ಖ್ಯಾತ ಬಂಗಾಲಿ ವಿದ್ವಾಂಸ ಶಿಶಿರಕುಮಾರ್‌ದಾಸ್ ಅವರ ಅಧ್ಯಕ್ಷತೆಯಲ್ಲಿ ನಡೆದ ಎರಡನೆಯ ಗೋಷ್ಠಿಯಲ್ಲಿ ಯು. ಆರ್. ಅನಂತಮೂರ್ತಿ, ಶಾಂತಿನಾಥ ದೇಸಾಯಿ,

ಚಂದ್ರಶೇಖರ ಕಂಬಾರ ಅವರು 'ಗೋರಾ' ಕುರಿತು ಸೃಜನಾತ್ಮಕ ಪ್ರತಿಕ್ರಿಯೆ ವ್ಯಕ್ತಪಡಿಸಿದರು.

**ಚರಿತ್ರೆ ಲೇಖನಶಾಸ್ತ್ರ ರಚನೆಯ ತೊಡಕುಗಳು**

ಕರ್ನಾಟಕ ಚರಿತ್ರೆ ರಚನೆಯ ಯೋಜನೆಗೆ ಪೂರಕವಾಗಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗವು ಜೂನ್ ೧೧ ರಂದು 'ಚರಿತ್ರೆ ಲೇಖನಶಾಸ್ತ್ರ ರಚನೆಯ ತೊಡಕುಗಳು: ಕರ್ನಾಟಕಕ್ಕೆ ಸಂಬಂಧಿಸಿದಂತೆ' ಕುರಿತ ವಿಚಾರ ಸಂಕಿರಣವನ್ನು ಏರ್ಪಡಿಸಲಾಗಿತ್ತು.

ಖ್ಯಾತ ಇತಿಹಾಸಜ್ಞರಾದ ಪ್ರೊ. ಬಿ. ಶೇಕ್ ಆಲಿ ಅವರು ವಿಚಾರ ಸಂಕಿರಣವನ್ನು ಉದ್ಘಾಟಿಸಿದರು. ಸಾಂಸ್ಕೃತಿಕ, ಆರ್ಥಿಕ ಹಾಗೂ ಸಾಮಾಜಿಕ ಅಧ್ಯಯನಕ್ಕೆ ರಾಜ ಸಂತತಿಯ ಹಾಗೂ ರಾಜಕೀಯ ಚರಿತ್ರೆಯನ್ನೇ ನಾವು ಅವಲಂಬಿಸಿದ್ದೇವೆ. ಇದು ತಪ್ಪಬೇಕು. ಬದಲಿಗೆ ಸಮಾಜದ ಕೆಳಹಂತದ ಜನಜೀವನದ ಬಗ್ಗೆ ಆಳವಾದ ಅಧ್ಯಯನ ನಡೆದು ನಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸಿದ ಬಗ್ಗೆ ಅರ್ಥಪೂರ್ಣ ಚಿತ್ರಕಟ್ಟಿ ಕೊಡುವ ಚರಿತ್ರೆಯನ್ನು ಪುನರ್ ರೂಪಿಸಬೇಕಾಗಿದೆ ಎಂದು ಚರಿತ್ರೆಕಾರರಿಗೆ ಕರೆ ನೀಡಿದರು. ಸಮಾರಂಭದ ಅಧ್ಯಕ್ಷತೆಯನ್ನು ಕುಲಪತಿಗಳಾದ ಡಾ.ಚಂದ್ರಶೇಖರ ಕಂಬಾರರು ವಹಿಸಿದ್ದರು.

**ಗೋಷ್ಠಿಗಳು**

ಶ್ರೀ ಎಚ್. ವಿ. ಶ್ರೀನಿವಾಸಮೂರ್ತಿಯವರ ಅಧ್ಯಕ್ಷತೆಯಲ್ಲಿ 'ಪ್ರಾದೇಶಿಕ ಚರಿತ್ರೆ ಬರವಣಿಗೆಯ ಈಚಿನ ನೆಲೆ'ಗಳ ಬಗ್ಗೆ ಬಿ. ಸುರೇಂದ್ರರಾವ್ ಅವರು ಪ್ರಬಂಧ ಮಂಡಿಸಿದರು. ಶ್ರೀ ಬಿ. ಕೇಶವನ್ ಅವರ ಅಧ್ಯಕ್ಷತೆಯಲ್ಲಿ ಜರುಗಿದ ಎರಡನೇ ವಿಚಾರಗೋಷ್ಠಿಯಲ್ಲಿ ಡಾ. ಎಸ್. ಚಂದ್ರಶೇಖರ ಅವರು 'ಕರ್ನಾಟಕ ಚರಿತ್ರೆ ಮತ್ತು ವಸಾಹತುಶಾಹಿ'ಯ ಬಗ್ಗೆ ಉಪನ್ಯಾಸ ನೀಡಿದರು. ಈ ಬಗ್ಗೆ ಎರಡೂ ಗೋಷ್ಠಿಗಳಲ್ಲಿ ವ್ಯಾಪಕ ಚರ್ಚೆ, ಸಂವಾದ ನಡೆಯಿತು. ಶ್ರೀ ಎಂ. ವಿ. ಶ್ರೀನಿವಾಸನ್, ಓ.ಅನಂತರಾಮಯ್ಯ, ಕೆ. ಎಸ್. ಶಿವಣ್ಣ, ಸೈಯದ್ ಅಜಂ, ಎಸ್. ರಾಜಶೇಖರ, ಆರ್. ರಾಮಕೃಷ್ಣ, ಜಮುನಾರೆಡ್ಡಿ, ಎಸ್. ಎ. ಬಾರಿ, ರಾಜರಾಮ ಹೆಗಡೆ, ಅ. ಸುಂದರ, ಕೆ.ಡಿ. ವಸಂತ ಮಾಧವ, ಚನ್ನಬಸವನಗೌಡ ಮುಂತಾದ ಇತಿಹಾಸದ ಪ್ರಾಧ್ಯಾಪಕರು, ಆಸಕ್ತರು ಸಂವಾದದಲ್ಲಿ ಪಾಲ್ಗೊಂಡು ಚರ್ಚೆಯನ್ನು ಅರ್ಥಪೂರ್ಣವಾಗಿ ನಡೆಸಿಕೊಟ್ಟರು. ಕುಲಪತಿ ಡಾ. ಚಂದ್ರಶೇಖರ ಕಂಬಾರರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಪ್ರೊ. ಶೇಕ್ ಆಲಿ ಮುಖ್ಯ ಅತಿಥಿಗಳಾಗಿ ಮಾತನಾಡಿದರು.

**ಸನ್ಮಾನ**

**ಡಾ. ಯು. ಆರ್. ಅನಂತಮೂರ್ತಿ**

ಕನ್ನಡ ವಿಶ್ವವಿದ್ಯಾಲಯದಲ್ಲಿ ಮಾರ್ಚ್ ೨ ರ ಸಂಜೆ ಖ್ಯಾತ ಬರಹಗಾರ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಯ ನೂತನ ಅಧ್ಯಕ್ಷರಾಗಿ ಆಯ್ಕೆಗೊಂಡ ಡಾ. ಯು. ಆರ್.

ಅನಂತಮೂರ್ತಿ ಹಾಗೂ ಶ್ರೀಮತಿ ಎಸ್ತರ್ ಅನಂತಮೂರ್ತಿ ಅವರನ್ನು ವಿಶ್ವವಿದ್ಯಾಲಯದ ಕುಲಪತಿ ಡಾ. ಚಂದ್ರಶೇಖರ ಕಂಬಾರ ಹಾಗೂ ಶ್ರೀಮತಿ ಸತ್ಯಭಾಮ ಕಂಬಾರ ಅವರು ಸರಳ ಸಮಾರಂಭವೊಂದರಲ್ಲಿ ಶಾಲು ಹೊದಿಸಿ ಸನ್ಮಾನಿಸಿ ಗೌರವಿಸಿದರು.

ಡಾ. ಅನಂತಮೂರ್ತಿ ಅವರನ್ನು ಅಭಿನಂದಿಸಿ, ಕೆ. ವಿ. ನಾರಾಯಣ, ಗಿರಡ್ಡಿ ಗೋವಿಂದರಾಜ, ಗಿರೀಶ್ ಕಾಸರವಳ್ಳಿ, ಎಸ್. ವಿದ್ಯಾಶಂಕರ್, ಟಿ. ಪಿ. ಅಶೋಕ ಹಾಗೂ ಕೆ. ವಿ. ತಿರುಮಲೇಶ್ ಅವರು ಮಾತನಾಡಿದರು.

ಸನ್ಮಾನ ಸಭೆಯ ಅಧ್ಯಕ್ಷತೆ ವಹಿಸಿದ್ದ ಕುಲಪತಿ ಡಾ. ಚಂದ್ರಶೇಖರ ಕಂಬಾರರು ''ಈಗ ಡಾ. ಯು. ಆರ್. ಅನಂತಮೂರ್ತಿಯವರನ್ನು ಪ್ರತ್ಯಕ್ಷವಾಗಿ ಸನ್ಮಾನಿಸಿ ಗೌರವ ಹೆಚ್ಚಿಸಿಕೊಂಡಿದ್ದೇವೆ. ಸಜ್ಜನಿಕೆಯ ತವರಾಗಿರುವ ಅವರನ್ನು ಅವರ ವಿರೋಧಿಗಳು ಕೂಡ ಮೆಚ್ಚುತ್ತಾರೆ'' ಎಂದು ಬಣ್ಣಿಸಿದರು. ಸನ್ಮಾನ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಡಾ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮೀಜಿಯವರು ಉಪಸ್ಥಿತರಿದ್ದರು.

**ಡಾ. ಜೋಳದರಾಶಿ ದೊಡ್ಡನಗೌಡ**



ನಾಡಿನ ಹಿರಿಯ ಗಮಕಿ ಎಂಭತ್ತೈದರ ಹರೆಯದ ಡಾ. ಜೋಳದರಾಶಿ ದೊಡ್ಡನಗೌಡ ಅವರನ್ನು ಕನ್ನಡ ವಿಶ್ವವಿದ್ಯಾಲಯವು ಆಗಸ್ಟ್ ೨೭ ರಂದು ಅವರ ಹುಟ್ಟೂರಾದ ಬಳ್ಳಾರಿ ಜಿಲ್ಲೆಯ ಜೋಳದರಾಶಿ ಗ್ರಾಮಕ್ಕೆ ತೆರಳಿ ಆತ್ಮೀಯವಾಗಿ ಸನ್ಮಾನಿಸಿತು.

ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರು ಡಾ. ದೊಡ್ಡನಗೌಡರಿಗೆ ಶಾಲು ಹೊದಿಸಿ ಫಲಪುಷ್ಪತಾಂಬೂಲ ನೀಡಿ ಗೌರವಿಸಿದರು. ''ಶ್ರೀ ದೊಡ್ಡನಗೌಡ ಅವರಂತಹ ಜ್ಞಾನವೃದ್ಧರನ್ನು ಸನ್ಮಾನಿಸುವ ಮೂಲಕ ಕನ್ನಡ ವಿಶ್ವವಿದ್ಯಾಲಯ ತನ್ನ ಘನತೆ ಹೆಚ್ಚಿಸಿಕೊಂಡಿದೆ. ದೊಡ್ಡನಗೌಡರು ಇಡೀ ದೇಶದಲ್ಲೇ ಉತ್ಕೃಷ್ಟ ಕೆಲಸ ಮಾಡಿದ ಮಹಾನ್ ಕಲಾತಪಸ್ವಿ. ಇವರನ್ನು ಸನ್ಮಾನಿಸಿದ ಈ ದಿನ ವಿಶ್ವವಿದ್ಯಾಲಯದ ಇತಿಹಾಸದಲ್ಲೇ ಶುಭ ಸಂದರ್ಭದ ಚಾರಿತ್ರಿಕ ದಿನ'' ಎಂದರು. ಶ್ರೀ ದೊಡ್ಡನಗೌಡರು ಬದುಕಿ ಬಾಳುತ್ತಿರುವ ಮನೆ ಆ ಭಾಗದ ಸಾಂಸ್ಕೃತಿಕ ಆಶಯಗಳನ್ನು ಎತ್ತಿ ಹಿಡಿಯುವ ಸಂಶೋಧನಾ ಕೇಂದ್ರವಾಗಿ ರೂಪುಗೊಳ್ಳಲಿ ಎಂದು ಆಶಿಸಿದರು.

ಜೋಳದರಾಶಿಯನ್ನು ಜ್ಞಾನದರಾಶಿಯನ್ನಾಗಿ ಬೆಳೆಸಿದ ಕೀರ್ತಿ ಡಾ.ದೊಡ್ಡನಗೌಡರಿಗೆ ಸಲ್ಲುತ್ತದೆ ಎಂದು ಹೇಳಿದ ಕತೆಗಾರ ಕುಂ. ವೀರಭದ್ರಪ್ಪ ಅವರು ಡಾ. ಗೌಡರ ವ್ಯಕ್ತಿತ್ವ ಹಾಗೂ ಕಲೆಯ ಸಾಧನೆಯನ್ನು ಕುರಿತು ಶ್ಲಾಘಿಸಿದರು. ಗೌಡರನ್ನು ಶ್ರೀ ಹಿ. ಚಿ. ಬೋರಲಿಂಗಯ್ಯನವರು ಮತ್ತು ಡಾ. ಕರೀಗೌಡ ಬೀಚನಹಳ್ಳಿ ಅವರು ಅಭಿನಂದಿಸಿ ಮಾತನಾಡಿದರು. ಸುಂದರ ಮುಸ್ಸಂಜೆಯಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ವಿಶ್ವವಿದ್ಯಾಲಯದ ಸಿಬ್ಬಂದಿ ಹಾಗೂ ಜೋಳದರಾಶಿ ಗ್ರಾಮಸ್ಥರು ಪಾಲ್ಗೊಂಡಿದ್ದರು.

**ಶ್ರೀ ಚಂದ್ರಶೇಖರ ಶಾಸ್ತ್ರಿ**

ಕನ್ನಡ ನಾಡು, ನುಡಿ, ಸಂಸ್ಕೃತಿಯನ್ನು ಕಟ್ಟಿ ಬೆಳೆಸಿದ 'ವ್ಯಾಕರಣ ತೀರ್ಥ' ಶತಾಯುಷಿ ಶ್ರೀ ಚಂದ್ರಶೇಖರ ಶಾಸ್ತ್ರಿಗಳನ್ನು ಕನ್ನಡ ವಿಶ್ವವಿದ್ಯಾಲಯವು ಶಾಸ್ತ್ರಿಗಳು ನೆಲೆಸಿರುವ ಬಳ್ಳಾರಿ ಜಿಲ್ಲೆಯ 'ಮಾಗಳ' ಗ್ರಾಮಕ್ಕೆ ತೆರಳಿ ಸೆಪ್ಟಂಬರ್ ೧೧ ರಂದು ಆತ್ಮೀಯವಾಗಿ ಸನ್ಮಾನಿಸಿತು. ತುಂಗಭದ್ರಾ ನದಿಯ ದಂಡೆಯ ಮೇಲೆ ನಡೆದ ಸಂಜೆಯ ಸುಂದರ ಕಾರ್ಯಕ್ರಮದಲ್ಲಿ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರು ಶಾಸ್ತ್ರಿಗಳಿಗೆ ಫಲಪುಷ್ಪ ತಾಂಬೂಲ ನೀಡಿ ಶಾಲು ಹೊದಿಸಿ ಸನ್ಮಾನಿಸಿದರು. ವಿಶ್ವವಿದ್ಯಾಲಯದ ಪ್ರಸಾರಾಂಗ ಹೊರತಂದಿರುವ ಪುಸ್ತಕಗಳನ್ನು ಪ್ರೀತಿಪೂರ್ವಕವಾಗಿ ಶಾಸ್ತ್ರಿಗಳಿಗೆ ಅರ್ಪಿಸಲಾಯಿತು.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಕನ್ನಡದ ಬಗ್ಗೆ ಇನ್ನಷ್ಟು ತೀವ್ರವಾಗಿ ಚರ್ಚೆಯಾಗಬೇಕು. ಕನ್ನಡದ ಅವಶ್ಯಕತೆಗಳನ್ನು ಕನ್ನಡ ವಿಶ್ವವಿದ್ಯಾಲಯ ಪೂರೈಸುತ್ತದೆ. ಕನ್ನಡಿಗರಲ್ಲಿ ಆತ್ಮವಿಶ್ವಾಸ ತುಂಬುವ ಕೆಲಸಗಳನ್ನು ಇದು ನಿರ್ವಹಿಸುತ್ತದೆ ಎಂದು ಹೇಳಿದ ಕುಲಪತಿಗಳು ಶತಾಯುಷಿ ಚಂದ್ರಶೇಖರ ಶಾಸ್ತ್ರಿಗಳ ಆಶೀರ್ವಾದ ಕನ್ನಡ ವಿಶ್ವವಿದ್ಯಾಲಯದ ಮೇಲೆ ಇರಲೆಂದು ಆಶಿಸಿದರು.



ವಿಶ್ವವಿದ್ಯಾಲಯದ ಕುಲಸಚಿವರಾದ ಡಾ. ಕೆ.ವಿ. ನಾರಾಯಣ ಅವರು ಸ್ವಾಗತಿಸಿದರು. ಕುಂ.ವಿ ಶಾಸ್ತ್ರಿಗಳನ್ನು ಕುರಿತು ಅಭಿನಂದನಾ ಭಾಷಣ ಮಾಡಿದರು. ಎಂ.ಎಂ. ಶಿವಪ್ರಕಾಶ, ಶಾಸ್ತ್ರಿಗಳ ಜೀವನ ಮತ್ತು ಸಾಧನೆಗಳನ್ನು ಕುರಿತು ಪರಿಚಯಿಸಿದರು. ಸಿ. ಉಮೇಶ ವಂದಿಸಿದರು. ವಿಶ್ವವಿದ್ಯಾಲಯದ ಡಾ. ಕರೀಗೌಡ ಬೀಚನಹಳ್ಳಿ, ಪ್ರೊ. ಟಿ.ಎಲ್. ನಾಗಭೂಷಣ ಸ್ವಾಮಿ, ಡಾ. ರಹಮತ್ ತರೀಕೆರೆ, ಶ್ರೀ ಜಯಕುಮಾರ, ಶ್ರೀ ಹಿ.ಚಿ. ಬೋರಲಿಂಗಯ್ಯ, ವಿಶ್ವವಿದ್ಯಾಲಯದ ಸಿಬ್ಬಂದಿ ಹಾಗೂ ಮಾಗಳದ ಗ್ರಾಮಸ್ಥರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

**ಡಾ. ಚಿದಾನಂದಮೂರ್ತಿಯವರಿಗೆ ಸನ್ಮಾನ**

ಕನ್ನಡ ನಾಡು ನುಡಿಗೆ ಸೇವೆ ಸಲ್ಲಿಸುವವರನ್ನು ಸನ್ಮಾನಿಸುವುದು ಕನ್ನಡ ವಿಶ್ವವಿದ್ಯಾಲಯದ ಪ್ರತಿವರ್ಷ ನಡೆಯುವ 'ನುಡಿಹಬ್ಬ'ದ ವೈಶಿಷ್ಟ್ಯಗಳಲ್ಲಿ ಒಂದು. 'ನುಡಿಹಬ್ಬ, ೯೩'ರಲ್ಲಿ ಡಾ. ಎಂ. ಚಿದಾನಂದಮೂರ್ತಿಯವರನ್ನು ವಿಶ್ವವಿದ್ಯಾಲಯ ಬರುಮಾಡಿಕೊಂಡು ಸನ್ಮಾನಿಸಿತು. ನವೆಂಬರ್ ೨೪ರ ಸಂಜೆ 'ವಿದ್ಯಾರಣ್ಯ' ಆವರಣದ ನವರಂಗದಲ್ಲಿ ಕುಲಪತಿಗಳು ಡಾ. ಚಿದಾನಂದಮೂರ್ತಿಯವರಿಗೆ ಶಾಲು ಹೊದಿಸಿ, ಫಲಪುಷ್ಪ ಪ್ರತಿಮೆ ತಾಂಬೂಲ ನೆನಪಿನ ಕಾಣಿಕೆಯನ್ನು ನೀಡಿ ಗೌರವಿಸಿದರು.



ಸನ್ಮಾನಕ್ಕೆ ಉತ್ತರವಾಗಿ ಶ್ರೀ ಚಿದಾನಂದಮೂರ್ತಿಯವರು ಮಾತನಾಡುತ್ತಾ ''ನಮಗೆ ಸಂದ ಸನ್ಮಾನ ಸಾಹಿತಿ ಕಲಾವಿದರ ಬಳಗಕ್ಕೆ ಸಂದ ಸನ್ಮಾನವೆಂದು ತಿಳಿಯುತ್ತೇನೆ'' ಎಂದರು. ''ಕನ್ನಡಿಗನ ಬೆಳವಣಿಗೆಯಾಗದೆ ಕನ್ನಡ ಬೆಳವಣಿಗೆಯಾಗದು. ಇದು ಕನ್ನಡಿಗರು ಅರಿತುಕೊಳ್ಳಬೇಕಾದ ಸತ್ಯ. ಬದುಕಿಗೂ ಭಾಷೆಗೂ ನಿಕಟ ಸಂಬಂಧವಿದೆ'' ಎಂದರು.

ಕನ್ನಡಿಗರ ಅಭಿಮಾನದ ದ್ಯೋತಕವಾಗಿ ಬೆಳೆಯುತ್ತಿರುವ ಕನ್ನಡ ವಿಶ್ವವಿದ್ಯಾಲಯದ ಎರಡು ವರ್ಷಗಳ ಸಾಧನೆಯನ್ನು ಅವರು ಮೆಚ್ಚಿಕೊಂಡರು. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಅಧ್ಯಯನ ಹಾಗೂ ಸಂಶೋಧನೆಗಳು ಶ್ರೇಷ್ಠಮಟ್ಟದ, ಮೌಲಿಕ ಶೋಧನೆಗಳಿಗಾಗಿ ಅಂತಾರಾಷ್ಟ್ರೀಯ ಖ್ಯಾತಿಯನ್ನು ತಲುಪಬೇಕು. ಹೊರರಾಜ್ಯಗಳಲ್ಲಿರುವ ಕನ್ನಡಿಗರ ಸಾಂಸ್ಕೃತಿಕ ಸಾಧನೆಯ ಬಗ್ಗೆ ಅಧ್ಯಯನ ನಡೆಯಬೇಕು. ಕರ್ನಾಟಕದ ಸಂಸ್ಕೃತಿಗೆ ಉನ್ನತ ಸ್ಥಾನಮಾನಗಳನ್ನು ತಂದುಕೊಡುವ ಮಹದುದ್ದೇಶವನ್ನು ಹೊಂದಿರುವ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ.ಚಂದ್ರಶೇಖರ ಕಂಬಾರರು ಕುಲಪತಿಗಳಾಗಿ ದೊರೆತಿದ್ದಾರೆ. ಎರಡು ವರ್ಷಗಳಲ್ಲಿ ಒಳ್ಳೆಯ ಕೆಲಸ ಮಾಡಿದ್ದಾರೆ. ಅವರ ಇಂತಹ ಸಾಧನೆಗೆ ನೈತಿಕ ಬೆಂಬಲ ಸಂಪೂರ್ಣವಾಗಿದೆ ಎಂದರು.

ಡಾ. ಅ. ಸುಂದರ, ಡಾ. ಕೆ. ವಿ. ನಾರಾಯಣ, ಡಾ. ಪುರುಷೋತ್ತಮ ಬಿಳಿಮಲೆ ಇವರುಗಳು ಡಾ. ಚಿದಾನಂದಮೂರ್ತಿ ಅವರನ್ನು ಅಭಿನಂದಿಸಿ ಮಾತನಾಡಿದರು. ನುಡಿಹಬ್ಬದ ಸವಿನೆನಪಿಗಾಗಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ಡಾ. ಎಂ. ಚಿದಾನಂದಮೂರ್ತಿಯವರ ಸಂಶೋಧನಾ ಲೇಖನಗಳ ಸಂಕಲನ 'ಹೊಸತು, ಹೊಸತು' ಗ್ರಂಥವನ್ನು ನಾಡಿನ ಹಿರಿಯ ಕವಿ ಶ್ರೀ ಚೆನ್ನವೀರ ಕಣವಿಯವರು ಸನ್ಮಾನದ ಸಂದರ್ಭದಲ್ಲಿ ಬಿಡುಗಡೆ ಮಾಡಿದರು. ಡಾ. ಚಿದಾನಂದಮೂರ್ತಿಯವರ ಸಂಶೋಧನೆ, ಸಾಧನೆ, ಆಸಕ್ತಿ, ಅಧ್ಯಯನಗಳನ್ನು ಪ್ರಶಂಸಿಸಿದ ಶ್ರೀ ಕಣವಿಯವರು ಸಂಶೋಧನೆಗೆ 'ಪಾರಜ'ದ ಗುಣವಿದೆ. ಕನ್ನಡ ವಿಶ್ವವಿದ್ಯಾಲಯ ಸ್ಥಾಪಕರಲ್ಲಿ ಒಬ್ಬರಾದ ಡಾ.ಚಿದಾನಂದಮೂರ್ತಿ ಅವರಿಗೆ ಕನ್ನಡ ವಿಶ್ವವಿದ್ಯಾಲಯವು ಸನ್ಮಾನಿಸುತ್ತಿರುವುದು, ಇದರ ದ್ಯೋತಕವಾಗಿ 'ಹೊಸತು ಹೊಸತು' ಪುಸ್ತಕವನ್ನು ಹೊರತಂದಿರುವುದು ಅರ್ಥಪೂರ್ಣ ಎಂದು ನುಡಿದರು.

**ಮೂರು ಸಾಕ್ಷ್ಯ ಚಿತ್ರಗಳು**

ಹಿರಿಯ ಸಾಹಿತಿಗಳ, ಕಲಾವಿದರ ಕುರಿತು ಸಾಕ್ಷ್ಯಚಿತ್ರಗಳನ್ನು ನಿರ್ಮಾಣ ಮಾಡುವುದು ವಿಶ್ವವಿದ್ಯಾಲಯದ ಮತ್ತೊಂದು ಪ್ರಮುಖ ಯೋಜನೆ. ಈ ವರ್ಷದ ಮೊದಲ ಹಂತದಲ್ಲಿ ಹಿರಿಯ ಗಮಕ ಕಲಾವಿದರಾದ ಡಾ. ಜೋಳದರಾಶಿ ದೊಡ್ಡನಗೌಡ, ವ್ಯಾಕರಣತೀರ್ಥ ಶ್ರೀ ಚಂದ್ರಶೇಖರ ಶಾಸ್ತ್ರಿಗಳು, ಸಾಹಿತಿ ಡಾ. ಪು.ತಿ.ನ. ಅವರನ್ನು ಕುರಿತು ಸಾಕ್ಷ್ಯಚಿತ್ರಗಳನ್ನು ತಯಾರಿಸಲಾಗಿದೆ.

**ಬಿತ್ತರ**

ಕರ್ನಾಟಕದ ಬಹುಪಾಲು ಕನ್ನಡದ ಸಣ್ಣಪತ್ರಿಕೆಗಳು ಲೇಖನಗಳ ಕೊರತೆಯನ್ನು ಅನುಭವಿಸುತ್ತಿವೆ. ಈ ಕೊರತೆಯನ್ನು ನಿವಾರಿಸಿ, ಅವುಗಳ ಬೆಳವಣಿಗೆಗೆ ಶ್ರಮಿಸುವ ಸಲುವಾಗಿ, ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು 'ಬಿತ್ತರ' ಎಂಬ ಒಂದು ವಿಶಿಷ್ಟ ಯೋಜನೆಯನ್ನು ರೂಪಿಸಿದೆ. ನಾಡಿನ ಪ್ರಖ್ಯಾತ ವಿದ್ವಾಂಸರಿಂದ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಒಂದೊಂದು ಪುಟದ ಲೇಖನ ಬರೆಸಿ, ಅವುಗಳನ್ನು ವಿಶ್ವವಿದ್ಯಾಲಯವು ಪ್ರತಿ ಮಾಡಿಸಿ ಸಣ್ಣ ಪತ್ರಿಕೆಗಳಿಗೆ ಕಳಿಸುವುದು. ಇದಕ್ಕೆ ವಿಶ್ವವಿದ್ಯಾಲಯವು ಲೇಖಕರಿಗಾಗಲೀ, ಸಂಪಾದಕರಿಗಾಗಲಿ ಸಂಭಾವನೆ ನೀಡುವುದಿಲ್ಲ. ಮತ್ತು ಸಂಭಾವನೆಯನ್ನು ವಿಶ್ವವಿದ್ಯಾಲಯ ಕೂಡ ಯಾರಿಂದಲೂ ಪಡೆಯುವುದಿಲ್ಲ. ವಿಶ್ವವಿದ್ಯಾಲಯವು ಈ ಮೂಲಕ ಜ್ಞಾನವನ್ನು ನಾಡಿನ ಎಲ್ಲಾ ಪ್ರದೇಶಗಳಿಗೂ ಹಂಚುವ, ತನ್ನ ಪರಿಧಿಯನ್ನು ವಿಸ್ತರಿಸಿಕೊಳ್ಳುವ ಉದ್ದೇಶವನ್ನು ಈ 'ಬಿತ್ತರ' ಕಾರ್ಯಕ್ರಮದಲ್ಲಿ ಹೊಂದಿದೆ. ಇದು ಲೇಖಕರ, ಸಂಪಾದಕರ, ಸಾರ್ವಜನಿಕರ ಪರಸ್ಪರ ಸಲಹೆ, ಸಹಕಾರದಿಂದ ನಡೆಯುತ್ತದೆ.

ವಿಶ್ವವಿದ್ಯಾಲಯದ ಇಂಥ ವಿಶಿಷ್ಟ ಯೋಜನೆ 'ಬಿತ್ತರ'ವನ್ನು ಕುಲಪತಿ ಡಾ.ಚಂದ್ರಶೇಖರ ಕಂಬಾರ ಅವರು ೬.೧.೯೩ ರಂದು ಉದ್ಘಾಟಿಸಿದರು.

‘‘ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ, ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ನಮ್ಮ ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿದೆ. ನಾಡಿನ ಪ್ರತಿಭಾವಂತ ವಿದ್ವಾಂಸರಿಂದ ಸಂಗ್ರಹಿಸಿದ ಜ್ಞಾನವನ್ನು ನಾಡಿಗೆ ಹಂಚುವ ವಿಭಿನ್ನ ಹಾಗೂ ವಿಶಿಷ್ಟವಾದ ಕಾರ್ಯಕ್ರಮವನ್ನು ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗ ಹಮ್ಮಿಕೊಂಡಿದೆ. ಈ ಮೂಲಕ ತಿಳುವಳಿಕೆ ಮತ್ತು ನಾಡಿನ ಜನತೆಯ ನಡುವೆ ನಮ್ಮ ಪ್ರಸಾರಾಂಗ ಒಂದು ಸಂಪರ್ಕ ಸೇತುವೆಯಾಗಲಿದೆ’’ ಎಂದು ‘ಬಿತ್ತರ’ಯೋಜನೆಯನ್ನು ಉದ್ಘಾಟಿಸಿ ಮಾತನಾಡಿದರು. ಯೋಜನಾಧಿಕಾರಿ ಡಾ. ಕರೀಗೌಡ ಬೀಚನಹಳ್ಳಿ ಅವರು ‘ಬಿತ್ತರ’ಯೋಜನೆಯ ಸ್ವರೂಪವನ್ನು ವಿವರಿಸಿದರು. ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಬರಬೇಕಾಗಿದ್ದ ಶ್ರೀ ಸಿ. ವಿ. ರಾಜಗೋಪಾಲರು ಕಾರಣಾಂತರದಿಂದ ಬಂದಿರಲಿಲ್ಲ. ಆದರೆ ಅವರು ಬರೆದು ಕಳುಹಿಸಿದ ಭಾಷಣವನ್ನು ಸಭೆಯಲ್ಲಿ ವಾಚನ ಮಾಡಲಾಯಿತು. ವಿಶ್ವವಿದ್ಯಾಲಯದ ನೌಕರರು, ವಿದ್ವಾಂಸರು ಮತ್ತು ಹೊಸಪೇಟೆಯ ಪತ್ರಕರ್ತರು ಉಪಸ್ಥಿತರಿದ್ದರು. ಆ ದಿನ ಮೊದಲ ಕಂತಿನ ಲೇಖನಗಳನ್ನು ಸಣ್ಣ ಪತ್ರಿಕೆಗಳಿಗೆ ಬಿಡುಗಡೆ ಮಾಡಲಾಯಿತು. ‘ಬಿತ್ತರ’ ಕಾರ್ಯಕ್ರಮ ಈಗ ತುಂಬಾ ಪ್ರಸಿದ್ಧಿಯನ್ನು, ಪ್ರಶಂಸೆಯನ್ನು ಪಡೆದುಕೊಂಡು ನಡೆಯುತ್ತಿದೆ.

## ಪ್ರಸಂಗ

ಶಾಲಾ ಕಾಲೇಜುಗಳಲ್ಲಿ ಕಲಿಯುತ್ತಿರುವ ಯುವ ವಿದ್ಯಾರ್ಥಿಗಳ ಜೊತೆಗೆ ಅರ್ಥಪೂರ್ಣ ಸಂಬಂಧದ ಸೇತುವೆಯನ್ನು ರೂಪಿಸುವ ಕನ್ನಡ ವಿಶ್ವವಿದ್ಯಾಲಯದ ಹೊಸ ಯೋಜನೆಯಾದ ‘ಪ್ರಸಂಗ’ವನ್ನು ಸೆಪ್ಟೆಂಬರ್ ೫ ರಂದು ಆರಂಭಿಸಲಾಯಿತು.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ನಂದೀಪುರ ಗ್ರಾಮದಲ್ಲಿ ಈ ಹೊಸ ಯೋಜನೆಯನ್ನು ಹೊಸಪೇಟೆಯ ಆಕಾಶವಾಣಿಯ ನಿರ್ದೇಶಕರಾದ ಶ್ರೀ ಎಚ್. ಆರ್. ಕೃಷ್ಣಮೂರ್ತಿಯವರು ಉದ್ಘಾಟಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಡಾ.ಪುರುಷೋತ್ತಮ ಬಿಳಿಮಲೆ ಅವರು ವಹಿಸಿದ್ದರು. ಪ್ರಸಾರಾಂಗದ ನಿರ್ದೇಶಕರಾಗಿದ್ದ ಶ್ರೀ ಟಿ. ಶ್ರೀನಿವಾಸರಾಜು ಅವರು ಮಾತನಾಡಿ ಶಿಕ್ಷಕರಿಗೆ ಹಾಗೂ ವಿದ್ಯಾರ್ಥಿ ಯುವಜನರಿಗೆ ಉಪಯುಕ್ತವಾಗಬಲ್ಲ ಕನ್ನಡ ವಿಶ್ವವಿದ್ಯಾಲಯದ ‘ಪ್ರಸಂಗ’ ಯೋಜನೆ ಕೇವಲ ಉಪನ್ಯಾಸಗಳಿಗೆ ಸೀಮಿತವಾಗಿರುವುದಿಲ್ಲ. ಈ ಕಾರ್ಯಕ್ರಮದಲ್ಲಿ ಧ್ವನಿಮುದ್ರಣ, ವಿಡಿಯೋ ಮುಂತಾದ ವಿದ್ಯುನ್ಮಾನ ಮಾಧ್ಯಮಗಳನ್ನು ಅರ್ಥಪೂರ್ಣವಾಗಿ ಬಳಸಿಕೊಳ್ಳಲಾಗುವುದು. ಸ್ಥಳೀಯ ಜಾನಪದ ಹಾಗೂ ಸಾಂಸ್ಕೃತಿಕ ಪ್ರತಿಭೆಯನ್ನು ಬಳಸಿಕೊಳ್ಳುತ್ತಾ ಇಡೀ ಯೋಜನೆಯನ್ನು ಅಧ್ಯಯನಕ್ಕೆ ಪೂರಕವಾಗಿ ಅವರ ಬದುಕಿಗೆ ಹತ್ತಿರವಾಗುವಂತೆ ರೂಪಿಸುವುದು ಈ ಯೋಜನೆಯ ಮುಖ್ಯಗುರಿ ಎಂದರು.

**ಸರ್ವೋದಯ ಗ್ರಾಮದಲ್ಲಿ 'ಪ್ರಸಂಗ'**

ವಿಶ್ವವಿದ್ಯಾಲಯದ ವಿಶಿಷ್ಟ ಯೋಜನೆ 'ಪ್ರಸಂಗ'ದ ಎರಡನೆ ಕಾರ್ಯಕ್ರಮ ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲೂಕಿನ ಗುಡೇಕೋಟೆ ಹತ್ತಿರದ ಸರ್ವೋದಯ ಗ್ರಾಮದಲ್ಲಿ ಸೆಪ್ಟೆಂಬರ್ ೨೫ ರಂದು ನಡೆಯಿತು.

ಈ ಕಾರ್ಯಕ್ರಮದಲ್ಲಿ ವಿಶ್ವವಿದ್ಯಾಲಯದ ಓ. ಎಲ್. ನಾಗಭೂಷಣಸ್ವಾಮಿ ಅವರು 'ಚಾರಣ ಯಾತ್ರೆ'ಯ ಬಗ್ಗೆ ಮಕ್ಕಳಿಗೆ ಸರಳವಾಗಿ ವಿವರಿಸಿದರು. ಜಿ. ಜಯಕುಮಾರ್ ಅವರು ಚಿತ್ರಕಲೆಯ ಬಗ್ಗೆ, ಕುಂ. ವೀರಭದ್ರಪ್ಪ ಅವರು ಬದುಕು ಮತ್ತು ಸಾಹಿತ್ಯಗಳನ್ನು ಪ್ರಶ್ನೋತ್ತರಗಳ ರೂಪದಲ್ಲಿ, ಹೊಸಪೇಟೆಯ ಯುವ ನಾಟ್ಯ ಕಲಾವಿದ ಎಂ. ಅಬ್ದುಲ್‌ನಬಿ ಭರತನಾಟ್ಯದ ಬಗೆಗೂ, ಖ್ಯಾತ ಯೋಗಪಟು ಕೊಟ್ರೇಶ್ ಯೋಗದ ಬಗೆಗೂ ಪ್ರಾಥಮಿಕ ವಿವರಗಳನ್ನು ನೀಡಿದರು. ಸರ್ವೋದಯ ವಸತಿ ಶಾಲಾ ಸಂಸ್ಥೆಯ ಅಧ್ಯಕ್ಷರಾದ ಎಂ. ವಾಸುದೇವಾಚಾರ್ಯ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಪ್ರಸಾರಾಂಗದ ಸಹಾಯಕ ನಿರ್ದೇಶಕ ಕೆ. ಜಿ. ವಾಸುಕಿ ಸ್ವಾಗತಿಸಿದರು.

## ನಿಯತಕಾಲಿಕೆಗಳು ಮತ್ತು ಪುಸ್ತಕ ಬಿಡುಗಡೆ

**'ಪುಸ್ತಕ ಮಾಹಿತಿ'**

ಕನ್ನಡ ಪುಸ್ತಕಗಳ ಬಗ್ಗೆ ಮಾಹಿತಿಯನ್ನು ಒದಗಿಸಿಕೊಡುವ ಮಾಸಪತ್ರಿಕೆ 'ಪುಸ್ತಕ ಮಾಹಿತಿ'. ಇದು ಪುಸ್ತಕ ಪ್ರೇಮಿಗಳಿಗೆ, ಪ್ರಕಾಶಕರಿಗೆ, ಮಾರಾಟಗಾರರಿಗೆ, ಸಂಘ ಸಂಸ್ಥೆಗಳಿಗೆ, ಸಂಶೋಧಕರಿಗೆ ಅಗತ್ಯವಾಗಿ ಬೇಕು. ಕ್ರಮಬದ್ಧವಾಗಿ ಹಾಗೂ ನಿರಂತರವಾಗಿ ಪುಸ್ತಕ ಮಾಹಿತಿಗಳನ್ನು ಕಲೆಹಾಕಿ ಅವುಗಳನ್ನು ಪ್ರಕಟಿಸುವ ಜವಾಬ್ದಾರಿಯನ್ನು 'ಪುಸ್ತಕ ಮಾಹಿತಿ' ಹೊಂದಿದೆ. ಪುಸ್ತಕ ವಿಮರ್ಶೆಯೂ ಇರುತ್ತದೆ.

**'ಕನ್ನಡ ಅಧ್ಯಯನ'**

ಸಾಹಿತ್ಯ, ಸಂಸ್ಕೃತಿ, ಕಲೆಗಳ ವಿಶ್ಲೇಷಣೆಗೆ ಮೀಸಲಾದ ಪ್ರಬುದ್ಧ ಷಾಣ್ಮಾಸಿಕ ಪತ್ರಿಕೆ. ಪ್ರತಿಯೊಂದು ಸಂಚಿಕೆಯು ಸಂಸ್ಕೃತಿಗೆ ಸಂಬಂಧಿಸಿದ ಮುಖ್ಯ ವಿಷಯಗಳನ್ನು ತೆಗೆದುಕೊಂಡು ಚಿಂತಿಸಲು ಅನುವಾಗುವ ಪತ್ರಿಕೆಯಾಗಿದೆ. ಕನ್ನಡ ವಿಶ್ವವಿದ್ಯಾಲಯದ ಮಹತ್ವದ ಈ ಎರಡು ನಿಯತಕಾಲಿಕೆಗಳ ಬಿಡುಗಡೆ ಮೇ ೨ ರಂದು ಮೈಸೂರಿನಲ್ಲಿ ನಡೆಯಿತು.

ಕನ್ನಡದ ಹಿರಿಯ ಲೇಖಕ ಡಾ. ಚದುರಂಗ ಅವರು ಈ ಎರಡು ನಿಯತಕಾಲಿಕೆಗಳನ್ನು ಬಿಡುಗಡೆ ಮಾಡಿದರು. ಮೈಸೂರು ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎಂ. ಮಾದಯ್ಯ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಡಾ. ಚಂದ್ರಶೇಖರ ಕಂಬಾರ ಅವರು ಸ್ವಾಗತಿಸಿದರು. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರೊ. ಜಿ. ಎಚ್. ನಾಯಕ ಅವರು ನಿಯತಕಾಲಿಕೆಗಳ ಬಗ್ಗೆ ಮಾತನಾಡಿದರು.

**‘ವಿಜ್ಞಾನ ಸಂಗಾತಿ’**

‘‘ಪಾಶ್ಚಾತ್ಯರಲ್ಲಿ ವೈಜ್ಞಾನಿಕ ಸಾಹಿತ್ಯ ವಿಪುಲವಾಗಿ ಬೆಳೆದು ಬಂದಿದೆ. ಅಂಥ ಸಾಹಿತ್ಯ ಕನ್ನಡದಲ್ಲಿ ಬರಬೇಕು. ತಿಳಿವಳಿಕೆ ಎಷ್ಟೇ ಶ್ರೇಷ್ಠವಾಗಿರಲಿ, ಅಗತ್ಯವಾದದ್ದೇ ಆಗಿರಲಿ ನಮ್ಮ ಭಾಷೆಯಲ್ಲಿ ಅದು ಮೂಡಿ ಬರದಿದ್ದರೆ ಅದು ನಮ್ಮ ತಿಳುವಳಿಕೆಯಾಗಲಾರದು. ಕನ್ನಡ ವಿಶ್ವವಿದ್ಯಾಲಯ ಆರಂಭಿಸಿರುವ ‘ವಿಜ್ಞಾನ ಸಂಗಾತಿ’ಗೆ ಮಹತ್ತರವಾದ ಉದ್ದೇಶವಿದೆ. ಕರ್ನಾಟಕದಲ್ಲಿ ಮೌಲಿಕವಾದ ವಿಜ್ಞಾನ ಹುಟ್ಟಿ ಬರಬೇಕಾದರೆ ನಮ್ಮ ಭಾಷೆಯಲ್ಲಿ ವೈಜ್ಞಾನಿಕ ಸಾಹಿತ್ಯ ಹುಟ್ಟಿ ಬರಬೇಕು. ಕನ್ನಡದಲ್ಲಿ ವೈಜ್ಞಾನಿಕ ಚಿಂತನೆ ನಡೆಯಬೇಕು. ಕನ್ನಡಕ್ಕೆ ಅಂಥ ತೇಜಸ್ಸು, ಶಕ್ತಿ ಇದೆ. ವಚನಕಾರರ ಭಾಷೆ ಅಣು



ವಿಜ್ಞಾನದ ಅರ್ಥವನ್ನು ಪ್ರಕಟಿಸಲು ಸಮರ್ಥವಾಗಿದೆ. ಕನ್ನಡ ವಿಶ್ವವಿದ್ಯಾಲಯ ಈ ದಿಸೆಯಲ್ಲಿ ಮಾಡುತ್ತಿರುವ ಪ್ರಯತ್ನವೆಂದರೆ ‘ವಿಜ್ಞಾನ ಸಂಗಾತಿ’ ಪ್ರಕಟಣೆ. ‘ವಿಜ್ಞಾನ ಸಂಗಾತಿ’ ಮಾಸಿಕದ ಪ್ರಧಾನ ಸಂಪಾದಕರಾದ ಡಾ. ಚಂದ್ರಶೇಖರ ಕಂಬಾರ ಅವರ ಮಾತುಗಳಿವು. ಇದರ ಸಂಪಾದಕ ಶ್ರೀ ಕೆ. ಜಿ. ವಾಸುಕಿ ಅವರು. ಇದರ ಪ್ರಥಮ ಸಂಚಿಕೆಯನ್ನು ಆಗಸ್ಟ್ ೨೫, ೧೯೯೩ ರಂದು ಬೆಂಗಳೂರಿನ ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ ನಡೆದ ಸರಳ ಸಮಾರಂಭದಲ್ಲಿ ಬಿಡುಗಡೆ ಮಾಡಿ ಮಾತನಾಡಿದ ಡಾ.ಎಚ್. ನರಸಿಂಹಯ್ಯ ಅವರು, ‘‘ಕನ್ನಡ ಜಾಗೃತಿ ವರ್ಷದಲ್ಲಿ ವಿಜ್ಞಾನ ಸಂಗಾತಿಯನ್ನು ಪ್ರಾರಂಭಿಸಿ ಕನ್ನಡ ವಿಶ್ವವಿದ್ಯಾಲಯ ಒಳ್ಳೆಯ ಕೆಲಸವನ್ನು ಮಾಡಿದೆ, ಎಲ್ಲಾ

ಶಾಲಾ-ಕಾಲೇಜುಗಳಲ್ಲೂ, ಮನೆಮನೆಯಲ್ಲೂ ವಿಜ್ಞಾನ ಸಂಗಾತಿಯು ಪ್ರವೇಶವಾಗಬೇಕು. ಕನ್ನಡ ಜನತೆ ಈ ನಿಯತಕಾಲಿಕೆಯನ್ನು ಪ್ರೀತಿಯಿಂದ ಬರು ಮಾಡಿಕೊಳ್ಳಬೇಕು'' ಎಂದು ಆಶಿಸಿದರು.

**'ಬಾರಮಾಸ'ಕೃತಿ ಬಿಡುಗಡೆ**

ಕನ್ನಡ ವಿಶ್ವವಿದ್ಯಾಲಯದ ಮುಖ್ಯ ಪ್ರಕಟಣೆಗಳಲ್ಲಿ ಒಂದಾದ 'ಬಾರಮಾಸ' ಕೃತಿಯ ಬಿಡುಗಡೆ ಸಮಾರಂಭವು ದಿನಾಂಕ ೨೫.೧೨.೧೯೯೩ ರಂದು ವಿಶ್ವವಿದ್ಯಾಲಯದ ನೂತನ ಆವರಣ ' ವಿದ್ಯಾರಣ್ಯ'ದಲ್ಲಿ ನೆರವೇರಿತು.

ಹಿರಿಯ ಲೇಖಕ ಶ್ರೀ ಶಾಂತರಸರು ಸಂಪಾದಿಸಿದ ಕಲ್ಲೂರು ಲಿಂಗಣ್ಣವೊಡೆಯ ವಿರಚಿತ 'ಬಾರಮಾಸ' ಕೃತಿಯನ್ನು ಕುವೆಂಪು ವಿಶ್ವವಿದ್ಯಾಲಯದ ಕುಲಸಚಿವರಾದ ಡಾ.ಎಚ್. ಜೆ. ಲಕ್ಕಪ್ಪಗೌಡ ಅವರು ಬಿಡುಗಡೆ ಮಾಡಿ, ''ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಪುಸ್ತಕಗಳನ್ನು ಅತ್ಯಂತ ಕಲಾತ್ಮಕವಾಗಿ ಹಾಗೂ ವಿಷಯ ಪುನರಾವರ್ತನೆಯಾಗದಂತೆ ಪ್ರಕಟಿಸುತ್ತಿರುವುದು ತುಂಬಾ ಸಂತೋಷದ ಸಂಗತಿಯಾಗಿದೆ. ಈ ದೃಷ್ಟಿಯಿಂದ ಕನ್ನಡ ವಿಶ್ವವಿದ್ಯಾಲಯವನ್ನು ನಾನು ಅಭಿನಂದಿಸುತ್ತೇನೆ'' ಎಂದರು.

ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಎಚ್. ಎಸ್. ರಾಘವೇಂದ್ರರಾವ್ ಅವರು ಕೃತಿಯನ್ನು ಕುರಿತು ಮಾತನಾಡುತ್ತಾ, ''ಹೈದ್ರಾಬಾದ್ -ಕರ್ನಾಟಕದ ವಿಶಿಷ್ಟ ಕೃತಿ 'ಬಾರಮಾಸ'. ಗಡಿ ಪ್ರದೇಶದ ಎರಡು ಸಂಸ್ಕೃತಿಗಳ ತಾಕಲಾಟದಿಂದ ಬಂದ ಅನುಕೂಲತೆಗಳನ್ನು ಇದು ಬಿಂಬಿಸಿದೆ. ಹಳಗನ್ನಡ, ನಡುಗನ್ನಡ ಹಾಗೂ ಜನಪದ - ಈ ಮೂರೂ ಶೈಲಿಯನ್ನು ಸೇರಿಸಿಕೊಂಡ ರಚನೆ ಬಾರಮಾಸ. ಸಂಸ್ಕೃತಿಯ ದೃಷ್ಟಿಯಲ್ಲಿ ಇದು ಬಹಳ ಮುಖ್ಯವಾದ ಕೃತಿ'' ಎಂದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕುಲಪತಿ ಡಾ. ಚಂದ್ರಶೇಖರ ಕಂಬಾರರು ''ಬಾರಮಾಸ ಸ್ಥಳೀಯ ಸಂಸ್ಕೃತಿಗಳಿಗೆ ಒಂದು ತೆರೆದ ಬಾಗಿಲಿನಂತಿದೆ. ಈ ಬಾಗಿಲಿನ ಮೂಲಕ ಒಳಹೊಕ್ಕರೆ ಅನೇಕ ಸಂಸ್ಕೃತಿಗಳು ನಮಗೆ ಸಿಗುತ್ತವೆ'' ಎಂದರು. ಪ್ರಸಾರಾಂಗದ ನಿರ್ದೇಶಕ ಡಾ. ಕರೀಗೌಡ ಬೀಚನಹಳ್ಳಿ ಅವರು ಸ್ವಾಗತ ಕೋರಿದರು.

**ಪುಸ್ತಕ ಸಂಸ್ಕೃತಿ ಯಾತ್ರೆ**

ಕನ್ನಡ ವಿಶ್ವವಿದ್ಯಾಲಯವು ೧೯೯೩ರ ಕರ್ನಾಟಕ ರಾಜ್ಯೋತ್ಸವವನ್ನು 'ಜ್ಞಾನೋತ್ಸವ' ಹಾಗೂ 'ಪುಸ್ತಕ ಸಂಸ್ಕೃತಿ ಯಾತ್ರೆ'ಯನ್ನಾಗಿ ಆಚರಿಸಿತು. ರಾಜ್ಯೋತ್ಸವ ದಿನವಾದ ನವೆಂಬರ್ ೧, ೧೯೯೩ ರಂದು ಚಿತ್ರದುರ್ಗದಿಂದ 'ಜ್ಞಾನೋತ್ಸವದ ಪುಸ್ತಕ ಸಾಂಸ್ಕೃತಿಕ ಯಾತ್ರೆ' ಪ್ರಾರಂಭವಾಯಿತು. ನಾಡಿನ ಹಿರಿಯ ಮುತ್ಸದ್ದಿ ಹಾಗೂ ಮಾಜಿ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪನವರು ರಾಜ್ಯೋತ್ಸವ ಕಾರ್ಯಕ್ರಮ ಉದ್ಘಾಟಿಸಿದರು. ಶ್ರೀ ಶಿವಮೂರ್ತಿ ರಾಜೇಂದ್ರ ಮಹಾಸ್ವಾಮಿಗಳು ಕನ್ನಡ ವಿಶ್ವವಿದ್ಯಾಲಯದ ಪುಸ್ತಕ ಸಂಸ್ಕೃತಿ ಯಾತ್ರೆ




ಉದ್ಘಾಟಿಸಿದರು. ಅಂದು ರಾಜ್ಯೋತ್ಸವ ಕಾರ್ಯಕ್ರಮ ಹಾಗೂ ಕನ್ನಡ ವಿಶ್ವವಿದ್ಯಾಲಯದ ಕಾರ್ಯಕ್ರಮಗಳು ಜಂಟಿಯಾಗಿ ನಡೆದವು. ಅಂದು ವಿಚಾರ ಸಂಕಿರಣ, ಕವಿಗೋಷ್ಠಿ, ಜನಪದ ಕಲಾ ಪ್ರದರ್ಶನ, ಸಾಂಸ್ಕೃತಿಕ ಕಾರ್ಯಕ್ರಮ ನಡೆದವು.

ಚಿತ್ರದುರ್ಗದಿಂದ ಆರಂಭವಾದ ಪುಸ್ತಕ ಸಂಸ್ಕೃತಿ ಯಾತ್ರೆ ಬಳ್ಳಾರಿ, ರಾಯಚೂರು, ಬೀದರ್, ಗುಲ್ಬರ್ಗ, ಬಿಜಾಪುರ, ಬೆಳಗಾವಿ, ಉತ್ತರ ಕನ್ನಡ ಜಿಲ್ಲೆ, ಧಾರವಾಡ, ಶಿವಮೊಗ್ಗ, ದಕ್ಷಿಣ ಕನ್ನಡ ಜಿಲ್ಲೆ, ಹಾಸನ ಜಿಲ್ಲೆಗಳಲ್ಲಿ ಸಂಚರಿಸಿ ವಿಚಾರ ಸಂಕಿರಣ, ಕವಿಗೋಷ್ಠಿ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲಾಯಿತು. ಆಯಾಯಾ ಭಾಗದ ಸಾಹಿತಿಗಳು, ಕಲಾವಿದರು, ಅಧಿಕಾರಿಗಳು ಸಮಾರಂಭದಲ್ಲಿ ಭಾಗವಹಿಸಿದ್ದರು. ಫೆಬ್ರವರಿ ೮ ರಿಂದ ೧೫ ರವರೆಗೆ ಬೆಂಗಳೂರಿನಲ್ಲಿ ಹಾಗೂ ಮಂಡ್ಯದಲ್ಲಿ ನಡೆದ ೬೩ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪಾಲ್ಗೊಂಡು ಪುಸ್ತಕಗಳನ್ನು ಪ್ರದರ್ಶಿಸಿ, ಮಾರಾಟ ಮಾಡಲಾಯಿತು.

ಕನ್ನಡದ ಪುಸ್ತಕಗಳನ್ನು ಓದುವ ಅಭಿರುಚಿ, ಕೊಳ್ಳುವ ಆಸಕ್ತಿ, ಪುಸ್ತಕ ಪ್ರೇಮದ ಅನನ್ಯತೆ ಹಾಗೂ ಅಗತ್ಯತೆಯನ್ನು ಜಾಗೃತಗೊಳಿಸಲು ಮತ್ತು ಕನ್ನಡಿಗರ ಸಾಂಸ್ಕೃತಿಕ ಆಲೋಚನೆಗಳನ್ನು ವಿನಿಮಯ ಮಾಡಿಕೊಳ್ಳುವ ಉದ್ದೇಶದಿಂದ ಕನ್ನಡ ವಿಶ್ವವಿದ್ಯಾಲಯವು ರಾಜ್ಯದಾದ್ಯಂತ 'ಪುಸ್ತಕ ಸಂಸ್ಕೃತಿ ಯಾತ್ರೆ'ಯನ್ನು ನಡೆಸಿತು.

**ಮಂಟಪ-ಉಪನ್ಯಾಸಗಳು**

ಕನ್ನಡ ವಿಶ್ವವಿದ್ಯಾಲಯದ ಸಹೋದ್ಯೋಗಿಗಳು ಹಾಗೂ ಹೊರಗಿನ ವಿದ್ವಾಂಸರು ತಮ್ಮ ತಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಅರಿವನ್ನು ಎಲ್ಲರೂ ಹಂಚಿಕೊಳ್ಳಲು ಪ್ರತಿ ಬುಧವಾರ ವಿಶ್ವವಿದ್ಯಾಲಯದಲ್ಲಿ ಮಂಟಪವೆಂಬ ಕಾರ್ಯಕ್ರಮ ನಡೆಯುತ್ತಿದೆ. ಪ್ರತಿವಾರವೂ ಹೊಸ ಹೊಸ ವಿಚಾರಗಳ ಕುರಿತು ಉಪನ್ಯಾಸ, ಚರ್ಚೆ ನಡೆಯುತ್ತವೆ. ಅಲ್ಲಿ ಹೊರಹೊಮ್ಮಿದ ವಿಚಾರಗಳು ಅಲ್ಲಿಯವರ ಅರಿವನ್ನು ಹೆಚ್ಚಿಸಿದಂತೆ ಇತರರಿಗೂ ಲಾಭದಾಯಕವಾಗಬಹುದೆಂಬ ನಂಬಿಕೆಯಿಂದ ಕಿರುಪುಸ್ತಿಕೆಗಳ ರೂಪದಲ್ಲಿ ಮಂಟಪದ ವಿಚಾರಗಳನ್ನು ಪ್ರಕಟಿಸಲಾಗುತ್ತಿದೆ.

ಪ್ರತಿವಾರ ನಡೆಯುವ ಈ ಮಂಟಪದಲ್ಲಿ ವಿಶ್ವವಿದ್ಯಾಲಯದ ಸಹೋದ್ಯೋಗಿಗಳ ಜತೆಯಲ್ಲಿ ಉಪನ್ಯಾಸಗಳನ್ನು ನೀಡಿದ ಹೊರಗಿನ ವಿದ್ವಾಂಸರುಗಳೆಂದರೆ-

ಎಂ. ಕೆ. ಅನಿಲ್ ಅವರು ಜೂನ್ ೧೬ ರಂದು 'ಮಧ್ಯಮ ವರ್ಗದ ಸಂಸ್ಕೃತಿ' ಕುರಿತು, ಕನ್ನಡದ ಕತೆಗಾರ ಕುಂ.ವೀರಭದ್ರಪ್ಪ ಅವರು ಜೂನ್ ೩೦ ರಂದು 'ಜಮೀನ್ದಾರಿ ವ್ಯವಸ್ಥೆ ಮತ್ತು ತೆಲುಗು ಸಾಹಿತ್ಯ' ಕುರಿತು, ನ್ಯೂಯಾರ್ಕ್ ಯೂನಿವರ್ಸಿಟಿ ಪ್ರಾಧ್ಯಾಪಕರಾದ ಎಸ್. ಎನ್. ಶ್ರೀಧರ ಅವರು ಜುಲೈ ೮ ರಂದು 'ಕನ್ನಡ ಭಾಷೆಯಲ್ಲಿ ಆಧುನೀಕರಣ' ಕುರಿತು ಉಪನ್ಯಾಸ ನೀಡಿದರು.

ಕನ್ನಡದ ಮಹತ್ವದ ವಿಮರ್ಶಕರಾದ ಡಾ. ಡಿ. ಆರ್. ನಾಗರಾಜ್ ಅವರು ಆಗಸ್ಟ್ ೧೮, ೧೯ ಮತ್ತು ೨೦ ರಂದು 'ಪಾಶ್ಚಾತ್ಯ ಸಾಹಿತ್ಯ ಸಿದ್ಧಾಂತಗಳು ಮತ್ತು ನಮ್ಮ ಸನ್ನಿವೇಶ' ಕುರಿತು ಮೂರು ದಿನಗಳ ಕಾಲ ಉಪನ್ಯಾಸ ನೀಡಿದರು. ಸೆಪ್ಟೆಂಬರ್ ೧೫ ರಂದು ಡಾ. ನಾಗಲೋಟಿಮಠ ಅವರು 'ಸತ್ತಮೇಲೆ ಸಮಾಜಸೇವೆ' ಎನ್ನುವ ವಿಷಯ ಕುರಿತು ಉಪನ್ಯಾಸ ನೀಡಿದರು. 'ಆರೋಗ್ಯ ಸಮಸ್ಯೆಗಳ ಪರಿಹಾರಕ್ಕೆ ಆಹಾರ ಪದ್ಧತಿ' ಕುರಿತು ಡಾ. ಎ.ಎಸ್. ನಾಗರಾಜ್ ಅವರು, 'ಗ್ರಾಮೀಣ ನ್ಯಾಯ' ಕುರಿತು ಶ್ರೀ ಎಚ್.ವಿ. ನಾಗೇಶ್ ಅವರು ಅಕ್ಟೋಬರ್ ೬ ರಂದು ಉಪನ್ಯಾಸ ನೀಡಿದರು. ಡಿಸೆಂಬರ್ ೧ ರಂದು ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು 'ಕಾಯಕ ದಾಸೋಹ' ಮತ್ತು ಅಕ್ಟೋಬರ್ ೨ ರಂದು 'ದೃಶ್ಯಭಾಷೆ'ಕುರಿತು ಕೆ.ಎಸ್. ಶ್ರೀನಿವಾಸಮೂರ್ತಿ ಅವರು ಉಪನ್ಯಾಸ ನೀಡಿದರು.

**೧೯೯೩ರ ಪ್ರಸಾರಾಂಗದ ಪ್ರಕಟಣೆಗಳು**

೧. ಶ್ರೀತತ್ವನಿಧಿ (ಆಂಗ್ಲ ಆವೃತ್ತಿ) : ಸಂ. ಎಸ್. ಕೆ. ರಾಮಚಂದ್ರರಾವ್

೨. ಮಧುರಚೆನ್ನರ ಲೇಖನಗಳು : ಸಂ. ಗುರುಲಿಂಗ ಕಾಪಸೆ

೩. ಗೊಂದಲಿಗರ ದೇವೇಂದ್ರಪ್ಪನವರ ಆಟಗಳು : ಸಂ. ಮುದೇನೂರು ಸಂಗಣ್ಣ

೪. ಬಾರಮಾಸ : ಸಂ. ಶಾಂತರಸ

೫. ಸಾಮಾನ್ಯ ಶಸ್ತ್ರ ವೈದ್ಯದ ಕಾಯಿಲೆಗಳು : ಡಾ. ಎಚ್. ಡಿ. ಚಂದ್ರಪ್ಪಗೌಡ

೬. ಕನ್ನಡ ಸಾಹಿತ್ಯ : ಈ ಶತಮಾನದ ನೋಟ ಶಿವರಾಮ ಕಾರಂತ : ಸಂ. ಟಿ.ಪಿ. ಅಶೋಕ

೭. ಕನ್ನಡ ತಾಯಿಗೆ ನುಡಿ ನಮನ : ಸಂ. ಎಲ್. ಎಸ್. ಶೇಷಗಿರಿರಾವ್

೮ ಕನ್ನಡ ವಾರ್ಷಿಕ ೧೯೯೨ : ಸಂ. ಮಲ್ಲೇಪುರಂ ಜಿ. ವೆಂಕಟೇಶ

**ಮಂಟಪ ಮಾಲೆ**

೧. ಜಾನಪದ ಕೇತ್ರಕಾರ್ಯ : ಪುರುಷೋತ್ತಮ ಬಿಳಿಮಲೆ

೨. ಪುರಾಣ : ಓ. ಎಲ್. ನಾಗಭೂಷಣ ಸ್ವಾಮಿ

೩. ಸಂಶೋಧನೆಯ ಎರಡು ಹೆಜ್ಜೆಗಳು: ಎಚ್. ಎಂ. ಮರುಳಸಿದ್ಧಯ್ಯ

೪. ಭಾಷಾಂತರ : ಓ. ಎಲ್. ನಾಗಭೂಷಣ ಸ್ವಾಮಿ

೫. ಕೀಟಗಳು ಬದುಕುವ ದಾರಿ : ಪಿ. ಶಿವರಾಮ ರೈ

೬. ಸ್ಫೋಟವಾದ : ಮಲ್ಲೇಪುರಂ ಜಿ. ವೆಂಕಟೇಶ

೭. ಅಭಿವೃದ್ಧಿ ಮಿಮಾಂಸೆ : ಟಿ. ಆರ್. ಚಂದ್ರಶೇಖರ್

೮. ಜಮೀನ್ದಾರಿ ವ್ಯವಸ್ಥೆ ಮತ್ತು ತೆಲುಗು ಸಾಹಿತ್ಯ : ಕುಂ. ವೀರಭದ್ರಪ್ಪ

**ಕಾಯಕದ ಮನೆ - ನವರಂಗ ಕಟ್ಟಡಗಳ ಉದ್ಘಾಟನೆ**

ಕನ್ನಡ ವಿಶ್ವವಿದ್ಯಾಲಯದ 'ನುಡಿಹಬ್ಬ-೯೩'ರ ಸಂದರ್ಭದಲ್ಲಿ ವಿಶ್ವವಿದ್ಯಾಲಯದ ಹೊಸ ಆವರಣ ' ವಿದ್ಯಾರಣ್ಯ'ದಲ್ಲಿ ನವೆಂಬರ್ ೨೨ ರಂದು ಬೆಳಿಗ್ಗೆ 'ನವರಂಗ'ವನ್ನು ಕುಲಾಧಿಪತಿಗಳಾದ ಮುಖ್ಯಮಂತ್ರಿ ಶ್ರೀ ಎಂ. ವೀರಪ್ಪಮೊಯಿಲಿ ಅವರು ಉದ್ಘಾಟಿಸಿದರು. 'ಕಾಯಕದ ಮನೆ'ನೂತನ ಕಟ್ಟಡವನ್ನು ಉಪಕುಲಾಧಿಪತಿಗಳಾದ ಉನ್ನತ ಶಿಕ್ಷಣ ಸಚಿವ ಶ್ರೀ ಎಸ್.ಎಂ. ಯಾಹ್ಯಾ ಅವರು ಉದ್ಘಾಟಿಸಿದರು. 'ನುಡಿಹಬ್ಬ'ದ ಸಮಾರಂಭದಲ್ಲಿ ಪಾಲ್ಗೊಂಡು, ಸಭೆಯನ್ನುದ್ದೇಶಿಸಿ ಮಾತನಾಡಿದ ಶ್ರೀ ಯಾಹ್ಯಾ ಅವರು ''ವೈಚಾರಿಕ ಶಕ್ತಿಯನ್ನು ಬೆಳೆಸುವಂತಹ ಶಿಕ್ಷಣ ನೀಡಿಕೆಗೆ ನಾವು ಪ್ರಯತ್ನ ಮಾಡಬೇಕಾಗಿದೆ. ಕನ್ನಡ ವಿಶ್ವವಿದ್ಯಾಲಯ ಈ ದಿಕ್ಕಿನಲ್ಲಿ ಸಾಗುತ್ತಿದೆ. ಇದು ನಮಗೆ ಹೆಚ್ಚಿನ ಸಂತೋಷವನ್ನುಂಟು ಮಾಡಿದೆ'' ಎಂದು ತಮ್ಮ ಹರ್ಷವನ್ನು ವ್ಯಕ್ತಪಡಿಸಿದರು.

ಕನ್ನಡ ವಿಶ್ವವಿದ್ಯಾಲಯದ ಕನ್ನಡಿಗರ ಆಶೋತ್ತರಗಳಿಗೆ ಪೂರಕವಾಗಿ ಕನ್ನಡ ಸಂಸ್ಕೃತಿಯ ಏಳಿಗೆಗಾಗಿ ಹಾಕಿಕೊಂಡಿರುವ ಹಲವಾರು ಯೋಜನೆಗಳನ್ನು ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರರು ತಮ್ಮ ಸ್ವಾಗತ ಭಾಷಣದಲ್ಲಿ ತಿಳಿಸಿದರು. ಸಚಿವರಾದ ಶ್ರೀ ರಂಗದೇವರಾಯಲು, ಶಾಸಕರಾದ ಶ್ರೀ ಯಂಕಾನಾಯ್ಕ, ಶ್ರೀ ಎಸ್. ಜಿ. ನಾಯಕ್, ಕಮಲಾಪುರ ಪುರಸಭೆಯ ಅಧ್ಯಕ್ಷರಾದ ಶ್ರೀ ಎಸ್. ಓಬಯ್ಯನವರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಕುಲಸಚಿವರಾದ ಡಾ. ಕೆ. ವಿ. ನಾರಾಯಣ ಅವರು ವಂದಿಸಿದರು. ಹಿ. ಚಿ. ಬೋರಲಿಂಗಯ್ಯ ಅವರು ಕಾರ್ಯಕ್ರಮ ನಿರೂಪಿಸಿದರು.

ಸಮಾರಂಭಕ್ಕೆ ಮಾಜಿ ಸಚಿವರಾದ ಶ್ರೀ. ಎಂ. ಪಿ. ಪ್ರಕಾಶ್, ವಿಧಾನ ಪರಿಷತ್ ಸದಸ್ಯ ಶ್ರೀ ಎನ್. ತಿಪ್ಪಣ್ಣ ಮುಂತಾದ ಮಹನೀಯರು ಆಗಮಿಸಿದ್ದರು. ರಾಜ್ಯದ ವಿವಿಧ ಕಡೆಯಿಂದ ವಿದ್ವಾಂಸರನ್ನು ಬರುಮಾಡಿಕೊಳ್ಳಲಾಗಿತ್ತು. ಹೊಸ ಆವರಣದಲ್ಲಿ ನಡೆದ ಎರಡನೇ ವರ್ಷದ 'ನುಡಿಹಬ್ಬ'ವು ಸಾಂಗವಾಗಿ ನೆರವೇರಿತು. ಈ ಸಂದರ್ಭದಲ್ಲಿ ಮುಖ್ಯಮಂತ್ರಿಗಳು ತಮ್ಮ ಭಾಷಣವನ್ನು ವಾಚನ ಮಾಡಿದರು.

**ನುಡಿಹಬ್ಬದ ಪ್ರದರ್ಶನಗಳು**

ವಿಶ್ವವಿದ್ಯಾಲಯದ ಎರಡನೆಯ ವರ್ಷದ ನುಡಿಹಬ್ಬದ ಅಂಗವಾಗಿ ವಿಶ್ವವಿದ್ಯಾಲಯದ ನೂತನ ಆವರಣ ವಿದ್ಯಾರಣ್ಯದ 'ಪ್ರಸಾರಾಂಗ'ದಲ್ಲಿ ನವೆಂಬರ್ ೨೨ ರಿಂದ ೨೪ ರವರೆಗೆ ಪುಸ್ತಕ ಪ್ರದರ್ಶನ, ಸಾಹಿತಿಗಳ ಛಾಯಾಚಿತ್ರ ಹಾಗೂ ಕಲಾಕೃತಿಗಳ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ವಿಶ್ವವಿದ್ಯಾಲಯದ ಪ್ರಸಾರಾಂಗದ ಎಲ್ಲಾ ಪ್ರಕಟಣೆಗಳ ಜೊತೆಗೆ ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಚಿದಾನಂದ ಮೂರ್ತಿ ಅವರ ಕೃತಿಗಳನ್ನು ಪ್ರದರ್ಶಿಸಲಾಯಿತು.

ನಮ್ಮ ನಾಡಿನ ಕಲಾವಿದರಲ್ಲಿ ಒಬ್ಬರಾದ ಶ್ರೀ ಆರ್. ಎಂ. ಹಡಪದ್ ರಚಿಸಿದ ಕಲಾಚಿತ್ರಗಳ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ನುಡಿಹಬ್ಬದ ಅಂಗವಾಗಿ 'ನೀನಾಸಂ' ನಾಟಕ ತಂಡದವರು ಮೂರು ನಾಟಕಗಳನ್ನು ಪ್ರದರ್ಶಿಸಿದರು.'ಸ್ವಪ್ನ ನಾಟಕ' ಮತ್ತು 'ಅಥೆನ್ಸಿನ ಅರ್ಥವಂತ' ನಾಟಕಗಳು ಹೊಸಪೇಟೆಯ ನಗರಸಭಾ ಕಲಾಮಂದಿರದಲ್ಲೂ 'ಗೋಕುಲ ನಿರ್ಗಮನ' ನಾಟಕವನ್ನು ವಿಶ್ವವಿದ್ಯಾಲಯದ 'ನವರಂಗ'ದಲ್ಲೂ ಪ್ರದರ್ಶನ ಕಂಡವು. ಹೊಸಪೇಟೆಯ ಬಾಪೂಜಿ ಯುವಕರ ಸಂಘ, ವಿಕಾಸ ಯುವಕ ಮಂಡಲಿ ಮತ್ತು ಸ್ಪಂದನ ಸಾಹಿತ್ಯ ಸಾಂಸ್ಕೃತಿಕ ಕಟ್ಟೆಯವರು ಪ್ರದರ್ಶನಕ್ಕೆ ಸಹಕಾರ ನೀಡಿದರು.

**ಕವಿಗೋಷ್ಠಿ**

ಕನ್ನಡ ವಿಶ್ವವಿದ್ಯಾಲಯದ 'ನುಡಿಹಬ್ಬ ೯೩'ರ ಸಂಬಂಧವಾಗಿ ವಿಶ್ವವಿದ್ಯಾಲಯದ ಹೊಸ ಆವರಣ ವಿದ್ಯಾರಣ್ಯದ ನವರಂಗ (ಬಯಲು ರಂಗ ಮಂಟಪ)ದಲ್ಲಿ ಸುಂದರ ಸಂಜೆಯಲ್ಲಿ ಕವಿಗೋಷ್ಠಿಯನ್ನು ಏರ್ಪಡಿಸಲಾಗಿತ್ತು. ಈ ಕವಿಗೋಷ್ಠಿಯ

ಅಧ್ಯಕ್ಷತೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕರಾದ ಪ್ರೊ. ಎಚ್. ಎಂ. ಚೆನ್ನಯ್ಯನವರು ವಹಿಸಿದ್ದರು.



ಈ ಕವಿಗೋಷ್ಠಿಯಲ್ಲಿ ನಾಡಿನ ಹಿರಿಯ-ಕಿರಿಯ ಕವಿಗಳು ಭಾಗವಹಿಸಿದ್ದರು. ಕವಿ ಡಾ. ಕಾಳೇಗೌಡ ನಾಗವಾರ ಅವರು 'ಕವಿತೆ'ಯ ಬಗ್ಗೆ ಕವನ ಓದಿದರೆ, ಎನ್.ಎಸ್. ಲಕ್ಷ್ಮೀನಾರಾಯಣಭಟ್ಟರು ತಮ್ಮ ೩೦ ವರ್ಷಗಳ ಹಿಂದಿನ ಕವನ 'ಸೀಮಂತಿನಿ' ಪರಿಚಯಿಸುತ್ತಾ, 'ಶರೀಫಜ್ಜನಿಗೆ' ಹಾಡಿಗೆ ನುಡಿ ತೊಡಿಸಿದರು. ಹಿರಿಯ ಕವಿ ಚೆನ್ನವೀರ ಕಣವಿಯವರು 'ಭಗ್ನಪ್ರತಿಮೆ'ಯನ್ನು ಕವನದಲ್ಲಿ ಅನಾವರಣಗೊಳಿಸಿ, 'ಸೂರ್ಯನಿದ್ದಾನೆ ಬೆನ್ನ ಹಿಂದೆ' ಎಂಬ ಕಡೆಗೆ ಗಮನ ಸೆಳೆದರು. ಸುಬ್ರಾಯ ಚೊಕ್ಕಾಡಿಯವರು 'ದ್ವಾಸುಪರ್ಣ', 'ಇದರಲ್ಲಿ ಅದು' ಎಂಬ ಕವಿತೆಗಳನ್ನು ಓದಿದರೆ ಕವಿಯತ್ರಿ ಶ್ರೀಮತಿ ಸ. ಉಷಾ ಅವರು ಸ್ಥಳ ಪುರಾಣಕ್ಕೆ ಸಂಬಂಧಿಸಿದ ವಸ್ತುವನ್ನು ಕೇಂದ್ರವಾಗಿಸಿಕೊಂಡು 'ಅರಸೀಕೆರೆಗೆ ನೀರು' ಕವನವನ್ನು ಓದಿದರು. ಕನ್ನಡ ವಿಶ್ವವಿದ್ಯಾಲಯ ಕುರಿತ ಕವಿತೆಯನ್ನು ಗವಿಸಿದ್ದ ಬಳ್ಳಾರಿ ಓದಿದರೆ, 'ತುಕ್ಕು ಹಿಡಿದ ಕಾರ್ಖಾನೆಯ ಕರ್ಮಕತೆ'ಕವನ ಓದಿದವರು ಅಲ್ಲಮಪ್ರಭು ಬೆಟ್ಟದೂರು. ಕವಿಯತ್ರಿ ಶ್ರೀಮತಿ ಶಶಿಕಲಾ ವೀರಯ್ಯಸ್ವಾಮಿ 'ನಾನು ರಾತ್ರಿಗಳನ್ನು ಮಾತ್ರ ಪ್ರೀತಿಸುತ್ತೇನೆ' ಎಂಬ ಕವನ

ಓದಿದರು. ಪರಶುರಾಮ ಕಲಾಲ್ 'ತಾಜ್‌ಮಹಲ್ ಹಾಡಿ'ಗೆ ಕಾವ್ಯ ಸೆಲೆಯನ್ನು ಒದಗಿಸಿದರೆ, ಸತೀಶ್ ಕುಲಕರ್ಣಿ 'ಒಬ್ಬಳಿದ್ದಳು' ಎಂಬ ಕವನವನ್ನು ಕಾವ್ಯಾಸಕ್ತರ ಮುಂದಿಟ್ಟರು. ಶ್ರೀಮತಿ ಬಿ ಸರ್ವಮಂಗಳಾ ಅವರು ಸಂಸಾರದ ಬಗ್ಗೆ, ಶಶಿ ಮತ್ತು ಉಷೆಯರ ಸಂವಾದ ಕುರಿತ ಕವನಗಳನ್ನು ಓದಿ ಮನಸೆಳೆದರು.



# ಕನ್ನಡ ಮಾತು ತಲೆ ಎತ್ತುವ ಬಗೆ

*ಬಿ. ಪಾರ್ಥಸಾರಥಿ*

---

*(ಕನ್ನಡ ವಿಶ್ವವಿದ್ಯಾಲಯದ 'ನುಡಿಹಬ್ಬ ೯೩'ರ ಸಂದರ್ಭದಲ್ಲಿ ಏರ್ಪಡಿಸಿದ್ದ 'ಕನ್ನಡ ಮಾತು ತಲೆ ಎತ್ತುವ ಬಗೆ' ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ)*




ಕನ್ನಡಿಗರ ಬಹು ದಿನದ ಕನಸಾದ ಕನ್ನಡ ವಿಶ್ವವಿದ್ಯಾಲಯವು ಅಸ್ತಿತ್ವಕ್ಕೆ ಬಂದು ಎರಡು ವರ್ಷಗಳಾದವು. ಈ ಸಂದರ್ಭದಲ್ಲಿ ''ನುಡಿಹಬ್ಬ ೧೯೯೩'' ಆಚರಿಸಿ, ''ಕನ್ನಡ ಮಾತು ತಲೆ ಎತ್ತುವ ಬಗೆ'' ಎಂಬ ವಿಚಾರವಾಗಿ ಒಂದು ವಿಚಾರ ಸಂಕಿರಣವನ್ನು ಇಂದು ಏರ್ಪಡಿಸಿರುವುದು ಔಚಿತ್ಯಪೂರ್ಣವಾಗಿದೆ. ಕನ್ನಡ ಭಾಷೆಯನ್ನು ಮಾತನಾಡುವ

ಜನರು ವಿವಿಧ ರಾಜ್ಯಗಳಲ್ಲಿ ಹಂಚಿಹೋಗಿದ್ದು ಅವರೆಲ್ಲರನ್ನೂ ಒಗ್ಗೂಡಿಸಿ ಕರ್ನಾಟಕ ರಾಜ್ಯ ಉದಯವಾಗಿ ಮೂವತ್ತೇಳು ವರ್ಷಗಳು ಪೂರ್ಣಗೊಂಡಿವೆ. ಕರ್ನಾಟಕ ರಾಜ್ಯ ಉದಯವಾಗಿದ್ದರೂ ಸಹ ಕೆಲವು ಕನ್ನಡ ಪ್ರದೇಶಗಳು ಬೇರೆ ರಾಜ್ಯಗಳಲ್ಲಿ ಇದ್ದು ಇವೂ ಸಹ ಕರ್ನಾಟಕದೊಂದಿಗೆ ಸೇರಬೇಕೆಂಬುದು ಕನ್ನಡಿಗರ ಅಪೇಕ್ಷೆಗಳಲ್ಲಿ ಒಂದಾಗಿದೆ. ಕನ್ನಡ ಭಾಷೆಗಾಗಿಯೇ ಪ್ರತ್ಯೇಕ ಭಾಷಾವಾರು ರಾಜ್ಯ ಸ್ಥಾಪನೆಯಾಗಿದ್ದರೂ ಸಹ ಕನ್ನಡವನ್ನು ವ್ಯಾಪಕವಾಗಿ ಬಳಸಲು ಆಗುತ್ತಿಲ್ಲ ಎನ್ನುವ ಮಾತು ವಾಸ್ತವಿಕವಾಗಿರುವುದು ವಿಷಾದದ ಸಂಗತಿ. ಬಹುಶಃ ಸುಮಾರು ಎರಡು ಶತಮಾನಗಳ ಕಾಲ ಬ್ರಿಟಿಷರ ಆಳ್ವಿಕೆಯಿಂದ ಇಂಗ್ಲಿಷ್ ಬಾಷೆ ಪ್ರಭಾವ ದೃಢವಾಗಿ ಎಲ್ಲಾ ರಂಗಗಳಲ್ಲೂ ಕಂಡು ಬಂದಿದೆ. ಆದರೂ ಭಾರತ ಸ್ವತಂತ್ರವಾಗಿ, ಕರ್ನಾಟಕ ರಾಜ್ಯ ಉದಯವಾಗಿ ಅನೇಕ ವರ್ಷಗಳು ಕಳೆದಿದ್ದರೂ ಸಹ ನಾವು ಏನನ್ನು ಮಾಡಬೇಕು ಎಂದು ಇದ್ದೇವೆಯೋ ಅದನ್ನು ಮಾಡಲು ಸಾಧ್ಯವಾಗಿಲ್ಲ ಎನ್ನುವುದನ್ನು ಮನಗಾಣಬೇಕಾಗಿದೆ. ಈ ದೃಷ್ಟಿಯಿಂದ ''ಕನ್ನಡ ಮಾತು ತಲೆ ಎತ್ತುವ ಬಗೆ'' ಚಿಂತನೆ ಮಾಡಬೇಕಾದ ವಿಷಯವನ್ನು ಚರ್ಚಿಸುವ ಅವಕಾಶವನ್ನು ಕಲ್ಪಿಸಿದ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಿಗೆ ಹಾಗೂ ಅವರ ಸಹದ್ಯೋಗಿಗಳಿಗೆ ನಾವು ಕೃತಜ್ಞರಾಗಿರಬೇಕು.

೧. ''ಕನ್ನಡ ಮಾತು ತಲೆ ಎತ್ತುವ ಬಗೆ'' ಎನ್ನುವ ವಿಚಾರವಾಗಿ ಮಾತನಾಡುವ ಮುನ್ನ ಕನ್ನಡ ಮಾತಿನ ಪರಿಸ್ಥಿತಿ ಇಂದು ಏನಾಗಿದೆ ಎನ್ನುವುದನ್ನು ನಾವು ವಿಶ್ಲೇಷಿಸಬೇಕಾಗಿದೆ. ನಮ್ಮ ಸರ್ಕಾರಿ ಕಛೇರಿಗಳಲ್ಲಿ ಸರ್ಕಾರದ ಅನೇಕ ಸ್ಪಷ್ಟ ಆದೇಶವಿದ್ದರೂ ಸಹ ಪೂರ್ಣವಾಗಿ ಕನ್ನಡ ಬಳಕೆಯಾಗುತ್ತಿಲ್ಲ. ನಮ್ಮ ಶಿಕ್ಷಣ ಮಾಧ್ಯಮ ಕನ್ನಡವಾಗಿಲ್ಲ. ಕನ್ನಡ ಭಾಷೆಯನ್ನು ಮಾತನಾಡದೆ ಕನ್ನಡ ಅರ್ಥ ಮಾಡಿಕೊಳ್ಳುವ ಗೋಜಿಗೂ ಹೋಗದೆ ಕರ್ನಾಟಕದಲ್ಲಿ ಜನ ಜೀವನ ಮಾಡಬಹುದು ಎನ್ನುವುದನ್ನೂ ಸಹ ನಾವು ಕಂಡಿದ್ದೇವೆ. ಇದಕ್ಕೆ ಕಾರಣಗಳಾದರೂ ಯಾವುದು ಎನ್ನುವುದನ್ನು ನಾವು ವಿಶ್ಲೇಷಿಸಬಹುದಾಗಿದೆ. ನಾನು ಆಡಳಿತ ರಂಗದಲ್ಲಿರುವುದರಿಂದ ಹೆಚ್ಚಿಗೆ ಆಡಳಿತ ಭಾಷೆಯಾಗಿ ಏಕೆ ಪೂರ್ಣವಾಗಿ ಬಳಕೆಯಾಗುತ್ತಿಲ್ಲ ಎನ್ನುವುದರ ಬಗ್ಗೆ ನನ್ನ ಚಿಂತನೆಯನ್ನು ನಿಮ್ಮೊಡನೆ ಹಂಚಿಕೊಳ್ಳಬೇಕೆಂದು ಇಚ್ಛಿಪಡುತ್ತೇನೆ. ಕನ್ನಡ ಆಡಳಿತ ಭಾಷೆಯಾಗಿ ಜಿಲ್ಲೆ ಮತ್ತು ತಾಲೂಕು ಮಟ್ಟದಲ್ಲಿ ಬಹುಪಾಲು ಯಶಸ್ವಿಯಾಗಿ ಉಪಯೋಗಿಸಲ್ಪಟ್ಟಿದ್ದರೂ ಸಹ ರಾಜ್ಯಮಟ್ಟದಲ್ಲಿ ಅಷ್ಟೊಂದು ಪರಿಣಾಮಕಾರಿಯಾಗಿ ಇನ್ನೂ ಸಹ ಉಪಯೋಗವಾಗುತ್ತಿಲ್ಲ ಎನ್ನುವುದು ಎಲ್ಲರಿಗೂ ಗೊತ್ತಿರುವ ಅಂಶ. ಇದಕ್ಕೆ ಬಹು ಮುಖ್ಯ ಕಾರಣ ಕನ್ನಡವನ್ನು ಬಳಸದೇ ಆಡಳಿತ ನಡೆಸಬಹುದು ಎನ್ನುವ ಮನೋಭಾವ ನಮ್ಮ ಅಧಿಕಾರಿ ವರ್ಗದಲ್ಲಿ ಮೂಡಿಬಂದಿದೆ. ಜೊತೆಗೆ ಸರ್ಕಾರದ ಆದೇಶವಿದ್ದರೂ ಕನ್ನಡ ಬಳಸದೆ ಇದ್ದರೂ ನಮ್ಮ ಸೇವೆಗೆ ಯಾವುದೇ ರೀತಿಯ ಬಾಧಕವಾಗದು ಎನ್ನುವುದನ್ನು ನಾವು ಕಂಡಿದ್ದೇವೆ. ಒಂದು ರೀತಿ ದೃಢ ಸಂಕಲ್ಪದ ಕೊರತೆ ಕನ್ನಡ ಪೂರ್ಣವಾಗಿ ಆಡಳಿತ ಭಾಷೆಯಾಗದೆ ಇರಲು ಕಾರಣವೆಂದರೆ ತಪ್ಪಾಗಲಾರದು.

ನಾನು ಮೇಲೆ ಹೇಳಿದಂತೆ ಕನ್ನಡ ಏಕೆ ಬಳಸಬೇಕು ಎನ್ನುವ ಮನೋಭಾವ ಮತ್ತೊಂದು ಕಾರಣವಾಗಿದೆ. ರಾಜ್ಯದ ಆಡಳಿತದಲ್ಲಿ ಪಾಲ್ಗೊಳ್ಳುವವರು ಅವರು ರಾಜಕೀಯ ಮುಖಂಡರಾಗಲಿ, ಅಧಿಕಾರಿಗಳಾಗಲಿ ಅಥವಾ ನೌಕರರಾಗಲಿ ಕನ್ನಡ ಬಳಸಬೇಕು ಎನ್ನುವ ಸಂಕಲ್ಪದ ಕೊರತೆಯಿಂದ ಬಳಲುತ್ತಿರುವುದು ಬಹಳ ಮುಖ್ಯವಾಗಿದೆ. ಬ್ರಿಟಿಷರ ಕಾಲದಲ್ಲಿ ಕನ್ನಡ ಹೆಚ್ಚು ಪರಿಣಾಮಕಾರಿಯಾಗಿ ಉಪಯೋಗಿಸಲ್ಪಡುತ್ತಿತ್ತು. ಸ್ವಾತಂತ್ರ್ಯ ಬಂದ ಮೇಲೆ ಕನ್ನಡ ಬಳಕೆ ಕಡಿಮೆಯಾಗಿದೆ ಎನ್ನುವುದು ಸಹ ನಾವು ಆಡಳಿತದ ಹಿಂದಿನ ಕಡತಗಳನ್ನು ತಿರುವಿ ಹಾಕಿದಾಗ ಕಂಡುಬರುತ್ತದೆ. ಇದಕ್ಕೆ ನಾನು ಕಂಡುಕೊಂಡ ಹಾಗೆ ನಮ್ಮಲ್ಲಿ ಇರುವ ಮೂರು ಮನೋಭಾವಗಳು ಮುಖ್ಯ ಕಾರಣಗಳು ಎಂದು ಗೋಚರಿಸುತ್ತವೆ.

**(ಅ) ಕೀಳು ಮನೋಭಾವ**

ಯಾರೇ ಆಗಲಿ ಕನ್ನಡವನ್ನು ಆಡಳಿತದಲ್ಲಿ ಬಳಸಿದರೆ ಎಲ್ಲಿ ಇಂಗ್ಲಿಷ್ ಭಾಷೆ ತನಗೆ ಬರುವುದಿಲ್ಲವೆಂದು ಬೇರೆಯವರು ಭಾವಿಸುತ್ತಾರೋ ಎನ್ನುವ ಮನೋಭಾವದಿಂದ ಇಂಗ್ಲಿಷ್‌ಗೆ ಶರಣಾಗುವುದು ನಮ್ಮಲ್ಲಿ ಬೆಳೆದುಬಂದಿದೆ. ಇಂಗ್ಲಿಷ್ ಭಾಷೆಯನ್ನು ಬಳಸದಿದ್ದಾಗ ಜನರು ನಮ್ಮನ್ನು ಎಲ್ಲಿ ಕೀಳಾಗಿ ಕಾಣುತ್ತಾರೋ ಹಾಗೂ ಇಂಗ್ಲಿಷ್ ಬರುವುದಿಲ್ಲವೆಂದು ಭಾವಿಸುತ್ತಾರೋ ಎನ್ನುವ ಕಾರಣದಿಂದ ನಾವು ಇಂಗ್ಲಿಷ್‌ನ್ನೇ ಬಳಸಲು ಪ್ರಯತ್ನ ಪಡುತ್ತಿದ್ದೇವೆ. ಇಂಗ್ಲಿಷನ್ನು ನಾವು ಉಪಯೋಗಿಸದಿದ್ದರೆ ನಾವು ಬುದ್ಧಿವಂತರಲ್ಲ ಎಂದು ಜನ ಭಾವಿಸಿ ನಮ್ಮ ಪ್ರತಿಷ್ಠೆಗೆ ಕುಂದು ಬರುತ್ತದೆ ಎನ್ನುವ ಯೋಚನೆ ಮಾಡುವ ಮನೋಭಾವ ನಮ್ಮಲ್ಲಿ ಬೆಳೆದು ಬಂದಿದೆ.

**(ಆ) ದಾಸ್ಯ ಮನೋಭಾವ**

ಸುಮಾರು ಎರಡು ಶತಮಾನಗಳಿಗಿಂತಲೂ ಹೆಚ್ಚಿಗೆ ವಿದೇಶಿ ಆಡಳಿತಕ್ಕೆ ಒಳಪಟ್ಟಿದ್ದ ನಮ್ಮಲ್ಲಿ ಒಂದು ರೀತಿಯ ಗುಲಾಮಿ ಮನೋಭಾವ ಬೆಳೆದಿದೆ ಎಂದರೆ ತಪ್ಪಾಗಲಾರದು. ಆಗ ಪಾಶ್ಚಾತ್ಯದಿಂದ ಒಳ್ಳೆಯದನ್ನು ಕಲಿಯುವುದಕ್ಕೆ ಬದಲಾಗಿ ಅವರ ಭಾಷೆಯನ್ನು ಉಳಿಸಿಕೊಂಡರೆ ಅಥವಾ ಆ ಭಾಷೆಯನ್ನು ಉಪಯೋಗಿಸಿಕೊಂಡರೆ ನಮ್ಮ ಅಂತಸ್ತು ಹೆಚ್ಚುತ್ತದೆ ಎನ್ನುವ ಭಾವನೆ ನಮ್ಮ ಮನಸ್ಸಿನಲ್ಲಿ ಮೈಗೂಡಿದೆ. ಹಾಗೂ ನಮ್ಮ ಭಾಷೆ ಬಗ್ಗೆ ಒಂದು ರೀತಿಯ ತಾತ್ಸಾರ ಮನೋಭಾವ ಮೂಡಿದೆ ಎಂದರೆ ತಪ್ಪಾಗಲಾರದು.

**(ಇ) ಆಲಸ್ಯ ಮನೋಭಾವ**

ಕಛೇರಿ ವ್ಯವಹಾರಗಳು ಇಂಗ್ಲಿಷ್ ಭಾಷೆಯಲ್ಲಿ ನಡೆಯುತ್ತಾ ಇರುವಾಗ ಕನ್ನಡಕ್ಕೆ ಬದಲಾವಣೆ ಮಾಡಬೇಕಾದರೆ ಸ್ವಲ್ಪ ಶ್ರಮ ಪಡಬೇಕಾಗುತ್ತದೆ ಎನ್ನುವುದನ್ನು ತಪ್ಪಿಸಲು ಇರುವುದನ್ನೇ ಮುಂದುವರೆಸುವ ಕೆಟ್ಟ ಭಾವನೆ ನಮ್ಮಲ್ಲಿದೆ. ಇಷ್ಟು ಶ್ರಮ ವಹಿಸಲು ಸಿದ್ಧರಿಲ್ಲದ ನಾವು ಬೇಡ ಎನ್ನುವ ಮಟ್ಟಕ್ಕೆ ಹೋಗಿದ್ದೇವೆ. ಭಾಷೆ ಬಗ್ಗೆ ಒಂದು ರೀತಿಯ ಆಲಸ್ಯ ಮನೋಭಾವ ನಮ್ಮಲ್ಲಿ ಮೂಡಿದೆ ಎಂದರೆ ತಪ್ಪಾಗಲಾರದು.

ಮೇಲೆ ಹೇಳಿದ ಮೂರು ಮನೋಭಾವಗಳನ್ನು ನಾವು ತೊರದೂಡಬೇಕಾಗಿದೆ. ಆಗ ಮಾತ್ರ ಕನ್ನಡ ಆಡಳಿತ ಭಾಷೆಯಾಗಿ ಹೆಚ್ಚು ಬಳಕೆಗೆ ಬರಲು ಸಾಧ್ಯವಾಗುತ್ತದೆ. ಆಡಳಿತ ಭಾಷೆಯಾಗಿ ಕನ್ನಡವನ್ನು ನಾವು ಉಪಯೋಗಿಸುವಾಗ ಭಾಷೆಯ ಮಡಿವಂತಿಕೆಗೆ ನಾವು ಹೆಚ್ಚಿನ ಪ್ರಾಧಾನ್ಯತೆ ನೀಡುವ ಅವಶ್ಯಕತೆಯಿಲ್ಲ. ಆಡಳಿತದಲ್ಲಿ ನಾವು ಸಾಹಿತ್ಯ ರಚನೆ ಮಾಡುತ್ತೇವೆ ಎನ್ನುವ ಭ್ರಮೆ ನಮಗೆ ಬೇಕಿಲ್ಲ. ಆದರೆ ನಾವು ಉಪಯೋಗಿಸುವ ಭಾಷೆ ಜನರಿಗೆ ಅರ್ಥವಾಗುವಂತಿರಬೇಕು. ಜನರ ಮತ್ತು ಸರ್ಕಾರದ ನಡುವೆ ಉತ್ತಮ ಭಾವನೆ ಏರ್ಪಾಡುಮಾಡಬೇಕಾದರೆ ಸರ್ಕಾರ ವ್ಯವಹರಿಸುವ ಭಾಷೆ ಜನರಿಗೆ ಅರ್ಥವಾಗುವಂತಿರಬೇಕು. ಸರ್ಕಾರ ನಡೆಯುವ ರೀತಿ ಅರ್ಥವಾಗಬೇಕಾದರೆ ಅದು ನಡೆಸುವ ಭಾಷೆ ಪ್ರಾಮುಖ್ಯತೆಯನ್ನು ಪಡೆಯಬೇಕು. ಈ ದೃಷ್ಟಿಯಿಂದ ಕರ್ನಾಟಕದಲ್ಲಿ ಕನ್ನಡದಲ್ಲಿ ವ್ಯವಹಾರ ನಡೆದಾಗ ಮಾತ್ರ ಆಡಳಿತದಲ್ಲಿ ಆಡಳಿತ ಯಾವ ರೀತಿ ನಡೆಯುತ್ತಿದೆ ಎನ್ನುವುದು ಜನರಿಗೆ ಅರ್ಥವಾಗಲು ಸಾಧ್ಯವಾಗುತ್ತದೆ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳಿಂದ ಪ್ರಜೆಗಳಿಗೋಸ್ಕರ ಇರುವ ಸರ್ಕಾರ ಇರುತ್ತದೆ. ಹಾಗಿದ್ದ ಮೇಲೆ ಪ್ರಜೆಗಳು ಆಡುವ ಭಾಷೆ ಸರ್ಕಾರದ ವ್ಯಾವಹಾರಿಕ ಭಾಷೆಯಾಗಿ ಪರಿಣಾಮಕಾರಿಯಾಗಿ ಉಪಯೋಗಿಸಲ್ಪಟ್ಟರೆ ಮಾತ್ರ ಪ್ರಜಾಪ್ರಭುತ್ವಕ್ಕೆ ಅರ್ಥ ಬರುತ್ತದೆ ಎನ್ನುವುದರಲ್ಲಿ ಸಂದೇಹವಿಲ್ಲ.

೨. ಆಡಳಿತ ಭಾಷೆಯಾಗಿ ಕನ್ನಡ ಉಪಯೋಗಿಸುವ ಬಗ್ಗೆ ಈಗಾಗಲೇ ಸರ್ಕಾರ ಅನೇಕ ವರ್ಷಗಳ ಹಿಂದೆ ನಿರ್ದಿಷ್ಟವಾದ ನಿರ್ಧಾರ ತೆಗೆದುಕೊಂಡಿರುವುದರಿಂದ ಈಗ ಕನ್ನಡ ಬಳಸಬೇಕೇ, ಬೇಡವೇ ಎನ್ನುವ ಚರ್ಚೆಗೆ ಅವಕಾಶವೇ ಇಲ್ಲ. ಆದರೆ ನಾವು ಏಕೆ ಬಳಕೆ ಮಾಡುತ್ತಿಲ್ಲ ಎನ್ನುವುದಕ್ಕೆ ಜನರಿಗೂ ಉತ್ತರ ನೀಡಬೇಕಾಗುತ್ತದೆ. ಇಲ್ಲಿ ನಾವು ಭಾಷೆಯನ್ನು ಬಳಸಲು ಅಸಮರ್ಥರಾಗಿದ್ದೇವೆ. ಅದೇ ರೀತಿ ನಾವು ನಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಯಶಸ್ವಿಯಾಗಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಆಡಳಿತ ಭಾಷೆಯಾಗಿ ಬಳಸಲುಬೇಕಾದ ಪದಕೋಶಗಳು, ಬೆರಳಚ್ಚು ಯಂತ್ರಗಳು ಹಾಗೂ ಮತ್ತಿತರ ಸೌಲಭ್ಯಗಳನ್ನು ಸರ್ಕಾರವು ಈಗಾಗಲೇ ಒದಗಿಸಿದೆ. ಆಡಳಿತದಲ್ಲಿ ಕರ್ತವ್ಯ ನಿರ್ವಹಣೆಗಾಗಿ ನಾವು ಅನೇಕ ಸೌಲಭ್ಯಗಳನ್ನು ಪಡೆಯುತ್ತಿದ್ದೇವೆ. ಈ ಸೌಲಭ್ಯಗಳಿಂದ ಕನ್ನಡ ಬಳಸಲು ಅಗತ್ಯ ಕ್ರಮ ತೆಗೆದುಕೊಳ್ಳಬೇಕು.

೩. ನಾನು ಮೇಲೆ ಹೇಳಿದಂತೆ ಕನ್ನಡ ಆಡಳಿತ ಭಾಷೆಯಾಗಿ ಪೂರ್ಣವಾಗಿ ಬಳಸಲು ದೃಢಸಂಕಲ್ಪ ಬೇಕು. ಈಗಾಗಲೇ ಅಧಿಕಾರಿಗಳಿಗೆ, ನೌಕರರಿಗೆ ತರಬೇತಿ ಕಾರ್ಯಕ್ರಮಗಳನ್ನು ಅನೇಕ ವರ್ಷಗಳಿಂದ ವ್ಯವಸ್ಥೆ ಮಾಡಿಕೊಂಡು ಬಂದಿದ್ದೇವೆ. ಅನೇಕ ಪದಕೋಶಗಳನ್ನು ಹೊರತರಲಾಗಿದೆ. ಪದಗಳ ಅಥವಾ ಶಬ್ದಗಳ ಕೊರತೆಯಿದೆ ಎಂದು ಯಾರಾದರೂ ಹೇಳಿದರೆ ಅದನ್ನು ಒಪ್ಪಲು ಸಾಧ್ಯವಿಲ್ಲ. ಭಾಷೆ ಅಭಿವ್ಯಕ್ತಿಯಾಗಿ ತನ್ನಷ್ಟಕ್ಕೇ ತಾನೇ ಪದಕೋಶಗಳು ಬೆಳೆದುಕೊಂಡು ಹೋಗುತ್ತವೆ. ಯಾವುದೇ ಸಂದರ್ಭದಲ್ಲಿ ಕರ್ನಾಟಕದಲ್ಲಿ ನಡೆಯುವ ಆಡಳಿತ ವ್ಯವಹಾರ ಕನ್ನಡದಲ್ಲಿ ನಡೆಯುತ್ತಿದೆ ಎನ್ನುವ ಭಾವನೆ ನಮ್ಮೆಲ್ಲರ ಮನಸ್ಸಿನಲ್ಲಿ ಬರಬೇಕು. ಆಡಳಿತದಲ್ಲಿರುವ

ನಾವೆಲ್ಲರೂ ಒಂದು ಪ್ರಮುಖವಾದ ವಿಚಾರವನ್ನು ಮನಗಾಣಬೇಕು. ನಾವು ಯಾರಿಗಾಗಿ ಆಡಳಿತ ನಡೆಸುತ್ತಿದ್ದೇವೆ, ನಾವು ನಡೆಸುವ ಆಡಳಿತ ಯಾರಿಗೆ ಅರ್ಥವಾಗಬೇಕು ಮತ್ತು ಅದು ಯಾರ ವಿಶ್ವಾಸ ಗಳಿಸಬೇಕು. ಈ ಪ್ರಾಥಮಿಕ ವಿಚಾರವನ್ನು ನಾವು ನಮ್ಮಲ್ಲೇ ಅರ್ಥಮಾಡಿಕೊಂಡಾಗ ಬಹುಶಃ ನಮ್ಮ ಸಂಕಲ್ಪದ ಕೊರತೆ ಹೋಗುತ್ತದೆ ಎನ್ನುವುದು ನನ್ನ ಭಾವನೆ. ಆಡಳಿತದ ಭಾಷೆಯಾಗಿ ಕನ್ನಡ ಬಳಸದೆ ಕರ್ನಾಟಕ ಸರ್ಕಾರದ ಸೇವೆಯಲ್ಲಿರುವುದು ಸಾಧ್ಯವಿಲ್ಲ ಎನ್ನುವ ವಾತಾವರಣ ನಿರ್ಮಾಣವಾಗಬೇಕು. ಅವಶ್ಯಕತೆ ಕಂಡುಬಂದರೆ ಅಧಿಕಾರಿಗಳನ್ನು ನಾವು ತರಬೇತು ಮಾಡಲೇಬೇಕಾಗುತ್ತದೆ. ನಮ್ಮ ಲೋಕಸೇವಾ ಆಯೋಗದ ಪರೀಕ್ಷೆಗಳಿಗೆ ಕನ್ನಡ ಕಡ್ಡಾಯವಾಗಿ ಇರಬೇಕು ಎನ್ನುವ ನಿಯಮವನ್ನು ತಂದಾಗ ಕನ್ನಡ ಬಾರದೇ ಇದ್ದವರು ಸರ್ಕಾರದ ಸೇವೆಯಲ್ಲಿ ಸೇರುವುದು ಕಷ್ಟವಾಗುತ್ತದೆ. ಕರ್ನಾಟಕದಲ್ಲಿರುವ ಎಲ್ಲಾ ಜನರು ನಿಜವಾದ ಕನ್ನಡಿಗರು ಆಗಲೇಬೇಕಾದರೆ ಕನ್ನಡ ಭಾಷೆಯನ್ನು ಬೆಳೆಯಲು ಸುತ್ತಲೂ ಕನ್ನಡ ಮಾತನಾಡಲು ಕಲಿತಿರಬೇಕು. ಈ ವಾತಾವರಣ ನಿರ್ಮಾಣವಾಗಬೇಕಾಗುತ್ತದೆ.

೪. ಈ ದೃಷ್ಟಿಯಿಂದ ಕನ್ನಡ ಶಿಕ್ಷಣ ಮಾಧ್ಯಮವಾಗಬೇಕು ಎನ್ನುವ ವಾದ ಒಪ್ಪತಕ್ಕಂತಹ ವಿಚಾರ. ಇದರಲ್ಲಿ ವಿಶೇಷವಾಗಿ ಸಾಮಾನ್ಯ ಶಿಕ್ಷಣ ಪೂರ್ಣವಾಗಿ ಕನ್ನಡದಲ್ಲಿರುವುದಕ್ಕೆ ಯಾವುದೇ ತೊಡಕು ಇರಲಾರದು ಎನ್ನುವುದು ನನ್ನ ಭಾವನೆ. ತಾಂತ್ರಿಕ ಮತ್ತು ಉನ್ನತ ಶಿಕ್ಷಣಕ್ಕೂ ಅಗತ್ಯವಾದ ಪುಸ್ತಕಗಳ ರಚನೆ ಮತ್ತು ತರ್ಜುಮೆ ಬೃಹತ್ ಪ್ರಮಾಣದಲ್ಲಿ ನಡೆಯಬೇಕು ಎನ್ನುವುದು ನನ್ನ ಭಾವನೆ. ಕನ್ನಡ ಭಾಷೆ, ಸಂಸ್ಕೃತಿ, ಸಾಹಿತ್ಯ ಇವುಗಳ ಅಭಿವೃದ್ಧಿಗಾಗಿ ಸ್ಥಾಪನೆಯಾಗಿರುವ ಕನ್ನಡ ವಿಶ್ವವಿದ್ಯಾಲಯಕ್ಕೆ ಈ ಕೆಲಸಗಳನ್ನು ವಹಿಸಬೇಕು ಹಾಗೂ ಅವರು ಅದನ್ನು ನಿರ್ವಹಿಸಬೇಕೆಂದು ನಾನು ಅಭಿಪ್ರಾಯ ಪಡುತ್ತೇನೆ.

೫. ಕನ್ನಡ ಬಳಕೆ ಆಡಳಿತ ಮತ್ತು ಶಿಕ್ಷಣದಲ್ಲಿ ಪರಿಣಾಮಕಾರಿಯಾಗಬೇಕಾದರೆ ಸಾಮಾನ್ಯ ಜನರ ಜೀವನದಲ್ಲೂ ಸಹ ಅದು ಬಳಸುವ ವಾತಾವರಣ ನಿರ್ಮಾಣವಾಗಬೇಕು. ಬಸ್ ನಿಲ್ದಾಣದಲ್ಲಾಗಲೀ ರೈಲ್ವೆ ನಿಲ್ದಾಣದಲ್ಲಾಗಲೀ ಮಾರುಕಟ್ಟೆಯಲ್ಲಾಗಲೀ ಕನ್ನಡದಲ್ಲಿ ವ್ಯಾಪಕವಾಗಿ ಉಪಯೋಗಿಸಬೇಕಾದರೆ ನಾವೆಲ್ಲರೂ ಕನ್ನಡ ಬಳಸುವ ಸಂಕಲ್ಪ ಮಾಡಬೇಕು. ಮಾರುಕಟ್ಟೆಯಲ್ಲಿರುವ ಮಾರಾಟಗಾರ ಬೇರೆ ಭಾಷೆಯವನು ಆಗಿದ್ದರೂ ಸಹ ಆತನು ಮಾರಾಟದಲ್ಲಿ ಆಸಕ್ತಿ ಹೊಂದಿರುತ್ತಾನೆ. ಆಗ ನಾವು ನಮ್ಮ ಭಾಷೆಯಲ್ಲಿ ಮಾತನಾಡಿಸಿದರೆ ಆತನು ನಮ್ಮ ಭಾಷೆ ಮಾತನಾಡಲು ಪ್ರಯತ್ನಿಸಿ ಪ್ರಾರಂಭಿಸುತ್ತಾನೆ. ಅದನ್ನು ಬಿಟ್ಟು ನಾವು ಅವನ ಭಾಷೆಯಲ್ಲೇ ಆತನನ್ನು ಸಂಪರ್ಕಿಸಲು ಪ್ರಯತ್ನ ಮಾಡುತ್ತೇವೆ. ನಮಗೆ ಆತನ ಭಾಷೆ ಬರದಿದ್ದರೂ ಸಹ ಹರಕು-ಮುರುಕು ಭಾಷೆಯಲ್ಲಿಯೇ ಆತನನ್ನು ಸಂಪರ್ಕಿಸುವುದು ನಮ್ಮಲ್ಲಿ ಬೆಳೆದುಬಂದಿರುವ ಪದ್ಧತಿ. ಇದರಿಂದ ಆತ ಭಾಷೆ ಕಲಿಯುವ ಗೋಜಿಗೆ ಹೋಗುವುದಿಲ್ಲ.

೬. ಹಿಂದೆ ಅಂಚೆ ಕಛೇರಿಗಳಲ್ಲಿ, ನ್ಯಾಯಾಲಯಗಳಲ್ಲಿ, ಸರ್ಕಾರಿ ಕಛೇರಿಗಳಲ್ಲಿ ಕನ್ನಡ ಬಹಳವಾಗಿ ಬಳಕೆಯಾಗುತ್ತಿತ್ತು. ಬ್ರಿಟಿಷರ ಕಾಲದಲ್ಲಿ ಇಂಗ್ಲಿಷರು ಈ ದೇಶಕ್ಕೆ ಕಾಲಿಟ್ಟಾಗ ರಾಜ್ಯದಲ್ಲಿ ಅವರು ಮೊದಲು ಕನ್ನಡ ಕಲಿತು ಆಡಳಿತ ನಡೆಸುತ್ತಿದ್ದರು. ಬಡ್ತಿಗಾಗಿ ಅಥವಾ ಪ್ರಶಸ್ತಿಗಾಗಿ ಮಾತ್ರ ಅವರು ಕನ್ನಡ ಕಲಿಯುತ್ತಿರಲಿಲ್ಲ. ಕನ್ನಡ ಕಲಿತರೆ ಆಡಳಿತದ ಒಂದು ಅವಶ್ಯಕತೆ ಮತ್ತು ಆಗತ್ಯತೆ ಪೂರೈಸಬಹುದು ಎಂದು ಅವರು ಕನ್ನಡ ಕಲಿಯುತ್ತಿದ್ದರು. ಎರಡು ಶತಮಾನಗಳ ಹಿಂದೆ ಕ್ಲಾರ್ ಎಂಬ ಆಂಗ್ಲ ಅಧಿಕಾರಿಯು ಅರ್ಜಿ ಕನ್ನಡದಲ್ಲಿ ಇಲ್ಲದಿದ್ದರೆ ತಿರಸ್ಕರಿಲಾಗುವುದೆಂದು ಆದೇಶ ಹೊರಡಿಸಿದ್ದನ್ನು ಇಲ್ಲಿ ನೆನಪು ಮಾಡಿಕೊಳ್ಳಬೇಕಾಗಿದೆ. ಆತ ಈ ಆದೇಶ ಹೊರಡಿಸಿದ ಸಮಯದಲ್ಲಿ ಪ್ರಜಾಪ್ರಭುತ್ವವಾಗಲಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರವಾಗಲಿ, ಕನ್ನಡ ಕಾವಲು ಸಮಿತಿಯಾಗಲಿ ಇರಲಿಲ್ಲ. ಕನ್ನಡಕ್ಕಾಗಿ ಯಾರೂ ಚಳುವಳಿ ನಡೆಸುತ್ತಾ ಇರಲಿಲ್ಲ. ಅಂದರೆ ಅಂದು ಅಧಿಕಾರ ನಡೆಸುತ್ತಿದ್ದವರೂ ತಮ್ಮ ಜವಾಬ್ದಾರಿಯನ್ನು ಅರಿತಿದ್ದರು ಹಾಗೂ ಆಡಳಿತ ಪರಿಣಾಮಕಾರಿಯಾಗಿ ಆಗಬೇಕಾದರೆ ಸಂಪರ್ಕ ಸಾಧನ ಜನರಿಗೆ ಅರ್ಥವಾಗಬೇಕು ಎನ್ನುವ ಜವಾಬ್ದಾರಿ ಅವರಿಗೆ ಗೊತ್ತಿತ್ತು. ಆಗ ಪರಿಣಾಮಕಾರಿಯಾಗಿ ಆಗುತ್ತಿತ್ತು ಎನ್ನುವುದನ್ನು ಅವರು ತಿಳಿದುಕೊಂಡಿದ್ದರು- ಅಂದರೆ ಆ ಆಡಳಿತ ನಿಷ್ಠೆಯನ್ನು ನಾವು ಇಲ್ಲಿ ಅರ್ಥ ಮಾಡಿಕೊಂಡಿದ್ದೇವೆ. ಬಡ್ತಿಗಾಗಿ ನಮ್ಮ ನಿಷ್ಠೆ ಇದ್ದಾಗ ಆಡಳಿತದ ಪರಿಣಾಮ ಯಶಸ್ಸನ್ನು ಮುಟ್ಟುವುದಿಲ್ಲ ಎನ್ನುವುದನ್ನು ನಾವು ಅರಿಯಬೇಕು. ನಮಗೆ ಬಡ್ತಿಗಳು ನಮ್ಮ ಸೇವಾ ಜೇಷ್ಠತೆಯಿಂದಲೂ ನಮಗೆ ಹುದ್ದೆಗಳು ನಮಗೆ ಇರುವ ಪ್ರಭಾವದಿಂದಲೂ ಸಿಗುವಂತಹ ವ್ಯವಸ್ಥೆ ಇಂದು ಜಾರಿಗೆ ಬಂದಿದೆ. ಆದ್ದರಿಂದ ಭಾಷೆಯನ್ನು ಪರಿಣಾಮಕಾರಿ ಆಡಳಿತಕ್ಕಾಗಿ ಉಪಯೋಗಿಸಲು ಇರಬೇಕಾದ ನಿಷ್ಠೆ ನಮ್ಮಲ್ಲಿ ಮಾಯವಾಗಿದೆ.



# ಸಂಸ್ಕೃತಿ ಶೋಧನೆ

*ಎಂ. ವೀರಪ್ಪ ಮೊಯಿಲಿ*

(೨೨. ೧೧. ೧೯೯೩ ರಂದು 'ನುಡಿಹಬ್ಬ-೯೩' ಕಾರ್ಯಕ್ರಮವನ್ನು ಉದ್ಘಾಟಿಸಿ ಮಾನ್ಯ ಮುಖ್ಯಮಂತ್ರಿಯವರು ಹಾಗೂ ಕನ್ನಡ ವಿಶ್ವವಿದ್ಯಾಲಯ ಕುಲಾಧಿಪತಿಗಳು ಆದ ಶ್ರೀ ಎಂ. ವೀರಪ್ಪ ಮೊಯಿಲಿ ಅವರು ಮಾಡಿದ ಭಾಷಣದ ಸಂಗ್ರಹ ರೂಪ.)

ಮಾನ್ಯರೇ,

ಕನ್ನಡ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಪ್ರತಿವರ್ಷ 'ನುಡಿಹಬ್ಬ' ಆಚರಿಸುತ್ತಿರುವುದು ತಿಳಿದು ನನಗೆ ಸಂತೋಷವಾಯಿತು. ನುಡಿಹಬ್ಬವು ಕೇವಲ ಉತ್ಸವವಾಗದೇ ವಿಚಾರಗೋಷ್ಠಿ, ಕವಿಗೋಷ್ಠಿ ಹಾಗೂ ನಾಡು-ನುಡಿಗೆ ಸೇವೆ ಸಲ್ಲಿಸಿರುವವರಿಗೆ ಅಭಿನಂದನೆ ಹೇಳುವ ಅರ್ಥಪೂರ್ಣ ಸಮಾರಂಭ ಆಗಿರುವುದು ಸಂತೋಷದ ಸಂಗತಿ. 'ಕನ್ನಡ ಮಾತು ತಲೆ ಎತ್ತುವ ಬಗೆ' ಇಂದಿನ ವಿಚಾರ ಸಂಕಿರಣದ ಫಲಗಳು ಕರ್ನಾಟಕದಲ್ಲಿ ಶೈಕ್ಷಣಿಕ ರಂಗಕ್ಕೆ ಉಪಯುಕ್ತ ಕೊಡುಗೆಯಾಗುತ್ತವೆಂದು ನಾನು ನಂಬಿದ್ದೇನೆ. ಕನ್ನಡ ನಾಡಿನ ಹಿರಿಯ ಸಂಶೋಧಕರೂ ನಾಡು-ನುಡಿಗಳ ಬಗ್ಗೆ ಅಪೂರ್ವ ಅಭಿಮಾನವುಳ್ಳವರೂ ಆದ ಡಾ. ಎಂ. ಚಿದಾನಂದಮೂರ್ತಿ ಅವರ 'ಹೊಸತು ಹೊಸತು' ಎಂಬ ಗ್ರಂಥ ಬಿಡುಗಡೆ ಹಾಗೂ ಅವರಿಗೆ ಸನ್ಮಾನ ಸಮಾರಂಭ ಏರ್ಪಡಿಸಿರುವುದು ಸಮಯೋಚಿತವಾಗಿದೆ. ಇಂತಹ ವಿದ್ವಾಂಸರನ್ನು ಸನ್ಮಾನಿಸುವುದರ ಮೂಲಕ ಕನ್ನಡ ವಿಶ್ವವಿದ್ಯಾಲಯ ತನ್ನ ಗುರಿಯನ್ನು ನಿಚ್ಚಳವಾಗಿ ಕಂಡುಕೊಂಡಿದೆಯೆಂದು ನಾನು ಭಾವಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯದ ನುಡಿಹಬ್ಬದ ಈ ಕಾರ್ಯಕ್ರಮಕ್ಕೆ ಅತ್ಯಂತ ಸಂತೋಷದಿಂದ ಬಂದಿದ್ದೇನೆ. ಕನ್ನಡ ಕುಲದ ಹೊಂಗನಸುಗಳನ್ನು ಕೆಲಕಾಲವಾದರೂ ನನಸು ಮಾಡಿದ ವಿಜಯನಗರದ ಕ್ಷೇತ್ರಕ್ಕೆ ಪ್ರತಿಯೊಬ್ಬ ಕನ್ನಡಿಗನಿಗೂ ಒಂದು ಯಾತ್ರೆ. ಕನ್ನಡಿಗರ ಹಲವು ಆಶೋತ್ತರಗಳ ಕೇಂದ್ರ ಬಿಂದುವಾದ ಕನ್ನಡವಿಶ್ವವಿದ್ಯಾಲಯಕ್ಕೆ ಬರುವುದು ಚೈತನ್ಯದಾಯಕ ಅನುಭವ. ನಾಟಕ, ಕಾವ್ಯ, ಕಾದಂಬರಿಗಳಂಥ ಹೊಸ ಹೊಸ ಲೋಕಗಳನ್ನು ಸೃಷ್ಟಿಸುತ್ತಿರುವ ಡಾ.ಚಂದ್ರಶೇಖರ ಕಂಬಾರರ ಸೃಜನಶೀಲ ಪ್ರತಿಭೆಯು ಈಗ ಮತ್ತೊಂದು ದಿಕ್ಕಿನಲ್ಲಿ ಕೆಲಸ ಮಾಡಬೇಕಾಗಿದೆ, ಮಾಡುತ್ತಿದೆ; ಉನ್ನತ ಅಧ್ಯಯನಗಳ ಕೇಂದ್ರವನ್ನು ರೂಪಿಸಬೇಕಾಗಿದೆ. ನಾಡಿನ ಹಿಂದಿನ ಚರಿತ್ರೆ - ಸಾಧನೆಗಳ ಅಧ್ಯಯನವನ್ನು ಭವಿಷ್ಯದ

ನಂದಾದೀಪಕ್ಕೆ ತೈಲವಾಗಿ ಮಾರ್ಪಡಿಸಬೇಕಾಗಿದೆ. ಅವರ ಜೊತೆಗೆ ಇಲ್ಲಿ ಕೆಲಸ ಮಾಡುತ್ತಿರುವ ಕನ್ನಡಾಭಿಮಾನಿಗಳಾದ ಅಧ್ಯಾಪಕರೂ ಅಧ್ಯಾಪಕೇತರ ಸಿಬ್ಬಂದಿಯವರೂ ಈ ವಿಶ್ವವಿದ್ಯಾಲಯವನ್ನು ನಾಡಿನ ಬೌದ್ಧಿಕ ಮತ್ತು ಸಾಂಸ್ಕೃತಿಕ ಜಗತ್ತಿನ ಚೈತನ್ಯದಾಯಕ ಕೇಂದ್ರವನ್ನಾಗಿ ಮಾಡಲು ಶ್ರಮಿಸುತ್ತಾರೆ ಎಂಬ ನಂಬಿಕೆ ನನಗಿದೆ.

ಈ ವಿಶ್ವವಿದ್ಯಾಲಯದ ಈ ವರೆಗಿನ ಪ್ರಕಟಣೆಗಳು ಮತ್ತು ಸಾಧನೆಗಳು, ಮುಂದೆ ಸಾಧನೆಯ ಹಾದಿಯಲ್ಲಿ ಇಡಲು ಉದ್ದೇಶಿಸಿರುವ ಹೆಜ್ಜೆಗಳು ಎರಡನ್ನೂ ಗಮನಿಸಿದ್ದೇನೆ. ಈಗಾಗಲೇ ವಿಶ್ವವಿದ್ಯಾಲಯವು ಪ್ರಕಟಣೆಯ ಕಾರ್ಯವನ್ನು ಕೈಗೊಂಡಿದೆ. 'ಶ್ರೀತತ್ತ್ವನಿಧಿ', ಸಿವೆಲ್‌ನ 'ದಿ ಫರ್‌ಗಾಟನ್ ಎಂಪೈರ್'ದಂತಹ ಪುಸ್ತಕದ ಅನುವಾದ - ಇಂತಹ ಉಪಯುಕ್ತ ಗ್ರಂಥಗಳನ್ನು ಕನ್ನಡಿಗರಿಗೆ ಕೊಟ್ಟಿದೆ. 'ಕೃಷಿ ಪದಕೋಶ', 'ಪುರಾಣ ಕೋಶ', 'ಕರ್ನಾಟಕ ಕೋಶ', 'ವೈದ್ಯ ವಿಶ್ವಕೋಶ' 'ಜನಪದ ಕಲಾಕೋಶ' 'ಆಯಗಾರರ ಪದಕೋಶ', 'ಕಿರಿಯರ ಕರ್ನಾಟಕ', 'ಕರ್ನಾಟಕ ಗ್ರಾಮದೇವತೆಗಳ ವಿಶ್ವಕೋಶ'ಗಳಂತಹ ಕೋಶಗಳನ್ನು ನೀವು ಸಿದ್ಧಗೊಳಿಸುತ್ತಿದ್ದೀರಿ ಎಂಬುದನ್ನು ಗಮನಿಸಿದ್ದೇನೆ. 'ಪ್ರಸಾರಾಂಗ' ಹಾಗೂ ಬಯಲು ರಂಗಭೂಮಿಯನ್ನು ಸಿದ್ಧಗೊಳಿಸಿರುವುದು, ಜನಸಂಪರ್ಕಕ್ಕೆ, ಜನತೆಯ ಸಂಸ್ಕೃತಿಗೆ ನೀವು ನೀಡುತ್ತಿರುವ ಮಹತ್ವವನ್ನು ತೋರಿಸುತ್ತದೆ. ವಿಶ್ವವಿದ್ಯಾಲಯವು ಸರಿಯಾದ ದಿಕ್ಕಿನಲ್ಲಿ ಹೆಜ್ಜೆ



ಇಡುತ್ತಿದೆ ಎಂಬುದು ಸ್ಪಷ್ಟವಾಗಿದೆ; ಶಿಲ್ಪವನದಂತಹ ಕಲ್ಪನೆಗಳು ಸ್ವಾಗತಿಸಬೇಕಾದವು.

ಕನ್ನಡ ವಿಶ್ವವಿದ್ಯಾಲಯವು ತನ್ನ ವೈಶಿಷ್ಟ್ಯವನ್ನು ಉಳಿಸಿಕೊಳ್ಳಬೇಕು. ಅದಕ್ಕನುಗುಣವಾದ ಯೋಜನೆಗಳನ್ನು ರೂಪಿಸಿಕೊಂಡು ಕಾರ್ಯಗತ ಮಾಡಬೇಕೆಂದು ಸೂಚಿಸಬಯಸುತ್ತೇನೆ. ಇಂತಹ ಸಂಸ್ಥೆ ಕನ್ನಡ ನಾಡಿನಲ್ಲಿರುವುದು ಇದೊಂದೇ. ಇದರ ವ್ಯಾಪ್ತಿಯು ಅಖಿಲ ಕರ್ನಾಟಕದ್ದು. ಆದುದರಿಂದ ಬೇರೆ ವಿಶ್ವವಿದ್ಯಾಲಯಗಳು ಸಾಂಸ್ಕೃತಿಕ ಸಂಸ್ಥೆಗಳು ಕೈಗೊಳ್ಳಲು ಸಾಧ್ಯವಿಲ್ಲದ ಯೋಜನೆ ಹಾಗೂ ಪ್ರಕಟಣೆಗಳು ನಿಮ್ಮ ಪಾಲಿಗೆ ಬರುತ್ತವೆ.

ಇಂದು ಕನ್ನಡ ನಾಡಿನ ಬೌದ್ಧಿಕ ಬದುಕಿನ ಮತ್ತು ಸಾಮಾಜಿಕ ಬದುಕಿನ ಸಂದರ್ಭದಲ್ಲಿ ಈ ವಿಶ್ವವಿದ್ಯಾಲಯದಂತಹ ಸಂಸ್ಥೆಗಳು ಬೇರೆಬೇರೆ ಸ್ತರಗಳಲ್ಲಿ ಯೋಜನೆಗಳನ್ನು, ಕಾರ್ಯ ವಿಧಾನಗಳನ್ನು ರೂಪಿಸಿಕೊಳ್ಳುವುದು ಅನಿವಾರ್ಯ. ಇಲ್ಲಿ ಅತ್ಯಂತ ಉನ್ನತ ಮಟ್ಟದಲ್ಲಿ, ಅಂತಾರಾಷ್ಟ್ರೀಯ ಮನ್ನಣೆಯನ್ನು ಗಳಿಸಿಕೊಳ್ಳುವ ಮಟ್ಟದಲ್ಲಿ ಸಂಶೋಧನೆಯು ನಡೆಯಬೇಕಾಗಿದೆ. ಇಲ್ಲಿ ಯಾವ ರಾಜಿಯೂ ಸಾಧ್ಯವಿಲ್ಲ. ಎರಡನೆಯದಾಗಿ ಜ್ಞಾನದ ಮೇರೆಗಳನ್ನು ವಿಸ್ತರಿಸಬಲ್ಲ ಬೃಹತ್ ಪಂಡಿತ ಪಡೆಯನ್ನೇ ಸೃಷ್ಟಿಸಬೇಕಾಗಿದೆ. ಜೊತೆಗೆ, ಬೇರೆಬೇರೆ ಜ್ಞಾನಶಾಖೆಗಳ ಮಾಹಿತಿಯನ್ನು ಸಮಗ್ರ ತಿಳಿವಳಿಕೆಯನ್ನಾಗಿ ಮಾರ್ಪಡಿಸಬೇಕಾಗಿದೆ. ಮಾಹಿತಿ ಎನ್ನುವ ತಂತಿಯಲ್ಲಿ ತಿಳುವಳಿಕೆಯ ವಿದ್ಯುತ್ ಪ್ರವಾಹವನ್ನು ಹರಿಸಿ ಬೆಳಕನ್ನು ತಂದುಕೊಳ್ಳಬೇಕಾಗಿದೆ. ಆಕಾಶದತ್ತ ರೆಂಬೆಗಳನ್ನು ಚಾಚುತ್ತಲೇ ನೆಲದಲ್ಲಿ ಭದ್ರವಾಗಿ ಬೇರುಗಳನ್ನಿಳಿಸಿದ ಮಹಾವೃಕ್ಷದಂತೆ, ಇಂತಹ ಸಂಸ್ಥೆಗಳು ಜನಜೀವನದೊಡನೆ ಸಂಪರ್ಕವನ್ನು ಇರಿಸಿಕೊಳ್ಳಬೇಕು. ಉಪಸಂಸ್ಕೃತಿಗಳು, ಗ್ರಾಮೀಣ ಜೀವನ, ಗಿರಿಜನರು - ಎಲ್ಲವನ್ನೂ ಅಧ್ಯಯನದ ವೃತ್ತದಲ್ಲಿ ತಂದುಕೊಳ್ಳಬೇಕಾಗಿದೆ. ಹತ್ತಾರು ಕಾಲೇಜುಗಳ, ನೂರಾರು ಅಧ್ಯಾಪಕರ, ಸಾವಿರಾರು ವಿದ್ಯಾರ್ಥಿಗಳ, ಬಗೆಬಗೆಯ ಪಠ್ಯಪುಸ್ತಕಗಳ ಮತ್ತು ಪರೀಕ್ಷೆಗಳ ನಿರ್ವಹಣೆ ಇಲ್ಲದ ಈ ವಿಶ್ವವಿದ್ಯಾಲಯವು ಈ ಕೆಲಸಗಳಿಗೇ ತನ್ನನ್ನು ಮುಡಿಪು ಮಾಡಿಕೊಳ್ಳಬೇಕು.

ಹಂಪೆಯು, ಇಂದು ಪ್ರಪಂಚದ ಸಾಂಸ್ಕೃತಿಕ ಪರಂಪರೆಯಲ್ಲಿ ಬೆಳಗುತ್ತಿದೆ. ಹಂಪೆಯೇ ಕೇಂದ್ರವಾಗಿರುವ ಕನ್ನಡ ವಿಶ್ವವಿದ್ಯಾಲಯವು ಪ್ರಪಂಚದ ವಿದ್ಯಾ ಕೇಂದ್ರಗಳ ಪಂಕ್ತಿಯಲ್ಲಿ ಬೆಳಗಬೇಕೆಂಬುದೇ ನಮ್ಮೆಲ್ಲರ ಹರಕೆ ಹಾರೈಕೆಗಳು. ಕನ್ನಡ ನಾಡಿನ ಬೌದ್ಧಿಕ ಶಕ್ತಿ, ಧಾರ್ಮಿಕ ತೇಜಸ್ಸು, ಪರಾಕ್ರಮ, ಆಡಳಿತ ಕೌಶಲ್ಯ, ವ್ಯಾಪಾರ, ವಾಣಿಜ್ಯ ನೈಪುಣ್ಯ ಎಲ್ಲ ಇಲ್ಲಿ ಸಂಗಮಿಸಿ ಐದುನೂರು ವರ್ಷಗಳ ಹಿಂದೆ ಕನ್ನಡಿಗರ ಭಾಗ್ಯವನ್ನು ಗೌರೀಶಂಕರ ಶಿಖರಕ್ಕೇರಿಸಿದರು. ಇಂದು ಹಂಪೆಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಕನ್ನಡಿಗರ ಬೌದ್ಧಿಕ ಶಕ್ತಿ, ಸಾಮಾಜಿಕ ನ್ಯಾಯಪ್ರಜ್ಞೆ, ಸಂಶೋಧನ ಪ್ರತಿಭೆ, ಜನಸೇವಾನಿಷ್ಠೆಗಳು ಸಂಗಮಿಸಿವೆ. ಈ ವಿಶ್ವವಿದ್ಯಾಲಯವು ಕನ್ನಡ ನಾಡಿನ ಮಂಗಳ ಭವಿಷ್ಯವನ್ನು ರೂಪಿಸುವ ಶಕ್ತಿಗಳಲ್ಲಿ ಒಂದಾಗಲಿ ಎಂದು ಹಾರೈಸುತ್ತೇನೆ. ನಾಡಿನ ಪ್ರಗತಿಗಾಗಿ ಕೈಗೊಂಡ ಯಾವುದೇ ಕಾರ್ಯಕ್ಕೆ ಕರ್ನಾಟಕ ರಾಜ್ಯ ಸರ್ಕಾರದ ನೆರವು ಸಿದ್ಧವಾಗಿದೆ. ಇಂದು ಉದ್ಘಾಟನೆಯಾಗುತ್ತಿರುವ ಪ್ರಸಾರಾಂಗವು ನಾಡಿನ ಗ್ರಾಮೀಣ

ಜನತೆ, ನಗರ ಜನತೆ, ವಿದ್ವಾಂಸರು, ವಿದ್ಯಾರ್ಥಿಗಳು, ಜನಸಾಮಾನ್ಯರು ಎಲ್ಲರ ಬಳಿಗೆ ಜ್ಞಾನಗಂಗೆಯನ್ನು ಕರೆದೊಯ್ಯುವ ಭಗೀರಥನಾಗಲಿ. ಇಲ್ಲಿರುವ ಬಯಲುರಂಗ ಮಂದಿರವು ಪರಂಪರೆಯಲ್ಲಿ ಗಟ್ಟಿಯಾದುದನ್ನು ಉಳಿಸಿಕೊಂಡು ಪ್ರಯೋಗ ಪ್ರತಿಭೆಯ ತವರಾಗಲಿ ಎಂದು ಹಾರೈಸುತ್ತೇನೆ. ಈ ವಿಶ್ವವಿದ್ಯಾಲಯಕ್ಕೆ ಶುಭವಾಗಲಿ.





# ಪರಿಸರ

## ಸಂಸ್ಕೃತಿ -ಪರಂಪರೆಗಳಿಗೆ ಸಾಣೆ ಹಿಡಿಯುವ ಪರಿಸರ ಚಳವಳಿ

*ನಾಗೇಶ್ ಹೆಗಡೆ*

---

೧೯೯೩ನೇ ವರ್ಷ ಕಾಲಿಡುತ್ತಿದ್ದಂತೆಯೇ ಬೆಂಗಳೂರಿನ ಕಾರ್ಗಿಲ್ ಕಂಪನಿ ಕಚೇರಿಯ ಮೇಲೆ ಕನ್ನಡ ರೈತರು ಮಿಂಚಿನ ದಾಳಿ ನಡೆಸಿದ ಸುದ್ದಿ ದೇಶದ ಎಲ್ಲ ಪ್ರಮುಖ ಪತ್ರಿಕೆಗಳಲ್ಲಿ ಪ್ರತಿಧ್ವನಿಸತೊಡಗಿತ್ತು. ಅಂತಾರಾಷ್ಟ್ರೀಯ ಸುದ್ದಿ ಸಂಸ್ಥೆಗಳು ಈ ವಿಶಿಷ್ಟ 'ಬೀಜ ಸತ್ಯಾಗ್ರಹ'ದ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಲೆಂದು ಭಾರತದ ಸಂಪರ್ಕ ತಂತುಗಳನ್ನು ಜಾಲಾಡತೊಡಗಿದ್ದರು.

ಪರಿಸರ ಪ್ರಜ್ಞೆಯ ಹೊಸ ಸಂಸ್ಕೃತಿಯೊಂದು ಕನ್ನಡ ನಾಡಿನಲ್ಲಿ ದೃಢವಾಗಿ ಅಂಕುರಾರ್ಪಣೆ ಮಾಡಿದ್ದನ್ನು ಈ 'ಬೀಜ ಸತ್ಯಾಗ್ರಹ' ಸಾಂಕೇತಿಕವಾಗಿ ಸಾರಿತ್ತು. ಒಂದರ್ಥದಲ್ಲಿ ಇದು ೧೯೯೩ರ ಇಡೀ ವರ್ಷದ ಪರಿಸರ ಚಳವಳಿಯ ಗತಿಯನ್ನು ನಿರ್ದೇಶಿಸುವಂತಿತ್ತು.

ಪರಿಸರ ಚಳವಳಿ ಎನ್ನುವುದು ಕರ್ನಾಟಕದ ಒಂದು ಹೊಸ ಸಾಂಸ್ಕೃತಿಕ ಪರಂಪರೆಯಾಗಿ ರೂಪುಗೊಳ್ಳತೊಡಗಿ ಹತ್ತು ವರ್ಷಗಳೇ ಸಂದಿವೆ. ಇತರ ರಾಜ್ಯಗಳಲ್ಲಿ ಕಾಣುವಂತೆ ನಮ್ಮಲ್ಲಿ ಇದು ಇಂದು ಕೇವಲ ಅರಣ್ಯನಾಶ, ಜಲಮಾಲಿನ್ಯ, ವಾಯುಮಾಲಿನ್ಯದ ವಿರುದ್ಧದ ಆಗಾಗಿನ ಹೋರಾಟವಾಗಿ ಉಳಿದಿಲ್ಲ. ಇದು ಬೆಳೆಯುತ್ತಿದೆ. ಕರ್ನಾಟಕದ ಸಂಸ್ಕೃತಿ, ಪರಂಪರೆಯ ಎಲ್ಲ ಆಯಾಮಗಳನ್ನು ಸ್ಪರ್ಶಿಸುತ್ತ, ಹಳತಕ್ಕೆ ಹೊಳಪು ಕೊಡುತ್ತ, ಹೊಸದನ್ನು ಒರೆಗಲ್ಲಿಗೆ ಹಚ್ಚುತ್ತ ಸಾಗುವ ಒಂದು ವಿನೂತನ ಸಾಮಾಜಿಕ ಪ್ರಕ್ರಿಯೆಯಾಗಿ ಬೆಳೆಯುತ್ತಿದೆ.

ಕಾರ್ಗಿಲ್ ಸಂಸ್ಥೆಯ ಮೇಲೆ 'ನೇರ ಕ್ರಮ' ಜರುಗಿಸಿದ ರೈತ ಸಂಘದ ಉದಾಹರಣೆಯಿಂದಲೇ ಆರಂಭಿಸೋಣ. ಮೇಲ್ನೋಟಕ್ಕೆ ಇದು ಬಹುರಾಷ್ಟ್ರೀಯ ಲಾಭಖೋರ ಸಂಸ್ಥೆಯೊಂದರ ವಸಾಹತುಶಾಹಿ ಧೋರಣೆಯ ವಿರುದ್ಧ ಬಂಡೆದ್ದ

ಗ್ರಾಮೀಣ ಜನಸ್ತೋಮದ ತಾತ್ಕಾಲಿಕ ದಂಗೆಯೆಂದು ಅನೇಕರು ತೀರ್ಮಾನಿಸಿದರು. ಬಡ ಮತ್ತು ಕೆಳ ಮಧ್ಯಮ ರೈತರೇ ಬಹುಸಂಖ್ಯಾತರಿದ್ದ ಈ ಬಂಡಾಯಕ್ಕೆ ಮೂಲ ಪ್ರಚೋದನೆ ಏನು? ಅನೂಚಾನವಾಗಿ ಗ್ರಾಮೀಣ ಭಾರತದಲ್ಲಿ ಬೆಳೆದು ಬಂದ ಬೀಜ ವಿನಿಮಯ ಪದ್ಧತಿಗೆ ಧಕ್ಕೆ ಬರುತ್ತದೆಂಬ ಭಯ; ಹತ್ತಿಪ್ಪತ್ತು ತಳಿಗಳ ತರಹೇವಾರಿ ಬೆಳೆಗಳನ್ನೆಲ್ಲ ಹೊಸಕಿಹಾಕಿ, ನಿಸರ್ಗದ ಜೀವಿ ವೈವಿಧ್ಯವನ್ನು ಕಡಿಮೆ ಮಾಡಿ, ಪ್ರಕೃತಿಗೆ ಹೊಸ ಸಮವಸ್ತ್ರ ತೊಡಿಸುವ ಹುನ್ನಾರ ನಡೆಯಲಿದೆಯೆಂಬ ಭಯ; ಧನಿಕರ ಅನುಕೂಲಕ್ಕೆಂದೇ ಬಡರೈತರ ಸಾಂಪ್ರದಾಯಿಕ ತಳಿಗಳನ್ನು ತೊತ್ತಳದುಳಿದಾರೆಂಬ ದಲಿತ ಪ್ರಜ್ಞೆ; ತಮ್ಮ ಜೀವನ ವಿಧಾನಕ್ಕೆ ಹೊಂದಿಕೆಯಾಗದ ಹೊಸ ತಂತ್ರಜ್ಞಾನವನ್ನು ದೂರದ ಯಾರೋ ಹೇರಲು ಬಂದಿದ್ದಾರೆಂಬ ಶಂಕೆ; ಇದರಿಂದಾಗಿ ಭಾರತದ ಗ್ರಾಮೀಣ ಸಂಸ್ಕೃತಿಯ ಬೇರುಮೂಲಕ್ಕೇ ಧಕ್ಕೆ ಬಂದೀತೆಂಬ ಭಯ; ಭ್ರಷ್ಟ ಆಡಳಿತಶಾಹಿಯ ಬಗ್ಗೆ ಸಿಟ್ಟು.

ಪರಿಸರ ರಕ್ಷಣೆಯೆಂಬ ಪದಕ್ಕೆ ಇಷ್ಟೊಂದು ವ್ಯಾಪಕ ಅರ್ಥ ಕೊಟ್ಟ ಈ 'ನೇರ ಕ್ರಮ' ಸಹಜವಾಗಿಯೇ ಡಂಕೆಲ್ ವಿರುದ್ಧದ ಮೊದಲ ಹೋರಾಟವಾಗಿ, ಅದೇ ನಮ್ಮ ದೇಶದ ಇತರ ಭಾಗಕ್ಕೂ ವ್ಯಾಪಿಸಲು ಮೂಲ ಕಾರಣವಾಯಿತು. ನಮ್ಮ ಅಷ್ಟೇನೂ ಸುಶಿಕ್ಷಿತರಲ್ಲದ ರೈತ ಧುರೀಣರು ಮುಂದೆ ದಿಲ್ಲಿ, ಪಂಜಾಬ್, ಉತ್ತರ ಪ್ರದೇಶಗಳಲ್ಲೂ ಅಂಥ ಪ್ರತಿಭಟನೆಗಳ ಸರಮಾಲೆಯನ್ನೇ ಸಂಘಟಿಸುವ ಹರಿಕಾರರಾದರು.

ನವ ವಸಾಹತುಶಾಹಿಯ ಇನ್ನೊಂದು ಮುಖ ಇದೇ ವರ್ಷದ ಜನವರಿ ತಿಂಗಳಲ್ಲೇ ಜಪಾನ್ ಕೈಗಾರಿಕಾ ಕಾಲೋನಿಯ ರೂಪದಲ್ಲಿ ಗೋಚರಿಸಿತು. ಬೆಂಗಳೂರಿನ ಸರಹದ್ದಿನ ಬಿಡದಿ ಮತ್ತು ಸಾತನೂರುಗಳಲ್ಲಿ ಜಪಾನ್ ದೇಶದವರಿಗೆಂದು ಸರಕಾರ 'ಕೈಗಾರಿಕಾ ಕಾಲೋನಿ' ನಿರ್ಮಿಸಲು ಯೋಜಿಸಿದಾಗ ಜನ ತೀವ್ರವಾಗಿ ಪ್ರತಿಭಟಿಸಿದರು. ಕನ್ನಡ ಚಳವಳಿಗಾರ, ಸಂಶೋಧಕ ಚಿದಾನಂದಮೂರ್ತಿ, ಮ್ಯಾಗ್ಸೆಸೆ ಪ್ರಶಸ್ತಿ ವಿಜೇತ ಕೆ.ವಿ. ಸುಬ್ಬಣ್ಣನವರನ್ನು ಮುಂದಿಟ್ಟುಕೊಂಡು ಯುವಜನರು ಒಂದೆಡೆ ವಿಚಾರ ಸಂಕಿರಣ, ಮಾಹಿತಿ ಸಂಗ್ರಹಣ ಕಾರ್ಯದಲ್ಲಿ ತೊಡಗಿದರೆ, ರೈತರು, ದಲಿತ ಸಂಘರ್ಷ ಸಮಿತಿಯವರು ಪ್ರತಿಭಟನಾ ಮೆರವಣಿಗೆ, ಮನವಿ ಸಮರ್ಪಣೆ, ಬೀದಿ ಪ್ರದರ್ಶನ ನಡೆಸಿದರು. ನಮ್ಮ ನೆಲ, ನಮ್ಮ ಜಲ, ನಮ್ಮ ಶಕ್ತಿ, ನಮ್ಮ ಜನಶಕ್ತಿಯನ್ನು ಬಳಸಿಕೊಂಡು ಜಪಾನೀ ತಂತ್ರಜ್ಞರು ನಮ್ಮಲ್ಲೇ ಮಾಲಿನ್ಯ ಹರಿಬಿಟ್ಟು ಸ್ವಯಂಪೋಷಣೆ ಮಾಡಿಕೊಳ್ಳುವ ಈ ತಂತ್ರಾಧಾರಿತ ವಸಾಹತು ಅದೆಷ್ಟೇ ಆಕರ್ಷಕವಾಗಿದ್ದರೂ ನಮಗೆ ಬೇಡವೆಂದು ಒತ್ತಾಯಿಸಿದರು.

ನಮ್ಮ ಸಂಸ್ಕೃತಿ, ಸಂಪನ್ಮೂಲ ಮತ್ತು ಪರಿಸರ ಈ ಮೂರಕ್ಕೂ ಏಕಕಾಲಕ್ಕೆ ಧಕ್ಕೆ ಬರುತ್ತದೆಂಬ ಸಮಷ್ಟಿ ಪ್ರಜ್ಞೆಯ ಹಿನ್ನೆಲೆಯಲ್ಲಿ ನಡೆದ ಈ ಪ್ರತಿಭಟನೆ, ಕರ್ನಾಟಕದಲ್ಲಿ ಪೂರ್ಣಪ್ರಮಾಣದಲ್ಲಿ ಯಶಸ್ವಿಯಾದ ಅಪರೂಪದ ಜನಾಂದೋಲನವೆಂದೇ ಹೇಳಬೇಕು. ಜಪಾನೀ ಉದ್ಯಮ ನಗರದ ಪ್ರಸ್ತಾಪ ಅಲ್ಲಿಗೇ ಕೊನೆಗೊಂಡಿತು.

ಕೈಗಾರಿಕಾ ನಗರದ ವಿರುದ್ಧ ನಡೆದ ಚಳವಳಿಯ ಕಾವು ತೀವ್ರವಾಗಿದ್ದಾಗಲೇ ನಮ್ಮ ಸ್ಥಳೀಯ ಕೈಗಾರಿಕಾ ಪರಿಸ್ಥಿತಿಯ ದುಸ್ಥಿತಿ ಕುರಿತು ಕೆಲವೆಡೆ ತಂತಾನೇ ಜಾಗೃತಿ ಮೂಡತೊಡಗಿತ್ತು. ಮಂಡ್ಯದ ಕಾಗದ ಕಾರ್ಖಾನೆಯಿಂದ ಹೊಮ್ಮುತ್ತಿರುವ ಮಾಲಿನ್ಯವನ್ನು ಇಲ್ಲಿಯವರೆಗೆ ಸಹಿಸಿಕೊಂಡಿದ್ದ ಅಲ್ಲಿನ ಭಾರತೀ ಕಾಲೇಜಿನ ವಿದ್ಯಾರ್ಥಿಗಳು ಈಗ ಸಿಡಿದೆದ್ದರು. ಫೆಬ್ರುವರಿ ೨ನೇ ತಾರೀಖಿನಂದು ಅಲ್ಲಿ ಕಾರ್ಖಾನೆಯ ವಿರುದ್ಧ ವಿದ್ಯಾರ್ಥಿಗಳ ಪ್ರತಿಭಟನೆ ತೀವ್ರವಾಯಿತು. ಎರಡು ಸಹಸ್ರ ವಿದ್ಯಾರ್ಥಿಗಳು ಮೆರವಣಿಗೆ ಹೊರಟಾಗ, ಪೋಲಿಸರ ಆಗಮನದಿಂದಾಗಿ ಶಾಂತಿಯುತ ಪ್ರತಿಭಟನೆ ಹಿಂಸಾತ್ಮಕವಾಯಿತು. ರಾಜ್ಯದಲ್ಲೇ ಮೊಟ್ಟ ಮೊದಲ ಬಾರಿಗೆ ಕಾಲೇಜಿನ ವಿದ್ಯಾರ್ಥಿಗಳು ಒಂದಾಗಿ, ಪರಿಸರ ಮಾಲಿನ್ಯದ ವಿರುದ್ಧ ಹೋರಾಟಕ್ಕಿಳಿದು, ಲಾಠಿ ಏಟಿನ ಸವಿ ಕಾಣುವಂತಾಯಿತು. ಆದರೆ, ಇತರೆಲ್ಲ ವಿದ್ಯಾರ್ಥಿ ಚಳವಳಿಗಳ ಹಾಗೇ ಇದೂ ಭುಗಿಲೆದ್ದಷ್ಟೇ ಕ್ಷಿಪ್ರವಾಗಿ ತಣ್ಣಗೂ ಆಯಿತು.

ಭುಗಿಲೂ ಏಳದೆ, ತಣ್ಣಗೂ ಆಗದೆ ನೆನೆಗುದಿಯ ಹಂತದಲ್ಲೇ ಸ್ಥಿರವಾಗಿರುವ ಅನೇಕ ಪರಿಸರ ಚಳವಳಿಗಳನ್ನು ಕರ್ನಾಟಕದಲ್ಲಿ ಕಾಣಬಹುದು. ಉದಾಹರಣೆಗೆ, ಹರಿಹರ ಪಾಲಿಫೈಬರ್ ಕಾರ್ಖಾನೆಯ ವಿರುದ್ಧ ರಾಣೆಬೆನ್ನೂರು ತಾಲೂಕಿನಲ್ಲಿ ತುಂಗಭದ್ರಾ ತೀರದ ಅನೇಕ ಹಳ್ಳಿಗಳ ಜನರು ಕಳೆದ ೧೪ ವರ್ಷಗಳಿಂದ ನಿರಂತರವಾಗಿ (ಕನಿಷ್ಠಪಕ್ಷ ವರ್ಷಕ್ಕೆ ನಾಲ್ಕು ಬಾರಿಯಾದರೂ) ಬೀದಿ ಮೆರವಣಿಗೆ, ಜನಬಲ ಪ್ರದರ್ಶನ ನಡೆಸುತ್ತಲೇ ಬಂದಿದ್ದಾರೆ. ಮೀನುಗಾರರೇ ಹೆಚ್ಚಾಗಿರುವ ಈ ಹಳ್ಳಿಗಳ ಜನರು ಕ್ರಮೇಣ ತಮ್ಮ ನದಿತೀರದ ಸಂಸ್ಕೃತಿಗೆ ಎಳ್ಳುನೀರು ಬಿಡುತ್ತ, ಪ್ರತಿಭಟನೆಯ ಹೊಸ ಸಂಸ್ಕೃತಿಯನ್ನೇ ತಮ್ಮಲ್ಲಿ ರಕ್ತಗತ ಮಾಡಿಕೊಳ್ಳುತ್ತಿದ್ದಾರೆ. ಹದಿನೈದು ವರ್ಷಗಳ ಹಿಂದೆ 'ಹೋರಾಟ' ಎಂಬ ಪದವನ್ನೇ ಕೇಳರಿಯದ ಜನರು ಆಗ ಗುಡ್ಡ, ಗೋಮಾಳ, ನದಿನೀರಿನಂಥ ಸಾಮೂಹಿಕ ಆಸ್ತಿಯ ರಕ್ಷಣೆಗೆಂದು ಪದೇ ಪದೇ ಗಂಟಲುಬಿರಿದು ಘೋಷಣೆ ಕೂಗುತ್ತ ಪೇಟೆ ಪಟ್ಟಣಗಳ ಬೀದಿ ಸುತ್ತುತ್ತಾರೆ. ತಮ್ಮ ನೆಲ, ತಮ್ಮ ಜಲ, ತಮ್ಮ ಗಾಳಿ ನೋಡನೋಡುತ್ತ ಪರಭಾರೆಯಾಗಿ ವಿಕೃತ ರೂಪ ತಾಳುತ್ತಿದ್ದಾಗ, ಈಗ ಭಾರತದ ಅಸಲೀ ಸ್ವಾತಂತ್ರ್ಯ ಹೋರಾಟ ತಮ್ಮ ಮನೆ ಬಾಗಿಲಿಗೇ ಬಂದುದನ್ನು ಕಂಡು ಹೆಂಡತಿ ಮಕ್ಕಳೊಂದಿಗೆ ಬೀದಿಗಿಳಿಯುತ್ತಾರೆ.

ನಿರಂತರ ಹೋರಾಟದ ಇನ್ನೊಂದು ಉದಾಹರಣೆಯನ್ನು ಕಾಳಿ ನದಿಯ ಕೊಡಸಳ್ಳಿಯಲ್ಲಿ ಕಾಣಬಹುದು. ಗ್ರಾಮೀಣ ಸಂಸ್ಕೃತಿಯನ್ನು ಮೂರಾಬಟ್ಟೆ ಮಾಡುವ ಅತ್ಯಂತ ನಿರ್ದಯಿ ಯೋಜನೆ, ಅಣೆಕಟ್ಟು ಕಟ್ಟುವುದು. ಶತ ಶತಮಾನಗಳಿಂದ ನದಿ ತೀರದಲ್ಲೇ ನೆಲೆಸಿ ತಮ್ಮ ಬದುಕನ್ನು ರೂಪಿಸಿಗೊಂಡು ವಿಶಿಷ್ಟ ಸಾಂಸ್ಕೃತಿಕ ಪರಂಪರೆಯನ್ನು ಬೆಳೆಸಿಕೊಂಡು ಬಂದ ಒಂದು ಜನ ಸಮುದಾಯವನ್ನು ನಿರ್ದಯವಾಗಿ ನೆಲೆ ತಪ್ಪಿಸಿ, ಅವರ ಊರು, ಮನೆ, ಅಶ್ವತ್ಥಕಟ್ಟೆ, ಚೌಡಿ ಬನ, ದೇವಸ್ಥಾನ, ಸ್ಮಶಾನ, ಎಲ್ಲವನ್ನೂ ಮುಳುಗಿಸಿ ಎಲ್ಲಕ್ಕೂ ಹಣದ ಬೆಲೆ ಕಟ್ಟಿ, ಅಷ್ಟಿಷ್ಟು ಪರಿಹಾರ ನೀಡಿ ಸಾಗಹಾಕುವಷ್ಟು ಕ್ರೌರ್ಯದ ಕೆಲಸ ಬೇರೊಂದಿರಲಾರದು. ಹೀಗೆ ನೆಲೆ ತಪ್ಪಿದ ಜನ

ದೂರ ದೂರ ಚದುರಿ ಹೋಗಿ, ತಮ್ಮ ಕುಲಕಸುಬಿಗೆ, ಋತುಮಾನಗಳಿಗೆ, ಹಬ್ಬ ಹರಿದಿನಗಳಿಗೆ, ವಿಶಿಷ್ಟ ತಿಂಡಿ ತಿನಿಸುಗಳಿಗೆ, ಜಾನಪದ ಸಂಪ್ರದಾಯಗಳಿಗೆ, ಸ್ಥಳಪುರಾಣಗಳಿಗೆ ಎಲ್ಲಕ್ಕೂ ವಿದಾಯ ಹೇಳಿ ಎಂತೆಂಥದೋ ಹೊಸ ವೃತ್ತಿ ಹಿಡಿದು ಬದುಕು ಸಾಗಿಸಬೇಕಾಗುತ್ತದೆ.

ಇತ್ತ ಮುಳುಗಡೆಯೂ ಆಗದೆ, ಅತ್ತ ಬದಲೀ ಬದುಕಿಗೂ ನಿಶ್ಚಿತ ನೆಲೆ ಸಾಗದೆ ತ್ರಿಶಂಕು ಸ್ಥಿತಿಯಲ್ಲಿ ಕೊಡಸಳ್ಳಿಗ್ರಾಮದ ನೂರಿಪ್ಪತ್ತು ಕುಟುಂಬಗಳು ಕಳೆದ ೧೫-೨೦ ವರ್ಷಗಳಿಂದ ದಿನ ನೂಕುತ್ತಿವೆ. ದಟ್ಟ ವನಸಿರಿಯ ಸಮೃದ್ಧ ಮಡಿಲಲ್ಲಿ ಅಡಿಕೆ, ಏಲಕ್ಕಿ, ತೆಂಗು, ಭತ್ತ ಬೆಳೆಯುತ್ತ, ಹೊರ ಜಗತ್ತಿನ ಸಂಪರ್ಕವನ್ನೇ ಸ್ಪಷ್ಟ ಕಾಣದ ಕಣ್ಣೆದುರೇ ತಮ್ಮದೆಲ್ಲವನ್ನೂ ಮುಳುಗಿಸಬಲ್ಲ ಕೊಡಸಳ್ಳಿ ಅಣೆಕಟ್ಟು ರೂಪುಗೊಳ್ಳುವುದನ್ನು ನೋಡುತ್ತಿದ್ದಾರೆ. ಇವರಿಗೆ ಬದಲೀ ಜಮೀನು ಕೊಡುತ್ತೇವೆಂಬ ಸರಕಾರಿ ವಾಗ್ದಾನ ಮಾತ್ರ ಕಡತದಲ್ಲಿ ಕಣ್ಮರೆಯಾಗಿದೆ. ಇಂದಲ್ಲ ನಾಳೆ ಮುಳುಗಲಿರುವ ತಮ್ಮ ಜಮೀನಿನಲ್ಲಿ ಇವರು ಹೊಸ ಸಸಿ ನೆಡುವಂತಿಲ್ಲ; ಗೊಬ್ಬರ, ಹೊಸಮಣ್ಣು ಕೊಡುವಂತಿಲ್ಲ. ಆಡಳಿತಶಾಹಿಯ ಕಣ್ಣಾಮುಚ್ಚಾಲೆ, ರಾಜಕಾರಣಿಗಳ ವಿಚಿತ್ರ ಪ್ರವೃತ್ತಿಯ ಬಿಸಿಯನ್ನು ಇವರಷ್ಟು ತೀವ್ರವಾಗಿ ಅನುಭವಿಸಿದ ಜನ ಕನ್ನಡನಾಡಿನಲ್ಲಿ ಬೇರೆ ಎಲ್ಲೂ ಸಿಗಲಾರರು. ಕಳೆದ ಎರಡು ದಶಕಗಳಲ್ಲಿ ಆಗಿ ಹೋದ ಎಲ್ಲ ಎಂಟು ಮುಖ್ಯಮಂತ್ರಿಗಳಿಗೂ ಡಜನ್‌ಗಟ್ಟಲೆ ಕಂದಾಯ ಸಚಿವರಿಗೂ ಲೆಕ್ಕವಿಲ್ಲದಷ್ಟು ಕೆಪಿಸಿ ಅಧಿಕಾರಿಗಳಿಗೂ ಶಾಸಕರಿಗೂ ಅರ್ಜಿ ಬರೆದು ಬರೆದು, ಮನವಿ ಸಲ್ಲಿಸಿ ಸಲ್ಲಿಸಿ, ಬಸವಳಿದ ಇವರು ಈ ವರ್ಷ ಬೀದಿಗಿಳಿದರು. ಅವರ ಸಂಖ್ಯೆ ಮುನ್ನೂರನ್ನು ದಾಟಿರಲಿಲ್ಲವಾದರೂ, ಪಟ್ಟಣ ಸಂಸ್ಕೃತಿಯನ್ನೇ ಕಂಡಿರದ ಕುಗ್ರಾಮದ ಜನಪದವನ್ನೂ ಬಡಿದೆಬ್ಬಿಸಿ, ಅವರ ಕೈಯಲ್ಲಿ ಘೋಷಣಾ ಫಲಕವನ್ನು ಹಿಡಿಸಿದ 'ಶ್ರೇಯ' ಸರಕಾರದ್ದಾಯಿತು.

ಮುಳುಗಡೆಯ ನಿರಾಶ್ರಿತರನ್ನು ರೊಚ್ಚಿಗೆಬ್ಬಿಸಿದ ವಿದ್ಯಮಾನ ಈ ಕಡೆ ನಡೆಯುತ್ತಿದ್ದಂತೆಯೇ ಅತ್ತ ಕರ್ನಾಟಕದ ಕರಾವಳಿ ತೀರದಲ್ಲಿ ನೀರಲ್ಲಿ ಮುಳುಗಿ ಏಳುತ್ತಲೇ ಬದುಕು ನಡೆಸುವ ಬೆಸ್ತರನ್ನು ಕೆಣಕುವಂಥ ವಿದ್ಯಮಾನಗಳೂ ನಡೆಯತೊಡಗಿದ್ದವು. ಮಂಗಳೂರಿನ ಬಳಿ 'ತಣ್ಣೀರು ಬಾವಿ' ಎಂಬಲ್ಲಿ ಹಡಗು ಒಡೆಯುವ ಹೊಸ ಉದ್ಯಮ ಆರಂಭವಾಗಿ, ಹೊಸ ಚಳವಳಿಯ ಉದ್ಭವಕ್ಕೆ ಕಾರಣವಾಗಿತ್ತು.

ನಿರುಪಯುಕ್ತ ಹಳೇ ಹಡಗುಗಳನ್ನು ಒಡೆದು ಗುಜರಿಗೆ ಹಾಕುವ ಕೆಲಸವನ್ನು ಯಾವ ಸುಧಾರಿತ ರಾಷ್ಟ್ರವೂ ಕೈಗೆತ್ತಿಕೊಳ್ಳುವುದಿಲ್ಲ. ಏಕೆಂದರೆ ಅಂಥ ಹಡಗುಗಳನ್ನು ಒಡೆವಾಗ ಹೊರಬರುವ ಕಚಡಾ ವಸ್ತುಗಳು- ಕೀಲೆಣ್ಣೆ, ಗ್ರೀಸ್, ಕೊಳೆ ರಸಾಯನಗಳು ಸಮುದ್ರಕ್ಕೆ ಸೇರಿದಾಗ ನೂರಾರು ಚದರ ಕಿಲೋಮೀಟರ್ ದೂರದವರೆಗೆ ಎಣ್ಣೆ ಜಿಡ್ಡನ್ನು ಪಸರಿಸಿ, ಕಡಲ ಜೀವಿಗಳಿಗೆ ಆಮ್ಲಜನಕ ದೊರಕದಂತಾಗುತ್ತದೆ. ಒಡೆಯುವಾಗ ಮರ್ನಾತ, ಗದ್ದಲ, ಹಾಳು ಮೂಳು ರಾಶಿ, ಓಡಾಟಕ್ಕೆ ಅಡಚಣೆ ಎಲ್ಲ ಎದುರಾಗುತ್ತವೆ. ಬ್ರಿಟನ್,

ಫ್ರಾನ್ಸ್, ಗ್ರೀಸ್, ಟರ್ಕಿ, ಇರಾನ್, ಸೌದಿ ಅರೇಬಿಯಾದಿಂದ ಹಿಡಿದು ಇತ್ತ ತೈವಾನ್, ಜಪಾನ್ ವರೆಗೆ ಯಾವ ರಾಷ್ಟ್ರವೂ ಹಡಗು ಒಡೆಯುವ ಉದ್ಯಮಕ್ಕೆ ಅನುಮತಿ ಕೊಡುವುದಿಲ್ಲ. ಈ ರಾಷ್ಟ್ರಗಳು ತಮಗಿಂತ ಹಿಂದುಳಿದ ರಾಷ್ಟ್ರಗಳಿಗೆ ಹಳೇ ಹಡಗನ್ನು ಸಾಗಿಸಿ ಕೈತೊಳೆದುಕೊಳ್ಳುತ್ತವೆ.

ಭಾರತದಲ್ಲಿ ಹಡಗು ಒಡೆಯುವ ದಂಧೆ ಕರ್ನಾಟಕದ ಕಡಲ ತೀರದಲ್ಲಿ ಹತ್ತುವರ್ಷಗಳ ಹಿಂದೆ ಆರಂಭವಾದಾಗ, ಬೆಂಗಳೂರಿನ ಕೆಲವರು ವಿರೋಧಿಸಿದರಾದರೂ, ಕಡಲ ತೀರದ ಬೆಸ್ತರನ್ನು ಅದು ಅಷ್ಟು ತೀವ್ರವಾಗಿ ತಟ್ಟಿರಲಿಲ್ಲ. ಉತ್ತರ ಕನ್ನಡದ ತದಡಿಯಲ್ಲಿ ಹಾಗೂ ಮಂಗಳೂರಿನ ಬಳಿಯ ಹೊಸಬೆಟ್ಟುವಿನ ಬಳಿಯಾಗಲೀ ಮೀನುಗಾರರು ಈ ಕಿರುಕುಳವನ್ನು ಸಹಿಸಿಕೊಂಡಿದ್ದರೇ ವಿನಾ ಸಂಘಟಿತ ರೂಪದಲ್ಲಿ ಪ್ರತಿಭಟಿಸಿರಲಿಲ್ಲ.

ತಣ್ಣೀರು ಬಾವಿಯ ಬಳಿ ಸಿಂಗಾಪುರದಿಂದ ಎಳೆದು ತಂದ ಕೊಳಕು ಹಡಗನ್ನು ಒಡೆಯಲು ಆರಂಭಿಸಿದಾಗ ಅದರಲ್ಲಿ ಎಂದೋ ತುಂಬಿಟ್ಟ ಬೆಳ್ಳುಳ್ಳಿ ಮತ್ತು ಕಲ್ಲಿದ್ದಲ ಪುಡಿ ಮಿಶ್ರಣ ಸಮುದ್ರಕ್ಕೆ ಸೇರಿ ಅಸಹ್ಯವಾಸನೆ ಹುಟ್ಟಿದಾಗ ಪ್ರಾಯಶಃ ಬೆಸ್ತರ ಸಹನೆಯ ಕಟ್ಟೂ ಒಡೆಯಿತೆಂದು ಕಾಣುತ್ತದೆ. ದಕ್ಷಿಣ ಕನ್ನಡ ನಾಡದೋಣಿ ಮೀನುಗಾರರ ಒಕ್ಕೂಟದ ಆಶ್ರಯದಲ್ಲಿ ೩೦೦೦ಕ್ಕೂ ಹೆಚ್ಚು ಜನ ಒಟ್ಟಾಗಿ ಆಗಸ್ಟ್ ೧೪ರಂದು ಭಾರೀ ಮೆರವಣಿಗೆ ನಡೆಸಿ ಮಂಗಳೂರಿನ ಬಂದರು ಅಧಿಕಾರಿಯ ಮೇಲೆ ಒತ್ತಾಯ ಹೇರಿ ಹಡಗು ಒಡೆಯುವ ಕೆಲಸವನ್ನು ಸ್ಥಗಿತಗೊಳಿಸಿದರು. ಗುತ್ತಿಗೆದಾರರು ಜ್ಯುಡಿಶಿಯಲ್ ಮ್ಯಾಜಿಸ್ಟ್ರೇಟರಿಗೆ ದೂರು ಒಯ್ದು ತಮ್ಮ ಕೆಲಸವನ್ನು ಮುಂದುವರೆಸುವ ಅನುಮತಿ ಪಡೆದ ಮೇಲೆ ಮೀನುಗಾರರ ಪ್ರತಿಭಟನೆ ಇನ್ನೂ ತೀವ್ರವಾಯಿತು. ಮೂರು ತಿಂಗಳುಗಳ ಅವಧಿಯಲ್ಲಿ ಪದೇ ಪದೇ ಚಳವಳಿ ನಡೆಸಿ, ಹಠ ಬಿಡದ ಬೆಸ್ತರು ಕೊನೆಗೂ ನ್ಯಾಯಾಲಯಕ್ಕೆ ಹೋಗಿ, ಹಡಗು ಒಡೆಯುವ ಕೆಲಸಕ್ಕೆ ತಡೆಯಾಜ್ಞೆ ತರುವಲ್ಲಿ ಯಶಸ್ವಿಯಾದರು. ಅತ್ತ ಉತ್ತರ ಕನ್ನಡ ಜಿಲ್ಲೆಯ ಇನ್ನೆರಡು ಕಡೆ (ಬಾಡ, ಕಾಗಾಲ) ಹಡಗು ಒಡೆಯುವ ಕೆಲಸಕ್ಕೆ ಹೊಸ ಸಿದ್ಧತೆ ಆರಂಭವಾಯಿತು.

ಕಡಲ ತೀರದಲ್ಲಿ ಸಾವಿರಾರು ಬಡ ಜನರು ಪ್ರತಿಭಟನೆಯ ಅದೆಷ್ಟೇ ದೊಡ್ಡ ಅಲೆ ಎಬ್ಬಿಸಿದರೂ ಜಪ್ಪೆನ್ನದ ಸರಕಾರ, ಇತ್ತ ಬೆಂಗಳೂರಿನ ಲಾಲ್‌ಬಾಗಿನ ಕೆರೆಯಲ್ಲಿದ್ದ ಒಂದು ಪುಟ್ಟ ವಿವಾದದ ಅಲೆಯನ್ನು ಕಂಡು ಹೆದರಿ ಹಿಮ್ಮೆಟ್ಟಿತು. ಲಾಲ್‌ಬಾಗ್ ಕೆರೆಯಲ್ಲಿ ದೋಣಿ ವಿಹಾರಕ್ಕೆ ಅನುಮತಿ ಕೊಟ್ಟಿದ್ದನ್ನು ಕಂಡು ಪ್ರತಿಷ್ಠಿತ ವರ್ಗದ ಒಂದಿಬ್ಬರು ಕೆರಳಿದರು. ವಲಸೆ ಬರುವ ಪಕ್ಷಿಗಳು ದೋಣಿ ವಿಹಾರದಿಂದಾಗಿ ಭಯಪಟ್ಟು ದೂರ ಹೋಗಿ ಬಿಟ್ಟಾವೆಂದು ಪಕ್ಷಿವೀಕ್ಷಕರು ಝಫಾರ್ ಫುತೇಹಲಿಗೆ ದೂರಿತ್ತರು. ಫುತೇಹಲಿಯವರು ರಾಜ್ಯಪಾಲರ ಗಮನಕ್ಕೆ ಈ ವಿಷಯವನ್ನು ತಂದರು. ಗವರ್ನರ್ ಸಾಹೇಬರು ದೋಣಿ ವಿಹಾರ ಬೇಡವೆಂದರು. ಎರಡೇ ದಿನಗಳಲ್ಲಿ ಈ ಪುಟ್ಟ ಸಂಗತಿ ದೊಡ್ಡ ಪತ್ರಿಕೆಗಳಲ್ಲಿ ದೊಡ್ಡ ಸುದ್ದಿಯಾಗಿ, ಉಗ್ರ ಸಂಪಾದಕೀಯಗಳಿಗೆ ಗ್ರಾಸವಾಗಿ ಅಗೋ, ಒಂದೇ ವಾರದಲ್ಲಿ (ನವೆಂಬರ್ ಕೊನೇ ವಾರದಲ್ಲಿ) ದೋಣಿ ವಿಹಾರದ

ಪ್ರಸ್ತಾಪವನ್ನೇ ಸರಕಾರ ಕೈ ಬಿಟ್ಟಿತು. ಬಡ ಲಿಟ್ಲ್ ಗ್ರೀಬ್ಸ್ ಪಕ್ಷಿಗಳಿಗೆ (ಇವುಗಳಿಗೆ ಕನ್ನಡದಲ್ಲಿ ಹೆಸರೂ ಇಲ್ಲ) ಲಾಲ್‌ಬಾಗ್ ಕೆರೆಯಲ್ಲಿ ಮತ್ತೆ ನೆಲೆ ಸಿಕ್ಕಂತಾಯಿತು.

ಡಿಸೆಂಬರ್ ಬಂತೆಂದರೆ ಭೋಪಾಲ ವಿಷಾನಿಲ ದುರಂತದ ನೆನಪು ಮತ್ತೆ ಮರುಕಳಿಸುತ್ತದೆ; ಡಿಸೆಂಬರ್ ೩ರ ಆ ಕರಾಳ ರಾತ್ರಿಯ ದ್ಯೋತಕವಾಗಿ ಔದ್ಯಮಿಕ ಮಾಲಿನ್ಯದ ವಿರುದ್ಧ ಜನಜಾಗೃತಿ ಕಾರ್ಯಕ್ರಮ ಚುರುಕಾಗುತ್ತದೆ. ಹರಿಹರ ಪಾಲಿಫೈಬರ್ಸ್ ಕಂಪನಿಯ ವಿರುದ್ಧ ಅದೆಷ್ಟೇ ಪ್ರತಿಭಟನೆ ನಡೆದರೂ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಲಿ ಏನೇನೂ ಕ್ರಮ ಕೈಗೊಂಡಿಲ್ಲವೆಂದು ಡಿಸೆಂಬರ್ ೪ರಂದು ಹರಿಹರ, ದಾವಣಗೆರೆ, ಹರಪನಹಳ್ಳಿ, ಹಡಗಲಿ, ರಾಣೆಬೆನ್ನೂರು ಮತ್ತು ಹಾವೇರಿಗಳ ರೈತ ಸಮುದಾಯ ಪ್ರತಿಭಟನೆಯ ಕಾರ್ಯಕ್ರಮ ಹಮ್ಮಿಕೊಂಡಿತ್ತು. ರಾಜ್ಯಾದ್ಯಂತ ಔದ್ಯಮಿಕ ಮಾಲಿನ್ಯವನ್ನು ನಿಯಂತ್ರಿಸಲು ಈ ಮಂಡಲಿ ವಿಫಲವಾಗಿದೆಯೆಂದೂ ಇದರ ಹಾಲಿ ಸದಸ್ಯರನ್ನೆಲ್ಲ ಕಿತ್ತು ಹಾಕಿ ಹೊಸ ಮಂಡಲಿಯನ್ನು ರಚಿಸಬೇಕೆಂದೂ ಒತ್ತಾಯಿಸಿ ದಾವಣಗೆರೆಯಲ್ಲಿನ ಶಾಖಾ ಕಚೇರಿಯನ್ನು ರೈತರು ಘೇರಾವ್ ಮಾಡಿದರು. ಜನತೆ ಎಚ್ಚೆತ್ತಿದ್ದರೆ ಮಾತ್ರ ಸರಕಾರ ಕಣ್ಣು ತೆರೆಯುತ್ತದೆಂದು ಖ್ಯಾತ ನೇತ್ರತಜ್ಞ ಡಾ. ಮೋದಿ ಮತ್ತು ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ. ಶಿವರಾಮ ಕಾರಂತರು ರಾಣೆಬೆನ್ನೂರಿನಲ್ಲಿ ನಡೆದ ಪರಿಸರ ಸಮಾವೇಶದಲ್ಲಿ ಭಾಷಣ ಮಾಡಿದರು. ತುಂಗಭದ್ರಾ ನದಿಯನ್ನು ಸ್ವಚ್ಛವಾಗಿಡುವಲ್ಲಿ ವಿಫಲವಾದ ಮಾಲಿನ್ಯ ನಿಯಂತ್ರಣ ಮಂಡಲಿಯ ಸಡಿಲ ಧೋರಣೆಯ ವಿರುದ್ಧ ರೈತರ ಧಿಕ್ಕಾರಗಳು ಧಾರವಾಡ, ಚಿತ್ರದುರ್ಗ ಜಿಲ್ಲೆಯ ವಿವಿಧ ಪಟ್ಟಣಗಳಲ್ಲಿ ಮೊಳಗಿದವು.

ಇದು ೧೯೯೩ರ ಪರಿಸರ ಪ್ರತಿಭಟನೆಗಳ ಘಟನಾವಾರು ಸ್ಥೂಲ ನೋಟ. ರೈತರ 'ಕಾರ್ಗಿಲ್ ಕಾರಸೇವೆ' ಯಿಂದ ಆರಂಭವಾಗಿ ಹರಿಹರ ಪಾಲಿಫೈಬರ್ ವಿರುದ್ಧದ ಪ್ರತಿಭಟನೆಯ ವರೆಗಿನ ಈ ಸರಮಾಲೆಯನ್ನು ಕ್ಯಾಲೆಂಡರ್ ಪ್ರಕಾರ ಸಮೀಕ್ಷೆ ಮಾಡುವುದು ಅಷ್ಟು ಸಮಂಜಸವೇನಲ್ಲ ನಿಜ. ಆದರೆ ಪರಿಸರ ಚಳವಳಿಯ ಸ್ವರೂಪವೇ ತೀರ ಸಂಕೀರ್ಣವಾಗಿರುವಾಗ, ಅವುಗಳನ್ನು ವರ್ಗೀಕರಿಸಿ ಇಂತಿಂಥವು ಅರಣ್ಯ ರಕ್ಷಣೆಯ ಹೋರಾಟವೆಂದೂ, ಇಂತಿಂಥವು ಜಲರಕ್ಷಣೆಯ ಹೋರಾಟವೆಂದೂ, ಇಂತಿಂಥವು ನಗರ ರಕ್ಷಣೆಯ ಚಳವಳಿಗಳೆಂದೂ, ವಿಭಾಗಿಸುವುದೂ ಸರಿಯೆನಿಸಲಾರದು. ವಿಭಿನ್ನ ಸ್ವರೂಪಗಳ ಈ ಚಳವಳಿಗಳಲ್ಲಿ ಯಾವ ಒಂದನ್ನೇ ಪ್ರತ್ಯೇಕವಾಗಿ ಪರಿಗಣಿಸಿದರೂ ಅದರಲ್ಲಿ ಕನ್ನಡ ನಾಡಿನ ಸಂಪತ್ತಿನ ಸಂರಕ್ಷಣೆ, ಸಂಸ್ಕೃತಿ- ಪರಂಪರೆಗಳ ಸಂರಕ್ಷಣೆಯ ಕಾಳಜಿ ಎದ್ದು ಕಾಣುತ್ತದೆ. ಈ ಒಂದೊಂದು ಚಳವಳಿಯಲ್ಲೂ, ಸ್ಥಾನೀಯವಾಗಿ ಲಭ್ಯವಿರುವ ಎಲ್ಲ ಬಗೆಯ ಅಭಿವ್ಯಕ್ತಿ ಮಾಧ್ಯಮಗಳನ್ನು ( ಸಂಗೀತ, ಜಾನಪದ, ಬೀದಿ ನಾಟಕ, ಹಾಡು, ವರಸೆ, ರಂಗ ತಂತ್ರ, ಕಲೆ, ಚತುರೋಕ್ತಿ, ಗಾದೆ ಮಾತು ಎಲ್ಲವನ್ನೂ) ದುಡಿಸಿಕೊಳ್ಳಲಾಗಿದೆಯೆಂಬ ಅಂಶವನ್ನು ಗಮನಿಸಿದರೆ, ಆಧುನಿಕತೆಯ ದಾಪುಹೆಜ್ಜೆಗಳ ಮಧ್ಯೆ ಕಣ್ಮರೆಯಾಗುತ್ತಿರುವ ಅನೇಕ ವಿಧದ ಕನ್ನಡ ಪರಂಪರೆಗಳಿಗೆ ಈ ಪರಿಸರ ಚಳವಳಿಗಳಲ್ಲೇ ಸಾಣೆ ಸಿಗುತ್ತಿದೆಯೆಂದು ಹೇಳಬಹುದು.

# ಸೆಪ್ಟೆಂಬರ್ ೯೩ರ ಭೂಕಂಪ

*ಕೆ. ಜಿ. ವಾಸುಕಿ*

೩೦ರ ಸೆಪ್ಟೆಂಬರ್ ೯೩ರ ಬೆಳಗಿನ ಜಾವ, ಮಹಾರಾಷ್ಟ್ರದ ಕಿಲಾರಿ ಮತ್ತು ಲಾತೂರಿನ ಜೀವಗಳು ಕನಸು ಕಾಣುತ್ತಾ ಮಲಗಿದ್ದವು. ಯಾರಿಗೂ ತಿಳಿಸದೆ ವಸುಂಧರೆ ಸಿಟ್ಟಿಗೆದ್ದು ಗುಡುಗಿದಳು. ಕನಸು ಕಾಣುತ್ತಾ ಮಲಗಿದ್ದ ಜೀವಗಳು ಕಣ್ತೆರೆದು ಏಳುವ ಮುನ್ನವೇ ಸಮಾಧಿಯಾಗಿಬಿಟ್ಟವು. ಎಲ್ಲೆಲ್ಲೂ ಸ್ಮಶಾನ ಮೌನ, ಇಡೀ ರಾಷ್ಟ್ರವನ್ನೇ ಈ ಸುದ್ದಿ ನಡುಗಿಸಿತು. ಈ ಭೂಕಂಪ ಸುಮಾರು ೩೦ ಸಾವಿರ ಜೀವಗಳನ್ನು ಬಲಿ ತೆಗೆದುಕೊಂಡು ಅಪಾರ ಹಾನಿಯನ್ನುಂಟು ಮಾಡಿತು. ಮಹಾರಾಷ್ಟ್ರದ ಉಸ್ಮಾನಾಬಾದ್ ಹಾಗೂ ಲಾತೂರ್ ಜಿಲ್ಲೆಗಳಲ್ಲಿ ಸುಮಾರು ೩೦ ಸಾವಿರ ಜನರನ್ನು ಬಲಿ ತೆಗೆದುಕೊಂಡ ಈ ಸೆಪ್ಟೆಂಬರ್ ಭೂಕಂಪ, ಸುಮಾರು ಐದು ಬಾರಿ ನೆಲವನ್ನು ಕೊಡವಿತು. ಅಂದರೆ ಕ್ರಮವಾಗಿ ೫೪, ೪೭, ೧೨, ೨೨ ಮತ್ತು ೨ ಸೆಕೆಂಡ್ ಗುಡುಗಿದ ಭೂಮಿ ೭೦ ಚದರ ಕಿಲೋಮೀಟರ್ ವ್ಯಾಪ್ತಿಯಲ್ಲಿ ಎಲ್ಲವನ್ನು ಕಬಳಿಸಿತ್ತು. ಕ್ಷಣಮಾತ್ರದಲ್ಲಿ ಊರುಗಳು ಸ್ಮಶಾನವಾದವು. ಜನಸ್ತೋಮ ಅಲ್ಲೋಲ ಕಲ್ಲೋಲವಾಯಿತು. ಭೂಕಂಪ ಹೇಗೆ ಸಂಭವಿಸುತ್ತದೆ? ಇದು ನಮ್ಮೆಲ್ಲರನ್ನು ಕಾಡುವ ಪ್ರಶ್ನೆ.

ಭೂಕಂಪ ಒಂದು ನೈಸರ್ಗಿಕ ಪ್ರಕೋಪ. ನಮಗೆ ತಿಳಿಯದೆ ಭೂಮಿ ನಡುಗಿ ಏನೇನು ಅನಾಹುತ ಮಾಡುತ್ತದೋ ನಮ್ಮ ಊಹೆಗೆ ಎಟುಕದ ವಿಷಯ. ಭೂಕಂಪದಿಂದ ನೊಂದ ಬೆಂದ ಜೀವಗಳು ಕೇಳುತ್ತಿದ್ದ ಪ್ರಶ್ನೆ ಒಂದೇ - ಭೂಕಂಪ ಹೇಗೆ ಆಗುತ್ತದೆ? ಭೂಕಂಪದ ಮುನ್ಸೂಚನೆ ಸಿಕ್ಕಿದರೆ ಇಡೀ ಜನಸ್ತೋಮ ಸಾವಿನ ದವಡೆಯಿಂದ ಪಾರಾಗಬಹುದಿತ್ತು. ಆದರೆ ಈ ವಸುಂಧರೆಯ ಅಂತರಂಗವನ್ನು ಅರಿಯುವುದು ಅಷ್ಟು ಸುಲಭವೇನಲ್ಲ. ಭೂಮಿಯ ಒಳಗಿರುವ ಶಿಲಾಪದರಗಳು ಒಂದರೊಡನೊಂದು ಉಜ್ಜಿದಾಗ ಭೂಮಿ ಕಂಪಿಸುತ್ತದೆ. ಏಕೆ ಈ ಶಿಲಾ ಪದರಗಳೂ ಒಂದರೊಡನೊಂದು ಉಜ್ಜಾಡುತ್ತವೆ. ಇದನ್ನು ಅರಿಯಲು ಭೂಮಿಯ ರಚನೆಯ ಬಗ್ಗೆ ತಿಳಿಯುವುದು ಉತ್ತಮ. ಭೂಮಿ ಒಂದು ಬಿಸಿ ಗಟ್ಟಿ ದ್ರವದ ಉಂಡೆ. ಇದರ ಹೊರಮೈ ತೆಗೆದು ಆರಿ, ಗಟ್ಟಿಯಾಗಿ ಚಿಪ್ಪುಗಟ್ಟಿದೆ. ಈ ಚಿಪ್ಪು ಸಮುದ್ರದ ತಳದಿಂದ ೭೦ ಕಿಲೋಮೀಟರ್ ಆಳದವರೆಗೆ ಇರುವಂತದ್ದು. ಈ ಚಿಪ್ಪು ಇಡೀ ಭೂಮಿಯ ಮೇಲ್ಮೈಯಲ್ಲಿ ಆರೆಂಟು ಬೃಹತ್ ಖಂಡಗಳಾಗಿ ಒಡೆದಿದೆ. ಈ ಒಂದೊಂದು ಖಂಡವೂ ಒಂದನ್ನೊಂದು ಒತ್ತಿಕೊಂಡು ಚಲಿಸುತ್ತಿರುತ್ತವೆ. ಈ ಕ್ರಿಯೆ ಈಗಲೂ ಜರುಗುತ್ತಿದೆ. ಹೀಗೆ ಈ ಖಂಡಗಳು

ಒಂದನ್ನೊಂದು ಒಂದೇ ಸಮ ಘರ್ಷಿಸುವುದೇ ಭೂಕಂಪ (ಟೆಕ್ಟೋನಿಕ್).

ದಕ್ಷಿಣ ಭಾರತವನ್ನು ಪೀಠಭೂಮಿ ಎಂದು ಗುರುತಿಸಲಾಗಿದೆ. ದಕ್ಷಿಣ ಭಾರತದ ಭೂಮಿ ೩೦೦ ಕೋಟಿ ವರ್ಷಗಳಷ್ಟು ಹಳೆಯದಾದ ಗಟ್ಟಿ ಶಿಲೆಗಳಿಂದ ರೂಪಿತವಾಗಿದೆ. ಈ ಶಿಲೆಯ ಮೇಲೆ ಸುಮಾರು ೨೦೦ ಕೋಟಿ ವರ್ಷಗಳಷ್ಟು ಹಳೆಯದಾದ ಸಂಚಿತ ಶಿಲೆಗಳು ಕೂಡಿವೆ. ಅಂದರೆ ದಕ್ಷಿಣ ಭಾರತದ ಪರ್ವತಗಳು ಹಿಮಾಲಯ ಪರ್ವತ ಶ್ರೇಣಿಗಿಂತ ಹಲವು ಕೋಟಿ ವರ್ಷಗಳಷ್ಟು ಹಳೆಯದು. ಹೀಗಿದ್ದರೂ ಸಹ ದಕ್ಷಿಣ ಭೂಮಿ ನಡುಗುವುದು ಏಕೆ?

೧೯೭೭ರಲ್ಲಿ ಭಾರತೀಯ ಭೂ ವಿಜ್ಞಾನ ಸಂಸ್ಥೆಯ ಕೈಲಾಸಂ ಎಂಬ ತಜ್ಞರು ಮಹಾರಾಷ್ಟ್ರದ ಮರಾಠವಾಡ ಪ್ರಾಂತ್ಯದ ಭೂಮಿಯ ರಚನೆಯನ್ನು ಅರಿಯಲು ಅನೇಕ ಅಧ್ಯಯನಗಳನ್ನು ಮಾಡಿದರು. ನೆಲದಾಳದ ಶಿಲೆಯ ರಚನೆ, ಸಂಯೋಜನೆ ಆಧರಿಸಿ ಭೂಮಿಯ ವಿದ್ಯುತ್ ವಾಹಕತೆ, ಕಾಂತತೆ ಮತ್ತು ಗುರುತ್ವಾಕರ್ಷಣೆ ತೋರುತ್ತದೆ. ಈಗ ಭೂಕಂಪನದಿಂದ ತತ್ತರಿಸಿರುವ ಶೋಲಾಪುರ, ದಕ್ಷಿಣಕ್ಕೆ ಹಾಗೂ ಮುಂಬೈ ಬಳಿ ಭೂ ಚಿಪ್ಪಿನ ಆಳದಲ್ಲಿ ಹುದುಗಿದ್ದ ವಾಯುವ್ಯ-ನೈರುತ್ಯ ದಿಕ್ಕಿಗೆ ಓರೆಗೊಂಡಿದ್ದ ಉದ್ದುದ್ದದ ಸೀಳುಗಳು ಪತ್ತೆಯಾದವು. ಈ ರೀತಿ ಸೀಳುಗಳಿರುವಾಗ ಭೂಮಿ ಸರಿದು ಭೂ ಕಂಪನಕ್ಕೆ ನಾಂದಿಯಾಗುತ್ತದೆ. ಇದು ದಕ್ಷಿಣ ಭಾರತದ ಕಥೆ.

ಭೂಕಂಪನಗಳಿಗೆ ಇನ್ನೊಂದು ಪ್ರಮುಖ ಕಾರಣ ಮಾನವ ನಿರ್ಮಿತ ದೊಡ್ಡ ಜಲಾಶಯಗಳು. ಮಾನವ ನೀರಾವರಿಗೆಂದು ನಿರ್ಮಿಸಿದ ಬೃಹತ್ ಜಲಾಶಯ ಅಣೆಕಟ್ಟುಗಳೇ ಭೂಕಂಪ ರಹಿತ ಪ್ರದೇಶಗಳಲ್ಲೂ ಭೂಕಂಪವುಂಟು ಮಾಡಿದ್ದಿದೆ. (ವಿಶ್ವಾದ್ಯಂತ ಹೀಗೆ ೬೮ ಜಲಾಶಯಗಳ ಉದಾಹರಣೆಗಳಿವೆ.) ೧೯೬೭ರ ಡಿಸೆಂಬರ್ ತಿಂಗಳಿನಲ್ಲಿ ಕೊಯನಾ ಜಲಾಶಯ ತುಂಬಿ ಅದರ ಕೆಳಗಿನ ಭೂಮಿ ನಡುಗಿತು. ೨೫೦ ಮಂದಿಯನ್ನು ಬಲಿ ತೆಗೆದುಕೊಂಡಿತು. ಆದರೆ ಇದ್ಯಾವುದೂ ಕಿಲಾರಿಯ ಭೂಕಂಪನಕ್ಕೆ ಕಾರಣಗಳಲ್ಲ. ಭಾರತ ಖಂಡದ ಅಂಚು ಕಿಲಾರಿ-ಲಾತೋರಿನಿಂದ ಸುಮಾರು ೨೦೦೦ ಕಿ.ಮೀ.ನಷ್ಟು ದೂರದಲ್ಲಿದೆ. ಅದೇ ಸಮೀಪವಿರುವ ಜ್ವಾಲಾಮುಖಿ ಅಂಡಮಾನ ದ್ವೀಪದ ಸಮೂಹದಲ್ಲಿದೆ. ಕಿಲಾರಿಯ ಹತ್ತಿರ ಭಾರೀ ಜಲಾಶಯಗಳೂ ಇಲ್ಲ. ಭೂ ವಿಧಾನಗಳು ನಮ್ಮ ದೇಶವನ್ನು ಭೂಕಂಪ ಸಂಭವಿಸಬಹುದಾದ ಸಾಧ್ಯತೆಗಳ ಮೇಲೆ ಆರು ವಲಯಗಳನ್ನಾಗಿ ಮಾಡಿದ್ದಾರೆ. ಆದರೆ ಕಿಲಾರಿ ಮತ್ತು ಲಾತೂರ್‌ಗಳು ಅತೀ ಕನಿಷ್ಠ ಭೂಕಂಪ ಸಂಭವವಿರುವ ಪ್ರದೇಶಗಳು.

**ಭೂಕಂಪದ ಅಳತೆ**

ಸೆಪ್ಟೆಂಬರ್ ೯೩ರ ಈ ಭೂಕಂಪ ರಿಚಟರ್ ಮಾನದ ಪ್ರಕಾರ ೬.೦ ರಷ್ಟು ತೀವ್ರವಾಗಿತ್ತು. ರಿಚಟರ್ ಮಾನ ಭೂಕಂಪದ ಸಮಯದಲ್ಲಿ ಭೂಮಿ ಬಿಟ್ಟುಕೊಟ್ಟ ಶಕ್ತಿಯ ಪ್ರಮಾಣವನ್ನು ಸೂಚಿಸುವ ಒಂದು ಅಳತೆಗೋಲು. ಅದನ್ನು ಕಂಡು ಹಿಡಿಯಲು ಭೂಕಂಪ ಮಾಪನಗಳೆಂಬ ಉಪಕರಣಗಳನ್ನು ಬಳಸುತ್ತಾರೆ. ಭೂಕಂಪವೆಂದರೆ ಭೂಮಿ

ನಡುಗುವುದಷ್ಟೆ. ಈ ನಡುಕವನ್ನು ಭೂಕಂಪ ಮಾಪಕಗಳು ಗ್ರಾಫ್ ರೇಖೆಯ ರೂಪದಲ್ಲಿ ದಾಖಲಿಸುತ್ತಿದೆ. ಹೀಗೆ ಹಲವಾರು ಸ್ಥಳಗಳಲ್ಲಿ ಸ್ಥಾಪಿತವಾದ ಭೂಕಂಪ ಮಾಪಕಗಳಲ್ಲಿ ಗ್ರಾಫ್‌ನ ಆಧಾರದ ಮೇಲೆ ಭೂಕಂಪದ ತೀವ್ರತೆಯನ್ನು ಗಣಿಸಲಾಗುತ್ತದೆ. ರಿಚಟರ್ ಅಳತೆಮಾನದಲ್ಲಿ ಪ್ರತಿಯೊಂದು ಸಂಖ್ಯೆಯು ಅದರ ಹಿಂದಿನದಕ್ಕಿಂತ ೩೦ ಪಟ್ಟು ಮಿಗಿಲಾದ ಭೂಕಂಪವನ್ನು ಸೂಚಿಸುತ್ತದೆ. ರಿಚಟರ್ ಮಾನದಲ್ಲಿ ಅತ್ಯಂತ ಲಘು ಭೂಕಂಪವೆಂದರೆ ೩.೦ ರಿಂದ ೪.೦ರ ಒಳಗಿರುವಂತಹದ್ದು. ರಿಚಟರ್ ಮಾನದ ಪ್ರಕಾರ ಇದುವರೆಗೆ ದಾಖಲಾಗಿರುವ ಭೂಕಂಪಗಳಲ್ಲಿ ಅತ್ಯಂತ ತೀವ್ರ ಸ್ವರೂಪವಾದುದ್ದೆಂದರೆ ೧೯೦೬ರಲ್ಲಿ ಚಿಲಿ ದೇಶದಲ್ಲಾದದ್ದು, ಇದರ ತೀವ್ರತೆ ೯.೬ ಇತ್ತು.

**ಭೂಕಂಪ ಹಾಗೂ ಹಾನಿ**

ಕರ್ನಾಟಕದ ಕೆಲವು ಭಾಗಗಳಲ್ಲಿ, ಮಹಾರಾಷ್ಟ್ರದ ಲಾತೂರ್, ಕಿಲಾರಿಗಳಲ್ಲಿ ಭೂಮಿಯ 'ನಡುಕ' ಕೇವಲ ೨ ನಿಮಿಷ ಮಾತ್ರ. ನಡುಕ ತೆಗೆದುಕೊಂಡ ಬಲಿ ೩೦,೦೦೦. ಅನೇಕ ಊರುಗಳು ನೆಲಸಮವಾದವು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮನೆಗಳು ಕುಸಿದು ಈ ಸಾವು ನೋವುಗಳು ಉಂಟಾಗಿದೆ. ಅಂದರೆ ವಾಸ್ತವವಾಗಿ ಭೂಕಂಪನದಿಂದ ಕುಸಿದ ಮನೆಗಳು, ಒಡೆದ ಜಲಾಶಯ ಇತ್ಯಾದಿಗಳಿಂದ ಸಾವು ಸಂಭವಿಸುತ್ತದೆ. ಕಿಲಾರಿ ಮತ್ತು ಲಾತೂರುಗಳಲ್ಲಿ ಅಧ್ಯಯನ ನಡೆಸಿದ ತಜ್ಞರ ಪ್ರಕಾರ ಸತ್ತವರಲ್ಲಿ ಬಹುಪಾಲು ಸೂರು ಕುಸಿದು ಸತ್ತವರೇ. ಅಂದರೆ ಅಲ್ಲಿ ಕುಸಿದ ಮನೆಗಳ ಕೆಳಗೆ ಸಿಕ್ಕಿ ಸತ್ತ ಹೆಣಗಳನ್ನು ತೆಗೆಯಲು ಸುಮಾರು ೧೨ ದಿನಗಳು ಬೇಕಾಯ್ತು. ಭೂಕಂಪಗಳಾದಾಗ ಮನೆಗಳು ಕುಸಿಯುವುದೇಕೆ? ಭೂಕಂಪನದಿಂದ ಭೂಮಿಯ ಉದ್ದಕ್ಕೂ ಅಲೆಗಳು ಚಲಿಸುತ್ತದೆ. ಈ ಅಲೆಗಳಲ್ಲಿ ಎರಡು ವಿಧ. ಒಂದು ಅಲೆ, ಕೇಂದ್ರಸ್ಥಾನದಿಂದ ಹರಡುವಾಗ ಅಡ್ಡ ಬರುವ ಎಲ್ಲಾ ಮನೆಗಳು, ವಸ್ತುಗಳನ್ನು ಅಡ್ಡಡ್ಡಲಾಗಿ ಅಲುಗಿಸುತ್ತದೆ. ಎರಡನೆ ಬಗೆಯ ಅಲೆ ಈ ವಸ್ತುಗಳನ್ನು ಹಿಂದಕ್ಕೂ ಮುಂದಕ್ಕೂ ಅಲುಗಿಸುತ್ತದೆ. ಈ ಎರಡು ಅಲೆಗಳಿಂದ ಗೋಡೆಗಳು ಕುಸಿದು ಮನೆಯ ಸೂರು ಒಳಗಿದ್ದವರ ಮೇಲೆ ಬಿದ್ದು ಅಪಾರ ಹಾನಿ ಸಂಭವಿಸುತ್ತದೆ. ಈ ಅಲೆಗಳಿಗೆ ಸಿಕ್ಕಿ ಅಲುಗಾಡುವಷ್ಟು ಸಡಿಲವಾಗಿ ಕಟ್ಟಿದ ಗೋಡೆಗಳಿಗೆ ಅಪಾಯ ಹೆಚ್ಚು. ಕಿಲಾರಿಯ ದುರಂತದಲ್ಲಿ ಕುಸಿದ ಮನೆಗಳ ಗೋಡೆಗಳು ಭಾರವಾದ ಕಲ್ಲಿಟ್ಟಿಗೆಗಳಿಂದ ಕಟ್ಟಿದ್ದರಿಂದ ಅಧಿಕ ಸಾವು ನೋವಿಗೆ ಕಾರಣವಾಯ್ತು. ಭೂಕಂಪವನ್ನು ತಾಳುವ ಕಟ್ಟಡಗಳು ಹಗುರವಾಗಿ ಹಾಗೂ ಸ್ಥಿರವಾಗಿರಬೇಕು. ಅಡಿಪಾಯದ ಮಗ್ಗ ಸಡಿಲವಾಗಿರಬಾರದು. ಆದಷ್ಟು ಗಟ್ಟಿಯಾಗಿರಬೇಕು. ಒಟ್ಟಿನಲ್ಲಿ ಈ ಭೂಮಿಯ ನಡುಕವನ್ನು ತಾಳಿಕೊಳ್ಳಬಲ್ಲ ಕಟ್ಟಡಗಳನ್ನು ಕಟ್ಟುವುದೇ ಉಳಿದಿರುವ ಉಪಾಯ.

ಒಟ್ಟಿನಲ್ಲಿ ಸೆಪ್ಟೆಂಬರ್ ೩೦ರ ಭೂಕಂಪ ಜನಸ್ತೋಮದ ಮೇಲೆ ಆದ ಒಂದು ಆಘಾತ. ಈ ಭೂಕಂಪಗಳಿಂದ ಚೇತರಿಸಿಕೊಳ್ಳುವ ಶಕ್ತಿ ನಮಗಿದೆಯೇ? ನಮ್ಮ ಸರ್ಕಾರಗಳು ಭೂಕಂಪವನ್ನು ತಡೆಯಲು ಯಾವ ರೀತಿ, ಪೂರ್ವಭಾವಿ ಸಿದ್ಧತೆಗಳನ್ನು ಮಾಡಿಕೊಂಡಿವೆ? ಬೇರೆ ಬೇರೆ ಭೂಕಂಪ ರಹಿತ ದೇಶಗಳಿಂದ ನಾವು ಏಕೆ ಅನೇಕ ವಿಷಯಗಳನ್ನು ತಿಳಿದುಕೊಂಡಿಲ್ಲ? ಈ ರೀತಿ ಅನೇಕ ಪ್ರಶ್ನೆಗಳು ಬದುಕುಳಿದ ನೊಂದ

ಜೀವಿಗಳನ್ನು ಕಾಡುತ್ತಿದೆ. ಒಟ್ಟಿನಲ್ಲಿ ಕರ್ನಾಟಕದ ಉತ್ತರ ಭಾಗ ಮತ್ತು ಮಹಾರಾಷ್ಟ್ರದ ಉಸ್ಮಾನಾಬಾದ್ ಮತ್ತು ಲಾತೋರ್ ಜಿಲ್ಲೆಗಳನ್ನು ನಡುಕಾಡಿಸಿದ ಈ ಕಂಪನ ಜಗತ್ತಿನ ಭೂಕಂಪದ ಇತಿಹಾಸದ ಪ್ರತಿಗಳನ್ನು ಸೇರಿದೆ.

**ಜಗತ್ತಿನ ಐತಿಹಾಸಿಕ ಭೂಕಂಪಗಳು**

| ವರ್ಷ | ಸ್ಥಳ | ಸತ್ತವರ ಸಂಖ್ಯೆ |
|---|---|---|
| ೩೬೫ | ನಾಸೋಸ್, ಕ್ರೇಟ್ (ಗ್ರೀಸ್) | ೫೦,೦೦೦ |
| ೫೨೬ | ಅನಿಟಾಕ್, ಸಿರಿಯಾ | ೨,೫೦,೦೦೦ |
| ೮೪೪ | ಡೆಮಾಸ್ಕಸ್, ಸಿರಿಯಾ | ೫೦,೦೦೦ |
| ೮೪೭ | ಮಾಸಲ್, ಇರಾಕ್ | ೫೦,೦೦೦ |
| ೮೫೬ | ಕ್ಯುಮೀಸ್, ಡಾಯಗನ, ಇರಾನ್ | ೨,೦೦,೦೦೦ |
| ೮೯೩ | ಕಾಕಸಸ್ ರಷಿಯಾ (ಯು.ಎಸ್.ಎಸ್.ಆರ್.) | ೮೨,೦೦೦ |
| ೮೯೩ | ದಾಯಪುರ, ಭಾರತ | ೧,೮೦,೦೦೦ |
| ೮೯೩ | ಅರಕಾಬಿಲೆ, ಇರಾನ್ | ೧,೫೦,೦೦೦ |
| ೧೦೪೨ | ಪಾಟಮರ್, ಬಾರಟೆಕ್, ಸಿರಿಯಾ | ೫೦,೦೦೦ |
| ೧೧೩೮ | ಗಾನ್‌ಜಾ, ಆಲೆಪ್ಪೊ, ಸಿರಿಯಾ | ೨,೩೦,೦೦೦ |
| ೧೨೦೧ | ಈಜಿಪ್ಟ್ ಅಥವಾ ಸಿರಿಯಾ | ೧,೦೦,೦೦೦ |
| ೧೨೬೮ | ಸಿಲಿಸಿಯಾ, ಆನಲೋಲಿಯಾ, ಟರ್ಕಿ | ೬೦,೦೦೦ |
| ೧೨೯೦ | ಚೀನಾ | ೧,೦೦,೦೦೦ |
| ೧೫೫೬ | ಶೇನ್ಸಿ ಫ್ರಾವಿನ್ಸ್, ಚೀನಾ | ೮,೩೦,೦೦೦ |
| ೧೬೬೭ | ಶೇಮಕ್, ಅಜರ್‌ಬೈಜಾನ್ (ಯು.ಎಸ್.ಎಸ್.ಆರ್) | ೮೦,೦೦೦ |
| ೧೬೬೮ | ಶಾನ್‌ಟುಂಗ್ ಫ್ರಾವಿನ್ಸ್, ಚೀನಾ | ೫೦,೦೦೦ |
| ೧೬೯೩ | ಸಿಸಿಲಿ, ಕ್ಯಾಟನಿಯಾ (ಇಟಲಿ) | ೧,೦೦,೦೦೦ |
| ೧೭೦೩ | ಜೀಡೋ, ಜಪಾನ್ | ೨,೦೦,೦೦೦ |
| ೧೭೨೭ | ತಬ್ರೀಜ್, ಇರಾನ್ | ೭೭,೦೦೦ |
| ೧೭೩೦ | ಹಕ್ಕೆಡೋ, ಜಪಾನ್ | ೧,೩೭,೦೦೦ |
| ೧೭೩೧ | ಪೀಕಿಂಗ್, ಚೀನಾ | ೧,೦೦,೦೦೦ |
| ೧೭೩೭ | ಕಲ್ಕತ್ತಾ, ಭಾರತ | ೩,೦೦,೦೦೦ |
| ೧೭೩೯ | ಚೀನಾ | ೫೦,೦೦೦ |
| ೧೭೫೫ | ಲಿಸ್ಬನ್, ಪೋರ್ಚುಗಲ್, ಸ್ಪೈನ್, ಮೊರಾಕೋ | ೭೦,೦೦೦ |

| | | |
|---|---|---|
| ೧೭೮೦ | ತಬ್ರೀಜ್, ಇರಾನ್ | ೧,೦೦,೦೦೦ |
| ೧೮೧೧ | ನ್ಯೂ ಮ್ಯಾಡ್ರೀಡ್ (ಯು.ಎಸ್.ಎ.) | ----- |
| ೧೮೩೬ | ಉತ್ತರ ಜಪಾನ್ | ೨೮,೩೨೧ |
| ೧೮೫೭ | ತೇಜಾನ್ ಪಾನ್, ಕಾಲೀಪ್ (ಯು.ಎಸ್.ಎ.) | ---- |
| ೧೮೬೮ | ಇಕ್ವಾಡರ್ | ೭೦,೦೦೦ |
| ೧೮೮೩ | ಜಾವ, ಇವಂಡಾನ್ | ೧,೦೦,೦೦೦ |

**ಈ ಶತಮಾನದ ಕೆಲವು ಪ್ರಮುಖ ಭೂಕಂಪಗಳು**

| | | |
|---|---|---|
| ವರ್ಷ | ಸ್ಥಳ | ಸತ್ತವರ ಸಂಖ್ಯೆ |
| ೧೯೦೫ | ಜಮ್ಮು ಮತ್ತು ಕಾಶ್ಮೀರ, ಭಾರತ | ೧೯,೦೦೦ |
| ೧೯೦೬ | ಸ್ಯಾನ್ ಫ್ರಾನ್ಸಿಸ್ಕೋ, ಅಮೆರಿಕಾ | ೩,೦೦೦ |
| ೧೯೦೬ | ವಲ್‌ಪಾರೈಸೊ, ಚಿಲಿ | ೨೦,೦೦೦ |
| ೧೯೦೮ | ಮೆಸಿನಾ, ಇಟಲಿ | ೭೫,೦೦೦ |
| ೧೯೧೫ | ಅವೆಜಾನೊ, ಇಟಲಿ | ೨೯,೯೭೦ |
| ೧೯೨೦ | ಮಧ್ಯಚೀನಾ | ೨,೦೦,೦೦೦ |
| ೧೯೨೩ | ಟೋಕಿಯೋ-ಯೆಕೊಹಾಮ, ಜಪಾನ್ | ೧,೪೨,೮೦೨ |
| ೧೯೨೭ | ಮಧ್ಯ ಚೀನಾ | ೨,೦೦,೦೦೦ |
| ೧೯೩೨ | ಮಧ್ಯ ಚೀನಾ | ೭೦,೦೦೦ |
| ೧೯೩೫ | ಕ್ವೆಟ್ಟಾ ಭಾರತ (ಈಗ ಪಾಕಿಸ್ತಾನದಲ್ಲಿದೆ) | ೬೦,೦೦೦ |
| ೧೯೩೯ | ಚಿಲಾನ್, ಚಿಲಿ | ೩೦,೦೦೦ |
| ೧೯೩೯ | ಯರಿಚೆನ್ನಕಾನ್, ಟರ್ಕಿ | ೩೨,೦೦೦ |
| ೧೯೪೮ | ಆಶೆಕಾಬಾದ್, ಟರ್ಕ್‌ಮನ್ | ೧೯,೮೦೦ |
| ೧೯೫೦ | ಅಸ್ಸಾಂ, ಭಾರತ | ೫೭೪ |
| ೧೯೬೦ | ಅಗಾದಿರ್, ಮೊರೊಕ್ಕೊ | ೧೨,೦೦೦ |
| ೧೯೬೨ | ವಾಯವ್ಯ ಇರಾನ್ | ೧೦,೦೦೦ |
| ೧೯೬೮ | ಈಶಾನ್ಯ ಇರಾನ್ | ೧೧,೫೮೮ |
| ೧೯೭೦ | ಚಿಂಬೋಟೆ, ಪೆರು | ೬೬,೭೯೪ |
| ೧೯೭೨ | ದಕ್ಷಿಣ ಇರಾನ್ | ೫,೩೭೪ |
| ೧೯೭೨ | ಮನಾಗುವ, ನಿಕರಾಗುವ | ೫,೦೦೦ |

| | | |
|---|---|---|
| ೧೯೭೪ | ನೈಋತ್ಯ ಕಾಶ್ಮೀರ | ೫,೨೦೦ |
| ೧೯೭೭ | ಗ್ವಾಟೆಮಾಲ ನಗರ | ೨೩,೦೦೦ |
| ೧೯೭೬ | ಈಶಾನ್ಯ ಚೀನಾ | ೨,೪೦,೦೦೦ |
| ೧೯೭೮ | ಪೂರ್ವ ಇರಾನ್ | ೧೫,೦೦೦ |
| ೧೯೮೦ | ಎಲ್ ಅಸ್ನಾಮ್, ಅಲ್ಜೀರಿಯಾ | ೫,೦೦೦ |
| ೧೯೮೦ | ದಕ್ಷಿಣ ಇಟಲಿ | ೩,೧೦೫ |
| ೧೯೮೨ | ಯೆಮೆನ್ (ಸಾನ್) | ೨,೮೦೦ |
| ೧೯೮೩ | ಈಶಾನ್ಯ ತುರ್ಕಿ | ೧,೩೪೨ |
| ೧೯೮೫ | ದಕ್ಷಿಣ-ಮಧ್ಯ ಮೆಕ್ಸಿಕೊ | ೭,೨೦೦ |
| ೧೯೮೬ | ಎಲ್ ಸಾಲ್ವಡಾರ್ | ೧,೦೨೦ |
| ೧೯೮೭ | ಈಕ್ವಡಾರ್ | ೫,೦೦೦ |
| ೧೯೮೮ | ಆರ್ಮೇನಿಯ (ಹಿಂದಿ ಸೋವಿಯತ್ ಗಣರಾಜ್ಯ) | ೨೫,೦೦೦ |
| ೧೯೯೧ | ಉತ್ತರ ಕಾಶಿ, ಭಾರತ | ೧,೫೦೦ |
| ೧೯೯೩ | ಕಿಲಾರಿ, ಭಾರತ | ೩೦,೦೦೦ಕ್ಕೂ ಮೇಲೆ |
| (ವಿವಿಧ ಮೂಲಗಳಿಂದ) | | ಅಂದಾಜು |

---

## ಧಾರವಾಡ : ಅತಿವೃಷ್ಟಿ

*- ದಿನೇಶ ಅಮೀನಮಟ್ಟು*

---

ರೋಣ, ನರಗುಂದ, ನವಲಗುಂದ ತಾಲೂಕುಗಳು ಧಾರವಾಡ ಜಿಲ್ಲೆಯ ಅತ್ಯಂತ ಹಿಂದುಳಿದ ಪ್ರದೇಶಗಳು. ಇಂದಿಗೂ ಇಲ್ಲಿ ಸ್ವಚ್ಛ ಕುಡಿಯುವ ನೀರು ಪೂರೈಕೆಯಾಗಲಿ, ಸುಗಮ ಸಂಚಾರಕ್ಕೆ ರಸ್ತೆ ವ್ಯವಸ್ಥೆಯಾಗಲಿ ಇಲ್ಲ. ಈ ತಾಲೂಕುಗಳೇ ಕಳೆದ ಮಳೆಗಾಲದಲ್ಲಿ ವರುಣನ ಶಾಪಕ್ಕೀಡಾದವು. ನೀರಿಗಾಗಿ ಸದಾ ಕಣ್ಣೀರಿಡುತ್ತಾ ಬಂದ ಜನ ಕಳೆದ ಅಕ್ಟೋಬರ್‌ನಲ್ಲಿ ಕಣ್ಣೀರಿಟ್ಟಿದ್ದು ನೀರಿಗಾಗಿ ಅಲ್ಲ, ನೀರು ತಂದಿತ್ತ ಅನಾಹುತ ಕಂಡು.

ಅಕ್ಟೋಬರ್ ೧೭ರ ಸಂಜೆಯಿಂದ ಜಿಲ್ಲೆಯಾದ್ಯಂತ ಸುರಿದ ಮಳೆ ಈ ಮೂರು ತಾಲೂಕುಗಳ ಜನರನ್ನು ಪ್ರಾಣ ಕೈಯಲ್ಲಿಟ್ಟುಕೊಳ್ಳುವಂತೆ ಮಾಡಿತು. ಗದಗ-ಹುಬ್ಬಳ್ಳಿ ತಾಲೂಕುಗಳಲ್ಲಿಯೂ ಇದೇ ಸ್ಥಿತಿ.

ಹದಿನೇಳರ ಸಂಜೆಯಿಂದ ಹದಿನೆಂಟರ ರಾತ್ರಿವರೆಗೆ ಸುರಿದ ಮಳೆಯಿಂದ ಐದು ತಾಲೂಕುಗಳಲ್ಲಿ ಆರು ಮಂದಿ ಮೃತಪಟ್ಟರು. ೨೫ ಗ್ರಾಮಗಳು ನೆರೆ ನೀರಿನಲ್ಲಿ ಮುಳುಗಿ

ಹೋದವು. ಸುಮಾರು ೭೭೦ ಮನೆಗಳು ಕುಸಿದು ಬಿದ್ದವು. ೨೩ ಮನೆಗಳು ಹಾನಿಗೀಡಾದವು, ೪೦,೦೦೦ ಮಂದಿ ನೇರವಾಗಿ ತೊಂದರೆಗೀಡಾದರು.

ಸುಮಾರು ೨೫ ಸಾವಿರ ಹೆಕ್ಟೇರ್ ಪ್ರದೇಶದಲ್ಲಿನ ೨೭ ಲಕ್ಷ ರೂ ಮೌಲ್ಯದ ಬೆಳೆ ನಾಶವಾಯಿತು. ೨೦೦ ಕೆರೆ-ಕಾಲುವೆ ಒಡೆದು ಹೋದವು. ಸುಮಾರು ೧೫೦ ಸೇತುವೆಗಳು, ೭೫ ಕಟ್ಟಡಗಳು ಹಾನಿಗೀಡಾದವು. ಜಿಲ್ಲೆಯ ಅಕ್ಟೋಬರ್ ತಿಂಗಳ ಸಾಮಾನ್ಯ ಮಳೆ ಪ್ರಮಾಣ ೧೧೯.೮ ಮಿ.ಮಿ. ಆಗಿದ್ದರೆ ಕಳೆದ ಅಕ್ಟೋಬರ್‌ನಲ್ಲಿ ಬಿದ್ದ ಮಳೆ ೨೭೩ ಮಿ.ಮೀ. ದಿನಾಂಕ ೧೮ರಂದೇ ೨೪ ಮಿ.ಮೀ. ಮಳೆಯಾಗಿತ್ತು.

ಪ್ರತಿವರ್ಷ ಮಳೆ ಬಂದಾಗ ಉಕ್ಕಿ-ಸೊಕ್ಕಿ ಹರಿಯುವ ಬೆಣ್ಣೆಹಳ್ಳವೇ ಈ ಬಾರಿಯ ಬಹುಪಾಲು ಹಾನಿಗೆ ಕಾರಣವಾಯಿತು. ನವಲಗುಂದ ತಾಲೂಕಿನಲ್ಲಿರುವ ಈ ಹಳ್ಳ ಮಳೆಬಂದ ಕೂಡಲೆ ಉಕ್ಕಿ ಹರಿದು ದಂಡೆಯಲ್ಲಿರುವ ರೋಣ, ನರಗುಂದದ ಹಳ್ಳಿಗಳನ್ನು ಒಡಲಲ್ಲಿ ಕೆಲಕಾಲ ಬಚ್ಚಿಟ್ಟು ಬಿಡುಗಡೆ ಮಾಡಿತು.

ಇದರಿಂದಾಗಿ ನವಲಗುಂದದ ಗುಡಿಸಾಗರ, ತಡಸೂರು, ಯಮನೂರು, ರೋಣ ತಾಲೂಕಿನ ತುರುಹಿನಕೊಪ್ಪ, ಹಡಗಲಿ, ಅಸೂಟಿ, ಕರಮಡಿ, ನರಗುಂದ ತಾಲೂಕಿನ ಕುರ್ಲಗೇರಿ, ಸುರಕೊಂಡ ಹದಲಿ ಮೊದಲಾದ ಗ್ರಾಮಗಳು ದಿಗ್ಬಂದನಕ್ಕೆ ಒಳಗಾದವು. ಹೊಲದಲ್ಲಿನ ಬೆಳೆ ಕೊಚ್ಚಿಹೋದವು, ಮನೆ ಕುಸಿದುಬಿದ್ದವು, ದನಕರುಗಳು ತೇಲಿ ಹೋದವು. ರಸ್ತೆಗಳು ಕೊಚ್ಚಿ ಹೋದವು, ನೆರೆ ಇಳಿದಾಗ ಊರು ಸ್ಮಶಾನವಾಯಿತು.

ಅತಿವೃಷ್ಟಿಯಿಂದ ಹುಬ್ಬಳ್ಳಿ ಮತ್ತು ಗದಗ ಸೇರಿದಂತೆ ಐದು ತಾಲೂಕುಗಳಲ್ಲಿ ಒಟ್ಟು ೨೬.೮೭ ಕೋಟಿ ರೂ. ನಷ್ಟವಾಗಿದೆ ಎಂದು ಅಂದಾಜು ಮಾಡಲಾಗಿದೆ. ಖಾಸಗಿ ಆಸ್ತಿ-ಪಾಸ್ತಿ ನಷ್ಟ ಪರಿಹಾರಕ್ಕೆ ಜಿಲ್ಲಾ ಆಡಳಿತ ನಾಲ್ಕೂವರೆ ಕೋಟಿರೂ.ಗಳನ್ನು ಕೇಳಿದೆ. ಆ ಹಣ ಈಗ ಪೂರ್ಣವಾಗಿ ಕೈಸೇರಿದೆ. ಸಾರ್ವಜನಿಕ ಆಸ್ತಿಹಾನಿಗೆ ಎರಡು ಕೋಟಿ ಪರಿಹಾರವನ್ನು ಜಿಲ್ಲಾ ಆಡಳಿತ ಕೋರಿದೆ. ಮೇ ಅಂತ್ಯದ ವರೆಗೆ ೪೦ ಲಕ್ಷ ರೂ. ಮಾತ್ರ ಬಂದಿದೆ.

ಪ್ರತಿಬಾರಿ ನೆರೆ ಹಾವಳಿಗೀಡಾಗುವ ಬೆಣ್ಣೆಹಳ್ಳದ ೧೮ ಗ್ರಾಮಗಳನ್ನು ಸುರಕ್ಷಿತ ಸ್ಥಳಕ್ಕೆ ಸ್ಥಳಾಂತರಿಸಬೇಕೆಂಬ ಪ್ರಸ್ತಾವವನ್ನು ಜಿಲ್ಲಾ ಆಡಳಿತ ರಾಜ್ಯ ಸರ್ಕಾರಕ್ಕೆ ಕಳುಹಿಸಿದೆ. ಜನ ಈಗಿದ್ದಲ್ಲಿಯೇ ಮನೆ ಕಟ್ಟಲು ಅಣಿಯಾಗಿದ್ದಾರೆ. ಬೆಣ್ಣೆಹಳ್ಳಕ್ಕಿರುವ ಸೇತುವೆಯನ್ನು ಎತ್ತರಿಸಬೇಕೆಂದು ಹಾಗೂ ಹರಿದು ಬರುವ ನೀರನ್ನು ತಡೆದು ಕೃಷಿಗೆ ಉಪಯೋಗಿಸುವಂತೆ ಮಾಡಲು ಕಿರುಬ್ಯಾರೇಜ್‌ಗಳನ್ನು ಕಟ್ಟಬೇಕೆಂದು ಜಿಲ್ಲಾ ಆಡಳಿತ ಸರ್ಕಾರಕ್ಕೆ ಪ್ರಸ್ತಾವ ಸಲ್ಲಿಸಿದೆ.

## ಕಲ್ಬುರ್ಗಿ: ಭೂಕಂಪ

*- ರಾಜು ಅಡಕಳ್ಳಿ*

೧೯೯೩ ಕಲ್ಬುರ್ಗಿ ಜಿಲ್ಲೆಯ ಪಾಲಿಗೆ ಭಯಾನಕ ವರ್ಷವೆಂದೇ ಹೇಳಬಹುದು. ಕಾರಣ ೧೯೯೩ರಲ್ಲಿ ಈ ಜಿಲ್ಲೆ ನೈಸರ್ಗಿಕ ಪ್ರಕೋಪಗಳಿಗೆ ನಲುಗಿದಷ್ಟು, ಬಹುಶಃ ಇತ್ತೀಚಿನ ವರ್ಷಗಳಲ್ಲಿ ಯಾವತ್ತೂ ನಲುಗಿಲ್ಲ. 'ಬರ' ಈ ಜಿಲ್ಲೆಗೆ ಹೊಸತೇನಲ್ಲ. ಆದರೆ ೧೯೯೩ರಲ್ಲಿ 'ಬರ'ಕ್ಕೆ ಕಾರಣವಾದ ಅನಾವೃಷ್ಟಿಯ ಜತೆಗೆ ಭೂಕಂಪ ಮತ್ತು ಅತಿವೃಷ್ಟಿಯು ಸೇರಿಕೊಂಡು ಜನಜೀವನಕ್ಕೆ ಗರ ಬಡಿಯಿತು.

ಸಾಮಾನ್ಯವಾಗಿ ಜೂನ್ ಮೊದಲ ವಾರದಲ್ಲೇ ಪ್ರಾರಂಭವಾಗಬೇಕಿದ್ದ ಮಳೆ ಜುಲೈ ಮೊದಲವಾರದ ತನಕವೂ ಅಷ್ಟಾಗಿ ಬೀಳದೆ 'ಬರ'ದ ಛಾಯೆಯನ್ನು ಹುಟ್ಟಿಸಿತ್ತು. ನಂತರ ಜುಲೈ ಕೊನೆಯಲ್ಲಿ ಪರಿಸ್ಥಿತಿ ಕೊಂಚ ಸುಧಾರಿಸಿದರೂ, ಸೆಪ್ಟೆಂಬರ್ ಕೊನೆಯಲ್ಲಿ ಸಂಭವಿಸಿದ ಸರಣಿ ಭೂಕಂಪನಗಳು, ಅಕ್ಟೋಬರ್ ಎರಡನೇ ವಾರದಲ್ಲಿ ಉಂಟಾದ ಅತಿವೃಷ್ಟಿಯು ಜಿಲ್ಲೆಯ ಸಾಮಾಜಿಕ ಆರ್ಥಿಕ ಕ್ಷೇತ್ರಗಳ ಮೇಲೆ ವ್ಯತಿರಿಕ್ತ ಪರಿಣಾಮ ಉಂಟುಮಾಡಿದವು. ಈ ನಿಸರ್ಗ ವಿಕೋಪಗಳಿಂದ ರೈತ ಸಮುದಾಯಕ್ಕೆ ವಿಪರೀತ ಹೊಡೆತ ಬಿತ್ತು.



ಸೆಪ್ಟೆಂಬರ್ ೩೦ ರಂದು ಬೆಳಗಿನ ಜಾವ ೩ ಗಂಟೆ ೫೬ ನಿಮಿಷಕ್ಕೆ ೪೫ ಸೆಕೆಂಡುಗಳ ಕಾಲ ವಸುಂಧರೆಯು ಕಂಪಿಸಿ ಬೆಳಗಿನ ಸಕ್ಕರೆ ನಿದ್ದೆಯಲ್ಲಿದ್ದವರನ್ನು ಬಡಿದೆಬ್ಬಿಸಿದ್ದಷ್ಟೆ ಅಲ್ಲ, ಫಲವು ಬಗೆಯ ಕಷ್ಟ, ನಷ್ಟಗಳನ್ನೂ ಉಂಟುಮಾಡಿತು.

೩೦ರಂದೇ ಮತ್ತೆ ಬೆಳಗಿನ ಜಾವ ೪ ಗಂಟೆ ೨೧ ನಿಮಿಷಕ್ಕೆ, ೫ ಗಂಟೆ ೩೦ ನಿಮಿಷಕ್ಕೆ ಮತ್ತೆ ಲಘು ಕಂಪನಗಳಾದವು. ಅಷ್ಟರ ನಂತರವೂ ಹಲವಾರು ದಿನಗಳ ಕಾಲ ಆಗಾಗ ಲಘು ಕಂಪನಗಳು ಸಂಭವಿಸುತ್ತಲೇ ಇದ್ದವು. ಜಿಲ್ಲೆಯಲ್ಲಿ ೧೯೯೩ರಲ್ಲಿ ಒಟ್ಟು ೫೦ಕ್ಕಿಂತಲೂ ಹೆಚ್ಚು ಲಘು ಭೂಕಂಪನಗಳು ಸಂಭವಿಸಿವೆ ಎಂದು ವೈಜ್ಞಾನಿಕ ಉಪಕರಣಗಳಿಂದ ದೃಢಪಟ್ಟಿದೆ.

ಕಲ್ಬುರ್ಗಿ ಪಕ್ಕದಲ್ಲೇ ಇರುವ ಮಹಾರಾಷ್ಟ್ರದ ಲಾತೂರಿನ ಸುತ್ತಮುತ್ತ ಭೂಕಂಪದಿಂದ ಸಾವಿರಾರು ಮಂದಿ ಅಸುನೀಗಿದ್ದರೂ ಕಲ್ಬುರ್ಗಿ ಜಿಲ್ಲೆಯಲ್ಲಿ ಮಾತ್ರ ಭೂಕಂಪದಿಂದ ಯಾವುದೇ ಪ್ರಾಣಹಾನಿ ಸಂಭವಿಸಿಲ್ಲ ಎಂಬುದು ಸಮಾಧಾನಕರ. ಆದರೆ ಇಡೀ ಜಿಲ್ಲೆಯಲ್ಲಿ ಒಟ್ಟು ೬೫ ಮಂದಿ ಭೂಕಂಪನದಿಂದ ಗಾಯಗೊಂಡಿದ್ದಾರೆ. ಭೂಕಂಪನದಿಂದ ಜಿಲ್ಲೆಯಲ್ಲಿ ೧೦ ಮನೆಗಳು ಸರ್ಕಾರಿ ದಾಖಲೆಯ ಪ್ರಕಾರ ಸಂಪೂರ್ಣ ನಾಶವಾಗಿವೆ. ಆದರೆ ಸರ್ಕಾರಿ ದಾಖಲೆಯಲ್ಲಿ ಮನೆಯ ಎಲ್ಲಾ ಗೋಡೆಗಳು, ಸೂರು ಸಹಿತ ಬಿದ್ದರೆ ಮಾತ್ರ ಸಂಪೂರ್ಣ ನಾಶವಾದ ಮನೆಗಳು ಎಂದು ಪರಿಗಣಿಸಲಾಗುತ್ತದೆ. ಆದರೆ ವಾಸಿಸಲಿಕ್ಕೆ ಯೋಗ್ಯವಿಲ್ಲದ ಮನೆಗಳನ್ನೂ ಸಂಪೂರ್ಣ ನಾಶವಾದ ಮನೆಗಳೆಂದು ಪರಿಗಣಿಸಿದ್ದರೆ ಈ ಸಂಖ್ಯೆ ಮತ್ತಷ್ಟು ಹೆಚ್ಚುತ್ತಿತ್ತು. ಭೂಕಂಪದಿಂದ ಭಾಗಶಃ ಕುಸಿದಿರುವ ಮನೆಗಳ ಸಂಖ್ಯೆ ೧೯,೮೦೪. ಇವುಗಳ ಒಟ್ಟೊ ನಷ್ಟ ೧೪೯,೬೨೧ ಲಕ್ಷ ರೂ.ಗಳು ಎಂದು ಅಂದಾಜು ಮಾಡಲಾಗಿದೆ. ಭೂಕಂಪನದಿಂದ ಮುಖ್ಯವಾಗಿ ಜಿಲ್ಲೆಯ ಅಫಜಲಪುರ, ಆಳಂದ ಹಾಗೂ ಜೇವರ್ಗಿ ತಾಲೂಕುಗಳಲ್ಲಿ ಹೆಚ್ಚು ನಷ್ಟವುಂಟಾಗಿದೆ. ಭೀಮಾನದಿಯ ದಂಡೆಗುಂಟ ಆಗಿರುವ ಅನಾಹುತ ಇನ್ನೂ ಜಾಸ್ತಿ. ಆಳಂದ ತಾಲೂಕಿನ ಗದ್ಲೇಗಾಂವ್, ಖಜೂರಿ, ಆಳಂಗಾ, ತುಗಾಂವ್, ಜೇವರ್ಗಿ ತಾಲೂಕಿನ ಕೆ.ಬೋಸ್ಗಾ, ಅಫಜಲಪುರ ತಾಲೂಕಿನ ಬೋಸ್ಗಾ ಈ ಮುಂತಾದ ಹಲವು ಗ್ರಾಮಗಳು ವ್ಯಾಪಕ ಹಾನಿಯನ್ನು ಅನುಭವಿಸಿದ ಪ್ರದೇಶಗಳಾಗಿವೆ.

ಭೂಕಂಪನದಿಂದ ಒಟ್ಟು ೧೩೩ ಸೇತುವೆ ಮತ್ತು ಹಲವಾರು ಮೋರಿಗಳು ಶಿಥಿಲಗೊಂಡಿವೆ. ೧೨ ನೀರಾವರಿ ಕೆರೆಗಳಿಗೆ, ೪೫೦ ಸರ್ಕಾರಿ ಕಟ್ಟಡಗಳಿಗೆ ಧಕ್ಕೆಯುಂಟಾಗಿದೆ. ಇವುಗಳ ಒಟ್ಟು ಹಾನಿ ೨೦೬,೮೬೫ ಲಕ್ಷ ರೂ.ಗಳು ಬಿಡುಗಡೆಯಾಗಿದ್ದು ೫೪, ೫೦೦ ಲಕ್ಷ ರೂ.ಗಳು ಎಂದು ಸರ್ಕಾರ ಅಂದಾಜು ಮಾಡಿದೆ. ಗಾಯಗೊಂಡ ೬೫ ವ್ಯಕ್ತಿಗಳಿಗೆ ಪರಿಹಾರ ನೀಡಲಾಗಿದೆ. ಖಾಸಗಿ ಆಸ್ತಿ ಪಾಸ್ತಿಗಳ ದುರಸ್ತಿಗಾಗಿ ೨೦,೮೧೬ ಲಕ್ಷ ರೂ.ಗಳನ್ನು ವೆಚ್ಚ ಮಾಡಲಾಗಿದೆ.

ಒಟ್ಟು ೪೮ ಶಾಲಾ ಕಟ್ಟಡಗಳು, ೩೩ ಮಸೀದಿ ಹಾಗೂ ಮಂದಿರಗಳನ್ನು ಒಳಗೊಂಡ ಪ್ರಾರ್ಥನಾ ಗೃಹಗಳು ಹಾನಿಗೀಡಾಗಿವೆ. ಈ ಹಾನಿಗಾಗಿ ಸರ್ಕಾರದಿಂದ ೧೨೫.೦೦ ಲಕ್ಷ

ರೂ. ಗಳು ಬಿಡುಗಡೆಯಾಗಿದ್ದು ೫೪.೫೦೦ ಲಕ್ಷಗಳನ್ನು ಕಾಮಗಾರಿಗಳಿಗೆ ಮಂಜೂರಾತಿ ನೀಡಲಾಗಿದೆ. ಭೂಕಂಪನದಿಂದ ಹಾನಿಗೀಡಾದ ಒಟ್ಟು ಜಿಲ್ಲೆಯ ೨೨ ಗ್ರಾಮಗಳನ್ನು ಸ್ಥಳಾಂತರಿಸಬೇಕು ಎಂಬುದು ಸರ್ಕಾರದ ಪರಿಶೀಲನೆಯಲ್ಲಿದೆ. ಇವುಗಳಲ್ಲಿ ಜೇವರ್ಗಿ ತಾಲೂಕಿನ ಕೆ. ಬೋಸ್ಗಾ, ಸೈದಾಪುರ ಹಾಗೂ ಆಳಂದ ತಾಲೂಕಿನ ಗದ್ಲೇಗಾಂವ್ ಗ್ರಾಮಗಳನ್ನೂ ಸ್ಥಳಾಂತರಿಸಿ ಪುನರ್ವಸತಿ ಕಲ್ಪಿಸಿಕೊಡುವ ಕೆಲಸವನ್ನು ಈಗಾಗಲೇ ಕೈಗೆತ್ತಿಕೊಳ್ಳಲಾಗಿದೆ. ಪರಿಹಾರ ಪುನರ್ವಸತಿಗಳನ್ನು ಕಲ್ಪಿಸುವ ನಿಟ್ಟಿನಲ್ಲಿ ಸರ್ಕಾರ ಶ್ರಮಿಸುತ್ತಿದೆ.

**ನೆರೆಹಾವಳಿ**

ಅಕ್ಟೋಬರ್ ೯ ಹಾಗೂ ೧೦ ರಂದು ಜಿಲ್ಲೆಯಲ್ಲಿ ಬಿದ್ದ ಭಾರಿ ಮಳೆಯಿಂದಾಗಿ ಮುಖ್ಯವಾಗಿ ಯಾದಗಿರಿ, ಸುರಪುರ, ಶಹಪುರ ಭಾಗಗಳಲ್ಲಿ ಹೆಚ್ಚು ಹಾನಿ ಸಂಭವಿಸಿತು. ಈ ಮಳೆ ಅನಾಹುತದಿಂದ ೪೮೫೬.೪೦ ಹೆಕ್ಟೇರ್ ಪ್ರದೇಶಗಳಲ್ಲಿಯ ಬೆಳೆ ನಾಶವಾಗಿ ರೈತರಿಗೆ ೭೫.೪೬೬ ಲಕ್ಷ ರೂ.ಗಳ ಹಾನಿ ಉಂಟಾಗಿದೆ. ರಸ್ತೆ ಸೇತುವೆ, ನೀರಾವರಿ ಕೆರೆಗಳು, ಕಟ್ಟಡಗಳು ಇತ್ಯಾದಿ ಸರ್ಕಾರಿ ಆಸ್ತಿಪಾಸ್ತಿಗಳಿಗೆ ಒಟ್ಟು ೫೫೭.೫೧೦ ಲಕ್ಷ ರೂ.ಗಳ ಹಾನಿ ಎಂದು ಅಂದಾಜು ಮಾಡಲಾಗಿದೆ.

ಈಗಾಗಲೇ ನೆರೆ ಹಾವಳಿಯಲ್ಲಿ ಧಕ್ಕೆಯಾದ ಖಾಸಗಿ ಆಸ್ತಿ ಪಾಸ್ತಿಗಳ ದುರಸ್ತಿಗಾಗಿ ೬೯.೪೪೫ ಲಕ್ಷ ರೂ.ಗಳನ್ನು ವೆಚ್ಚಮಾಡಲಾಗಿದೆ ಎಂದು ಪರಿಹಾರ ಮತ್ತು ಪುನರ್ವಸತಿಯ ಉಸ್ತುವಾರಿ ಹೊತ್ತು ಶ್ರಮಿಸಿದ ಜಿಲ್ಲಾಧಿಕಾರಿಗಳು ತಿಳಿಸಿದ್ದಾರೆ.

ನೆರೆ ಹಾವಳಿಯಲ್ಲಿ ಒಟ್ಟು ೧೩೩ ರಸ್ತೆ ಹಾಗೂ ಸೇತುವೆಗಳಿಗೆ, ೩ ಸರ್ಕಾರಿ ಕಟ್ಟಡಗಳಿಗೆ, ೩೪ ಸಣ್ಣ ನೀರಾವರಿ ಕೆರೆಗಳಿಗೆ ಹಾನಿ ಉಂಟಾಗಿದೆ. ಅಂದರೆ ಒಟ್ಟು ೧೭೦ ಕಾಮಗಾರಿಗಳಲ್ಲಿ ೭೮ ಕಾಮಗಾರಿಗಳು ಪೂರ್ಣಗೊಂಡಿವೆ. ನೆರೆ ಹಾವಳಿಯಲ್ಲಿ ನೊಂದ ರೈತರಿಗೆ ಪರಿಹಾರ ನೀಡುವುದಕ್ಕಾಗಿ ಸರ್ಕಾರ ೨೫ ಲಕ್ಷ ರೂ.ಗಳನ್ನು ಬಿಡುಗಡೆ ಮಾಡಿ ವಿತರಿಸಿದೆ.

---

**ಬೆಳಗಾವಿ: ಅತಿವೃಷ್ಟಿ - ನೆರೆಹಾವಳಿ- ಭೂಕಂಪ** *- ಪದ್ಮರಾಜ್ ದಂಡಾವತಿ*

---

ಭೂಕಂಪದ ಹಿಂದೆಯೇ ಅಪ್ಪಳಿಸಿದ ಭಾರಿ ಮಳೆಯಿಂದ ಬೆಳಗಾವಿ ಜಿಲ್ಲೆಯಲ್ಲಿ ಮೂರು ತಿಂಗಳ ಒಂದು ಹಸುಗೂಸು ಮತ್ತು ೫೬ ವರ್ಷದ ಮಹಿಳೆ ಪ್ರಾಣ ಕಳೆದುಕೊಂಡರು.

ಮನೆ ಕುಸಿತ, ಜಖಂ ಮತ್ತು ರಸ್ತೆಸೇತುವೆ ಇತ್ಯಾದಿ ಸಾರ್ವಜನಿಕ ಆಸ್ತಿ ಪಾಸ್ತಿಗೆ ಆದ ಒಟ್ಟು ನಷ್ಟ ೧೧.೩೨ ಕೋಟಿ ರೂ.

ಜಿಲ್ಲೆಯ ಹತ್ತು ತಾಲೂಕುಗಳಲ್ಲಿ ಅಕ್ಟೋಬರ್ ತಿಂಗಳ ಈ ಅತಿವೃಷ್ಟಿಯಿಂದ ಹೆಚ್ಚುನಷ್ಟ ಅನುಭವಿಸಿದ್ದು ನಾಲ್ಕು ತಾಲೂಕುಗಳು: ಚಿಕ್ಕೋಡಿ, ಗೋಕಾಕ್, ಅಥಣಿ ಮತ್ತು ಬೈಲಹೊಂಗಲ. ಆದರೆ ಪ್ರಾಣ ಹಾನಿಯ ಎರಡು ಪ್ರಕರಣಗಳು ರಾಯಭಾಗದಿಂದಲೇ ಬಂದವು.

ನೆರೆಹಾವಳಿಯಿಂದ ಒಂದಲ್ಲ ಒಂದು ತರದಲ್ಲಿ ೭೬೭ ಗ್ರಾಮಗಳು ತೊಂದರೆಗೆ ಒಳಗಾದವು. ೧೨ ರಾಸುಗಳು ಗೋಡೆ ಬಿದ್ದು ಅಥವಾ ನೀರಿನಲ್ಲಿ ಕೊಚ್ಚಿಕೊಂಡು ಸತ್ತವು. ೨೯೬ ಮನೆಗಳು ಪೂರ್ತಿಯಾಗಿ ಕುಸಿದವು, ೭೧೭೦ ಮನೆಗಳು ಭಾಗಶಃ ಕುಸಿದವು. ಇದೆಲ್ಲದರಿಂದ ಆದ ಒಟ್ಟು ನಷ್ಟದ ಮೊತ್ತ ೧೨೪.೮೯ ಲಕ್ಷ ರೂ.ಗಳು. ಅಥಣಿ ತಾಲೂಕಿನಲ್ಲಿ ಒಟ್ಟು ೧೧೩ ಮನೆಗಳು ಕುಸಿದು ೨೦೬೩ ಮನೆಗಳು ಭಾಗಶಃ ಜಖಂಗೊಂಡವು. ಅತಿ ಹೆಚ್ಚು ನಷ್ಟವಾದದ್ದು ಈ ತಾಲೂಕಿನಲ್ಲಿಯೇ.

ಬೈಲಹೊಂಗಲ ತಾಲೂಕಿನ ೧೧,೧೮೫ ಹೆಕ್ಟೇರ್ ಮತ್ತು ಚಿಕ್ಕೋಡಿ ತಾಲೂಕಿನ ೧೧,೧೮೦ ಹೆಕ್ಟೇರ್ ಸೇರಿದಂತೆ ಜಿಲ್ಲೆಯಲ್ಲಿ ಒಟ್ಟು ೪೦,೩೨೫ ಹೆಕ್ಟೇರ್ ಪ್ರದೇಶಗಳಲ್ಲಿ ಬೆಳೆ ಭಾಗಶಃ ಅಥವಾ ಸಂಪೂರ್ಣ ನಾಶವಾಯಿತು. ಇದರಿಂದ ರೈತರು ಒಟ್ಟು ೬.೦೬ ಕೋಟಿ ರೂ. ನಷ್ಟ ಅನುಭವಿಸಿದರು. ಚಿಕ್ಕೋಡಿ ತಾಲೂಕು ಒಂದರಲ್ಲಿಯೇ ೨೦೬.೨೫ ಲಕ್ಷ ರೂ. ನಷ್ಟವಾದರೆ ಬೈಲಹೊಂಗಲ ತಾಲೂಕಿನಲ್ಲಿ ೯೭.೮೯ ಲಕ್ಷ ೩೩.೩ೂ. ನಷ್ಟವಾಯಿತು.

ಕಾಲುವೆ, ಸೇತುವೆ, ರಸ್ತೆ ಇತ್ಯಾದಿ ಸಾರ್ವಜನಿಕ ಆಸ್ತಿಗೆ ಆದ ನಷ್ಟದ ಪ್ರಮಾಣ ೪.೧ ಕೋಟಿ ರೂ ಎಂದು ಅಂದಾಜು ಮಾಡಲಾಗಿದೆ. ಈ ಬಾಬಿನಲ್ಲಿ ಅಥಣಿ ತಾಲೂಕು ಅನುಭವಿಸಿದ ನಷ್ಟದ ಪ್ರಮಾಣ ೯೪.೩೯ ಲಕ್ಷ ರೂ. ಗೋಕಾಕ್ (೭೫.೨೫ ಲಕ್ಷ ರೂ.) ಮತ್ತು ಬೆಳಗಾವಿ ತಾಲೂಕು (೬೩.೨೪ ಲಕ್ಷ ರೂ) ಗಳೂ ಗಣನೀಯ ಪ್ರಮಾಣದಲ್ಲಿ ನಷ್ಟ ಅನುಭವಿಸಿದವು.

**ಪರಿಹಾರ**

ತಕ್ಷಣ ಪರಿಹಾರ ಕೈಗೊಳ್ಳಲು ಸರ್ಕಾರ ೨೧ ಲಕ್ಷ ರೂ. ಬಿಡುಗಡೆ ಮಾಡಿತ್ತು. ನವೆಂಬರ್‌ನಲ್ಲಿ ಮತ್ತೆ ೫೦ ಲಕ್ಷ ರೂ. ಬಿಡುಗಡೆ ಮಾಡಿತು. ಫೆಬ್ರವರಿ ೧೯೯೪ ರಲ್ಲಿ ಸರ್ಕಾರ ಹೆಚ್ಚುವರಿಯಾಗಿ ಬಿಡುಗಡೆ ಮಾಡಿದ ಒಂದು ಕೋಟಿ ರೂ.ನಲ್ಲಿ ಜಿಲ್ಲಾ ಆಡಳಿತ ೪೧ ಲಕ್ಷ ರೂ.ಗಳನ್ನು ಬಿಡುಗಡೆ ಮಾಡಿತು. ಪರಿಹಾರ ನೀಡಿಕೆಯಲ್ಲಿ ಅಕ್ರಮ ತಡೆಯಲು ಚೆಕ್‌ಗಳ ಮುಖಾಂತರವೇ ಮೊತ್ತ ವಿತರಿಸಬೇಕೆಂದು ಜಿಲ್ಲಾ ಆಡಳಿತ ನಿರ್ದೇಶನ ನೀಡಿತ್ತು.

## ಭೂಕಂಪ

ಸೆಪ್ಟೆಂಬರ್ ೩೦ರ ರಾತ್ರಿಯ ಭೂಕಂಪ ಹೈದರಾಬಾದ್ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಮತ್ತು ಪಕ್ಕದ ಮಹಾರಾಷ್ಟ್ರದಲ್ಲಿ ಅಪಾರ ಜೀವ ಹಾನಿ ಮಾಡಿತು. ಆದರೆ ಬೆಳಗಾವಿ ಜಿಲ್ಲೆಯಲ್ಲಿ ಅದರ ಪರಿಣಾಮ ಅಷ್ಟು ತೀವ್ರವಾಗಿ ಇರಲಿಲ್ಲ.

ಅಂದಿನ ಭೂಕಂಪದಿಂದ ಒಂದೂ ಮನೆ ಬೀಳಲಿಲ್ಲ; ಯಾವ ಜೀವವೂ ನಷ್ಟವಾಗಲಿಲ್ಲ. ಆದರೆ ಮೂರು ತಾಲೂಕುಗಳಲ್ಲಿ ೭೧ ಮನೆಗಳು ಜಖಂಗೊಂಡವು. ಒಂದು ಮಗು ಸೇರಿದಂತೆ ಇಬ್ಬರು ಗಾಯಗೊಂಡರು.

ಅಥಣಿ ತಾಲೂಕಿನ ೧೯ ಗ್ರಾಮಗಳಲ್ಲಿ ೨೭ ಮನೆಗಳು ಜಖಂಗೊಂಡು ಹುಲಗಬಾಳಿಯಲ್ಲಿ ಒಬ್ಬರು ಗಾಯಗೊಂಡರು. ಗೋಕಾಕ್ ತಾಲೂಕಿನ ಪಟಗುಂದಿ ಗ್ರಾಮದಲ್ಲಿ ೧೯ ಮನೆಗಳು, ಮೆಳವಂಕಿಯಲ್ಲಿ ೧೫ ಮನೆಗಳು ಮತ್ತು ಮಸಗುಪ್ಪಿಯಲ್ಲಿ ೫ ಮನೆಗಳು ಜಖಂಗೊಂಡವು. ಮಸಗುಪ್ಪಿಯಲ್ಲಿ ನಾಲ್ಕು ವರ್ಷದ ಬಾಲಕ ಗಾಯಗೊಂಡ. ರಾಯಭಾಗ ತಾಲೂಕಿನಲ್ಲಿ ಬೇಮಲಾಪುರದಲ್ಲಿ ಮೂರು ಮನೆ ಹಾಗೂ ಒಂದು ದೇವಸ್ಥಾನ ಮತ್ತು ಸಿದ್ದಾಪುರದಲ್ಲಿ ಎರಡು ಮನೆಗಳು ಜಖಂಗೊಂಡವು.

ಇದರಿಂದ ತೊಂದರೆಗೆ ಒಳಗಾದ ಜನರಿಗೆ ಪರಿಹಾರಕೊಡಲು ೧೦ ಲಕ್ಷ ರೂ. ಮಂಜೂರು ಮಾಡಬೇಕು ಎಂದು ಜಿಲ್ಲಾ ಆಡಳಿತ ರಾಜ್ಯ ಸರ್ಕಾರವನ್ನು ಬಿನ್ನವಿಸಿತ್ತು.





# ವಿಜ್ಞಾನ - ತಂತ್ರಜ್ಞಾನ

*ಎಚ್. ಎಸ್. ನಿರಂಜನಾರಾಧ್ಯ*

---

ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಮಹತ್ತರವಾದ ಸಂಶೋಧನೆ ನಡೆಸುತ್ತಿರುವ ಭಾರತೀಯ ವಿಜ್ಞಾನ ಮಂದಿರ, ಬೆಂಗಳೂರು- ಈ ಸಂಸ್ಥೆಯ ವಿಜ್ಞಾನಿಗಳು ಪ್ರತಿ ವರ್ಷ ಹಲವಾರು ಪ್ರಶಸ್ತಿ ಹಾಗೂ ಪದಕಗಳನ್ನು ಪಡೆಯುವುದು ಸಾಮಾನ್ಯ ವಿಷಯ. ಆದರೆ ೧೯೯೩ ರಲ್ಲಿ ಭಾರತೀಯ ವಿಜ್ಞಾನ ಮಂದಿರದ ಇಬ್ಬರು ಕನ್ನಡಿಗರು ಪ್ರಶಸ್ತಿ ಪಡೆದದ್ದು ವಿಶೇಷ ಸಂಗತಿ. 'ಪರಿಸರ ವಿಜ್ಞಾನಗಳ ಕೇಂದ್ರ'ದ ಮುಖ್ಯಸ್ಥರಾದ ಯುವ ವಿಜ್ಞಾನಿ ಡಾ. ರಾಘವೇಂದ್ರ ಗಡಕ್ಕರ್‌ರವರು ಜೇನು, ಕಣಜ ಮುಂತಾದ ಸಾಮಾಜಿಕ ಜೀವನ ನಡೆಸುವ ಕೀಟಗಳ ಬಗ್ಗೆ ಸಂಶೋಧನೆ ನಡೆಸುತ್ತಿದ್ದಾರೆ. ಕೀಟಗಳಲ್ಲಿರುವ ಸಹಕಾರ, ತ್ಯಾಗದ ಪ್ರವೃತ್ತಿ ಹಾಗೂ ಅವುಗಳ ವಿಕಾಸದ ಬಗ್ಗೆ ಡಾ.ರಾಘವೇಂದ್ರ ಗಡಕ್ಕರ್‌ರವರ ಸಂಶೋಧನೆ ಹೊಸ ಬೆಳಕು ಚೆಲ್ಲುತ್ತದೆ. ಅಣು ಜೀವಶಾಸ್ತ್ರದ ಸಹಾಯಕ ಪ್ರಾಧ್ಯಾಪಕರಾಗಿರುವ ಡಾ. ಎಂ.ಆರ್.ಎನ್. ಮೂರ್ತಿಯವರು ಸೌಮ್ಯ ಸ್ವಭಾವದ ಹಾಗೂ ಕನ್ನಡದ ಬಗ್ಗೆ ವಿಶೇಷ ಕಾಳಜಿಯಿರುವ ವಿಜ್ಞಾನಿ. ಅವರು ನಡೆಸುತ್ತಿರುವ ಸಂಶೋಧನೆಯನ್ನು ಪ್ರೌಢಶಾಲೆ ಹಾಗೂ ಕಾಲೇಜಿನ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ವಿವರಿಸಿ, ವಿದ್ಯಾರ್ಥಿಗಳಲ್ಲಿ ಸಂಶೋಧನಾ ಪ್ರವೃತ್ತಿಯನ್ನು ಬೆಳೆಸಲು ಪ್ರೇರಣೆ ನೀಡುತ್ತಾರೆ.

ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಮಂಡಲಿಯು ಒಂದು ವಿಶೇಷ ಯೋಜನೆ ಹಮ್ಮಿಕೊಂಡಿತು. ನಮ್ಮ ರಾಜ್ಯದ ಎಲ್ಲ ಜಿಲ್ಲೆಗಳಲ್ಲಿರುವ ನೈಸರ್ಗಿಕ ಸಂಪನ್ಮೂಲಗಳ ದತ್ತಕಗಳ ನಕ್ಷೆ ಸಿದ್ಧಪಡಿಸಲು ಪ್ರಾರಂಭಿಸಿದೆ. ಮಣ್ಣುಗಳ ವಿಧ, ಫಲವತ್ತತೆ, ಖನಿಜ ಸಂಪತ್ತು, ಸಸ್ಯ, ಪ್ರಾಣಿ ಸಂಪತ್ತು, ಹವಾಮಾನ, ಮಳೆಯ ಪ್ರಮಾಣ ಮುಂತಾದ ಎಲ್ಲ ವಿವರಗಳನ್ನು ಸಂಗ್ರಹಿಸಿ, ಕಂಪ್ಯೂಟರ್ ಮೂಲಕ ನಕ್ಷೆ ತಯಾರಿಸಲಾಗುತ್ತದೆ. ಇದರಿಂದ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಅಥವಾ ಖಾಸಗಿಯವರು ವಿವಿಧ ಸ್ಥಳಗಳಲ್ಲಿ ಅಭಿವೃದ್ಧಿ ಯೋಜನೆ ಕೈಗೊಳ್ಳಲು ಸಹಾಯವಾಗುತ್ತದೆ. ಬಳ್ಳಾರಿ, ದಕ್ಷಿಣಕನ್ನಡ, ಉತ್ತರಕನ್ನಡ ಜಿಲ್ಲೆಗಳ ನಕ್ಷೆ ಅಂತಿಮ ಹಂತದಲ್ಲಿದೆ.

ಗ್ರಾಮೀಣ ಅಭಿವೃದ್ಧಿಗಾಗಿ ಯುಕ್ತ ತಂತ್ರಜ್ಞಾನ ರೂಪಿಸುವಲ್ಲಿ ಪ್ರಮುಖ

ಪಾತ್ರವಹಿಸುತ್ತಿರುವ ''ಅಸ್ತ್ರ '' ಸಂಸ್ಥೆಯು ಒಣಗಿಸುವ ಯಂತ್ರವನ್ನು ಸಿದ್ಧಪಡಿಸಿದೆ. ಸೌದೆಗಳನ್ನು ಉರಿಸುವುದರಿಂದ ಬರುವ ಬಿಸಿಗಾಳಿಯನ್ನು ಒಂದು ಪೆಟ್ಟಿಗೆಯೊಳಗೆ ನಾಳಗಳ ಮೂಲಕ ಹರಿಯಬಿಡಲಾಗುತ್ತದೆ. ಆ ಪೆಟ್ಟಿಗೆಯೊಳಗೆ ಟೊಮೆಟೊ, ಆಲೂಗಡ್ಡೆ, ಕ್ಯಾರೆಟ್ ಮುಂತಾದ ತರಕಾರಿಗಳನ್ನು ಹಾಗೂ ಏಲಕ್ಕಿ, ಲವಂಗ ಮುಂತಾದವನ್ನು ಇಟ್ಟು ಒಣಗಿಸಬಹುದು. ಹೀಗೆ ಒಣಗಿಸುವುದರಿಂದ ತರಕಾರಿಗಳನ್ನು ವಾರಗಟ್ಟಲೆ ಕೆಡದೆ ಇಡಬಹುದು ಹಾಗೂ ಬೇಕಾದಾಗ ಬಳಸಬಹುದು. ಅಲ್ಲದೆ ಮಳೆ ಬೀಳುತ್ತಿದ್ದರೂ ಒಣಗಿಸುವ ಯಂತ್ರದಲ್ಲಿಟ್ಟು ಬೇಕಾದ ವಸ್ತುಗಳನ್ನು ಆದಷ್ಟು ಶೀಘ್ರವಾಗಿ ಒಣಗಿಸಬಹುದು. ಈಗಾಗಲೇ ಈ ಯಂತ್ರಗಳನ್ನು ಉತ್ತರ ಕನ್ನಡದ ರೈತರು ಬಳಸುತ್ತಿದ್ದಾರೆ.

ಕರ್ನಾಟಕ ಸರ್ಕಾರವು ತಂತ್ರಜ್ಞಾನಕ್ಕಾಗಿ ಒಂದು ವಿಶ್ವವಿದ್ಯಾಲಯ ಹಾಗೂ ವೈದ್ಯ ವಿಜ್ಞಾನಕ್ಕಾಗಿ ಒಂದು ವಿಶ್ವವಿದ್ಯಾಲಯ ತೆರೆಯಲು ತಾತ್ವಿಕವಾಗಿ ಒಪ್ಪಿರುವುದು ೧೯೯೩ರ ವಿಶೇಷ ಸಂಗತಿ. ಖಾಸಗಿ ಇಂಜಿನಿಯರಿಂಗ್ ಹಾಗೂ ವೈದ್ಯಕೀಯ ಕಾಲೇಜುಗಳ ಡೊನೇಷನ್ ಹಾವಳಿ ತಪ್ಪಿಸಲು ರಾಜ್ಯ ಸರ್ಕಾರ ದೃಢ ನಿರ್ಧಾರ ತೆಗೆದುಕೊಂಡಿತು. ಪ್ರವೇಶ ಪರೀಕ್ಷೆ ನಡೆಸಿ, ಸೀಟುಗಳ ಹಂಚಿಕೆ ನಡೆಸಿತು. ಕೆಲವು ಸೀಟುಗಳಿಗೆ ಎಷ್ಟು ಡೊನೇಷನ್ ಸಂಗ್ರಹಿಸಬೇಕೆಂಬುದನ್ನು ಸಂಸ್ಥೆಯವರೊಡನೆ ಚರ್ಚಿಸಿ, ಯುಕ್ತ ತೀರ್ಮಾನ ಕೈಗೊಂಡಿತು.

ಬಹುರಾಷ್ಟ್ರೀಯ ಕಂಪನಿಗಳು ವ್ಯವಸಾಯದ ಕ್ಷೇತ್ರಕ್ಕೆ ಆಗಮಿಸುತ್ತಿರುವುದನ್ನು ಕರ್ನಾಟಕ ರಾಜ್ಯ ರೈತ ಸಂಘ ತೀವ್ರವಾಗಿ ವಿರೋಧಿಸಿತು. ಬೀಜಗಳ ಅಭಿವೃದ್ಧಿ ಹಾಗೂ ವಿತರಣೆಗಾಗಿ ಕರ್ನಾಟಕಕ್ಕೆ ಬಂದಿರುವ ಕಾರ್ಗಿಲ್ ಸಂಸ್ಥೆಯ ಕಛೇರಿಗೆ ರೈತ ಸಂಘ ಮುತ್ತಿಗೆ ಹಾಕಿತ್ತು. ಅಲ್ಲದೆ ರೈತ ಸಂಘದ ಆಶ್ರಯದಲ್ಲಿಯೇ ಸುಧಾರಿತ ಬೀಜಗಳನ್ನು ಸಿದ್ಧಪಡಿಸುವ ಪ್ರಯತ್ನ ನಡೆಸುವುದಾಗಿ ರೈತ ಸಂಘ ಹೇಳಿಕೆ ನೀಡಿದೆ. ವ್ಯಾಪಾರ ಹಾಗೂ ವಹಿವಾಟುಗಳ ಸಾಮಾನ್ಯ ಒಪ್ಪಂದ (GATT)ದ ಬಗ್ಗೆ ತೀವ್ರವಾದ ವಿರೋಧವನ್ನು ರಾಜ್ಯ ರೈತಸಂಘ, ಕರ್ನಾಟಕ ಪ್ರಾಂತ ರೈತ ಸಂಘ ಹಾಗೂ ಕೃಷಿ ಕೂಲಿಕಾರರ ಸಂಘ ವ್ಯಕ್ತಪಡಿಸಿದವು. ಸಭೆ ಸಮಾರಂಭ ಹಾಗೂ ವಿಚಾರ ಸಂಕಿರಣಗಳ ಮೂಲಕ ಗ್ಯಾಟ್ ಒಪ್ಪಂದಕ್ಕೆ ಭಾರತ ಸಹಿ ಹಾಕಿದರೆ ರೈತರಿಗೆ ತುಂಬ ಅನಾನುಕೂಲವಾಗುತ್ತದೆ ಎಂಬುದನ್ನು ತಿಳಿಸಲು ಈ ಸಂಘಗಳು ಪ್ರಯತ್ನಿಸಿದವು.

೧೯೯೩ರ ಜನವರಿ ಒಂದರಂದು ಚಿತ್ರದುರ್ಗದಲ್ಲಿ ರಾಜ್ಯಮಟ್ಟದ ವಿಜ್ಞಾನ ಬಾಲೋತ್ಸವವನ್ನು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಏರ್ಪಡಿಸಿತ್ತು. ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಬೆಂಗಳೂರಿನ ಹವ್ಯಾಸಿ ಖಗೋಳ ವೀಕ್ಷಕರ ಸಂಘ ಹಾಗೂ ಕ.ರಾ.ವಿ.ಪ. ಸಂಘಟಿಸಿದ್ದ ದೂರದರ್ಶಕ ತಯಾರಿಕೆ ಕಾರ್ಯಾಗಾರವು ಮೇ ೨ ರಿಂದ ೧೬ ರವರೆಗೆ ಬೆಂಗಳೂರಿನ ಜವಹರಲಾಲ್ ನೆಹರು ತಾರಾಲಯದಲ್ಲಿ ನಡೆಯಿತು. ಈ ಕಾರ್ಯಾಗಾರದಲ್ಲಿ ೨೦ ದೂರದರ್ಶಕಗಳನ್ನು ತಯಾರಿಸಿ ರಾಜ್ಯದ ಗ್ರಾಮೀಣ ಘಟಕಗಳಿಗೆ ನೀಡಲಾಯಿತು. ಕನ್ನಡದಲ್ಲಿ ವಿಜ್ಞಾನ

ಲೇಖನಗಳನ್ನು ಬರೆಯುವ ರೀತಿ-ನೀತಿ, ವಿಷಯ ಸಂಗ್ರಹಣೆ, ಭಾಷಾ ಬಳಕೆ, ಸಂವಹನ ವಿಧಾನ ಮುಂತಾದವನ್ನು ಉದಯೋನ್ಮುಖ ಲೇಖಕರಿಗೆ ಪರಿಚಯಿಸುವ ಉದ್ದೇಶದಿಂದ ಮೇ ೨೫ ರಿಂದ ೩೧ರವರೆಗೆ ವಿಜ್ಞಾನ ಲೇಖಕರ ಶಿಬಿರ ಕೋಲಾರದ ಚಿಂತಾಮಣಿಯಲ್ಲಿ ನಡೆಯಿತು. ಹೆಸರಾಂತ ವಿಜ್ಞಾನ ಲೇಖಕರಾದ ಶ್ರೀ ಎ.ಕೆ. ಭಟ್, ಪ್ರೊ. ಜೆ.ಆರ್. ಲಕ್ಷ್ಮಣರಾವ್, ಡಾ. ಪಿ.ಎಸ್. ಶಂಕರ್ ಮುಂತಾದವರು ಯುವ ಲೇಖಕರಿಗೆ ಮಾರ್ಗದರ್ಶನ ನೀಡಿದರು.

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ 'ವಿಜ್ಞಾನ ಸಂಗಾತಿ' ಎಂಬ ಶೀರ್ಷಿಕೆಯ ವಿಜ್ಞಾನ ಮಾಸಿಕ ಪ್ರಕಟಿಸಲು ಆರಂಭಿಸಿದ್ದು ೧೯೯೩ರ ಮತ್ತೊಂದು ವಿಶೇಷ ಸಂಗತಿ. ವಿದ್ಯಾರ್ಥಿಗಳನ್ನು ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟು ಆರಂಭವಾಗಿರುವ 'ವಿಜ್ಞಾನ ಸಂಗಾತಿ'ಯಲ್ಲಿ ವಿಜ್ಞಾನ-ತಂತ್ರಜ್ಞಾನದ ಸಂಗತಿಗಳನ್ನು ಸರಳವಾಗಿ ಹಾಗೂ ಆಕರ್ಷಕವಾಗಿ ತಿಳಿಸಲಾಗುತ್ತಿದೆ. ಆಂಗ್ಲಭಾಷೆಯ 'ಸೈನ್ಸ್ ರಿಪೋರ್ಟರ್'ನ ಲೇಖನಗಳನ್ನು ಅನುವಾದಿಸಿ ಪ್ರಕಟಿಸಲು ಪ್ರಾರಂಭಿಸಿದ 'ವಿಜ್ಞಾನ ಸಂಗಾತಿ'ಯಲ್ಲಿ ಇತ್ತೀಚೆಗೆ ಕನ್ನಡದಲ್ಲಿಯೇ ಮೂಲ ಲೇಖನಗಳು ಬರುತ್ತಿರುವುದು ಸಂತೋಷದ ವಿಷಯ. ಉತ್ತಮ ಲೇಖನ ಹಾಗೂ ಅಂದವಾದ ಮುದ್ರಣದಿಂದ ಇದು ಹೊರಬರುತ್ತಿದೆ.

ಐದನೆಯ ಅಖಿಲ ಕರ್ನಾಟಕ ವಿಜ್ಞಾನ ಸಮ್ಮೇಳನವು ಅಕ್ಟೋಬರ್ ೨೭ ರಿಂದ ೨೯ರವರೆಗೆ ಬೆಳಗಾವಿಯಲ್ಲಿ ನಡೆಯಿತು. ಎರಡು ವರ್ಷಗಳಿಗೊಮ್ಮೆ ನಡೆಯುವ ವಿಜ್ಞಾನ ಸಮ್ಮೇಳನಗಳನ್ನು ಕ.ರಾ.ವಿ.ಪ. ಸಂಘಟಿಸುತ್ತದೆ. ಈ ಸಮ್ಮೇಳನದಲ್ಲಿ ರಾಜ್ಯದ ಎಲ್ಲ ಜಿಲ್ಲೆಗಳಿಂದ ವಿಜ್ಞಾನಿಗಳು, ತಂತ್ರಜ್ಞಾನಿಗಳು, ಅಧ್ಯಾಪಕರು ಪ್ರತಿನಿಧಿಗಳಾಗಿ ಬಂದಿದ್ದರು. ಸುಮಾರು ೪೦೦ ಪ್ರತಿನಿಧಿಗಳಿದ್ದ ಈ ಸಮ್ಮೇಳನದಲ್ಲಿ ಕರ್ನಾಟಕದ ಜೀವಿ ವೈವಿಧ್ಯತೆ, ವಿಜ್ಞಾನ-ತಂತ್ರಜ್ಞಾನದ ರಾಷ್ಟ್ರಸಂಹಿತ, ಗ್ಯಾಟ್ ಹಾಗೂ ಜನ ವಿಜ್ಞಾನ ಚಳವಳಿಯ ಬಗ್ಗೆ ವಿಚಾರ ಗೋಷ್ಠಿಗಳು ನಡೆದವು. ರಾಜ್ಯಸರ್ಕಾರದ ವಿಜ್ಞಾನ ಮತ್ತು ತಂತ್ರಜ್ಞಾನದ ಸಚಿವರಾಗಿದ್ದ ಶ್ರೀ ಎನ್.ಜಿ. ಹಾಲಪ್ಪನವರು ಸಮ್ಮೇಳನವನ್ನು ಉದ್ಘಾಟಿಸಿದರು. ಕರ್ನಾಟಕ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಡಾ. ಎಸ್. ರಾಮೇಗೌಡ ಮುಖ್ಯ ಅತಿಥಿಗಳಾಗಿದ್ದರು. ಕುವೆಂಪು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಡಾ. ಗಜೇಂದ್ರಗಡ್‌ರವರು ಅಧ್ಯಕ್ಷತೆ ವಹಿಸಿದ್ದರು. ಡಾ. ಎನ್.ಎ. ಮಧ್ಯಸ್ಥ, ಶ್ರೀ ಜಯಕುಮಾರ ಅನಗೋಳ, ಪ್ರೊ. ಜಗನ್ನಾಥ್, ಪ್ರೊ ಎಂ.ಎ. ಸೇತೂರಾವ್, ಶ್ರೀ ಬಿ.ಕೆ. ಸುಂದರೇಶ್, ಶ್ರೀ ಸೂಪ್ಪಿನ್, ಶ್ರೀ ಎಚ್.ಎಸ್. ನಿರಂಜನಾರಾಧ್ಯ ಮುಂತಾದವರು ಪ್ರಬಂಧಗಳನ್ನು ಮಂಡಿಸಿದರು. ಕವಿ ಶಾಂತರಸ ಅವರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿಯನ್ನು ಏರ್ಪಡಿಸಲಾಗಿತ್ತು. ವಿಜ್ಞಾನ ವಸ್ತು ಪ್ರದರ್ಶನ, ಬೆಳಗಾವಿ ವಿಜ್ಞಾನ ಕೇಂದ್ರದ ಪ್ರದರ್ಶನಗಳು ವಿದ್ಯಾರ್ಥಿಗಳ ಪ್ರಮುಖ ಆಕರ್ಷಣಾ ಕೇಂದ್ರಗಳಾಗಿದ್ದವು.

ಕೇಂದ್ರ ಸರ್ಕಾರದ ವಿಜ್ಞಾನ ಮತ್ತು ತಂತ್ರಜ್ಞಾನದ ರಾಷ್ಟ್ರೀಯ ಮಂಡಲಿ (UCSTC)ಯ ಸಹಾಯದಿಂದ ಕ.ರಾ.ವಿ.ಪ. ೩೫೭ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ೬

ಕಾರ್ಯಾಗಾರಗಳಲ್ಲಿ ಸುಲಭ ಬೆಲೆ ವಿಜ್ಞಾನ ಬೋಧನ ಸಾಮಗ್ರಿಗಳ ತಯಾರಿಕೆಯಲ್ಲಿ ತರಬೇತಿ ನೀಡಿತು. ನವೆಂಬರ್-ಡಿಸೆಂಬರ್ ತಿಂಗಳುಗಳಲ್ಲಿ ಈ ಕಾರ್ಯಾಗಾರಗಳನ್ನು ಧಾರವಾಡ, ಮುಲ್ಕಿ, ಬೆಳಗಾವಿ, ಮೈಸೂರು, ರಾಯಚೂರು ಮತ್ತು ಚಿಂತಾಮಣಿಗಳಲ್ಲಿ ನಡೆಸಲಾಯಿತು.

ಯಾವುದೇ ಸಮಸ್ಯೆಯನ್ನು ಗುರುತಿಸಿ, ಸೂಕ್ಷ್ಮವಾಗಿ ವೀಕ್ಷಿಸಿ, ಪ್ರಯೋಗ ನಡೆಸಿ, ದತ್ತಕಗಳನ್ನು ಸಂಗ್ರಹಿಸಿ, ವಿಶ್ಲೇಷಿಸಿ, ಸಮಸ್ಯೆಯನ್ನು ಬಗೆಹರಿಸಲು ಪರಿಹಾರ ಸೂಚಿಸುವುದು ವಿಜ್ಞಾನದ ವಿಧಾನ. ಕಂಡು ಹಿಡಿದ ವಿಷಯವನ್ನು ವ್ಯವಸ್ಥಿತವಾಗಿ ದಾಖಲಿಸುವುದೇ ವಿಜ್ಞಾನದ ಸಂಶೋಧನಾ ಲೇಖನ. ಹೀಗೆ ಸಂಶೋಧಿಸಿದ ಲೇಖನಗಳನ್ನು ಸಹ ವಿಜ್ಞಾನಿಗಳ ಜೊತೆ ಚರ್ಚೆಮಾಡಿ ವಿಮರ್ಶೆ ಮಾಡಿಕೊಳ್ಳಲು ವಿಜ್ಞಾನಿಗಳು ಆಗಾಗ್ಗೆ ವಿಜ್ಞಾನ ಸಮಾವೇಶಗಳಲ್ಲಿ ಸೇರುತ್ತಾರೆ. ವಿಜ್ಞಾನದ ವಿಧಾನ, ಸಂಶೋಧನಾ ಪ್ರವೃತ್ತಿ ಹಾಗೂ ವೈಜ್ಞಾನಿಕ ಮನೋಭಾವ ಮಕ್ಕಳಲ್ಲಿ ಮೂಡಲೆಂಬ ಉದ್ದೇಶದಿಂದ ೧೯೯೩ರಲ್ಲಿ ರಾಜ್ಯಮಕ್ಕಳ ವಿಜ್ಞಾನ ಸಮಾವೇಶವನ್ನು ನವೆಂಬರ್ ೨೯ ಮತ್ತು ೩೦ ರಂದು ಚಿತ್ರದುರ್ಗದಲ್ಲಿ ನಡೆಸಲಾಯಿತು. ಅದಕ್ಕಿಂತ ಮೊದಲು ''ನಿಮ್ಮ ಪರಿಸರ ತಿಳಿಯಿರಿ'' ಎಂಬ ಘೋಷಣೆಯಡಿಯಲ್ಲಿ ಪಕ್ಷಿ ವೀಕ್ಷಣೆ, ಆಕಾಶ ವೀಕ್ಷಣೆ, ಮರಗಳ ಪರಿಶೋಧನೆ, ಮೂಢ ನಂಬಿಕೆಗಳ ಅಧ್ಯಯನ, ಮಾಲಿನ್ಯ ಅಧ್ಯಯನ ಮುಂತಾದವನ್ನು ವಿಜ್ಞಾನದ ವಿಧಾನದಲ್ಲಿ ಅಧ್ಯಯನ ಮಾಡುವ ಬಗ್ಗೆ ತರಬೇತಿಯನ್ನು ಎಲ್ಲ ಜಿಲ್ಲೆಗಳ ಆಸಕ್ತ ವಿದ್ಯಾರ್ಥಿಗಳಿಗೆ ನೀಡಲಾಯಿತು. ವಿಷಯವೊಂದನ್ನು ಆಯ್ಕೆ ಮಾಡಿಕೊಂಡು ೨-೩ ತಿಂಗಳ ಕಾಲ ವಿದ್ಯಾರ್ಥಿಗಳ ತಂಡಗಳು ಅಧ್ಯಾಪಕರೊಬ್ಬರ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಬೇಕು. ಅನಂತರ ಅವರು ವರದಿಯನ್ನು ಪ್ರಬಂಧದ ರೂಪದಲ್ಲಿ ಬರೆಯಬೇಕು. ಹಾಗೆ ಅಧ್ಯಯನ ಮಾಡಿದ ವಿದ್ಯಾರ್ಥಿ ತಂಡಗಳು ಜಿಲ್ಲಾ ಮಕ್ಕಳ ವಿಜ್ಞಾನ ಸಮಾವೇಶದಲ್ಲಿ ಪ್ರಬಂಧ ಮಂಡಿಸಬೇಕು. ಅತ್ಯುತ್ತಮವಾದ ತಂಡಗಳಿಗೆ ಬಹುಮಾನ ನೀಡಲಾಯಿತು. ಈ ವಿಧಾನದಲ್ಲಿ ಬಹುತೇಕ ಜಿಲ್ಲೆಗಳಲ್ಲಿ ಮಕ್ಕಳ ವಿಜ್ಞಾನ ಸಮಾವೇಶಗಳನ್ನು ನವೆಂಬರ್‌ನಲ್ಲಿ ನಡೆಸಲಾಯಿತು. ಅನಂತರ ರಾಜ್ಯಮಟ್ಟದ ಮಕ್ಕಳ ವಿಜ್ಞಾನ ಸಮಾವೇಶ ನಡೆಯಿತು. ಅತ್ಯುತ್ತಮವಾದ ೧೫ ತಂಡಗಳಿಗೆ ಬಹುಮಾನ ನೀಡಲಾಯಿತು. ಈ ೧೫ ತಂಡಗಳು ದೆಹಲಿಯ ಜವಹರಲಾಲ್ ಬಾಲಭವನದಲ್ಲಿ ಡಿಸೆಂಬರ್ ೨೦ ರಿಂದ ೨೩ರವರೆಗೆ ನಡೆದ ರಾಷ್ಟ್ರೀಯ ಮಕ್ಕಳ ವಿಜ್ಞಾನ ಸಮಾವೇಶದಲ್ಲಿ ಭಾಗವಹಿಸಿದ್ದವು. ಆ ಸಮಾವೇಶದಲ್ಲಿ ನಮ್ಮ ರಾಜ್ಯದ ೪ ತಂಡಗಳಿಗೆ ಬಹುಮಾನ ದೊರಕಿತು. ತಂಡಗಳ ನಾಯಕರಾದ ಕು. ಆಯಿಷಾ, ಸೇಕ್ರೆಡ್ ಹಾರ್ಟ್ ಬಾಲಕಿಯರ ಪ್ರೌಢಶಾಲೆ ಮಂಗಳೂರು, ಕು.ಎ. ಮಂಜುಳಾ ಪದವಿಪೂರ್ವ ಕಾಲೇಜು ದಾವಣಗೆರೆ, ಕು. ಅಖಿಲ್, ಪಿ. ಶೆಣೈ, ವಿಶ್ವಮಂಗಳ ಪ್ರೌಢಶಾಲೆ, ಮಂಗಳೂರು ಮತ್ತು ಕು. ಎ.ಆರ್. ಶೈಲಜಾ ಕೆ.ಜಿ.ಎಫ್. ಕೋಲಾರ ಇವರು ಬಹುಮಾನ ಸ್ವೀಕರಿಸಿದರು. ಒಟ್ಟಾರೆ ಈ ಸಮಾವೇಶಗಳಿಂದ ಮಕ್ಕಳಿಗೆ ವಿಜ್ಞಾನದ, ಸಂಶೋಧನೆಯ ವಿಧಾನ ಪರಿಚಯವಾಯಿತು. ಈ ಸಮಾವೇಶಗಳನ್ನು ಎನ್.ಸಿ.ಎಸ್.ಟಿ.ಸಿ. ನೆಟ್ ವರ್ಕ್ ಹಾಗೂ ಕ.ರಾ.ವಿ.ಪ. ಸಂಘಟಿಸಿದ್ದವು.

# ಹೈನುಗಾರಿಕೆ

*ಬಿ.ವಿ. ರಜನಿ*

---

ಗುಜರಾತಿನ 'ಆನಂದ್' ಮಾದರಿಯನ್ನು ಆಧರಿಸಿ ವ್ಯಾಪಕ ಹೈನುಗಾರಿಕೆ ಅಭಿವೃದ್ಧಿ ಯೋಜನೆಯನ್ನು ಕರ್ನಾಟಕ ಹೈನುಗಾರಿಕೆ ಅಭಿವೃದ್ಧಿ ನಿಗಮವು, ೩೦ ಮಿಲಿಯನ್ ಡಾಲರ್‌ಗಳ ಸಹಾಯವನ್ನು ಒಳಗೊಂಡ ೫೧ ಕೋಟಿಗಳ ವೆಚ್ಚದಲ್ಲಿ ಕರ್ನಾಟಕದಲ್ಲಿ ಪ್ರಾರಂಭಿಸಿತು. ಮುಖ್ಯವಾಗಿ ಯೋಜನೆಯು ದಕ್ಷಿಣ ಕರ್ನಾಟಕದ ೮ ಜಿಲ್ಲೆಗಳನ್ನು ಒಳಗೊಂಡಿದೆ. ವಿಶ್ವಬ್ಯಾಂಕಿನ ಈ ಯೋಜನೆಯು ಯಶಸ್ವಿಯಾಗಿ ಮುಕ್ತಾಯಗೊಂಡ ನಂತರ ೮೨.೬೧ ಕೋಟಿ ರೂ. ವೆಚ್ಚದಲ್ಲಿ ಕ್ಷೀರಧಾರೆ-೨ (ಆಪರೇಷನ್ ಫ್ಲಡ್-೨) ಎಂಬ ಬೃಹತ್ ಯೋಜನೆಯೊಂದನ್ನು ಪ್ರಾರಂಭಿಸಲಾಯಿತು. ಈ ಯೋಜನೆಯನ್ನು ಕಾರ್ಯಗತಗೊಳಿಸುವುದಕ್ಕಾಗಿ ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಲಿ ನಿಯಮಿತವನ್ನು (ಕೆ.ಎಂ.ಎಫ್) ಕಾರ್ಯಭಾರೀ ಸಂಸ್ಥೆಯಾಗಿ (ಏಜೆನ್ಸಿಯಾಗಿ) ನಿಯಮಿಸಲಾಯಿತು.

ಕರ್ನಾಟಕದಲ್ಲಿ ಹೈನುಗಾರಿಕೆ ಅಭಿವೃದ್ಧಿಯ ಪ್ರಮುಖ ಸಂಸ್ಥೆಯಾದ 'ಕೆ.ಎಂ.ಎಫ್' ಹೈನುಗಾರಿಕೆ ಅಭಿವೃದ್ಧಿ ಚಟುವಟಿಕೆಗಳನ್ನು ಕಾರ್ಯಗತಗೊಳಿಸುವ ಸಹಕಾರೀ ಶೃಂಗ ಸಂಸ್ಥೆಯಾಗಿದೆ. ಹೈನುಗಾರಿಕೆ ಅಭಿವೃದ್ಧಿಗಾಗಿ ಕೆ.ಎಂ.ಎಫ್. ಹಮ್ಮಿಕೊಂಡ ಕೆಲವು ಮುಖ್ಯ ಧ್ಯೇಯೋದ್ದೇಶಗಳು:

ರೈತ ಸದಸ್ಯರು ಉತ್ಪಾದಿಸುವ ಸಂಪೂರ್ಣ ಹಾಲಿಗೆ ಭರವಸೆಯುಳ್ಳ ಹಾಗೂ ಪ್ರತಿಫಲದಾಯಕ ಮಾರುಕಟ್ಟೆಯನ್ನು ಒದಗಿಸುವುದು.

ನಗರ ಗ್ರಾಹಕರಿಗೆ ಆರೋಗ್ಯಕರ ಹಾಲನ್ನು ಒದಗಿಸುವುದು.

ಹೈನುಗಾರಿಕೆ ಚಟುವಟಿಕೆಗಳನ್ನು ನಿರ್ವಹಿಸುವುದಕ್ಕಾಗಿ ಸಹಕಾರೀ ವಲಯದಲ್ಲಿ ಗ್ರಾಮಮಟ್ಟದ ಸಂಸ್ಥೆಗಳನ್ನು ರಚಿಸುವುದು.

ಹಾಲು ಉತ್ಪಾದನಾ ತಾಂತ್ರಿಕ ಸೌಲಭ್ಯಗಳು, ಸಂಸ್ಕರಣಾ ಸೌಲಭ್ಯಗಳನ್ನು ಒದಗಿಸುವುದರ ಬಗ್ಗೆ ಖಚಿತಪಡಿಸಿಕೊಳ್ಳುವುದು ಮತ್ತು ವೈಜ್ಞಾನಿಕ ಹೈನುಗಾರಿಕೆಯ ಜ್ಞಾನದ ಪ್ರಸಾರ.

ಗ್ರಾಮ ಮಟ್ಟದಲ್ಲಿ ಸ್ವ-ಉದ್ಯೋಗ ಅವಕಾಶಗಳನ್ನು ಕಲ್ಪಿಸುವುದು. ನಗರ

ಪ್ರದೇಶಗಳಿಗೆ ವಲಸೆ ಹೋಗುವುದನ್ನು ತಡೆಗಟ್ಟುವುದು. ನಗದು ಮಿತವ್ಯಯ ಪ್ರಾರಂಭ ಮತ್ತು ನಿಯತ ಆದಾಯದ ಅವಕಾಶ ಕಲ್ಪಿಸುವುದರ ಮೂಲಕ ಗ್ರಾಮೀಣಾಭಿವೃದ್ಧಿಗೆ ಅನುಕೂಲ ಮಾಡಿಕೊಡುವುದು.



ಹೈನುಗಾರಿಕೆ ಅಭಿವೃದ್ಧಿಯ ತತ್ವವು ಮಧ್ಯವರ್ತಿಗಳನ್ನು ತೆಗೆದುಹಾಕಿ, ಹಾಲು ಉತ್ಪಾದಕರೇ ಸ್ವತಃ ಮಾಲೀಕರಾಗಿದ್ದು ವೃತ್ತಿಪರರನ್ನು ನೇಮಿಸಿಕೊಂಡು ಅವರೇ ಸ್ವತಃ ನಿರ್ವಹಿಸುವಂಥ ಸಂಸ್ಥೆಗಳನ್ನು ಸಂಘಟಿಸುವುದಾಗಿದೆ. ಹಾಲು ಉತ್ಪಾದಕರಿಗೆ ಗರಿಷ್ಠ ಪ್ರತಿಫಲವನ್ನು ನೀಡುವುದಕ್ಕಾಗಿ ಉತ್ಪಾದನಾ ವೆಚ್ಚವನ್ನು ಕಡಿಮೆ ಮಾಡುವ ಮೂಲಕ ಆರ್ಥಿಕ ಏಳ್ಗೆಯನ್ನು ಸಾಧಿಸುವುದು ಮತ್ತು ಇದೇ ವೇಳೆಗೆ ನಗರ ಗ್ರಾಹಕರಿಗೆ ಸಾಧ್ಯವಾದಷ್ಟು ಕನಿಷ್ಠ ಬೆಲೆಯಲ್ಲಿ ಆರೋಗ್ಯಕರ ಹಾಲನ್ನು ಒದಗಿಸುವುದಾಗಿದೆ. ಅಂತಿಮವಾಗಿ ಸಹಕಾರೀ ಸಂಸ್ಥೆಗಳ ಸಂಕೀರ್ಣವ್ಯೂಹ ಬಂಧವು ಒಂದು ಕಡೆಯಲ್ಲಿ ಗ್ರಾಮೀಣ ಉತ್ಪಾದಕರ ಸಮೂಹ ಮತ್ತು ಇನ್ನೊಂದೆಡೆಯಲ್ಲಿ ಲಕ್ಷಾಂತರ ಜನಸಾಮಾನ್ಯರ, ನಗರ ಗ್ರಾಹಕರ ನಡುವೆ ಸೇತುವೆಯನ್ನು ನಿರ್ಮಿಸುತ್ತದೆ; ರಾಜ್ಯದ ಸಾಮಾಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ಅಭಿವೃದ್ಧಿಯನ್ನು ಸಾಧಿಸುತ್ತದೆ.

ಕರ್ನಾಟಕದಲ್ಲಿ ಹೈನುಗಾರಿಕೆಯು ಮೂರು ಹಂತದ ವ್ಯವಸ್ಥೆಯಾಗಿದೆ; ಮೂಲ ಹಂತದಲ್ಲಿ ಅಂದರೆ ಗ್ರಾಮಮಟ್ಟದಲ್ಲಿ ಡೇರಿ ಸಹಕಾರಿ ಸಂಘಗಳು. ಮಧ್ಯದ ಹಂತದಲ್ಲಿ

ಅಂದರೆ ಜಿಲ್ಲಾ ಮಟ್ಟದಲ್ಲಿ ಹಾಲು ಒಕ್ಕೂಟಗಳು ಹಾಗೂ ರಾಜ್ಯ ಮಟ್ಟದಲ್ಲಿ ಶೃಂಗ ಸಂಸ್ಥೆಯಾಗಿ ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಲಿಯು ಕಾರ್ಯಾಚರಣೆ ನಡೆಸುತ್ತಿದೆ.

ಡೇರಿ ಸಹಕಾರಿ ಸಂಘವು ಗ್ರಾಮ ಮಟ್ಟದಲ್ಲಿ ಕಾರ್ಯಾಚರಣೆ ನಡೆಸುತ್ತಿರುವ ಮೂಲಭೂತ ಸಂಘ ಘಟಕವಾಗಿದೆ. ಸಹಕಾರೀ ತತ್ವದ ಮೇಲೆ ಸಂಘಟಿಸಲಾದ ಈ ಸಂಸ್ಥೆಗಳಲ್ಲಿ ಮೂಲಭೂತ ಹಂತದಲ್ಲಿ ಪ್ರಜಾಪ್ರಭುತ್ವವನ್ನು ಆಚರಣೆಗೆ ತರಲಾಗುತ್ತಿದೆ. ಚಟುವಟಿಕೆಗಳನ್ನು ಸಂಘಟಿಸಿ ನಿರ್ವಹಿಸುವುದಕ್ಕಾಗಿ ಸ್ಥಳೀಯ ಜನರಿಗೆ ತರಬೇತಿ ನೀಡುವುದರ ಮೂಲಕ ಗ್ರಾಮಮಟ್ಟದಲ್ಲಿ ಸಂಸ್ಥೆಯ ನಿರ್ಮಾಣ ಮತ್ತು ಸ್ಥಳೀಯ ನಾಯಕತ್ವದ ಅಭಿವೃದ್ಧಿಗೆ ಪ್ರೋತ್ಸಾಹ ದೊರೆತಂತಾಗುತ್ತದೆ. ಕರಾವಿನ ಜಾನುವಾರುಗಳ ಎಲ್ಲಾ ಮಾಲೀಕರು ಡೈರಿ ಸಹಕಾರಿ ಸಂಘಗಳ ಸದಸ್ಯರಾಗಲು ಅರ್ಹರಾಗಿರುತ್ತಾರೆ.

ಡೇರಿ ಸಹಕಾರಿ ಸಂಘವು ಪ್ರತಿದಿನ ಕಾರ್ಯ ನಿರ್ವಹಿಸುತ್ತದೆ. ಮತ್ತು ಗ್ರಾಮದಲ್ಲಿ ಉತ್ಪಾದಿಸಿದ ಹಾಲಿಗೆ ಮಾರಾಟದ ಮಾರ್ಗವಾಗಿ ವರ್ತಿಸುತ್ತದೆ. ಈ ಸಂಘಗಳ ಮೂಲಕ ತಾಂತ್ರಿಕ ಸೌಲಭ್ಯಗಳನ್ನು ಡೇರಿ ರೈತರಿಗೆ ತಲುಪಿಸಲಾಗುತ್ತದೆ. ಮತ್ತು ಇವು ಪಶುವೈದ್ಯಕೀಯ ಪ್ರಥಮ ಚಿಕಿತ್ಸೆ, ಪಶು ಆಹಾರದ ಮಾರಾಟ, ಪಶುಮೇವು ಬೀಜಗಳ ಸರಬರಾಜು, ಸಂಚಾರೀ ಮತ್ತು ತುರ್ತು ಪಶುವೈದ್ಯಕೀಯ ಆರೋಗ್ಯ ವ್ಯಾಪ್ತಿಯ ಅವಕಾಶ, ವೈಜ್ಞಾನಿಕ ಹೈನುಗಾರಿಕೆಯ ಜ್ಞಾನದ ಪ್ರಸಾರ ಇತ್ಯಾದಿಗಳನ್ನು ಒಳಗೊಳ್ಳುತ್ತದೆ. ಖರೀದಿಸಿದ ಹಾಲಿಗೆ ಹಣ ಸಂದಾಯವನ್ನು ಸಂಘದ ಮೂಲಕ ವ್ಯವಸ್ಥೆ ಮಾಡಲಾಗುತ್ತದೆ. ಶೀತಲ ಕೇಂದ್ರ ಅಥವಾ ಡೇರಿಗೆ ಸಂಪರ್ಕಹೊಂದಿದ ಹಾಲು ಶೇಖರಣಾ ಮಾರ್ಗ ರೂಪಿತವಾಗುವಂತೆ ಡೇರಿ ಸಹಕಾರಿ ಸಂಘಗಳ ಸರಮಾಲೆಯನ್ನು ಸಂಘಟಿಸಲಾಗಿದೆ.

ಡೇರಿ ಸಹಕಾರಿ ಸಂಘಗಳು ಜಿಲ್ಲಾ ಮಟ್ಟದಲ್ಲಿ ಸಹಕಾರಿ ಹಾಲು ಉತ್ಪಾದಕರ ಒಕ್ಕೂಟಗಳಾಗಿ ಸೇರುತ್ತವೆ. ಸಂಕೀರ್ಣ ಸಹಕಾರಿ ಸಂಘಗಳ ವ್ಯೂಹ ಬಂಧದಲ್ಲಿ ಒಕ್ಕೂಟವು ಮಧ್ಯಮ ಶ್ರೇಣಿಯಾಗಿದೆ. ಒಂದು ಗುರುತಾದ ಭೌಗೋಳಿಕ ಪ್ರದೇಶದಲ್ಲಿ ಸಂಘಗಳನ್ನು ಒಗ್ಗೂಡಿಸುವ ಮೂಲಕ ಒಕ್ಕೂಟಗಳನ್ನು ರಚಿಸಲಾಗುತ್ತದೆ. ಇವುಗಳ ಕಾರ್ಯ ವ್ಯಾಪ್ತಿಯು ಒಂದು ಜಿಲ್ಲೆಯಿಂದ ಮೂರು ಜಿಲ್ಲೆಗಳ ವರೆಗೆ ವಿಸ್ತರಿಸುತ್ತದೆ. ಪ್ರಸ್ತುತದಲ್ಲಿ ಕರ್ನಾಟಕದಲ್ಲಿ ೧೩ ಒಕ್ಕೂಟಗಳು ಕಾರ್ಯನಿರ್ವಹಿಸುತ್ತಿವೆ. ಅವುಗಳೆಂದರೆ-ಬೆಂಗಳೂರು, ಕೋಲಾರ, ಮೈಸೂರು, ಮಂಡ್ಯ, ಹಾಸನ, ಶಿವಮೊಗ್ಗ, ದಕ್ಷಿಣ ಕನ್ನಡ, ಧಾರವಾಡ, ತುಮಕೂರು, ಬೆಳಗಾಂ, ಬಿಜಾಪುರ, ಗುಲ್ಬರ್ಗಾ ಮತ್ತು ರಾಯಚೂರು-ಬಳ್ಳಾರಿ.

ಒಕ್ಕೂಟಗಳು ಹೊಸ ಡೇರಿ ಸಹಕಾರಿ ಸಂಘಗಳನ್ನು ಸಂಘಟಿಸುತ್ತವೆ. ಮತ್ತು ಲೆಕ್ಕಪತ್ರಗಳ ಲೆಕ್ಕಪರಿಶೋಧನೆಯನ್ನೂ ಒಳಗೊಂಡಂತೆ, ಆಡಳಿತ ನಿರ್ವಹಣೆಯಲ್ಲಿ

ಡೇರಿ ಸಹಕಾರಿ ಸಂಘಗಳಿಗೆ ಸಹಾಯ ನೀಡುತ್ತವೆ. ಮತ್ತು ದ್ರವ ಹಾಲನ್ನು ಮೇಲ್ವಿಚಾರಣೆ ನಡೆಸಿ. ಖರೀದಿಸಿ. ಸಂಸ್ಕರಿಸಿ ಮಾರಾಟ ಮಾಡುತ್ತವೆ. ತಾಂತ್ರಿಕ ಸೌಲಭ್ಯಗಳನ್ನೂ ಸಹ ವ್ಯವಸ್ಥೆಗೊಳಿಸಿ ಡೇರಿ ಸಹಕಾರಿ ಸಂಘಗಳ ಮೂಲಕ ಸದಸ್ಯ ರೈತರಿಗೆ ತಲುಪಿಸುತ್ತದೆ.

ರಾಜ್ಯದಲ್ಲಿನ ಹಾಲು ಒಕ್ಕೂಟಗಳನ್ನು ಒಗ್ಗೂಡಿಸುವ ಮೂಲಕ ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾಮಂಡಲಿ ನಿಯಮಿತವು ಅಸ್ತಿತ್ವಕ್ಕೆ ಬಂದಿತು. ಮತ್ತು ಈ ರೀತಿಯಾಗಿ ರಾಜ್ಯಮಟ್ಟದ ಶೃಂಗ ಸಂಸ್ಥೆ ಘಟಕವಾಗಿ ರೂಪುಗೊಂಡಿತು. ಯೋಜನಾ ಚಟುವಟಿಕೆಗಳನ್ನು ಮಹಾಮಂಡಲಿಯು ಕಾರ್ಯಗತಗೊಳಿಸುತ್ತದೆ. ಮತ್ತು ಎಲ್ಲ ಯೋಜನಾ ಚಟುವಟಿಕೆಗಳು ಮುಕ್ತಾಯಗೊಂಡ ನಂತರ ಮಹಾಮಂಡಲಿಯು ಅಧಿಕ ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ಮಾರಾಟ ಮಾಡುತ್ತದೆ.

ಪ್ರಸ್ತುತದಲ್ಲಿ ಬೆಂಗಳೂರಿನ ಮದರ್ ಡೇರಿ ಮತ್ತು ಮೂರು ಪಶು ಆಹಾರ ಘಟಕಗಳು, ಎರಡು ದ್ರವ ಸಾರಜನಕ (ಲಿಕ್ವಿಡ್ ನೈಟ್ರೋಜನ್) ಘಟಕಗಳು, ಒಂದು ಹೋರಿತಳಿ ಸಂವರ್ಧನಾ ಕ್ಷೇತ್ರ ಮತ್ತು ಘನೀಕೃತ ವೀರ್ಯಬ್ಯಾಂಕ್ ಮತ್ತು ಒಂದು ಕೇಂದ್ರ ತರಬೇತಿ ಸಂಸ್ಥೆ ಮತ್ತು ಮೂರು ಪ್ರಾದೇಶಿಕ ತರಬೇತಿ ಸಂಸ್ಥೆಗಳು ಕೆ ಎಂ ಎಫ್ ನ ನೇರ ನಿಯಂತ್ರಣದಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಒಕ್ಕೂಟಗಳ ನಡುವೆ ಚಟುವಟಿಕೆಗಳ ಸಮನ್ವಯ ಮತ್ತು ಹೆಚ್ಚುತ್ತಿರುವ ಹಾಲು ಉತ್ಪಾದನೆಗೆ ಮಾರುಕಟ್ಟೆಯನ್ನು ಅಭಿವೃದ್ಧಿಗೊಳಿಸುವ ಜವಾಬ್ದಾರಿಯು ಕೆ ಎಂ ಎಫ್‌ದಾಗಿದೆ. ಒಕ್ಕೂಟಗಳ ಪ್ರದೇಶದಲ್ಲಿ ಸ್ಥಳೀಯ ಹಾಲು ಮಾರುಕಟ್ಟೆಯನ್ನು ಆಯಾಯಾ ಒಕ್ಕೂಟ ಸಂಘಟಿಸುತ್ತವೆ. ಆದರೂ ಉತ್ಪನ್ನಗಳ ಮಾರಾಟವನ್ನು ಮಹಾಮಂಡಲಿಯೇ ವ್ಯವಸ್ಥೆಗೊಳಿಸುತ್ತದೆ. ಹಾಲಿನ ಬಹುತೇಕ ಭಾಗವನ್ನು ದ್ರವ ಹಾಲಾಗಿ ಮಾರಾಟ ಮಾಡಲಾಗುತ್ತದೆ. ಇದಲ್ಲದೇ ಬೆಣ್ಣೆ, ತುಪ್ಪ, ಕೆನೆರಹಿತ ಹಾಲಿನಪುಡಿ (ಎಸ್‌ಎಂಪಿ), ಕೆನೆಭರಿತ ಹಾಲಿನಪುಡಿ (ಡಬ್ಲ್ಯು ಎಂಪಿ), ಮಿಲ್ಕೋನ್, ಪೇಡಾ ಸಿಹಿಯಾದ ಘನೀಕರಿಸಿದ ಹಾಲು, ಸುವಾಸಿತ ಹಾಲು ಮತ್ತು ಐಸ್‌ಕ್ರೀಂಗಳಂಥ ಇತರ ಉತ್ಪನ್ನಗಳನ್ನು ಸಹ ಮಾರಾಟ ಮಾಡಲಾಗುತ್ತಿದೆ. ಉತ್ಪನ್ನಗಳನ್ನು 'ನಂದಿನಿ' ಎಂಬ ಫ್ಯಾಮಿಲಿ 'ಬ್ರಾಂಡ್' ಹೆಸರಿನಡಿಯಲ್ಲಿ ಮಾರಾಟ ಮಾಡಲಾಗುತ್ತಿದೆ. ರಾಜ್ಯದ ಹೊರಗಡೆ ದ್ರವ ಹಾಲು ಮತ್ತು ಉತ್ಪನ್ನಗಳ ಮಾರಾಟವನ್ನು ಮಹಾಮಂಡಲಿಯು ವ್ಯವಸ್ಥೆ ಮಾಡುತ್ತದೆ. ಸೇನೆ, ರೇಲ್ವೆಗಳಂಥ ಸಂಘ ಖರೀದಿದಾರರು ಮತ್ತು ಇತರ ಖಾಸಗೀ ಖರೀದಿದಾರರಿಗೆ ಮಾರಾಟವನ್ನು ಮಹಾಮಂಡಲಿ ನಿರ್ವಹಿಸುತ್ತದೆ. 'ನಂದಿನಿ' ಉತ್ಪನ್ನಗಳನ್ನು ವ್ಯಾಪಕವಾಗಿ ಸ್ವೀಕರಿಸುವುದಕ್ಕಾಗಿ ಒಂದು ಭದ್ರ ಬುನಾದಿ ಹಾಕುವುದಕ್ಕಾಗಿ ಗುಣಮಟ್ಟದಲ್ಲಿ ಉತ್ಕೃಷ್ಟತೆಯನ್ನು ಕಾಪಾಡಿಕೊಂಡು ಬರಲಾಗುತ್ತಿದೆ. ಇದರಿಂದಾಗಿ ಸತತವಾಗಿ ಹೆಚ್ಚುತ್ತಿರುವ ಹಾಲಿನ ಉತ್ಪಾದನೆಗೆ ಭರವಸೆಯುಳ್ಳ ಮಾರುಕಟ್ಟೆ ಖಾತರಿಯಾಗುತ್ತದೆ. ಸಮತೋಲಿತ ಪಶು ಆಹಾರ, ಬೈಪಾಸ್ ಪಶು ಆಹಾರ, ಯೂರಿಯಾ ಮೊಲ್ಯಾಸಿಸ್ ಇಟ್ಟಿಗೆ (ಯೂರಿಯಾ ಮೊಲಾಸಿಸ್ ಬ್ರಿಕ್ಸ್),

ಘನೀಕೃತ ವೀರ್ಯ ನಳಿಕೆಗಳು ಮತ್ತು ದ್ರವ ನೈಟ್ರೋಜನ್ ಅನ್ನು ಮಹಾಮಂಡಲಿಯು ಉತ್ಪಾದಿಸುತ್ತಿದೆ ಮತ್ತು ಒಕ್ಕೂಟಗಳಿಗೆ ಸರಬರಾಜು ಮಾಡುತ್ತಿದೆ. ಹಿರಿಯ ಅಧಿಕಾರಿ ಸಿಬ್ಬಂದಿಗೆ ತರಬೇತಿ ನೀಡಿ ಎಲ್ಲಾ ನವೀನ ಪ್ರಸಕ್ತ ತಾಂತ್ರಿಕತೆಗಳನ್ನು ಪಡೆದು ಯೋಜನೆಗಳಲ್ಲಿ ಕೆಎಂಎಫ್ ಅನ್ವಯಿಸುತ್ತಿದೆ.

ಈ ಹಿನ್ನೆಲೆಯಲ್ಲಿ ೧೯೯೩-೯೪ನೇ ವರ್ಷದಲ್ಲಿ ಕರ್ನಾಟಕದಲ್ಲಿ ಹೈನುಗಾರಿಕೆಯಲ್ಲಿ ಸಾಧಿಸಿದ ಪ್ರಗತಿಯನ್ನು ಗಮನಿಸಬಹುದಾಗಿದೆ. ಈ ವರ್ಷ ಹೈನುಗಾರಿಕೆಯ ಅಭಿವೃದ್ಧಿಯು ವ್ಯಾಪಕವಾಗಿ ನಡೆದಿದ್ದು ಹಾಲು ಶೇಖರಣೆಯಲ್ಲಿ ಮತ್ತು ಮಾರಾಟದಲ್ಲಿ ಸಹ ಹೆಚ್ಚಿನ ಏಳ್ಗೆಯನ್ನು ಕಾಣಬಹುದಾಗಿದೆ. ಮಾರ್ಚ್ ೧೯೯೪ರ ಅಂತ್ಯಕ್ಕೆ ಇದ್ದಂತೆ ನೋಂದಾಯಿಸಿದ ಡೇರಿ ಸಹಕಾರಿ ಸಂಘಗಳ ಸಂಖ್ಯೆಯು ೮೭೧೭ ಆಗಿದ್ದು ಅವುಗಳ ಪೈಕಿ ಕಾರ್ಯಾಚರಣೆಯಲ್ಲಿರುವ ಡೇರಿ ಸಹಕಾರಿ ಸಂಘಗಳ ಸಂಖ್ಯೆಯು ೬೦೪೨ ಆಗಿದೆ. ಸಹಕಾರಿ ಸಂಘಗಳಲ್ಲಿ ಸದಸ್ಯತ್ವ ಪಡೆದಿರುವ ಒಟ್ಟು ಸದಸ್ಯರ ಸಂಖ್ಯೆಯು ೧೨.೬೨ ಲಕ್ಷಗಳಾಗಿವೆ. ಒಟ್ಟು ೩೮೭ ಹಾಲು ಮಾರ್ಗಗಳ ಮೂಲಕ ಹಾಲನ್ನು ಶೇಖರಿಸಿ ಡೇರಿಗಳಿಗೆ ತಲುಪಿಸಲಾಗುತ್ತಿದೆ. ಪಶು ಆರೋಗ್ಯ ಕಾರ್ಯಕ್ರಮದಡಿಯಲ್ಲಿ ೫೨೭೮ ಡೇರಿ ಸಹಕಾರಿ ಸಂಘಗಳನ್ನು ಒಳಗೊಳ್ಳಲಾಗಿದ್ದು ೬,೮೩,೦೦೦ ಕೃತಕ ಗರ್ಭಧಾರಣೆಯನ್ನು ಮಾಡಲಾಗಿದೆ. ೧೩ ಒಕ್ಕೂಟಗಳಿಗೆ ಸೇರಿದ ಒಟ್ಟು ೧೫ ಡೇರಿಗಳ ಸಂಸ್ಕರಣಾ ಸಾಮರ್ಥ್ಯವು ದಿನಕ್ಕೆ ೧೬ ಲಕ್ಷ ಲೀಟರ್ ಆಗಿದೆ. ಕೆ ಎಂ ಎಫ್‌ನ ಕೇಂದ್ರ ಮತ್ತು ಪ್ರಾದೇಶಿಕ ತರಬೇತಿ ಸಂಸ್ಥೆಗಳಲ್ಲಿ ತರಬೇತಿ ಪಡೆದ ಸದಸ್ಯರ ಸಂಖ್ಯೆ ೬೫೫೭ ಆಗಿದೆ. ಏಪ್ರಿಲ್ ೯೩ರಿಂದ ಮಾರ್ಚ್ ೯೪ರ ವರೆಗಿನ ದೈನಂದಿನ ಸರಾಸರಿ ಶೇಖರಣೆಯು ೧೧.೭೯ ಲಕ್ಷ ಕೆ.ಜಿ.ಗಳಷ್ಟು ತಲುಪಿದ್ದು ಮಾರ್ಚ್ ೯೪ರ ಸರಾಸರಿ ಮಾರಾಟವು ೧೦.೩೨ ಲಕ್ಷ ಕೆ.ಜಿ.ಗಳಾಗಿದೆ. ಈ ಅಂಕಿ ಅಂಶಗಳು ಹೈನುಗಾರಿಕೆಯಲ್ಲಿ ಕರ್ನಾಟಕವು ಸಾಧಿಸಿದ ಅಗಾಧ ಪ್ರಗತಿಯನ್ನು ಸೂಚಿಸುತ್ತದೆ.

ಈ ಸಂದರ್ಭದಲ್ಲಿ ೧೯೯೩ರಲ್ಲಿ ನಡೆದ ಎರಡು ಮುಖ್ಯ ಘಟನೆಗಳನ್ನು ಸೂಚಿಸಿದಲ್ಲಿ ಅಪ್ರಸ್ತುತವಾಗಲಾರದೆಂದು ಎನಿಸುತ್ತಿದೆ. ಮೊದಲನೆಯದು ೨೫ನೇ ಮೇ ೧೯೯೩ರಂದು ಬೆಂಗಳೂರಿನಲ್ಲಿ ನಡೆದ ರೈತರ ಬೃಹತ್ ಮೇಳ. ಕರ್ನಾಟಕದ ಎಲ್ಲೆಡೆಯಿಂದ ಬಂದ ಹಾಲು ಉತ್ಪಾದಕರು ಅತ್ಯಂತ ಉತ್ಸಾಹದಿಂದ ಈ ಮೇಳದಲ್ಲಿ ಪಾಲ್ಗೊಂಡಿದ್ದರು. ಈ ಮೇಳದಲ್ಲಿ ಜಾತಿ, ಮತ, ಭೇದ, ಭಾವಗಳಿಲ್ಲದೇ ಯುವಕರು, ಮುದುಕರು, ಮಹಿಳೆಯರೆನ್ನುವ ತಾರತಮ್ಯವಿಲ್ಲದೇ, ರಾಜಕೀಯ ಪಕ್ಷಗಳ ಭೇದವೆನ್ನೆಣಿಸದೆ ಸುಮಾರು ೩ ಲಕ್ಷ ಜನ ರೈತರು ಸ್ವಯಂ ಪ್ರೇರಣೆಯಿಂದ ಭಾಗವಹಿಸಿದ್ದರು. ಮತ್ತು ಕಾರ್ಯಕ್ರಮದ ಯಶಸ್ಸಿಗೆ ಕಾರಣರಾಗಿ ಇಂಥದ್ದೇ ಬೃಹತ್ ಸಮ್ಮೇಳನವನ್ನು ಇತರ ರಾಜ್ಯಗಳಲ್ಲಿ ಮತ್ತು ರಾಷ್ಟ್ರ ಮಟ್ಟದಲ್ಲಿ ಏರ್ಪಡಿಸಲು ನಾಂದಿ ಹಾಡಿದರು.

ಈ ವರ್ಷದಲ್ಲಿ ನಡೆದ ಮತ್ತೊಂದು ಪ್ರಮುಖ ಘಟನೆಯೆಂದರೆ ಭಾರತದ ದಕ್ಷಿಣ ರಾಜ್ಯಗಳ ಪಶುಸಂಗೋಪನಾ ಸಚಿವರುಗಳ ''ಮಿಲ್ಕ್ ಗ್ರಿಡ್'' ಸಮ್ಮೇಳನ. ಇದು

ನಡೆದದ್ದು ೧೬. ೧೭ನೇ ಜುಲೈ ೧೯೯೩ರಂದು, ಬೆಂಗಳೂರಿನಲ್ಲಿ. ದಕ್ಷಿಣ ರಾಜ್ಯಗಳ ಹಾಲಿನ ಅಂತರ್‌ರಾಜ್ಯ ವಹಿವಾಟಿನ ಬಗ್ಗೆ ರೂಪ- ರೇಷೆ ರೂಪಿಸುವುದಕ್ಕಾಗಿ ಈ ಸಮ್ಮೇಳನವನ್ನು ಏರ್ಪಡಿಸಲಾಗಿತ್ತು. ಯಾವುದೇ ರಾಜ್ಯದ ಹಾಲಿನ ಕುಂದುಕೊರತೆ ಅಥವಾ ಹೆಚ್ಚಳ ಮತ್ತು ಇತರ ಸಮಸ್ಯೆಗಳತ್ತ ಗಮನ ಹರಿಸಲು ಈ ಸಂದರ್ಭದಲ್ಲಿ ವಿಚಾರಗೋಷ್ಠಿಯನ್ನು ಏರ್ಪಡಿಸಲಾಗಿತ್ತು.

ಹೀಗೆ ಹೈನುಗಾರಿಕೆ ಅಭಿವೃದ್ಧಿ ಕಾರ್ಯಕ್ರಮ ಮತ್ತು ಅದಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ರಾಜ್ಯದಾದ್ಯಂತ ವಿಸ್ತರಿಸಲಾಗಿದೆ. ಇದರಿಂದ ಒಂದು ಶಾಂತ ಕ್ರಾಂತಿಯ ಬರುವನ್ನು ಸಾರಿದಂತಾಗಿದೆ; ಗ್ರಾಮೀಣ ರಂಗದಲ್ಲಿ ಸಾಮಾಜಿಕ-ಆರ್ಥಿಕ ವಿಷಯದಲ್ಲಿ ಪರಿಣಾಮ ಬೀರಿದಂತಾಗಿದೆ.



# ವೈದ್ಯಕೀಯ

*ಡಾ. ಹೆಚ್.ಡಿ. ಚಂದ್ರಪ್ಪಗೌಡ*

---

ವೈದ್ಯಕೀಯ, ಇಂಜಿನಿಯರುಗಳಂತಹ ವೃತ್ತಿಪರರು ಕಲೆ, ಸಂಸ್ಕೃತಿ, ಸಾಹಿತ್ಯಗಳಲ್ಲಿ ಹೆಚ್ಚಿನ ಆಸಕ್ತಿ ಹೊಂದಿರಲಾರರೆಂಬ ಭಾವನೆ ಇರುವಂತಿದೆ. ಆದರೂ ಈ ಕ್ಷೇತ್ರಗಳಲ್ಲಾಗುತ್ತಿರುವ ಪ್ರಗತಿ ಮತ್ತು ಪ್ರಯೋಜನಗಳು ಜನಸಾಮಾನ್ಯರ ಏಳಿಗೆ ಮತ್ತು ಸುಖ ಸಂತೋಷಗಳಿಗೆ ತುಂಬಾ ಅವಶ್ಯಕವೆಂಬುದು ಈ ವೃತ್ತಿಪರರಲ್ಲಿ ಮೂಡುತ್ತಿರುವುದನ್ನು ಇತ್ತೀಚಿನ ದಿನಗಳಲ್ಲಿ ನೋಡಬಹುದು. ಆರೋಗ್ಯ ಮತ್ತು ವೈದ್ಯಕೀಯ ವಿಷಯಗಳು ಜನಸಾಮಾನ್ಯರಿಗೆ ತಲುಪಬೇಕಾದ ಅಗತ್ಯ ಈಗ ಎಂದಿಗಿಂತ ಹೆಚ್ಚಾಗಿದೆ. ಈ ದಿಸೆಯಲ್ಲಿ ಜನರಾಡುವ ಭಾಷೆಗಳಲ್ಲಿ ಜನಪ್ರಿಯ ಸಾಹಿತ್ಯ ರಚನೆ ಮತ್ತು ಪ್ರಕಟಣೆ ನಮ್ಮ ಸಮಾಜದ ಅವಶ್ಯಕತೆಗಳಲ್ಲೊಂದಾಗುತ್ತಿರುವ ಸಂತಸದ ಸಂಗತಿಯಾಗಿದೆ.

ಆಧುನಿಕ ವೈಜ್ಞಾನಿಕ ವಿಷಯಗಳ ಕುರಿತ ಜನಪ್ರಿಯ ಸಾಹಿತ್ಯ ರಚನೆ ಕನ್ನಡದಲ್ಲಿ ಆರಂಭವಾದುದು ಈ ಶತಮಾನದ ಎರಡನೆಯ ದಶಕದಲ್ಲಷ್ಟೆ. ವೈದ್ಯಕೀಯ ವಿಷಯಗಳಲ್ಲಿ ಈ ತರಹೆಯ ಬರವಣಿಗೆಯು ಇನ್ನೂ ತಡವಾಗಿಯೇ ಆರಂಭವಾದಂತಿದೆ. ಆದರೂ ಇತ್ತೀಚಿನ ವರ್ಷಗಳಲ್ಲಿ ವಿಪುಲವಾದ ಜನಪ್ರಿಯ ವೈದ್ಯಕೀಯ ಸಾಹಿತ್ಯ ಹೊರಬರಲಾರಂಭಿಸಿದೆ. ಸಾಕಷ್ಟು ಜನ ವೈದ್ಯರು ಈ ದಿಸೆಯಲ್ಲಿ ಹೆಚ್ಚಿನ ಆಸಕ್ತಿ ವಹಿಸುತ್ತಿರುವುದು ಆಶಾದಾಯಕ. ಕನ್ನಡದ ಹಲವಾರು ದೈನಿಕ ಹಾಗೂ ನಿಯತಕಾಲಿಕ ಪತ್ರಿಕೆಗಳಲ್ಲಿ ಬಿಡಿ ಲೇಖನಗಳು ಬೆಳಕಿಗೆ ಬರುತ್ತಿವೆ; ವೈದ್ಯಕೀಯದ ವಿವಿಧ ವಿಷಯಗಳ ಬಗೆಗೆ ಪುಸ್ತಕಗಳು ಪ್ರಕಟವಾಗುತ್ತಿವೆ; ಕೆಲವಂತೂ ಹಲವಾರು ಮುದ್ರಣಗಳನ್ನು ಕಂಡಿದ್ದಲ್ಲದೆ ಇತರ ಭಾಷೆಗಳಿಗೂ ಅನುವಾದಗೊಂಡಿವೆ.

ವೈದ್ಯಕೀಯ ವಿಷಯಗಳ ಸಾಹಿತ್ಯ ಇಂಗ್ಲೀಷಿನಲ್ಲೇ ಇದ್ದು, ವೈದ್ಯ ವಿದ್ಯಾರ್ಥಿಗಳಿಗೆ ಬೋಧನಾ ಮಾಧ್ಯಮವೂ ಇನ್ನೂ ಅದೇ ಆಗಿದೆ. ಆದುದರಿಂದ ಜನಪ್ರಿಯ ಬರವಣಿಗೆಗೆ ತೊಡಗುವ ಆಸಕ್ತಿ ಇರುವವರಿಗೆ ತಾಂತ್ರಿಕ ಪದಗಳ ಬಳಕೆ ಅಡಚಣೆಯಾದಂತಿದೆ. ಪ್ರಕಟಣೆಯ ಸಮಸ್ಯೆಯೂ ಪ್ರಗತಿಗೆ ಅಡ್ಡಗಾಲು ಹಾಕುತ್ತಿದೆ. ಹೀಗೆ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವ ವೈದ್ಯಕೀಯ ಬರಹಗಾರರು, ಪ್ರತಿವರ್ಷ ಒಂದೆಡೆ ಸೇರಿ ವಿಚಾರವಿನಿಮಯ ಮಾಡುವ ಪರಿಪಾಠ ಈಗ ಬೆಳೆದುಕೊಂಡು ಬರುತ್ತಿದೆ. ಈ

ಬಿಸೆಯಲ್ಲಿ ಶಿವಮೊಗ್ಗಾದಲ್ಲಿ (೧೯೮೯) ನಡೆದ ಜನಪ್ರಿಯ ವೈದ್ಯಕೀಯ ಸಾಹಿತ್ಯ ಸಮ್ಮೇಳನ ನಾಂದಿ ಹಾಡಿತು. ನಂತರ ಬೆಳಗಾಂ (೧೯೮೯), ಧಾರವಾಡ (೧೯೯೧), ಬಿಜಾಪುರ (೧೯೯೨) ಗಳಲ್ಲಿ ಸಮ್ಮೇಳನಗಳು ಜರುಗಿವೆ. ಮೈಸೂರಿನಲ್ಲಿ ೧೯೯೩ರಲ್ಲಿ ಜರುಗಿದ ಸಮ್ಮೇಳನ ಅದರ ಬೃಹತ್ ಮತ್ತು ಮಹತ್ವಗಳ ದೃಷ್ಟಿಯಲ್ಲಿ ವಿಶಿಷ್ಟ ರೀತಿಯದೆನಿಸಿದೆ. ಸಾವಿರಾರು ಪ್ರತಿನಿಧಿಗಳು ಇದರಲ್ಲಿ ಭಾಗವಹಿಸಿದ್ದರೆನ್ನಲಾಗಿದೆ. ಅಖಿಲ ಭಾರತ ಸಮ್ಮೇಳನವೆಂದು ಹೆಸರಿಡಲಾಗಿದೆ. ಡಿಸೆಂಬರ್ ೨೫, ೨೬ ರಂದು ಜರುಗಿದ ಈ ಸಮ್ಮೇಳನಕ್ಕೆ ಪ್ರಸಿದ್ಧ ವೈದ್ಯ ಸಾಹಿತಿಗಳಾದ ಡಾ. ಸ.ಜ. ನಾಗಲೋಟಿಮಠ ಅವರು ಅಧ್ಯಕ್ಷರಾಗಿದ್ದರು. ರಾಜ್ಯ ಸರ್ಕಾರದ ಮಂತ್ರಿಗಳು, ಕನ್ನಡದ ಹಿರಿಯ ಸಾಹಿತಿಗಳು ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಎರಡು ದಿನಗಳು ಜರುಗಿದ ಈ ಸಮ್ಮೇಳನದಲ್ಲಿ ವೈದ್ಯಕೀಯ ಸಾಹಿತ್ಯ ರಚನೆ ಮತ್ತು ಪ್ರಕಟಣೆಯ ವಿವಿಧ ಸಮಸ್ಯೆಗಳ ಬಗ್ಗೆ ಭಾಷಣ, ವಿಚಾರ ವಿನಿಮಯ ನಡೆದವು. ಈ ಸಂದರ್ಭದಲ್ಲಿ 'ಕನ್ನಡ ವೈದ್ಯ ವಿಜ್ಞಾನ ಪರಿಷತ್ತು' ಎಂಬ ವೈದ್ಯ ಬರಹಗಾರರ ಸಂಘಟನೆಯ ಉದ್ಘಾಟನೆಯು ಜರುಗಿದ್ದು ಒಂದು ವೈಶಿಷ್ಟ್ಯ.

ಮೈಸೂರಿನ ಸಮ್ಮೇಳನದ ಸಮಯದಲ್ಲಿ ಡಾ.ಎಸ್.ಪಿ. ಯೋಗಣ್ಣನವರ 'ಹೃದಯಾಘಾತ' ಎಂಬ ಪುಸ್ತಕ ಬಿಡುಗಡೆಯಾಯಿತು. ಈ ಗ್ರಂಥ ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಗಿದೆ. ಹೃದ್ರೋಗ ಪರಿಚಯ ಈ ಪುಸ್ತಕದಲ್ಲಿದೆ. ನನ್ನ 'ಸಾಮಾನ್ಯ ಶಸ್ತ್ರವೈದ್ಯದ ಕಾಯಿಲೆಗಳು' ಎಂಬ ಗ್ರಂಥ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಗಿದೆ. ೮.೨.೯೪ರಂದು ಬೆಂಗಳೂರಿನಲ್ಲಿ ಜರುಗಿದ ಸಮಾರಂಭವೊಂದರಲ್ಲಿ ರಾಜ್ಯದ ಉನ್ನತ ಶಿಕ್ಷಣ ಖಾತೆಯ ಸಚಿವರಿಂದ ಇದು ಬಿಡುಗಡೆಯಾಯಿತು. ಶಸ್ತ್ರಚಿಕಿತ್ಸೆಯಿಂದಲೇ ಚಿಕಿತ್ಸೆ ಮಾಡಬೇಕಾಗುವ, ಸಾಮಾನ್ಯವಾಗಿ ಎಲ್ಲೆಡೆ ಜರುಗಿಸುವ ಶಸ್ತ್ರ ಚಿಕಿತ್ಸಾ ಕಾಯಿಲೆಗಳ ಸಚಿತ್ರ ವಿವರಣೆಗಳು ಇದರಲ್ಲಿವೆ. ನನ್ನ ಇನ್ನೊಂದು ಕೃತಿ 'ವೈದ್ಯಲೋಕ ಕೌತುಕಗಳು' ಬೆಂಗಳೂರಿನ ನವ ಕರ್ನಾಟಕ ಸಂಸ್ಥೆಯಿಂದ ಪ್ರಕಟವಾಗಿದೆ. ಈ ಕೃತಿಯಲ್ಲಿ ಆಧುನಿಕ ವೈದ್ಯಕೀಯದ ಹಲವಾರು ಆವಿಷ್ಕಾರಗಳ ಹಿನ್ನೆಲೆ ಮತ್ತು ಅವುಗಳ ಪೂರ್ಣ ಮಾಹಿತಿಗಳ ವಿವರಗಳಿವೆ. ಡಾ. ಪಿ. ಅನ್ನಪೂರ್ಣಮ್ಮನವರಿಗೆ, ಬೆಂಗಳೂರಿನಲ್ಲಿ ೧೯.೧೨.೯೩ ರಂದು ನಡೆದ ಅಭಿನಂದನಾ ಸಮಾರಂಭದಲ್ಲಿ 'ಆರೋಗ್ಯ ಜೀವನ' ಎಂಬ ಅವರ ಕೃತಿಯು ಬಿಡುಗಡೆಯಾಯಿತು. ಕನ್ನಡ ನಿಯತಕಾಲಿಕವೊಂದರಲ್ಲಿ ಜನರ ಸ್ವಾಸ್ಥ್ಯ ಸಮಸ್ಯೆಗಳಿಗೆ ಈ ಲೇಖಕಿ ಉತ್ತರಿಸಿದ ಲೇಖನಗಳ ಸಂಕಲನ ಇದಾಗಿದೆ. ಇದೇ ಲೇಖಕಿಯ 'ಬಾ ಗೆಳತಿ' ಎಂಬ ಕೃತಿ ಬೆಂಗಳೂರಿನ ಓರಿಯಂಟ್ ಲಾಂಗ್‌ಮನ್ ಅವರಿಂದ ಪ್ರಕಟವಾಗಿದೆ. ಹದಿಹರೆಯ ತರುಣಿಯರಲ್ಲಾಗುವ ದೈಹಿಕ ಹಾಗೂ ಮಾನಸಿಕ ಬದಲಾವಣೆಗಳ ಬೆಳವಣಿಗೆಗಳ ಬಗ್ಗೆ ಅವರು ಸ್ಪಂದಿಸಬೇಕಾದ ರೀತಿ ನೀತಿಗಳ ಬೋಧನಾತ್ಮಕ ವಿವರಗಳಿವೆ. ಡಾ. ಸ.ಜ. ನಾಗಲೋಟಿಮಠ ಅವರಿಂದ ರಚಿತವಾದ 'ಸತ್ತಮೇಲೆ ಸಮಾಜಸೇವೆ' ಎಂಬ ಕಿರು ಪುಸ್ತಕ ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟವಾಗಿದೆ. ಸತ್ತ ಮೇಲೆ ಮಾನವನ ಅವಯವಗಳನ್ನು ದಾನ ಮಾಡುವುದರ ಬಗ್ಗೆ

ಇದರಲ್ಲಿ ವಿವರಗಳಿವೆ. ಡಾ. ಕೆ.ಎ. ಅಶೋಕ್ ಪೈ ರವರ 'ಚಿತ್ತ ವೈಚಿತ್ರ' ಮನೋವೈಜ್ಞಾನಿಕ ಸತ್ಯಕಥೆಗಳ ಸಂಕಲನ ಇದಾಗಿದೆ. ಇದೇ ಲೇಖಕರ 'ನಿಮ್ಮದು ಸಮಸ್ಯೆಯ ಮಗುವೇ' ಪುಸ್ತಕದ ೧೦,೦೦೦ ಪ್ರತಿಗಳು ಈ ವರ್ಷ ಮಾರಾಟವಾಗಿದ್ದರೆ, ಬೆಂಗಳೂರಿನ ಡಾ. ಸಿ.ಆರ್. ಚಂದ್ರಶೇಖರ್ ಅವರ 'ಭಾನಾಮತಿ'ಯ ಮಾರಾಟ ೨೫,೦೦೦ ಪ್ರತಿಗಳನ್ನು ದಾಟಿದೆ.

ಪ್ರಸಕ್ತ ವರ್ಷದಲ್ಲಿ ಕನ್ನಡ ವಿಶ್ವವಿದ್ಯಾಲಯದಲ್ಲಿ 'ಕನ್ನಡ ವೈದ್ಯ ವಿಶ್ವಕೋಶ' ಎಂಬ ಬಹುಪಯೋಗಿ ಪ್ರತಿಷ್ಠಿತ ಗ್ರಂಥದ ತಯಾರಿ ನಡೆದಿದೆ. ಆರೋಗ್ಯ ಮತ್ತು ವೈದ್ಯಕೀಯದ ವಿವಿಧ ವಿಷಯಗಳ ಬಗೆಗೆ ವಿವಿಧ ಲೇಖಕರಿಂದ ಬರವಣಿಗೆಗಳನ್ನು ತಯಾರಿಸಿ, ಚಿತ್ರಗಳ ಸಹಿತ ಪ್ರಕಟಿಸುವ ಯೋಜನೆ ಇದು. ಭಾರತೀಯ ಭಾಷೆಗಳಲ್ಲಿ ಅಪರೂಪದೆನ್ನಬಹುದಾದ ಈ ಕೃತಿಯ ಪ್ರಕಟಣೆ ವೈದ್ಯಕೀಯ ಸಾಹಿತ್ಯದ ಒಂದು ಮೈಲಿಗಲ್ಲಾಗುತ್ತದೆಂದು ಭಾವಿಸಲಾಗಿದೆ.

ಈ ವರ್ಷ ಕರ್ನಾಟಕದ ವೈದ್ಯರನೇಕರು ಹಲವು ಪ್ರಶಸ್ತಿ, ಗೌರವಗಳನ್ನು ಗಳಿಸಿದ್ದಾರೆ. ಈ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಡಾ. ಮೆಹಬೂಬಖಾನ್ ಮತ್ತು ಬೆಳಗಾಂನ ಹಿರಿಯ ವೈದ್ಯ ಡಾ. ಮೆಟ್‌ಗುಡ್‌ರರಿಗೆ ಲಭಿಸಿದೆ. ಬೆಂಗಳೂರು ನಗರದ ಡಾ. ಎಸ್. ಭೀಮಪ್ಪ ಅವರಿಗೆ ಬಿ.ಸಿ. ರಾಯ್ ರಾಷ್ಟ್ರೀಯ ಪ್ರಶಸ್ತಿ ಲಭ್ಯವಾಗಿದೆ. ಡಾ. ಸ.ಜ. ನಾಗಲೋಟಿಮಠ ಅವರು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಮತ್ತು ಅಖಿಲ ಭಾರತ ವ್ಯಾಪ್ತಿಯ ಇಂಡಿಯನ್ ಅಸೋಸಿಯೇಷನ್ ಆಫ್ ಪೆಥಾಲಜಿ ಮತ್ತು ಮೈಕ್ರೊಬಯಾಲಜಿ ಸಂಸ್ಥೆಗಳ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ಗುಲ್ಬರ್ಗಾದ ಡಾ. ಪಿ.ಎಸ್. ಶಂಕರ್ ಅವರಿಗೆ ಜರ್ನಲ್ ಆಫ್ ಅಸೋಶಿಯೇಷನ್ ಆಫ್ ಫಿಜೀಷಿಯನ್‌ದ ೧೯೯೩ರ ಅತ್ಯುತ್ತಮ ಪರಾಮರ್ಶಕ ಪ್ರಶಸ್ತಿ ದೊರೆತಿದೆ. ಅವರ ಪುಸ್ತಕ 'ಆರೋಗ್ಯ ಸಂಕೀರ್ಣ'ಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಡಾ.ಎಚ್. ನರಸಿಂಹಯ್ಯ ದತ್ತಿ ಬಹುಮಾನ ದೊರೆತಿದೆ. ಮಂಗಳೂರಿನ ಕಸ್ತೂರಿಬಾ ಮೆಡಿಕಲ್ ಕಾಲೇಜಿನ ಪ್ರಾಂಶುಪಾಲರಾದ ಡಾ.ಬಿ.ಎಂ. ಹೆಗ್ಡೆಯವರು ಇಂಗ್ಲೆಂಡಿನ ಪ್ರತಿಷ್ಠಿತ ರಾಯಲ್ ಕಾಲೇಜ್ ಆಫ್ ಫಿಜಿಸಿಯನ್ಸ್‌ನ ಪರೀಕ್ಷರಾಗಿ ನೇಮಕವಾಗಿರುವುದು ಹೆಮ್ಮೆಯ ವಿಷಯ. ಇಂಗ್ಲೆಂಡಿನ ಪ್ರತಿಷ್ಠಿತ 'ರಿಚ್ಮಂಡ್ ಫೆಲೋಷಿಪ್' ಡಾ. ಕೆ.ಎ. ಅಶೋಕ ಪೈ ಅವರಿಗೆ ೧೯೯೩ರಲ್ಲಿ ದೊರೆತಿದೆ. ಈ ದಿಸೆಯಲ್ಲಿ ಅವರು ಮತಧರ್ಮ ಮತ್ತು ಮನೋವಿಜ್ಞಾನಗಳ ಸಂಬಂಧದ ಬಗ್ಗೆ ತಮ್ಮ ಅನ್ವೇಷಣೆಯನ್ನು ಮುಂದುವರಿಸಿದ್ದಾರೆ. ಕರ್ನಾಟಕದ ೧೯೯೩ರಲ್ಲಿ ವೈದ್ಯಕೀಯ ಕ್ಷೇತ್ರದಲ್ಲಿ ಸಾಕಷ್ಟು ಸಂಶೋಧನೆ, ಪ್ರಕಟಣೆ ಹಾಗೂ ಮನೋವೈಜ್ಞಾನಿಕ ವಿಶ್ಲೇಷಣೆ ಆಶಾದಾಯಕವಾಗಿ ನಡೆದಿದೆ.

# ಕೃಷಿ– ತೋಟಗಾರಿಕೆ

*ಎಂ. ಎ. ನಾರಾಯಣರೆಡ್ಡಿ, ಪ್ರೆ. ಟಿ. ನಾರಾಯಣರೆಡ್ಡಿ*

ಇಂದು ಕೃಷಿಯ ಒಂದು ಬಹುಮುಖ್ಯ ಅಂಗ ತೋಟಗಾರಿಕೆ. ತೋಟಗಾರಿಕೆ ಅಂದ ಕೂಡಲೇ ಇಡೀ ದೇಶದಲ್ಲಿ ಕರ್ನಾಟಕಕ್ಕೆ ವಿಶಿಷ್ಟ ಸ್ಥಾನಮಾನ ಇದೆ. ಕನ್ನಡಿಗರ ರಾಜಧಾನಿ ಬೆಂಗಳೂರಿಗೆ 'ಉದ್ಯಾನ ನಗರಿ' ಎಂದೇ ಹೆಸರು. ನಮ್ಮ ರಾಜ್ಯದಲ್ಲಿ ಸಂಪನ್ಮೂಲಗಳು ಹೇರಳ. ಅನುಕೂಲಕರ ಹವಾಗುಣ ಮತ್ತು ಭೂಗುಣಗಳನ್ನು ನಿಸರ್ಗ ನಮಗೆ ಪ್ರಸಾದಿಸಿದೆ. ನಮ್ಮ ರೈತವರ್ಗದವರು ಕಷ್ಟಪಟ್ಟು ದುಡಿಯುವ ಜನ. ಅವರ ನೆರವಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳೆರಡೂ ಸಿದ್ಧ. ರೈತರ ನೆರವಿಗೆ ಅಂದರೆ ತೋಟಗಾರಿಕೆಯ ಪ್ರಗತಿಗೆ ಕೃಷಿ ವಿಶ್ವವಿದ್ಯಾನಿಲಯಗಳು, ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆ, ತೆಂಗು ಅಭಿವೃದ್ಧಿ ಮಂಡಳಿ, ಏಲಕ್ಕಿ ಮಂಡಳಿ, ಕಾಫಿ ಮಂಡಳಿ ಮುಂತಾಗಿ ತಾಂತ್ರಿಕ ಹಾಗೂ ಆರ್ಥಿಕ ನೆರವನ್ನು ಒದಗಿಸಿದರೆ ತೋಟಗಾರಿಕೆ ಇಲಾಖೆ ಸರ್ವವಿಧದಲ್ಲಿ ಅವರಿಗೆ ಬೆನ್ನೆಲುಬಾಗಿ ನಿಂತಿದೆ.

ರಾಜ್ಯದಲ್ಲಿ ಒಟ್ಟು ಎಂಟು ಪ್ರಾದೇಶಿಕ ವಿಭಾಗಗಳು ಹಾಗೂ ಹತ್ತು ಕೃಷಿ ಹವಾಗುಣಗಳ ವಲಯಗಳಿದ್ದು ವಿವಿಧ ಹಣ್ಣು, ತರಕಾರಿ, ಹೂವು, ಪ್ಲಾಂಟೇಷನ್ ಮತ್ತು ಸಂಬಾರಬೆಳೆಗಳು, ಔಷಧೀಯ ಹಾಗೂ ಸುಗಂಧ ದ್ರವ್ಯ ಬೆಳೆಗಳನ್ನು ಲಾಭದಾಯಕವಾಗಿ ಬೆಳೆಯಬಹುದಾಗಿದೆ. ಬೆಂಗಳೂರಿನ ಮೆ. ಇಂಡೋ ಅಮೆರಿಕನ್ ಹೈಬ್ರಿಡ್ ಸೀಡ್ಸ್ ಕಂಪೆನಿ, ಪಯೋನೀರ್ ಸೀಡ್ಸ್, ನಾಮಧಾರಿ ಸೀಡ್ಸ್ ಮುಂತಾದ ಖಾಸಗಿ ಸಂಸ್ಥೆಗಳೂ ಸಹ ರೈತರಿಗೆ ಉತ್ತಮ ಬೀಜ ಹಾಗೂ ಸಸ್ಯ ಸಾಮಗ್ರಿಗಳನ್ನು ಮತ್ತು ತಾಂತ್ರಿಕ ನೆರವನ್ನು ಒದಗಿಸುತ್ತಿರುವುದು ಶ್ಲಾಘನೀಯ. ಉತ್ತಮ ಸರಕನ್ನು ಇತರ ರಾಜ್ಯಗಳಿಗೆ ಹಾಗೂ ವಿದೇಶಗಳಿಗೆ ರಫ್ತು ಮಾಡುವ ಪ್ರಯತ್ನಗಳು ದ್ವಿಗುಣಗೊಂಡಿವೆ. ಹೆಚ್ಚುವರಿ ಸರಕನ್ನು ಸಂಸ್ಕರಿಸಿ ಜೋಪಾನ ಮಾಡುವಲ್ಲಿ ನಮ್ಮ ರಾಜ್ಯ ಹಿಂದೆ ಬಿದ್ದಿಲ್ಲ.

ಪ್ರಸ್ತುತ ಕರ್ನಾಟಕದಲ್ಲಿ ಸುಮಾರು ೧೨.೪೯ಲಕ್ಷ ಹೆಕ್ಟೇರುಗಳಲ್ಲಿ ತೋಟದ ಬೆಳೆಗಳ ಬೇಸಾಯವಿದ್ದು ಅವುಗಳ ವಾರ್ಷಿಕ ಉತ್ಪತ್ತಿ ಸುಮಾರು ೯೫.೫೦ ಲಕ್ಷ ಮೆಟ್ರಿಕ್ ಟನ್ನುಗಳಷ್ಟಿದೆಯೆಂದು ಅಂದಾಜು. ಅದರಿಂದ ರಾಜ್ಯಕ್ಕೆ ಸುಮಾರು ೪೨೫೦ಕೋಟಿ ರೂಪಾಯಿಗಳಷ್ಟು ವಾರ್ಷಿಕ ವರಮಾನ ಲಭ್ಯ. ಈ ವರಮಾನವು ಕೃಷಿ ಉತ್ಪನ್ನಗಳ ಒಟ್ಟು ಆದಾಯದ ಶೇಕಡಾ ೪೦ ರಷ್ಟು; ಈ ಎಲ್ಲ ಅಂಶಗಳನ್ನು ಮೆಲಕು ಹಾಕಿದಾಗ

ನಮ್ಮ ರಾಜ್ಯದಲ್ಲಿ ತೋಟಗಾರಿಕೆಗೆ ಉಜ್ವಲ ಭವಿಷ್ಯವಿದೆ ಎಂದು ದೃಢವಾಗಿ ಹೇಳಬಹುದು.

ತೋಟಗಾರಿಕೆ ಅಭಿವೃದ್ಧಿಯ ಬಹುತೇಕ ಭಾಗ ತೋಟಗಾರಿಕೆ ಇಲಾಖೆಗೆ ಸೇರಿದ್ದು, ಪ್ರತಿ ತಾಲೂಕಿನಲ್ಲೂ ಸುಸಜ್ಜಿತ ಫಾರ್ಮ್, ನರ್ಸರಿ, ಸಿಬ್ಬಂದಿ ಮುಂತಾಗಿ ಇವೆ.

ಈ ಸಾಲಿನ ಪ್ರಗತಿಯನ್ನು ವಿವಿಧ ಶಿರೋನಾಮೆಗಳ ಅಡಿಯಲ್ಲಿ ವಿವರಿಸಿದೆ.

**೧.ಹೊಸತಳಿ ಮತ್ತು ಮಿಶ್ರತಳಿಗಳ ಉತ್ಪಾದನೆ**

ತೋಟದ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸಲು, ರೋಗ ಮತ್ತು ಕೀಟಗಳಿಗೆ ನಿರೋಧಕವಿರುವ ತಳಿಗಳು ಹಾಗೂ ಬೇರು ಸಸಿಗಳ ಉತ್ಪಾದನೆ, ವಿವಿಧ ಹವಾ ಮತ್ತು ಭೂಗುಣಗಳಿಗೆ ಹೊಂದಿಕೊಂಡು ಬೆಳೆಯಬಲ್ಲ ತಳಿಗಳ ಉತ್ಪಾದನೆ ಬಲು ಅಗತ್ಯ. ಈ ದಿಶೆಯಲ್ಲಿ ಬೆಂಗಳೂರಿನ ಹೆಸರಘಟ್ಟದಲ್ಲಿನ ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆ, ಬೆಂಗಳೂರು ಹಾಗೂ ಧಾರವಾಡ ಕೃಷಿ ವಿಶ್ವವಿದ್ಯಾನಿಲಯ ಹಲವಾರು ಅತ್ಯುತ್ತಮ ಕೊಡುಗೆಗಳನ್ನು ಬಿಡುಗಡೆ ಮಾಡಿವೆ. ಹೆಸರಾಂತ ಖಾಸಗಿ ಸಂಸ್ಥೆಗಳಾದ ಮೆ. ಇಂಡೋ ಅಮೆರಿಕನ್ ಹೈಬ್ರಿಡ್ ಸೀಡ್ಸ್ ಕಂಪೆನಿ ಮುಂತಾದವರೂ ಸಹ ಈ ದಿಶೆಯಲ್ಲಿ ಅಗ್ರಸ್ಥಾನದಲ್ಲಿ ಇದ್ದಾರೆ. ಇವರೆಲ್ಲರ ಶ್ರಮ ಮತ್ತು ದುಡಿಮೆಗಳು ಸ್ಮರಣೀಯ. ಕೆಲವೊಂದು ತಳಿಗಳು/ಮಿಶ್ರತಳಿಗಳು ಹೀಗಿವೆ:

(ಅ) ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆ, ಬೆಂಗಳೂರು :

(೧) ಪಪಾಯ:ಪಿಂಕ್‌ಫ್ಲೆಷ್‌ಸ್ವೀಟ್

(೨) ಈರುಳ್ಳಿ: ಅರ್ಕಾಪೀತಾಂಬರ್

(೩) ಬಟಾಣಿ: ಅರ್ಕಾಅಜಿತ್

(೪) ಗುಲಾಬಿ ಹೂವು: ಡಾ. ಜಿ. ಎಸ್. ರಾಂಧವಾ

(೫) ಗುಲಾಬಿ ಹೂವಿನ ಬೇರು ಸಸಿ: ನಿಷ್ಕಂಟ್(ಮುಳ್ಳುರಹಿತ)

(೬) ಗ್ಲಾಡಿಯೋಲಸ್: ಕುಂಕುಂ

(೭) ಸುಗಂಧರಾಜ ಹೂವು: ಸುವಾಸಿನಿ(ಡಬ್ಬಲ್ ವರೈಟಿ)

(ಆ)ಧಾರವಾಡ ಕೃಷಿ ವಿಶ್ವವಿದ್ಯಾನಿಲಯ :

(೧) ಸಪೋಟ: ಧಾರವಾಡ ಸಪೋಟ ಹೈಬ್ರಿಡ್-೧ (ಡಿ ಎಸ್ ಎಚ್-೧)

(೨) ಕರಿಬೇವು: ಸುವಾಸಿನಿ

(೯) ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ :

(೧) ಉಳ್ಳಾಲ ಗೋಡಂಬಿ ಸಂಶೋಧನಾ ಕೇಂದ್ರದ ಕೊಡುಗೆ:ಉಳ್ಳಾಲ-೨ ಗೋಡಂಬಿ

(೨) ಚಿಂತಾಮಣಿ ಕೃಷಿ ಸಂಶೋಧನಾ ಕೇಂದ್ರದ ಕೊಡುಗೆ: ಚಿಂತಾಮಣಿ-೧ ಗೋಡಂಬಿ

**೨. ಅತ್ಯುತ್ತಮ ವಿದ್ಯಾರ್ಥಿಗಳ ತಯಾರಿ**

ಬೆಂಗಳೂರು ಮತ್ತು ಧಾರವಾಡ ಕೃಷಿ ವಿಶ್ವವಿದ್ಯಾನಿಲಯಗಳ ತೋಟಗಾರಿಕೆ ವಿಭಾಗಗಳು ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆಯ ತೋಟಗಾರಿಕಾ ವಿಜ್ಞಾನಿಗಳ ನೆರವಿನಿಂದ ಹಣ್ಣಿನ ಬೆಳೆಗಳು, ತರಕಾರಿ, ಪ್ಲಾಂಟೇಷನ್, ಹೂಬೆಳೆಗಳು, ಔಷಧೀಯ ಮತ್ತು ಸುಗಂಧ ದ್ರವ್ಯ ಬೆಳೆಗಳು ಮತ್ತು ಕೊಯ್ಲಿನ ನಂತರದ ಸಂಸ್ಕರಣೆ ಮತ್ತು ಜೋಪಾಸನೆಗಳಲ್ಲಿ ವಿದ್ಯಾರ್ಥಿಗಳಿಗೆ ಪಾಠ ಪ್ರವಚನ ಹಾಗೂ ಸಂಶೋಧನೆಗಳನ್ನು ನೀಡಿ ಅತ್ಯುತ್ತಮ ವಿದ್ಯಾರ್ಥಿಗಳನ್ನು ರೂಪಿಸಿವೆ.

**೩. ಅತ್ಯುತ್ತಮ ತೋಟಗಾರಿಕಾ ಸಾಹಿತ್ಯ ನಿರ್ಮಾಣ**

ತೋಟಗಾರಿಕೆಯ ಅಭಿವೃದ್ಧಿಗೆ ಉತ್ತಮ ಸಾಹಿತ್ಯದ ಅಗತ್ಯ ಬಹಳ. ಕೃಷಿ ವಿಶ್ವವಿದ್ಯಾನಿಲಯಗಳು, ತೋಟಗಾರಿಕಾ ಇಲಾಖೆ, ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆಗಳು ವಿದ್ಯಾರ್ಥಿಗಳಿಗೆ, ಅಧಿಕಾರಿ ವರ್ಗದವರಿಗೆ, ಇಲಾಖಾ ಸಿಬ್ಬಂದಿವರ್ಗ, ರೈತರು ಮತ್ತು ರೈತ ಮಹಿಳೆಯರಿಗೆ ತೋಟಗಾರಿಕೆ ಕುರಿತು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪುಸ್ತಕಗಳು, ಜನಪ್ರಿಯ ವೈಜ್ಞಾನಿಕ ಲೇಖನಗಳು, ತಾಂತ್ರಿಕ ಕೈಪಿಡಿಗಳು, ಹಸ್ತ ಪತ್ರಿಕೆಗಳು ಮುಂತಾಗಿ ಪ್ರಕಟಿಸಿ ಅಮೂಲ್ಯ ಜ್ಞಾನ ಸಂಪತ್ತನ್ನು ಒದಗಿಸಿವೆ. ಈ ದಿಶೆಯಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗದ ಕೊಡುಗೆ ಸ್ಮರಣೀಯ. ಗಾಂಧಿ ಕೃಷಿ ವಿಜ್ಞಾನ ಕೇಂದ್ರದ ತೋಟಗಾರಿಕೆ ವಿಭಾಗವು ಎರಡು ಪುಸ್ತಕ ಮತ್ತು ಇಪ್ಪತ್ತೆರಡು ಜನಪ್ರಿಯ ವೈಜ್ಞಾನಿಕ ಲೇಖನಗಳನ್ನು ಪ್ರಕಟಿಸಿದೆ.

**೪. ಸಂಶೋಧನೆ**

ತೋಟಗಾರಿಕೆಯಲ್ಲಿ ಸಂಶೋಧನೆಗೆ ಹೆಚ್ಚಿನ ಒತ್ತು ಕಂಡುಬರುವುದು. ಭಾರತೀಯ ತೋಟಗಾರಿಕೆ ಸಂಶೋಧನಾ ಸಂಸ್ಥೆ, ಕೃಷಿ ವಿಶ್ವವಿದ್ಯಾನಿಲಯಗಳು ಹಾಗೂ ಅವುಗಳ ಸಂಶೋಧನಾ ಕೇಂದ್ರಗಳು, ಕೇಂದ್ರೀಯ ಔಷಧಿ ಮತ್ತು ಸುಗಂಧ ದ್ರವ್ಯ ಬೆಳೆಗಳ ಸಂಶೋಧನಾ ಸಂಸ್ಥೆ, ಮೈಸೂರಿನಲ್ಲಿರುವ ಕೇಂದ್ರೀಯ ಆಹಾರ ಸಂಶೋಧನಾ ಸಂಸ್ಥೆ, ಬಾಳೆಹೊನ್ನೂರಿನ ಕಾಫಿ ಸಂಶೋಧನಾ ಕೇಂದ್ರ, ತೆಂಗು ಅಭಿವೃದ್ಧಿ ಮಂಡಳಿ ಮುಂತಾದುವು ಸಂಶೋಧನೆಯ ಹೆಚ್ಚಿನ ಭಾಗವನ್ನು ಹಂಚಿಕೊಂಡರೆ ತೋಟಗಾರಿಕಾ ಇಲಾಖೆ ಹಾಗೂ ಇತರ ಖಾಸಗಿ ಸಂಸ್ಥೆಗಳೂ ಸಹ ಅಷ್ಟೆ ಆಸಕ್ತಿಯನ್ನು ಹೊಂದಿವೆ. ಒಟ್ಟಾರೆ ಹೊಸ ಹೊಸ ತಂತ್ರಜ್ಞಾನ ಮತ್ತು ತಿಳಿವಳಿಕೆಗಳು ನಮ್ಮ ರೈತರಿಗೆ ಸಕಾಲದಲ್ಲಿ ತಲುಪುತ್ತಿರುವುದು ಗಮನಾರ್ಹ.

**೫. ಬೋಧನೆ**

ಬೋಧನೆಯ ಜೊತೆಗೆ ಪ್ರಾತ್ಯಕ್ಷಿಕೆಗಳೂ ಉಂಟು. ವಿದ್ಯಾರ್ಥಿಸಮುದಾಯಕ್ಕೆ ಪ್ರವಾಸದ ಅನುಭವವನ್ನೂ ಸಹ ಒದಗಿಸಲಾಗುವುದು. ಅದರ ಜೊತೆಗೆ ಕೆಲಕಾಲ ರೈತರ ಹೊಲತೋಟಗಳಲ್ಲಿನ ಬೆಳೆಗಳ ಬಗ್ಗೆ ತಿಳಿಯಲು ಹಳ್ಳಿಗಳಲ್ಲಿ ತಂಗುವ ವ್ಯವಸ್ಥೆ ಸಹ ಇದೆ. ವಿಸ್ತರಣಾ ವಿಭಾಗದ ಕೊಡುಗೆ ಅಪಾರ. ಯಾವುದೇ ಉಪಯುಕ್ತ ಮಾಹಿತಿ ಅಥವಾ ಹೊಸ ವಿಚಾರಗಳನ್ನು ರೈತರಿಗೆ ತಲುಪಿಸುವಲ್ಲಿ ವಿಸ್ತರಣಾ ವಿಭಾಗವು ಹೆಚ್ಚಿನ ಶ್ರಮವಹಿಸುತ್ತದೆ.

**೬. ಮಾಹಿತಿ-ತಂತ್ರಜ್ಞಾನಗಳ ಪೂರೈಕೆ**

ತೋಟಗಾರಿಕೆಗೆ ಸಂಬಂಧಿಸಿದ ವಿಚಾರಗಳನ್ನು ರೈತರಿಗೆ ಹಲವಾರು ವಿಧದಲ್ಲಿ ತಿಳಿಸಲಾಗುತ್ತಿದೆ. ವಿಶ್ವವಿದ್ಯಾನಿಲಯಗಳ ತಜ್ಞರು, ಇಲಾಖೆಯ ಅಧಿಕಾರಿಗಳು, ಖಾಸಗಿ ಸಂಸ್ಥೆಗಳ ನಿಪುಣರು ಮುಂತಾಗಿ ಆಕಾಶವಾಣಿ, ದೂರವಾಣಿ, ಪತ್ರಮುಖೇನ, ಪತ್ರಿಕೆಗಳ ಮೂಲಕ ಹಾಗೂ ಸಮಕ್ಷಮ ಅವರಿಗೆ ದೊರೆಯಲು ಶ್ರಮಿಸುತ್ತಿರುವುದು ಪ್ರಶಂಸನೀಯ. ಗಾಂಧಿ ಕೃಷಿವಿಜ್ಞಾನ ಕೇಂದ್ರದ ತೋಟಗಾರಿಕೆ ವಿಭಾಗವೊಂದೇ ಈ ಸಾಲಿನಲ್ಲಿ ೧೨ ಆಕಾಶವಾಣಿ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದೆ. ಅದರ ಜೊತೆಗೆ ೩೨೦ ರೈತರ ಪ್ರಶ್ನೆ-ಸಂದೇಹಗಳಿಗೆ ಅಂಚೆ ಮೂಲಕ ಉತ್ತರ ನೀಡಿದೆ.

**೭. ಗ್ರಂಥಾಲಯಗಳು**

ಬೆಂಗಳೂರಿನ ಹಾಗೂ ಧಾರವಾಡದ ಕೃಷಿ ವಿಶ್ವವಿದ್ಯಾನಿಲಯಗಳ, ಭಾರತೀಯ ತೋಟಗಾರಿಕೆ ಸಂಶೋಧನಾ ಸಂಸ್ಥೆ, ಲಾಲ್‌ಬಾಗ್‌ದಲ್ಲಿರುವ ತೋಟಗಾರಿಕಾ ಇಲಾಖೆಯ ಡಾ. ಮರೀಗೌಡ ಸ್ಮಾರಕ ಗ್ರಂಥಾಲಯ ಮುಂತಾದುವು ಹೆಸರಾಂತ ಜ್ಞಾನ ಭಂಡಾರಗಳಾಗಿವೆ. ಇವು ಆಗಿಂದಾಗ್ಗೆ ಇತರರ ಸಹಕಾರದೊಂದಿಗೆ 'ಬುಕ್ ಫೇರ್' ಗಳನ್ನು ಏರ್ಪಡಿಸಿ ಪುಸ್ತಕ ಪ್ರೇಮಿಗಳಿಗೆ ಇದ್ದಲ್ಲಿಯೇ ಪುಸ್ತಕಗಳನ್ನು ದೊರೆಯುವಂತೆ ಮಾಡುತ್ತಿರುವುದು ಸಂತಸದ ವಿಚಾರ. ವಿದ್ಯಾರ್ಥಿಗಳಿಗೆ ರಿಯಾಯಿತಿ ದರದಲ್ಲಿ ಸಾಹಿತ್ಯ ಪ್ರಕಟಣೆಗಳು ಲಭ್ಯ ಇದೆ.

**೮. ಪ್ರದರ್ಶನಗಳು, ಕೃಷಿ ಮೇಳ ಇತ್ಯಾದಿ**

೧. ಸುವರ್ಣ ಮಹೋತ್ಸವ ಸಂಕಿರಣ ೧೯೯೩ ಮೇ ೨೪ ರಿಂದ ೨೮ರ ವರೆಗೆ ಬೆಂಗಳೂರಿನ ಹೋಟೆಲ್ ಅಶೋಕಾದಲ್ಲಿ ನಡೆಯಿತು. ತೋಟಾಗಾರಿಕೆಯಲ್ಲಿನ ಸಂಶೋಧನೆ ಹಾಗೂ ಬದಲಾವಣೆಗಳ ಕುರಿತು ಈ ಸಂಕಿರಣವನ್ನು ಹಾರ್ಟಿಕಲ್ಚರಲ್ ಸೊಸೈಟಿ ಆಫ್ ಇಂಡಿಯಾ, ಐ.ಸಿ.ಎ.ಆರ್. ಮುಂತಾದ ಸಂಸ್ಥೆಗಳು ಒಟ್ಟಾಗಿ ನಡೆಸಿಕೊಟ್ಟವು. ದೇಶ ವಿದೇಶಗಳಿಂದ ನೂರಾರು ಜನ ವಿಜ್ಞಾನಿಗಳು, ರೈತರು, ಉದ್ದಿಮೆದಾರರು ಮುಂತಾಗಿ ಭಾಗವಹಿಸಿದ್ದರು.

೨. ಸ್ವಾತಂತ್ರ್ಯ ದಿನಾಚರಣೆಯ ಅಂಗವಾಗಿ ೧೯೯೩ನೇ ಆಗಸ್ಟ್ ೯ ರಿಂದ ೧೫ ರವರೆಗೆ ಅಖಿಲ ಭಾರತ ಫಲಪುಷ್ಪ ಪ್ರದರ್ಶನವನ್ನು ಮೈಸೂರು ಹಾರ್ಟಿಕಲ್ಚರಲ್ ಸೊಸೈಟಿ ಮತ್ತು ತೋಟಗಾರಿಕೆ ಇಲಾಖೆ ಏರ್ಪಡಿಸಿದ್ದುವು.

೩. ಬೆಂಗಳೂರು ಕೃಷಿವಿಶ್ವವಿದ್ಯಾನಿಲಯ, ಕೃಷಿ ಇಲಾಖೆ ಹಾಗೂ ಮತ್ತಿತರ ಇಲಾಖೆಗಳ ಸಹಕಾರದೊಂದಿಗೆ ೧೯೯೩ನೇ ಅಕ್ಟೋಬರ್ ೨೯ ಮತ್ತು ೩೦ ರಂದು ಕೃಷಿಮೇಳ ನಡೆಸಿತು.

**ತೋಟಗಾರಿಕೆ ಇಲಾಖೆಯ ಕೆಲವು ಕಾರ್ಯಚಟುವಟಿಕೆಗಳು**

(೧) *ಸಸಿಗಳ ಉತ್ಪಾದನೆ* : ತೋಟಗಾರಿಕೆ ಇಲಾಖೆ ಈ ಸಾಲಿನಲ್ಲಿ ಸುಮಾರು ೮೦ ಲಕ್ಷ ಉತ್ತಮ ಸಸಿಗಳನ್ನು ಉತ್ಪಾದಿಸಿ ರೈತರಿಗೆ ಒದಗಿಸಿದೆ. ಅದರಿಂದ ೪೫೦ ಲಕ್ಷ ರೂ.ಗಳ ವರಮಾನದ ಗಳಿಕೆಯಾಗಿದೆ. ಅದೇ ರೀತಿ ಕೃಷಿ ವಿಶ್ವವಿದ್ಯಾನಿಲಯಗಳು, ಖಾಸಗಿ ಸಂಸ್ಥೆಗಳು, ಐಸಿಎಆರ್ ಸಂಸ್ಥೆಗಳು ಸಹ ಈ ಕೆಲಸವನ್ನು ಮಾಡಿವೆ.

(೨) *ವಿಚಾರ ಸಂಕಿರಣ ಕ್ಷೇತ್ರೋತ್ಸವ ಇತ್ಯಾದಿ*: ಈ ಸಾಲಿನಲ್ಲಿ ಇಲಾಖೆಯೊಂದೇ ಸುಮಾರು ೧೩ ಪ್ರದರ್ಶನಗಳು, ೩೧ ಕ್ಷೇತ್ರೋತ್ಸವಗಳು, ೩ ವಿಚಾರ ಸಂಕಿರಣಗಳು ಹಾಗೂ ೩೦೮೯ ಯುವಕ ರೈತರು ಮತ್ತು ರೈತ ಮಹಿಳೆಯರಿಗೆ ತೋಟಗಾರಿಕೆಯಲ್ಲಿ ತರಬೇತಿಗಳನ್ನು ಒದಗಿಸಿದೆ.

(೩) *ಸಾಲಸೌಲಭ್ಯ*: ಆಸಕ್ತ ರೈತರಿಗೆ ಆರ್ಥಿಕ ನೆರವನ್ನು ಗಣನೀಯ ಪ್ರಮಾಣದಲ್ಲಿ ಕೊಡಲಾಗಿದೆ. ಇಲಾಖೆಯು ಸಾಲವಾಗಿ ಈ ಸಾಲಿನಲ್ಲಿ ೨೧.೪೦ ಕೋಟಿ ರೂ.ಗಳನ್ನು ೮೦೦೦ ಹೆಕ್ಟೇರುಗಳಷ್ಟು ತೋಟದ ಬೆಳೆಗಳ ಅಭಿವೃದ್ಧಿಗೆ ನೀಡಿದೆ. (ಕೋಷ್ಟಕ-೧)

(೪) *ಹಾಪ್‌ಕಾಮ್ಸ್*: ಇದರ ಅಡಿಯಲ್ಲಿ ೨೭೮ ಮಾರಾಟ ಮಳಿಗೆಗಳಿವೆ. ಈ ಸಾಲಿನಲ್ಲಿ ೩೪,೭೦೦ ಟನ್ನುಗಳಷ್ಟು ಸರಕನ್ನು ಖರೀದಿಸಿ ಗ್ರಾಹಕರಿಗೆ ಮಾರಾಟ ಮಾಡಲಾಗಿದೆ. ಇದು ರೈತರಿಗಾಗಿ, ರೈತರಿಂದಲೇ ನಡೆಸುವ ಸಂಸ್ಥೆ.

(೫) *ಅಣಬೆ ಪ್ರಯೋಗಶಾಲೆ*: ಜನವರಿ ೧೯೯೪ರ ಹೊತ್ತಿಗೆ ೫೯,೦೦೦ ಸ್ಪಾನ್ ಬಾಟಲ್‌ಗಳನ್ನು ತಯಾರಿಸಿ ಆಸಕ್ತರಿಗೆ ಮಾರಲಾಗಿದೆ.

(೬) *ಕಪ್ಪು, ತಲೆ ಕಂಬಳಿ ಹುಳುಗಳ ಜೈವಿಕ ಹತೋಟಿ*: ತೋಟಗಾರಿಕೆ ಇಲಾಖೆ ಮತ್ತು ಕೃಷಿ ವಿಶ್ವವಿದ್ಯಾನಿಲಯಗಳು ಪರೋಪಜೀವಿಗಳನ್ನು ಉತ್ಪಾದಿಸುವಲ್ಲಿ ಅಗ್ರಸ್ಥಾನದಲ್ಲಿವೆ. ಕೆಲವು ಖಾಸಗಿ ಸಂಸ್ಥೆಗಳೂ ಸಹ ಈ ಕೆಲಸದಲ್ಲಿ ನಿರತವಾಗಿವೆ. ತೋಟಗಾರಿಕೆ ಇಲಾಖೆಯೊಂದೇ ಜನವರಿ ೧೯೯೪ರ ಹೊತ್ತಿಗೆ ಸುಮಾರು ೩೬.೫ ಲಕ್ಷ ಪರೋಪಜೀವಿಗಳನ್ನು ಉತ್ಪಾದಿಸಿ ರೈತರಿಗೆ ಒದಗಿಸಿತು.

(೭) *ಮಣ್ಣು ಪರೀಕ್ಷೆ*: ತೋಟಗಾರಿಕೆ ಇಲಾಖೆ, ಕೃಷಿ ವಿಶ್ವವಿದ್ಯಾನಿಲಯಗಳು ಹಾಗೂ ಇತರ ಸಂಸ್ಥೆಗಳು ಈ ಕೆಲಸದಲ್ಲಿ ನಿರತವಾಗಿವೆ. ತೋಟಗಾರಿಕೆ ಇಲಾಖೆಯೊಂದೇ

ಸುಮಾರು ೧೨,೦೦೦ ಮಾದರಿಗಳನ್ನು ಪರೀಕ್ಷಿಸಿ, ಫಲಿತಾಂಶಗಳನ್ನು ರೈತರಿಗೆ ಒದಗಿಸಿದೆ. ಇತರ ಸಂಸ್ಥೆಗಳ ಪಾಲೂ ಸಹ ದೊಡ್ಡದಿದೆ.

(೮) *ಬೀಜ ಪರೀಕ್ಷೆ:* ಬೆಂಗಳೂರು ಲಾಲ್‌ಬಾಗ್‌ನ ಬೀಜ ಪರೀಕ್ಷಾ ಕೇಂದ್ರವು ಈ ಸಾಲಿನಲ್ಲಿ ೨೬೭೯ ಕೆ.ಜಿ. ಮೂಲ ಬೀಜ ಮತ್ತು ೨೨೭೩ ಕೆ.ಜಿ. ಪ್ರಮಾಣೀಕರಿಸಿದ ಬೀಜವನ್ನು ಪರೀಕ್ಷಿಸಿ, ನೆರವಾಗಿದೆ.

(೯) *ತಾಳೆ ಎಣ್ಣೆಯ ಮರಗಳ ಅಭಿವೃದ್ಧಿ:* ಈ ಕೆಲಸದಲ್ಲೂ ಸಹ ಶ್ಲಾಘನೀಯ ಪ್ರಗತಿ ಸಾಧಿಸಲಾಗಿದೆ.

(೧೦) *ಪ್ಲಾಸ್ಟಿಕ್ ಬಳಕೆ:* ತೋಟಗಾರಿಕೆಯಲ್ಲಿ ಪ್ಲಾಸ್ಟಿಕ್ ಬಳಕೆ ಹೆಚ್ಚುವಂತೆ ಮಾಡಲು ರೈತರಿಗೆ ಸಾಲ ಹಾಗೂ ತಾಂತ್ರಿಕತೆಯನ್ನು ಗಣನೀಯ ಪ್ರಮಾಣದಲ್ಲಿ ನೀಡಲಾಗಿದೆ.

**ಕೋಷ್ಟಕ-೧**

ತೋಟಗಾರಿಕೆ ಇಲಾಖೆಯಿಂದ ವಿವಿಧ ತೋಟದ ಬೆಳೆಗಳ ಅಭಿವೃದ್ಧಿಗೆ ದೊರೆಯುವ ಸಾಲದ ಆರ್ಥಿಕ ನೆರವು (ರೂ.ಗಳು)

| ಬೆಳೆ | | | ಎಕರೆಗೆ |
|---|---|---|---|
| ೧. | ತೆಂಗು | | ೭,೫೦೦ |
| ೨. | ಗೋಡಂಬಿ | | ೩,೨೦೦ |
| ೩. | ಏಲಕ್ಕಿ | | ೬,೧೨೦ |
| ೪. | ಕರಿಮೆಣಸು | (ಅ)ಕಾಫಿಯೊಂದಿಗೆ ಅಂತರ ಬೆಳೆಯಾಗಿ | ೪,೧೦೦ |
| | | (ಆ) ಅಡಿಕೆಯೊಂದಿಗೆ ಅಂತರ ಬೆಳೆಯಾಗಿ | ೬,೪೦೦ |
| ೫. | ಅಡಿಕೆ | | ೧೮,೦೦೦ |
| ೬. | ವೀಳೆದೆಲೇ | (ಅ) ಅಂಬಾಡಿ | ೧೪,೨೦೦ |
| | | (ಆ) ಕರಿಬಳ್ಳಿ | ೧೧,೬೦೦ |
| ೭. | ಮಾವು | | ೫,೦೦೦ |
| ೮. | ದ್ರಾಕ್ಷಿ | ೧) ಬೆಂಗಳೂರು ನೀಲಿ | ೫೧,೬೦೦ |
| | | ೨) ಅನಾಬಿಷಾಹಿ | ೫೪,೪೦೦ |
| | | ೩) ಥಾಂಪ್ಸನ್ ಸೀಡ್ಲೆಸ್ (೬X೬) | ೬೬,೫೦೦ |
| | | (೬"X೪") | ೭೦,೦೦೦ |
| | | (೧೧"X೫.೫") | ೬೧,೫೦೦ |

| | | | |
|---|---|---|---|
| ೯. | ಸಪೋಟ | | ೪,೨೦೦ |
| ೧೦. | ದಾಳಿಂಬೆ | (೧೨"x೧೨") | ೧೧,೬೫೦ |
| | | (೧೫"x೧೫") | ೮,೪೦೦ |
| ೧೧. | ಫೈನಾಪಲ್ | | ೧೧,೦೦೦ |
| ೧೨. | ಗುಲಾಬಿ ಹೂವು | | ೧೫,೫೦೦ |
| ೧೩. | ತರಕಾರಿಗಳು | ೧) ತೊಂಡೆ | ೧೫,೫೦೦ |
| | | ೨) ಚಪ್ಪರದ ಬದನೆ | ೧೭,೫೦೦ |
| ೧೪. | ಬೋರೆ | | ೫,೩೦೦ |



# ರಾಜಕಾರಣ

## ಕರ್ನಾಟಕ ಸರ್ಕಾರ :೧೯೯೩ ರ ಸಾಧನೆಯ ಮೇಲ್ನೋಟ

*ರವಿರಾಜ್ ಕುಂಬಾಸಿ*

---

ದಿನಗಳು, ತಿಂಗಳುಗಳು, ವರ್ಷಗಳು ಉರುಳುತ್ತಲೇ ಇರುತ್ತವೆ. ಹೊಸ ಹೊಸ ಪಕ್ಷಗಳು ಸರ್ಕಾರವನ್ನು ರಚಿಸುತ್ತವೆ; ಸಾಧ್ಯವಾದಷ್ಟು ಜನಹಿತ ಕಾರ್ಯಗಳನ್ನು ಸಾಧಿಸುತ್ತದೆ. ನಮ್ಮ ಕರ್ನಾಟಕದ ಮುಖ್ಯಮಂತ್ರಿಯಾಗಿ ಶ್ರೀ ವೀರಪ್ಪ ಮೊಯಿಲಿಯವರು ಕಳೆದ ವರ್ಷ ಅಧಿಕಾರ ಸ್ವೀಕರಿಸಿದರು. ತಮ್ಮ ನಾಯಕತ್ವದಲ್ಲಿ ಸರ್ಕಾರವನ್ನು ತೊಡಗಿಸಲು ಸಾಧನೆಯ ಮಜಲಲ್ಲಿ ಕಟಿಬದ್ಧರಾದರು. ಆರಂಭದ ದಿನಗಳಲ್ಲಿ ಇವರ ಸರ್ಕಾರದ ಸಾಧನೆಗೆ ಜನರ ಪ್ರೋತ್ಸಾಹ, ಸ್ವಾಗತ ಸಿಕ್ಕಿತು. ಅದರಲ್ಲೂ ಸ್ವಭಾವತಃ ಕವಿ, ಸಾಹಿತಿಯಾದ ಮಾರ್ಪಾಡಿ ವೀರಪ್ಪಮೊಯಿಲಿಯವರು ತಮ್ಮ ಕಲ್ಪನೆಗೆ ಇಂಬುಕೊಡುವ ಪಥದಲ್ಲಿ ಪ್ರಯತ್ನಿಸಿದರು. ತಮ್ಮ ಪಕ್ಷದವರೇ ಆದ ಭಿನ್ನಮತೀಯರೆನಿಸಿಕೊಂಡವರು ಅಡ್ಡಗಾಲನ್ನಿಟ್ಟರು. ಇಷ್ಟೆಲ್ಲ ಅಡೆ ತಡೆಗಳ ನಡುವೆಯೂ ಇವರ ನಾಯಕತ್ವದ ಕರ್ನಾಟಕ ಕೆಲವೊಂದು ಉತ್ತಮ ಸಾಧನೆಗಳನ್ನು ನೀಡಿದ್ದು ಅದನ್ನು ಸಾರ್ವಜನಿಕರಾದ ನಾವು ಅರಿಯಲೇಬೇಕಾಗಿದೆ.

**ವಿದ್ಯುತ್ ರಂಗ**

ಸಾರ್ವಜನಿಕರಿಗೆ ಹೆಚ್ಚು ಸ್ಪಂದಿಸಬಲ್ಲ ವಿಭಾಗ. ಆಗಾಗ ವಿದ್ಯುತ್ ಖೋತಾ, ಓಲ್ಟೇಜ್ ಸಮಸ್ಯೆಗಳಿಂದ ಬಳಲುತ್ತಿದ್ದ ಕರ್ನಾಟಕದ ಜನರು ಇತ್ತೀಚಿನ ದಿನಗಳಲ್ಲಿ ಬಹಳಷ್ಟು ಸುಧಾರಣೆಯನ್ನು ಕಂಡಿದ್ದಾರೆ. ವಿದ್ಯುತ್ ಸರಬರಾಜಿನಲ್ಲಿ ಹೊಸತನವಿದೆ. ಒಂದು ದಶಕದಿಂದೀಚೆಗೆ ಮೊದಲ ಬಾರಿಗೆ ಕರ್ನಾಟಕದಲ್ಲಿ ಹೆಚ್ಚಿನ ವಿದ್ಯುತ್ ಖೋತಾ ಇರಲಿಲ್ಲ. ಇದಕ್ಕೆ ಕಾರಣ ಜಲವಿದ್ಯುತ್ ಉತ್ಪಾದನೆಯಲ್ಲಿ ೧೯೯೨ಕ್ಕಿಂತ ೧೯೯೩ರಲ್ಲಿ ೧೦೭ಶೇ. ಹೆಚ್ಚುವರಿ ಉತ್ಪಾದನೆ ಹಾಗೂ ಶಾಖೋತ್ಪನ್ನ ಮಾಧ್ಯಮದಲ್ಲಿ ಶೇ.೧೩೩ ಹೆಚ್ಚಿನ ಉತ್ಪಾದನೆ ಕಾರಣವಾಯಿತು. ಅಲ್ಲದೆ ಮುಂದಿನ ದಿನಗಳಲ್ಲಿ ರಾಷ್ಟ್ರ ಹಾಗೂ ಅಂತಾರಾಷ್ಟ್ರೀಯ ಮೂಲಗಳಿಂದ ೧೬೦೦ ಕೋಟಿ ರೂಪಾಯಿ ಬಂಡವಾಳವನ್ನು

ತೊಡಗಿಸುವ ಪ್ರಯತ್ನ ಮಾಡಲಾಗಿದ್ದು ಇದರಿಂದಾಗಿ ರಾಜ್ಯದ ವಿದ್ಯುತ್ ಉತ್ಪಾದನೆಯು ೩೦೦೦ ಮೆ. ವ್ಯಾ. ಗಳಿಂದ ೭೦೦೦ ಮೆ. ವ್ಯಾ. ಗಳಿಗೆ ಹೆಚ್ಚಲಿದ್ದು ವಿದ್ಯುತ್ ಕ್ಷೇತ್ರದಲ್ಲಿ ರಾಜ್ಯ ಹೆಚ್ಚಿನ ಪ್ರಗತಿಯನ್ನು ಕಾಣಲಿದೆ.

**ಕೈಗಾರಿಕಾ ರಂಗ**

ಕೈಗಾರಿಕಾ ಅಭಿವೃದ್ಧಿ ದೃಷ್ಟಿಯಲ್ಲಿ ಕರ್ನಾಟಕ ಮುಂಚೂಣಿಯಲ್ಲಿದೆ. ಕೈಗಾರಿಕಾ ಬೆಳವಣಿಗೆಯಲ್ಲಿ ಕರ್ನಾಟಕವು ದೇಶದಲ್ಲೇ ಪ್ರಥಮ ಸ್ಥಾನವನ್ನು ಹೊಂದಿದೆ. ಈ ಹಿನ್ನೆಲೆಯಲ್ಲಿ ರಾಜ್ಯ ಸರಕಾರ ೧೯೯೩ರಲ್ಲಿ ಹೊಸ ಕೈಗಾರಿಕಾ ನೀತಿಯನ್ನು ಪ್ರಕಟಿಸಿತು. ಇದೊಂದು ಕೈಗಾರಿಕಾ ರಂಗದಲ್ಲಿ ಇಟ್ಟ ದಿಟ್ಟ ಹೆಜ್ಜೆ ಎನ್ನಬಹುದು. ಈ ನೀತಿಯನ್ವಯ ಹೊಸ ಕೈಗಾರಿಕೆಗಳನ್ನು ಆರಂಭಿಸುವವರಿಗೆ ಪ್ರೋತ್ಸಾಹವನ್ನು ಒದಗಿಸಲಾಗುತ್ತದೆ. ರಾಜ್ಯದ ಈ ನೀತಿ ಈಗಾಗಲೇ ಫಲ ನೀಡಲಾರಂಭಿಸಿದೆ. ೧೯೯೩ ರಿಂದೀಚೆಗೆ ಒಟ್ಟು ೧೦೧೮.೪೩ ಕೋಟಿ ರೂಪಾಯಿ ವೆಚ್ಚದ ಉದ್ದಿಮೆ ಸ್ಥಾಪನೆಗಾಗಿ ಅನುಮತಿ ಪತ್ರಗಳನ್ನು ನೀಡಲಾಗಿದೆ. ಕರ್ನಾಟಕ ರಾಜ್ಯ ಹಣಕಾಸು ನಿಗಮ (KSFC)ವು ೫೦೦೦ ಘಟಕಗಳಿಗೆ ಸಾಲ ನೀಡುವ ಗುರಿಯನ್ನು ಹೊಂದಿದ್ದು ೧೯೯೩ರ ಏಪ್ರಿಲ್‌ನಿಂದ ಸೆಪ್ಟೆಂಬರ್‌ವರೆಗೆ ೫೪೦೪ ಘಟಕಗಳಿಗೆ ೧೧೪.೬೭ ಕೋಟಿ ರೂ.ಗಳ ಸಾಲ ಮಂಜೂರು ಮಾಡಿ ದಾಖಲೆ ಸ್ಥಾಪಿಸಿದೆ. ವಿದೇಶಿ ಬಂಡವಾಳದಾರರ ನೆರವಿನಿಂದ ಹಲವಷ್ಟು ಕೈಗಾರಿಕೆಗಳನ್ನು ಸ್ಥಾಪಿಸುವಲ್ಲಿ ೧೯೯೩ ರಿಂದೀಚೆಗೆ ಮಹತ್ವದ ನಿರ್ಧಾರಗಳನ್ನು ಕೈಗೊಳ್ಳಲಿದೆ.

**ಕ್ಷೀರ ಯೋಜನೆ**

ಪ್ರಾಥಮಿಕ ಹಂತದಲ್ಲಿ ಶಿಕ್ಷಣ ಸಂಸ್ಥೆಗಳು ಗುರುಕುಲ ಮಾದರಿಯಲ್ಲಿರಬೇಕು. ಶಿಕ್ಷಕರು ಸಹ ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಸಹಕಾರಿಯಾಗಬೇಕು. ಮಕ್ಕಳೊಂದಿಗೆ ಮಾನವೀಯ ದೃಷ್ಟಿ ಉಳ್ಳವರಾಗಿರಬೇಕು. ಅಲ್ಲದೆ ವೈದ್ಯಶಾಸ್ತ್ರದ ಪ್ರಕಾರ ೭ ರಿಂದ ೧೨ ವರ್ಷದವರೆಗಿನ ಮಕ್ಕಳಿಗೆ ಪೌಷ್ಟಿಕಾಂಶದ ಕೊರತೆ ಇರುತ್ತದೆ. ಈ ದಿಸೆಯಲ್ಲಿ ಬಾಲಕ್ಷೀರ ಯೋಜನೆಯನ್ನು ಸರ್ಕಾರ ವ್ಯಾಪಕವಾಗಿ ಆರಂಭಿಸಿದೆ. ಈಗ ೧೨ ಲಕ್ಷ ಮಕ್ಕಳು ಮಾತ್ರ ಇದರ ಉಪಯೋಗ ಪಡೆಯುತ್ತಿದ್ದು ಮುಂದಿನ ದಿನಗಳಲ್ಲಿ ೬೨೫ಲಕ್ಷ ಮಕ್ಕಳಿಗೆ ಒದಗುವ ನಿರೀಕ್ಷೆಯನ್ನು ಹೊಂದಿದೆ. ಇಲ್ಲಿ ಅನುದಾನಿತ ಶಾಲಾ ವಿದ್ಯಾರ್ಥಿಗಳಿಗೆ ಈ ಅವಕಾಶ ಒದಗಿಸಿಲ್ಲ. ತಾರತಮ್ಯ ತೋರಿದ್ದಾರೆ ಎನ್ನುವ ವಿವಾದ, ಪ್ರತಿಕ್ರಿಯೆಗಳು ವ್ಯಕ್ತವಾಗಿವೆ.

**ಮಹಿಳಾ ಕಲ್ಯಾಣ**

ಮಹಿಳೆಯರಿಗೆ ಸರ್ಕಾರದ ಎಲ್ಲಾ ಸೌಲಭ್ಯಗಳಲ್ಲಿ ಶೇ. ೩೦ ಆದ್ಯತೆಯನ್ನು ಕೊಡಲಾಗಿದೆ. ಈ ಸೌಲಭ್ಯವನ್ನು ಪ್ರಥಮವಾಗಿ ನೀಡಿದ ಕೀರ್ತಿ ಕರ್ನಾಟಕಕ್ಕೆ ಲಭಿಸಿದೆ. ಮೊಯಿಲಿಯವರ ಸರ್ಕಾರವು ಈ ಸಾಧನೆಯನ್ನು ನೀಡಿದ್ದಲ್ಲದೆ ಇನ್ನು ಒಂದು ಹೆಜ್ಜೆ ಮುಂದುವರಿದು ಕಾಯಿದೆಯನ್ನು ತಿದ್ದುಪಡಿ ಮಾಡಿ ಆ ಪ್ರಕಾರ ಶೇ. ೩೦ ಪ್ರಾಥಮಿಕ ಸರ್ಕಾರಿ ಸಂಘಗಳಿಂದ ಹಿಡಿದು ರಾಜ್ಯ ಮಟ್ಟದ ಅಪೆಕ್ಸ್, ಸರ್ಕಾರಿ ಸಂಘಗಳವರೆಗೆ ಎಲ್ಲಾ ಹಂತದಲ್ಲಿ ಶೇ. ೩೦ ನಿರ್ದೇಶಕರ ಹುದ್ದೆಗಳನ್ನು ಮಹಿಳೆಯರಿಗಾಗಿ

ಕಾದಿರಿಸಲಾಗಿದೆ.

ಈ ಸಾಧನೆಗಳಲ್ಲದೆ ಇನ್ನೂ ಕೆಲವು ಕ್ಷೇತ್ರಗಳಲ್ಲಿನ ಸಾಧನೆಯ ಮೇಲ್ನೋಟ ಹೀಗಿದೆ. ೧೯೯೩ರಲ್ಲಿ ಅರಣ್ಯ ಇಲಾಖೆಗೆ ೧೦ ಕೋಟಿ ಸಸಿಗಳನ್ನು ನೆಡುವ ಗುರಿಯನ್ನು ನೀಡಲಾಗಿದ್ದು ಅದನ್ನು ಸಮರ್ಪಕವಾಗಿ ಸಾಧಿಸಲಾಗಿದೆ. ಕೇವಲ ಸಸಿಯನ್ನು ನೆಡುವುದು ಮಾತ್ರವಲ್ಲದೆ ಅದರ ರಕ್ಷಣೆಗೆ ಸರ್ಕಾರ ಹಲವಷ್ಟು ಕ್ರಮಗಳನ್ನು ಕೈಗೊಂಡಿದೆ. ಅರಣ್ಯೀಕರಣಕ್ಕಾಗಿ ೧೯೯೪ರ ಮಾರ್ಚ್‌ವರೆಗೆ ೧೦ ಕೋಟಿ ರೂ ವೆಚ್ಚಮಾಡಲಾಗಿದೆ.

ಗ್ರಾಮಾಂತರ ರಸ್ತೆ ಸೌಲಭ್ಯಗಳನ್ನು ಕಲ್ಪಿಸುವ ನಿಗದಿತ ಗುರಿಯನ್ನು ಹಾಕಿಕೊಳ್ಳಲಾಗಿದ್ದು ಅದನ್ನು ತೀವ್ರವಾಗಿ ಅನುಷ್ಠಾನಗೊಳಿಸಲು ಕಾರ್ಯಕ್ರಮಗಳನ್ನು ಸರ್ಕಾರ ಹಮ್ಮಿಕೊಂಡಿದೆ. ಉದಾಹರಣೆಗೆ ಕನಿಷ್ಠ ಅವಶ್ಯಕತೆ ಕಾರ್ಯಕ್ರಮದನ್ವಯ ೧೯೯೩ ರ ಸೆಪ್ಟೆಂಬರ್ ಕೊನೆಯ ವೇಳೆಗೆ ೧೮೮ ಕಿ. ಮೀ. ರಸ್ತೆಯನ್ನು ನಿರ್ಮಿಸಲಾಗಿದೆ. ಕಳೆದ ವರ್ಷ (೧೯೯೨) ಈ ಅವಧಿಯಲ್ಲಿ ಕೇವಲ ೫೧ ಕಿ.ಮೀ. ಮಾತ್ರ ಸಾಧಿಸಲಾಗಿದ್ದು ಇಲ್ಲಿ ೧೯೯೩ರ ಸಾಧನೆ ಗಮನಾರ್ಹ.

ಡಿಸೆಂಬರ್ ೧೯೯೨ ರಿಂದ ಸೆಪ್ಟೆಂಬರ್ ೧೯೯೩ರ ವರೆಗೆ ಜಿಲ್ಲಾ ಪರಿಷತ್ ಯೋಜನೆ ಹಾಗೂ ಯೋಜನೇತರ ಬಾಬ್ತುಗಳಿಗಾಗಿ ಸರ್ಕಾರದಿಂದ ಬಿಡುಗಡೆಗೊಳಿಸಲಾದ ಮೊತ್ತ ರೂ. ೧೦೬೦.೯೨ ಕೋಟಿ. ಲೋಕೋಪಯೋಗಿ ಇಲಾಖೆ ಹಾಗೂ ನೀರಾವರಿ ಇಲಾಖೆಗೆ ಬಿಡುಗಡೆಗೊಳಿಸಲಾದ ಹಣ ಕ್ರಮವಾಗಿ ರೂ ೧೮೪ ಕೋಟಿ ಹಾಗೂ ರೂ ೩೭೯ ಕೋಟಿ.

ಈ ಮೇಲಿನ ಅಂಕಿ-ಅಂಶಗಳ ಪ್ರಕಾರ ೧೯೯೨ ರಲ್ಲಿ ಬಿಡುಗಡೆಗೊಳಿಸಿದ ಹಣಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ೧೯೯೩ ರಲ್ಲಿ ಹಣ ಮಂಜೂರಾಗಿದ್ದು ಸರ್ಕಾರ ರಾಜ್ಯದ ಅಭಿವೃದ್ಧಿಯತ್ತ ಹೆಚ್ಚಿನ ಗಮನ ಹರಿಸಿದೆ ಎನ್ನಬಹುದು.

ಕೇಂದ್ರ ಯೋಜನಾ ಆಯೋಗವು ರಾಜ್ಯದ ಅಭಿವೃದ್ಧಿಗೆ ಯೋಜನೆಯ ಗಾತ್ರವನ್ನು ನಿಗದಿಪಡಿಸಿದ್ದು ಈ ನಿಟ್ಟಿನಲ್ಲಿ ಕರ್ನಾಟಕಕ್ಕೆ ೧೯೯೨-೧೯೯೩ರ ಸಾಲಿಗಾಗಿ ರೂ ೧೯೧೫ ಕೋಟಿ ನಿಗದಿಪಡಿಸಲಾಗಿತ್ತು. ೧೯೯೩ರ ವ ರ್ಷಾಂತ್ಯದ ವೇಳೆಗೆ ಈ ವೆಚ್ಚ ರೂ ೧೯೭೧ ಕೋಟಿಗೆ ಬೆಳೆದಿತ್ತು.

ಈ ಮೇಲಿನ ಯೋಜನೆಗಳಿಗಾಗಿ ಲಭ್ಯವಿರುವ ಎಲ್ಲಾ ಸಂಪನ್ಮೂಲಗಳನ್ನು ಪರಿಣಾಮಕಾರಿಯಾಗಿ ಕ್ರೋಢೀಕರಿಸಲು ಯೋಜಿಸಲಾಗಿದ್ದು ಇದರಂತೆ ವಾಣಿಜ್ಯ ತೆರಿಗೆ, ಅಬ್ಕಾರಿ ತೆರಿಗೆ, ಮೋಟಾರುವಾಹನ ತೆರಿಗೆ, ಸ್ಟಾಂಪು ಹಾಗೂ ನೋಂದಣಿ ತೆರಿಗೆ ಮೂಲಕ ೧೯೯೩ರಲ್ಲಿ ಸರ್ಕಾರ ರೂ ೨೮೩೧.೧೪ ಕೋಟಿ ಸಂಗ್ರಹಿಸಿದೆ. (೧೯೯೨ರಲ್ಲಿ ಸಂಗ್ರಹಿಸಲಾದ ಮೊತ್ತ ರೂ. ೨೫೧೩ ಕೋಟಿ)

ಪ್ರಸ್ತುತ ವರ್ಷವನ್ನು ಕನ್ನಡ ಜಾಗೃತಿ ವರ್ಷವನ್ನಾಗಿ ಆಚರಿಸಲಾಗಿದ್ದು ಆಡಳಿತದ ಎಲ್ಲಾ ಹಂತದಲ್ಲೂ ಕನ್ನಡ ಬಳಕೆ ಬಗ್ಗೆ ಕಟ್ಟು ನಿಟ್ಟಾಗಿ ಸೂಚಿಸಲಾಗಿದೆ.

೧೯೯೩ರ ಪ್ರಾಕೃತಿಕ ವಿಕೋಪಗಳಿಂದ (ಭೂಕಂಪ. ನೆರೆಹಾವಳಿ) ಕರ್ನಾಟಕದ ಕೆಲವು ಪ್ರದೇಶಗಳು ತತ್ತರಿಸಿಹೋದವು. ಸಾರ್ವಜನಿಕರಿಂದ ನೆರವಿನ ಮಹಾಪೂರವೇ ಹರಿದು ಬಂತು. ಇಷ್ಟೆಲ್ಲ ಕಷ್ಟ- ನಷ್ಟಗಳ ನಡುವೆಯೂ ಸುಧಾರಿಸಿಕೊಂಡು ಹೆಚ್ಚಿನ ಸಾಧನೆ ನೀಡಿರುವುದು ಕರ್ನಾಟಕ ಸರ್ಕಾರ ನೀಡಿದ ಅಂಕಿ-ಅಂಶಗಳಿಂದ ವ್ಯಕ್ತವಾಗುತ್ತದೆ.





# ಶಿಕ್ಷಣ

## ಕರ್ನಾಟಕದಲ್ಲಿ ಶಿಕ್ಷಣ

*ಆ.ಷ. ಸೀತಾರಾಂ*

---

ಶಿಕ್ಷಣ ಒಂದು ಜೀವಂತ, ಪ್ರವಹಿತ ಧಾರೆ. ಒಂದು ಜನಾಂಗದ ಸಂಸ್ಕೃತಿಯ ನಾಡಿ. ಒಂದು ವರ್ಷದಲ್ಲಿ ತೆಗೆದುಕೊಳ್ಳುವ ನಿರ್ಧಾರಗಳಿಗೆ, ಜಾರಿಗೊಳಿಸುವ ಕಾರ್ಯಕ್ರಮಗಳಿಗೆ, ಎದುರಿಸುವ ಸಮಸ್ಯೆಗಳಿಗೆ, ಚಾರಿತ್ರಿಕವಾದ ಹಿನ್ನೆಲೆ, ಸಂಶೋಧನೆ, ವಿಚಾರಧಾರೆಗಳ ಬೆಂಬಲ, ತರ್ಕಬದ್ಧತೆ, ಅನುಭವಸಿದ್ಧ ಬುನಾದಿಗಳು ಇರುತ್ತವೆ. ಪ್ರಗತಿಯ ಕೆಲವೊಂದು ಅಂಶಗಳು ಹಿಂದಿನಿಂದ ಅನುಷ್ಠಾನದಲ್ಲಿ ಇರುವ ಕಾರ್ಯಕ್ರಮಗಳ ಪರಿಮಾಣಾತ್ಮಕ ಬೆಳವಣಿಗೆಗಳಾಗಿರುತ್ತವೆ. ಮತ್ತೆ ಕೆಲವು ಅಂಶಗಳು ದೀರ್ಘಕಾಲಿಕ ಸಮಸ್ಯೆಗಳ ಪರಿಹಾರಗಳಿಗೆ ಮಾಡಿರುವ ಪ್ರಯತ್ನಗಳ ಫಲಗಳಾಗಿರುತ್ತವೆ. ಹೀಗಾಗಿ ನಿರ್ಧಾರಗಳನ್ನು, ಯೋಜನೆಗಳನ್ನು, ಬೆಳವಣಿಗೆಗಳನ್ನು, ಒಂದೇ ವರ್ಷದ ಅವಧಿಯ ಪ್ರಯತ್ನದ ಫಲಗಳು ಎಂದು ನಿಖರವಾಗಿ ಹೇಳಲು ಬರುವುದಿಲ್ಲ. ಈ ಮಿತಿಗಳ ಅರಿವನ್ನು ಮುನ್ನೆಚ್ಚರಿಕೆ ಎಂದು ಭಾವಿಸಿ ೧೯೯೩ರ ಅವಧಿಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸಂಭವಿಸಿದ ಘಟನೆಗಳ, ನಿರ್ಧಾರಗಳ, ಹೊಸ ಹೊಸ ಕಾರ್ಯಕ್ರಮಗಳ, ವಿಚಾರ ಗತಿಗಳ ಸಮೀಕ್ಷೆಯೇ ಈ ಲೇಖನದ ಉದ್ದೇಶ. ಹೆಚ್ಚಿನಂಶ ಈ ಲೇಖನವು ಅಂಕಿ ಅಂಶಗಳನ್ನು ಹಿತಮಿತವಾಗಿ ಉಪಯೋಗಿಸಿ, ಸಾಮಾನ್ಯವಾಗಿ ಗುಣಾತ್ಮಕವಾಗಿರುತ್ತದೆ. ಪ್ರಗತಿಯ ಎಳೆಗಳನ್ನು ಹಂತ ಹಂತವಾಗಿ ಬಿಡಿಸೋಣ.

**ಪೂರ್ವ ಪ್ರಾಥಮಿಕ ಶಿಕ್ಷಣ**

ಹಲವು ದೃಷ್ಟಿಗಳಿಂದ ೩ ವರ್ಷದಿಂದ ೬ ವರ್ಷದ ಅವಧಿಯ ಮಕ್ಕಳ ಶಿಕ್ಷಣ ಬಹಳ ಮಹತ್ವದ್ದಾಗಿದೆ. ಕರ್ನಾಟಕದ ೭೪ ಪ್ರತಿಶತ ಜನರು ಗ್ರಾಮ ಜೀವಿಗಳು. ಗ್ರಾಮಾಂತರ ಪ್ರದೇಶದ ೮೦ ಪ್ರತಿಶತ ಜನರು ವ್ಯವಸಾಯಾಧಾರಿತ ಜೀವಿಗಳು. ಇವರಲ್ಲಿ ೪೦ ಪ್ರತಿಶತ ಮಂದಿ ತಮ್ಮದೇ ಭೂಮಿ ಇಲ್ಲದ ಬೇಸಾಯದ ದಿನಗೂಲಿಗಳು. ಈ

ಕುಟುಂಬಗಳ ಗಂಡ ಹೆಂಡತಿಬ್ಬರೂ ದುಡಿಯುವ ಆಳುಗಳು. ಬೆಳಿಗ್ಗೆ ೭ ರಿಂದ ಸಂಜೆ ೫ ಘಂಟೆಯವರೆಗೆ ಮನೆಯಲ್ಲಿ ಇರುವುದಿಲ್ಲ. ಜೊತೆಗೆ ಸಾಮಾನ್ಯವಾಗಿ ಇವರೆಲ್ಲಾ ಅಣುಸಾಂದ್ರ ಕುಟುಂಬ (nuclear families) ದಲ್ಲಿ ಇರುವವರು. ಹಾಗೆ ನೋಡಿದಲ್ಲಿ ನಾಡಿನ ೭೦ ಪ್ರತಿಶತ ಜನ ಈ ರೀತಿಯ ಕುಟುಂಬಗಳಲ್ಲಿ ಇರುವವರೇ. ಇಂತಹ ಸಂಸಾರಗಳಲ್ಲಿ ಗಂಡ ಹೆಂಡಿರು ಉದರನಿಮಿತ್ತ ಮನೆ ಬಿಟ್ಟಾಗ ೨, ೩, ೪, ೫ ವರ್ಷದ ಮಕ್ಕಳ ಲಾಲನೆ, ಪಾಲನೆಯ ಜವಾಬ್ದಾರಿ ೬, ೭, ೮, ೯ ವರ್ಷದ ಮಕ್ಕಳ ಮೇಲೆ, ಹೆಚ್ಚಿನಾಂಶ ಹೆಣ್ಣು ಮಕ್ಕಳ ಮೇಲೆ ಬೀಳುತ್ತದೆ. ೬ ರಿಂದ ೯ ವರ್ಷಗಳು ಪ್ರಾಥಮಿಕ ಶಿಕ್ಷಣದ ಅವಧಿಯ ವರ್ಷಗಳು. ಹೀಗಾಗಿ, ಅಧಿಕಾಂಶ ಗ್ರಾಮಾಂತರ ಪ್ರದೇಶದ ಭೂಹೀನ, ಬಡವರ, ಸಾಮಾಜಿಕವಾಗಿ ಹಿಂದೆ ನೂಕಲ್ಪಟ್ಟಿರುವ ಕುಟುಂಬಗಳ ಹೆಣ್ಣು ಹಾಗೂ ಇತರ ಮಕ್ಕಳು, ಭಾರತ ಸಂವಿಧಾನವು ಕೊಟ್ಟಿರುವ ಪ್ರಾಥಮಿಕ ಶಿಕ್ಷಣದ ಅವಕಾಶಗಳ ಪೂರೈಕೆಯ ಆಶ್ವಾಸನೆಯಿಂದ ವಂಚಿತರಾಗುತ್ತಿದ್ದಾರೆ. ಈ ದುಸ್ಥಿತಿ ಮುಂದುವರೆದರೆ ಶಿಕ್ಷಣದ ಸಾರ್ವತ್ರೀಕರಣ ಕನಸಾಗಿಯೇ ಉಳಿಯುವುದರಲ್ಲಿ ಸಂದೇಹವಿಲ್ಲ. ಪೂರ್ವ ಪ್ರಾಥಮಿಕ ಶಿಕ್ಷಣ ಸೌಲಭ್ಯದ ಸಾರ್ವತ್ರೀಕರಣ ಈ ದೀರ್ಘಕಾಲಿಕ ಸಮಸ್ಯೆಗೆ ಪ್ರಶಸ್ತವಾದ ಪರಿಹಾರ ಪ್ರಬಲವಾಗಿ ಈ ಕಾರಣಕ್ಕಾಗಿ ಮತ್ತು ಇತರ ಹಿತಗಳಿಗಾಗಿ ಕರ್ನಾಟಕ ರಾಜ್ಯ ಸರ್ಕಾರವು ರಾಜ್ಯಾದ್ಯಂತ, ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ, ಮಕ್ಕಳ ಸಮಗ್ರ ವಿಕಾಸ ಯೋಜನೆ ಅಡಿಯಲ್ಲಿ ಅಂಗನವಾಡಿಗಳನ್ನು ತೆರೆಯುವ ಕಾರ್ಯಕ್ರಮ ಈಗಾಗಲೇ ಜಾರಿಮಾಡಿದೆ. ೩ ರಿಂದ ೬ ವರ್ಷದ ಮಕ್ಕಳ ಲಾಲನೆ, ಪಾಲನೆ, ಪೋಷಣೆ ಹಾಗೂ ವಿಕಾಸಾತ್ಮಕ ಶಿಕ್ಷಣದ ಉದ್ದೇಶಗಳನ್ನು ಹೊತ್ತಿರುವ ಈ ಅಂಗನವಾಡಿಗಳು, ನಾಡಿನ ೨೬,೪೦೦ ಹಳ್ಳಿಗಳಲ್ಲಿಯೂ ಬೇಕಾಗಿದೆ. ೧೯೯೩ ನೇ ವರ್ಷದಲ್ಲಿ ಇಂತಹ ೨೦೦೦ ಅಂಗನವಾಡಿ ಕೇಂದ್ರಗಳನ್ನು ಹೊಸದಾಗಿ ತೆರೆಯಲಾಯಿತು. ಇದರಿಂದ ಈ ವಯಸ್ಸಿನ ಮಕ್ಕಳ ವ್ಯವಸ್ಥಿತ ಆರೈಕೆಯೊಂದಿಗೆ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣವೂ ಸಫಲವಾಗುತ್ತದೆ. ಕರ್ನಾಟಕ ರಾಜ್ಯದಲ್ಲಿ ಮಹಿಳೆಯರು ಮತ್ತು ಮಕ್ಕಳ ಯೋಗಕ್ಷೇಮಕ್ಕಾಗಿ ಒಂದು ವಿಶೇಷ ವಿಭಾಗೀಯ ಕಛೇರಿಯೇ ಇದೆ. ಅದು ಮಕ್ಕಳ ಸರ್ವಾಂಗೀಣ ವಿಕಾಸಕ್ಕಾಗಿ, ೧೮೬ ತಾಲೂಕುಗಳುಳ್ಳ, ರಾಜ್ಯದ ತಾಲೂಕು ಮಟ್ಟದ ಕಾರ್ಯಯೋಜನೆ (ACTION PLAN) ಯನ್ನು ಮೊಟ್ಟಮೊದಲ ಬಾರಿಗೆ ತಯಾರಿಸಿದೆ. ಅಂಗನವಾಡಿಗಳು ಹಾಗೂ ತೊಟ್ಟಿಲ ಶಿಶು ಶಾಲೆಗಳು (CRECHES) ಈ ಯೋಜನೆಯಲ್ಲಿ ಒಳಗೊಂಡಿವೆ.

## ಪ್ರಾಥಮಿಕ ಶಿಕ್ಷಣ

ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ೪೩ ವರ್ಷಗಳ ಹಾಗೂ ಈ ಹಂತದ ಶಿಕ್ಷಣದ ಕಡ್ಡಾಯಕ್ಕೆ ೩೧ ವರ್ಷಗಳ ಚರಿತ್ರೆ ಇದೆ. ಕನಿಷ್ಠ ೩೦೦ ಜನಸಂಖ್ಯೆ ಇರುವ ಗ್ರಾಮಕ್ಕೊಂದು ಶಾಲೆ, ಶಾಲೆಗೆ ತಪ್ಪದೇ ಬರುವ ಹೆಣ್ಣುಮಕ್ಕಳಿಗೆ ಒಂದು ಜೊತೆ ಉಚಿತ ಸಮವಸ್ತ್ರಗಳು, ಉಚಿತ ಪಠ್ಯಪುಸ್ತಕಗಳು, ಮಧ್ಯಾಹ್ನದ ಹಾಲು/ಉಪಹಾರ,

ಇತ್ಯಾದಿ ಕಾರ್ಯಕ್ರಮಗಳು ಸುಮಾರು ೩೦ ವರ್ಷಗಳಿಂದ ಜಾರಿಯಲ್ಲಿವೆ. ಇಷ್ಟಾದರೂ, ಹಲವಾರು ಸಮಸ್ಯೆಗಳಿಗೆ ಪರಿಹಾರಾತ್ಮಕ ಕಾರ್ಯಗಳನ್ನು ಮಾಡಿದ್ದರೂ ಸಹಿತ, ಒಂದು ಸಮಸ್ಯೆ ಬಹಳ ವರ್ಷಗಳಿಂದ ಕಾಡುತ್ತಿದ್ದು ಅದಕ್ಕೆ ೧೯೯೩ರಲ್ಲಿ ಪರಿಹಾರವನ್ನು ಪರಿಷ್ಕರಿಸಲಾಯಿತು. ಈ ಸಮಸ್ಯೆ ವಿದ್ಯಾರ್ಥಿಗಳ ಕಲಿಕಾಮಟ್ಟಕ್ಕೆ ಸಂಬಂಧಿಸಿದುದು. ಕರ್ನಾಟಕ ರಾಜ್ಯದ ಎಲ್ಲಾ ಪ್ರದೇಶಗಳ, ಎಲ್ಲಾ ಮಕ್ಕಳ ಶಿಕ್ಷಣ ಮಟ್ಟವೂ ಒಂದೇ ಸಮನಾಗಿರುವುದಿಲ್ಲ. ಕೆಲವರಿಗೆ ಒಂದನೇ ಇಯತ್ತೆಯ ಪಾಠಗಳನ್ನು ಓದಲು, ಬರೆಯಲು ಬರುವುದಿಲ್ಲ. (ನಾಲ್ಕು ವರ್ಷಗಳು ಶಾಲೆಗೆ ಹಾಜರಿ ಹಾಕಿದ್ದರೂ ಸಹಿತ) ಸುಲಭ ಲೆಕ್ಕಾಚಾರಗಳು, ಒಂದು-ಎರಡು ಅಂಕಿಗಳ ಕೂಡುವಿಕೆ ಬರುವುದಿಲ್ಲ. ರಾಷ್ಟ್ರೀಯ ಶಿಕ್ಷಣ ಧೋರಣೆ ಪ್ರಾಥಮಿಕ ಶಿಕ್ಷಣದಲ್ಲಿ ಕಲಿಕೆಯ ಸಾರ್ವತ್ರೀಕರಣಕ್ಕೆ ಒತ್ತು ನೀಡಿತು. ದೇಶಾದ್ಯಂತ, ಮೂಲೆಮೂಲೆಗಳ ಶಾಲೆಗಳಲ್ಲಿ ಮಕ್ಕಳು ಎಷ್ಟರ ಮಟ್ಟದ ಕಲಿಕೆಯನ್ನು ಕನಿಷ್ಠವಾಗಿ ಕಲಿಯಬೇಕು ಎಂಬುದಕ್ಕೆ ಪ್ರೊ.ಆರ್. ಹೆಚ್. ದವೆ ನೇತೃತ್ವದಲ್ಲಿ ಒಂದು ತಜ್ಞರ ಸಮಿತಿಯನ್ನು ನೇಮಿಸಿತು. ಆ ಸಮಿತಿ ಶಾಲಾ ಪಠ್ಯವಿಷಯಗಳಲ್ಲಿ ಕನಿಷ್ಠ ಕಲಿಕಾ ಮಟ್ಟಗಳನ್ನು ಗುರುತಿಸಿತು. ೧೯೯೩ರಲ್ಲಿ ಆಂಗ್ಲ ಭಾಷೆಯಲ್ಲಿದ್ದ ಈ ಹೊತ್ತಿಗೆಯನ್ನು ಕನ್ನಡಕ್ಕೆ ಭಾಷಾಂತರಿಸಿ, ನಮ್ಮ ರಾಜ್ಯದ ಪ್ರತಿಯೊಬ್ಬ ಪ್ರಾಥಮಿಕ ಶಿಕ್ಷಕರಿಗೆ ಹಂಚಿ ಕನಿಷ್ಠ ಎಷ್ಟು ಕಲಿಕೆಗಳನ್ನು ಸಾಧಿಸಬೇಕು ಎಂದು ಸೂಚಿಸಲಾಯಿತು. ಇನ್ನು ಮುಂದೆ ಈ ಕಲಿಕೆಯ ಸಾಧನೆ ಆಗಿದೆಯೇ ಎಂದು ಅರಿಯಲು ಅವಶ್ಯವಾದ ಮಾಪಕ ಪ್ರಶ್ನೆ ಪತ್ರಿಕೆಗಳ ಸಿದ್ಧತೆ ಆಗಬೇಕಾಗಿದೆ, ಆಗುತ್ತಿದೆ.

ಪ್ರಾಥಮಿಕ ಶಿಕ್ಷಣದ ಗುಣಮಟ್ಟ ವೃದ್ಧಿಸಲು, ಮುಖ್ಯವಾಗಿ ಬೋಧನೆ-ಕಲಿಕೆಯ ನಿರಂತರ ಪ್ರಕ್ರಿಯೆಯನ್ನು ಅಡೆತಡೆಗಳಿಲ್ಲದೇ ಉತ್ತಮ ಮಟ್ಟಕ್ಕೆ ಏರಿಸಲು, ರಾಷ್ಟ್ರೀಯ ಶಿಕ್ಷಣ ಧೋರಣೆ ೧೯೮೬ರ ಶಿಫಾರಸ್ಸಿನ ಮೇರೆಗೆ ಈಗಾಗಲೇ ಕಪ್ಪುಹಲಗೆ ಕಾರ್ಯಾಚರಣೆ (OPERATION BLACK BOARD) ರಾಜ್ಯದಲ್ಲಿ ಜಾರಿಯಲ್ಲಿರುವುದು ಸರ್ವವೇದ್ಯ ವಿಷಯ. ಏಕೋಪಾಧ್ಯಾಯ ಶಾಲೆಗಳಿಗೆ ಎರಡನೇ ಶಿಕ್ಷಕರನ್ನು ಕೊಡುವುದು, ಎಲ್ಲಾ ಶಾಲೆಗಳಿಗೂ ಕನಿಷ್ಠ ಬೋಧನಾ ಸಾಮಗ್ರಿಗಳನ್ನು ಕೊಡುವುದು, ಒಂದೇ ಕೊಠಡಿ ಇರುವ ಶಾಲೆಗಳಿಗೆ ಎರಡನೇ ಕೊಠಡಿ ಕಟ್ಟಿಸಿಕೊಡುವುದು, ಓ.ಬಿ.ಯ ಗುರಿಗಳು. ೧೯೯೩ರ ಅವಧಿಯಲ್ಲಿ ಈ ಕಾರ್ಯಾಚರಣೆಯ ವತಿಯಲ್ಲಿ ೧೮,೦೦೦ ಶಿಕ್ಷಕರ ಹುದ್ದೆಗಳನ್ನು ಭರ್ತಿಮಾಡಲಾಯಿತು. ಈ ಸಾಧನೆಯಿಂದ ಹೊರಹೊಮ್ಮುವ ಒಂದು ವಿಶೇಷ ಹಾಗೂ ಮಹತ್ವದ ಸಂಗತಿ ಏನೆಂದರೆ, ಇಂದು ಕರ್ನಾಟಕದ ಯಾವುದೇ ಮೂಲೆಯ ಶಾಲೆಯಾಗಲೀ, ಶಿಕ್ಷಕರು ಬಂದಿಲ್ಲ, ರಜೆ ಹೋಗಿದ್ದಾರೆ, ಇತ್ಯಾದಿ ಕಾರಣಗಳಿಗಾಗಿ ಶಾಲೆ ಮುಚ್ಚಬೇಕಾಗಿಲ್ಲ. ಸತತವಾಗಿ, ದಿನಂಪ್ರತಿ ಶಾಲೆ ತೆರೆದಿರುತ್ತದೆ. ಇದರಿಂದಾಗಿ ಪ್ರಾಥಮಿಕ ಶಿಕ್ಷಣದಲ್ಲಿ ಭರ್ತಿ ಹಾಗೂ ಹಾಜರಿ ಎರಡೂ ಹೆಚ್ಚಾಗಿದೆ.

೧೯೯೩ರ ಮತ್ತೊಂದು ವಿಶೇಷ ಬೆಳವಣಿಗೆ ಬೋಧನಾ ಮಾಧ್ಯಮಕ್ಕೆ ಸಂಬಂಧಪಟ್ಟಿದ್ದು. ಮಾತೃಭಾಷೆಯಲ್ಲೇ ಪ್ರಾಥಮಿಕ ಶಿಕ್ಷಣ ಎಂದು ರಾಷ್ಟ್ರದ ಶ್ರೇಷ್ಠ ನ್ಯಾಯಾಲಯ ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆಯಲ್ಲಿ ತೀರ್ಪು ನೀಡಿತು. ಈ

ರೀತಿಯ ತೀರ್ಪಿನ ಸುಭದ್ರ ಅಡಿಯಲ್ಲಿ ರಾಜ್ಯ ಸರ್ಕಾರವು ರಾಜೇಚ್ಛೆ (Political will) ಯನ್ನು ಪ್ರದರ್ಶಿಸಿ ಕಾನೂನು/ಶಾಸನಗಳ ಭಯವಿಲ್ಲದೇ ಮಾತೃಭಾಷೆಯಲ್ಲೇ ಶಿಕ್ಷಣ/ಬೋಧನೆಯನ್ನು ಕಡ್ಡಾಯ ಮಾಡಲು ಸುವರ್ಣಾವಕಾಶವಿದೆ. ಈ ರೀತಿಯ ರಾಜೇಚ್ಛೆಯನ್ನು ಅದು ಪ್ರದರ್ಶಿಸುತ್ತದೆಯೇ ಎಂಬುದೊಂದು ಯಕ್ಷ ಪ್ರಶ್ನೆ. ರಾಜ್ಯದ ೪೦,೦೦೦ ಕ್ಕೂ ಮಿಕ್ಕ ಪ್ರಾಥಮಿಕ ಶಾಲೆಗಳಲ್ಲಿ ೯೪ ಪ್ರತಿಶತ ಸರ್ಕಾರೀ ಶಾಲೆಗಳು, ಬಹುತೇಕ ಕನ್ನಡ ಮಾಧ್ಯಮ ಶಾಲೆಗಳು. ಗಡಿ ಪ್ರದೇಶಗಳಲ್ಲಿ ಮರಾಠಿ, ತೆಲುಗು, ತಮಿಳಿನ ಹಾಗೂ ಕೆಲವೆಡೆ ಉರ್ದು ಮಾಧ್ಯಮದ ಶಾಲೆಗಳು ಇವೆ. ಉಳಿದ ೬ ಪ್ರತಿಶತ ಖಾಸಗೀ ಶಾಲೆಗಳು ಹೆಚ್ಚಾಗಿ ನಗರ/ಪಟ್ಟಣ ಪ್ರದೇಶಗಳಲ್ಲಿವೆ. ಅರ್ಧಕ್ಕರ್ಧ ಖಾಸಗೀ ಶಾಲೆಗಳಲ್ಲಿ ಆಂಗ್ಲ ಮಾಧ್ಯಮ ಇದೆ. ಸಮಾಜದ ಗಣ್ಯ, ಪ್ರತಿಷ್ಠಿತ, ಪ್ರಬಲ ವ್ಯಕ್ತಿಗಳು, ಈ ಶಾಲೆಗಳನ್ನು ನಡೆಸುತ್ತಿದ್ದಾರೆ. ಕೆಲವರು ಅಧಿಕಾರದ ಸ್ಥಾನಗಳಲ್ಲಿ ಕೂಡ ಇದ್ದಾರೆ. ಈ ಸನ್ನಿವೇಶದಲ್ಲಿ ಶ್ರೇಷ್ಠ ನ್ಯಾಯಾಲಯದ ಆದೇಶಕ್ಕೆ ಯಾವ ಗತಿ ಸಿಗಬಹುದು ಎಂಬುದನ್ನು ಕಾದು ನೋಡೋಣ.

೧೯೯೩ನೇ ಇಸವಿಯಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಹಮ್ಮಿಕೊಳ್ಳಲಾದ ಮತ್ತೊಂದು ವಿಶೇಷ ಹಾಗೂ ಹೊಸ ಕಾರ್ಯಕ್ರಮ - ಡಿ.ಪಿ.ಇ.ಪಿ. ಅಥವ ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ. ರಾಷ್ಟ್ರದ ೨೩ ಜಿಲ್ಲೆಗಳನ್ನು ಹೆಣ್ಣು ಮಕ್ಕಳ ಶೈಕ್ಷಣಿಕ ಪ್ರಗತಿಯ ದೃಷ್ಟಿಯಲ್ಲಿ ಹಿಂದುಳಿದ ಜಿಲ್ಲೆಗಳೆಂದು ಗುರುತಿಸಲಾಯಿತು. ಇದರಲ್ಲಿ ಕರ್ನಾಟಕದ ನಾಲ್ಕು ಜಿಲ್ಲೆಗಳೂ ಸೇರಿವೆ. ಅವು-ಮಂಡ್ಯ, ಕೋಲಾರ, ರಾಯಚೂರು ಹಾಗೂ ಬೆಳಗಾವಿ. ಈ ನಾಲ್ಕು ಜಿಲ್ಲೆಗಳಿಗೆ ವಿಶ್ವ ಬ್ಯಾಂಕ್ ಸಾಲದ ನೆರವಿನ ಅಡಿಯಲ್ಲಿ ಸುಮಾರು ೪೦ ಕೋಟಿ ರೂ.ಗಳ ವಿಶೇಷ ನೆರವನ್ನು ಕ್ರಿ.ಶ. ೨೦೦೦ದ ಹೊತ್ತಿಗೆ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ಹಾಗೂ ಗುಣವರ್ಧನೆಗಾಗಿ ಕೊಡಲಾಗುವುದು. ಜಿಲ್ಲೆಯ ಜನತೆಯೊಂದಿಗೆ ಸ್ಪಂದಿಸಿ, ಅವರ ಸಹಕಾರ, ಆಶೋತ್ತರಗಳು ಹಾಗೂ ಅಭಿಪ್ರಾಯಗಳೊಂದಿಗೆ, ಅಧಿಕಾರಶಾಹಿ ಹಾಗೂ ಬುದ್ಧಿಜೀವಿ ವಿಚಾರಗಳನ್ನು ಸರಿದೂಗಿಸಿದ ವಿಶೇಷ ಯೋಜನೆಯನ್ನು ೧೯೯೩ರಲ್ಲಿ ತಯಾರಿಸಲಾಯಿತು. ಈ ಯೋಜನೆಯ ಅಡಿಯಲ್ಲಿ ೧೯೯೪ರಿಂದ ಕಾರ್ಯಾಚರಣೆ ಪ್ರಾರಂಭವಾಗುವುದು.

### ಪ್ರೌಢ ಶಿಕ್ಷಣ

ಕರ್ನಾಟಕದಲ್ಲಿ ೪೪೨೦ ಪ್ರೌಢಶಾಲೆಗಳಿವೆ. ೧೦ ಲಕ್ಷಕ್ಕೂ ಹೆಚ್ಚು ಮಕ್ಕಳು ಈ ಶಾಲೆಗಳಲ್ಲಿ ಓದುತ್ತಿದ್ದಾರೆ. ಪಳೆಯುಳಿಕೆ ವಿದ್ಯಾರ್ಥಿಗಳೂ ಸೇರಿ ಸುಮಾರು ೫ ಲಕ್ಷ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕೂರುತ್ತಾರೆ. ಪ್ರೌಢ ಶಿಕ್ಷಣ ವ್ಯವಸ್ಥೆ, ಹಲವು ವರ್ಷಗಳಿಂದ ಏರುಪೇರುಗಳಿಲ್ಲದೆ, ಮಹತ್ತರ ಬದಲಾವಣೆಗಳಿಲ್ಲದೆ ಮುಂದುವರಿಯುತ್ತಿದೆ. ಇಷ್ಟಾದರೂ ಕೂಡ, ಶಾಲಾ ಶಿಕ್ಷಣದ ಎಲ್ಲಾ ಹಂತಗಳ ಪಠ್ಯವಸ್ತುಗಳ ಸಮಗ್ರ ಪುನರಾವೃತ್ತಿ ನಡೆಯುತ್ತಿದ್ದು ಪ್ರೌಢಶಾಲಾ ಪಠ್ಯವಸ್ತುವೂ ಕೂಡ ಪರಿಷ್ಕಾರ ಹೊಂದಿದೆ. ೧೯೯೩ರಲ್ಲಿ ೮ನೇ ತರಗತಿಗೆ ನೂತನ ಪಠ್ಯವಸ್ತು ಅಳವಡಿಸಲಾಗಿದೆ. ಬರುವ ವರ್ಷಗಳಲ್ಲಿ ೯ ಹಾಗೂ ೧೦ನೇ ಇಯತ್ತೆಗಳಿಗೂ ಈ

ಮಾರ್ಪಾಟು ಮಾಡಿ, ಪರೀಕ್ಷಾ ವ್ಯವಸ್ಥೆಯಲ್ಲಿ ಸಹ ಬದಲಾವಣೆ ಮಾಡುವ ನಿರ್ಧಾರಗಳನ್ನು ತೆಗೆದುಕೊಳ್ಳಲಾಗಿದೆ.

ಪ್ರೌಢ ಶಿಕ್ಷಣಕ್ಕೆ ಸಂಬಂಧಿಸಿದ, ಉನ್ನತ ಶಿಕ್ಷಣವಲ್ಲದ, ಮತ್ತೊಂದರ ಹಂತ +೨ ಶಿಕ್ಷಣ. ಸದ್ಯದ ಸನ್ನಿವೇಶದಲ್ಲಿ ಈ ಹಂತದ ಶಿಕ್ಷಣ ೩ ಭಿನ್ನ ವ್ಯವಸ್ಥೆಗಳಲ್ಲಿ ದೊರೆಯುತ್ತಿದೆ. ಪ್ರೌಢಶಾಲೆಗಳ ತಲೆಯ ಮೇಲೆ ಕುಳಿತು, ಸಾರ್ವಜನಿಕ ಶಿಕ್ಷಣ ಆಯುಕ್ತರ ಆಡಳಿತಕ್ಕೆ ಒಳಪಟ್ಟು, ಕೆಲಸ ಮಾಡುತ್ತಿರುವ ಉನ್ನತ ಪ್ರೌಢಶಿಕ್ಷಣ ಶಾಲೆಗಳು ಒಂದು ಮಾದರಿ. ಉನ್ನತ ಶಿಕ್ಷಣದ ಡಿಗ್ರಿ ಕಾಲೇಜುಗಳಿಗೆ ಬಾಲದಂತೆ ಅಂಟಿಕೊಂಡಿರುವ ಪಿ.ಯು.ಸಿ. ಕೋರ್ಸ್‌ಗಳು ಇನ್ನೊಂದು ಮಾದರಿ. ಈ ಎರಡು ವ್ಯವಸ್ಥೆಗಳಿಗೂ ಹೊರತಾದ, ಪ್ರೀ ಯೂನಿವರ್ಸಿಟಿ ಬೋರ್ಡ್ ಆಡಳಿತದಲ್ಲಿ ಇರುವ ಜೂನಿಯರ್ ಕಾಲೇಜುಗಳು ಮತ್ತೊಂದು ಮಾದರಿ. ಹೀಗಾಗಿ, +೨ ಹಂತದ ಶಿಕ್ಷಣ ತ್ರಿಶಂಕು ಸ್ಥಿತಿಯಲ್ಲಿದೆ. ಈ ಮೂರು ಮಾದರಿಗಳು ಒಂದೇ ಕೊಡೆಯಡಿಯಲ್ಲಿ ಉಸಿರಾಡುವಂತೆ ಮಾಡುವುದಕ್ಕೆ ೧೯೯೩ರಲ್ಲಿ ಸಿದ್ಧತಾ ಕೆಲಸ ನಡೆಯುತ್ತಿದೆ.

ಇಷ್ಟಾದರೂ ಉನ್ನತ ಪ್ರೌಢ ಶಿಕ್ಷಣದ ಬಹುಮುಖ ಅಂಕುಶದ ಸಮಸ್ಯೆ ಬಗೆ ಹರಿಯುವಂತಿಲ್ಲ. ಏಕೆಂದರೆ, ೧೯೭೭ರಿಂದೀಚೆಗೆ, ರಾಜ್ಯದಲ್ಲಿ +೨ ಹಂತದ ವೃತ್ತೀಕರಣದ ಕಾರ್ಯಯೋಜನೆ ಜಾರಿಯಲ್ಲಿದೆ. ರಾಷ್ಟ್ರೀಯ ದೃಷ್ಟಿಯಲ್ಲಿ, ಬಹುತೇಕ ಇತರ ರಾಜ್ಯಗಳಿಗೆ ಹೋಲಿಸಿದಾಗ, ಕರ್ನಾಟಕದಲ್ಲಿ +೨ ಹಂತದ ವೃತ್ತಿ ಶಿಕ್ಷಣ ಸಾಫಲ್ಯ ಪಡೆದಿದ್ದರೂ ಸಹಿತ, ಕೇವಲ ದೃಷ್ಟಿಯಲ್ಲಿ ಕಂಡಾಗ ಅಪೇಕ್ಷೆಯ ಮಟ್ಟದ ಪ್ರಗತಿ ಇಲ್ಲ. ವೃತ್ತಿ ಶಿಕ್ಷಣ ಸಾಕಷ್ಟು ಆಕರ್ಷಕವಾಗಿ, ಸಾಮಾನ್ಯ ಪಠ್ಯ ವಿಷಯಗಳ ಪಿ.ಯು.ಸಿ. ಇಂದ ವಿದ್ಯಾರ್ಥಿಗಳನ್ನು ಸೆಳೆದು ಉನ್ನತ ಶಿಕ್ಷಣದ ಸಾಮಾನ್ಯ ಉಪಾಧಿ ( ಬಿ.ಎ./ ಬಿ.ಎಸ್ಸಿ) ಕೋರ್ಸ್‌ಗಳ ಮೇಲೆ ಒತ್ತಡ ಕಡಿಮೆ ಆಗಲಿ ಎನ್ನುವ ವಿಚಾರ ವೃತ್ತಿ ಶಿಕ್ಷಣದ ಸಮರ್ಥನೆ. ವೃತ್ತಿ ಶಿಕ್ಷಣಕ್ಕೆ ಪ್ರತ್ಯೇಕ ಆಡಳಿತ ವಿಭಾಗ ರಾಜ್ಯ ಹಾಗೂ ಜಿಲ್ಲಾ ಮಟ್ಟಗಳಲ್ಲಿದೆ. ಇದು ವೃತ್ತಿ ಶಿಕ್ಷಣದ ಸಮಸ್ಯೆಗಳನ್ನು ಮಾತ್ರ ಎದುರಿಸುತ್ತದೆ. ಹೀಗಾಗಿ, ಪಿ.ಯು.ಸಿ. ಹಂತದಲ್ಲಿ ಒಂದು ಪ್ರತ್ಯೇಕ ಪ್ರಾಧಿಕಾರ ಹಾಗೂ ವೃತ್ತಿಶಿಕ್ಷಣ ಇಲಾಖೆ, ಎರಡೂ ಸ್ಪಂದಿಸುವಾಗ, ಹೊಸ ಸಮಸ್ಯೆಗಳು ಏಳುವ ಸಾಧ್ಯತೆಗಳಿವೆ.

**ಉನ್ನತ ಶಿಕ್ಷಣ**

ಕರ್ನಾಟಕದಲ್ಲಿ ಉನ್ನತ ಶಿಕ್ಷಣಕ್ಕೆ ೧೯೯೩ರಲ್ಲಿ ಹಲವು ಹೊಸ ತಿರುವುಗಳು ಗೋಚರಿಸಿದುವು. ಈ ತಿರುವುಗಳಿಗೆ ಮೂಲ, ಭಾರತದ ಹೊಸ ಆರ್ಥಿಕ ಧೋರಣೆ. ಮೂರು ಮುಖಗಳ ಹೊಸ ಆರ್ಥಿಕ ಧೋರಣೆಯಲ್ಲಿ, ಉನ್ನತ ಶಿಕ್ಷಣಕ್ಕೆ ಅರ್ಥೈಸಬಹುದಾದ ಒಂದು ಮುಖವೇ ಖಾಸಗೀಕರಣ. ಅರ್ಥವ್ಯವಸ್ಥೆ, ಕೈಗಾರೀಕಾಕ್ಷೇತ್ರ, ಸೇವಾಕ್ಷೇತ್ರ, ಸರ್ಕಾರೀ ದಂಧೆಗಳು ಇತ್ಯಾದಿಯಾಗಿ ಇಡೀ ಸಮಾಜವೇ ಖಾಸಗೀತನವನ್ನು ಹೊಂದುತ್ತಿರುವಾಗ, ಬಡರಾಷ್ಟ್ರವಾದ ಭಾರತದ ಮೇಲ್ಮಟ್ಟದ ಜನರಿಗೆ ಹೆಚ್ಚು ಉಪಯುಕ್ತವಾಗುತ್ತಿದೆ ಎಂಬ ದೂರಿಗೆ ಒಳಗಾಗಿರುವ ಉನ್ನತ ಶಿಕ್ಷಣಕ್ಕೆ ಸರ್ಕಾರಿ ಧನಸಹಾಯದ ಬೆಂಬಲ ಕಡಿಮೆ ಆಗುತ್ತದೆ ಎಂಬ ವಿಚಾರ ಅಚ್ಚರಿಯದಲ್ಲ.

೧೯೯೩ರಲ್ಲಿ ಹೀಗೆಯೇ ಆಯಿತು. ವಿಶ್ವವಿದ್ಯಾಲಯ ಧನಸಹಾಯ ಆಯೋಗಕ್ಕೆ ಕೇಂದ್ರ ಸರ್ಕಾರ ೨೫ ಪ್ರತಿಶತ ಕೊಡುತ್ತಿದ್ದ ಅನುದಾನವನ್ನು ಮೊಟಕು ಮಾಡಿತು. ಈ ಸಂದೇಶವನ್ನು ರಾಜ್ಯಗಳಿಗೂ ಮುಕ್ತ ಹಾಗೂ ಸೂಕ್ಷ್ಮರೀತಿಯಲ್ಲಿ ಹೇಳಿತು. ಈ ದಿಸೆಯಲ್ಲಿ ಕರ್ನಾಟಕ ರಾಜ್ಯ ಹಲವು ನಿರ್ಧಾರಗಳನ್ನು ತೆಗೆದುಕೊಂಡಿತು.

ಕರ್ನಾಟಕದಲ್ಲಿ ೬ ವಿಶ್ವವಿದ್ಯಾಲಯಗಳು, ಒಂದು ಕನ್ನಡ ವಿಶ್ವವಿದ್ಯಾಲಯ, ವಿಶ್ವವಿದ್ಯಾಲಯ ಸ್ಥಾನಮಾನ ಇರುವ ೫ ಸಂಸ್ಥೆಗಳು, ೨ ಕೃಷಿ ವಿಶ್ವವಿದ್ಯಾಲಯಗಳು ಇವೆ. ಜೊತೆಗೆ ಸ್ನಾತಕೋತ್ತರ ಕೇಂದ್ರಗಳೂ, ನಿರಂತರ ಶಿಕ್ಷಣ/ಅಂಚೆತೆರಪಿನ ಶಿಕ್ಷಣ ಕೇಂದ್ರಗಳೂ ಇವೆ. ರಾಜ್ಯದ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ, ಕಾರ್ಯನಿರ್ವಹಣಾ ಸಮಸ್ಯೆಗಳು, ಉನ್ನತ ಶಿಕ್ಷಣ ನಡೆದು ಬರುತ್ತಿರುವ ದಾರಿ ದಿಕ್ಕುಗಳು, ಎದುರಿಸುತ್ತಿರುವ ಸಮಸ್ಯೆಗಳು ಹಾಗೂ ಒಳಗೊಳ್ಳಬೇಕಾದ ಶಸ್ತ್ರಕ್ರಿಯೆಗಳು ಇತ್ಯಾದಿ ವಿಚಾರಗಳ ಸಮೀಕ್ಷೆಗೆ ರಾಜ್ಯಸರ್ಕಾರವು ೧೯೯೩ರಲ್ಲಿ ಒಂದು ವಿಶ್ವವಿದ್ಯಾಲಯ ಸಮೀಕ್ಷಾ ಆಯೋಗವನ್ನು ನೇಮಿಸಿತು. ಕರ್ನಾಟಕ ರಾಜ್ಯಕ್ಕೆ ಈಗ ಕೆಲಸ ಮಾಡುತ್ತಿರುವ ನವದೆಹಲಿಯ ಇಂದಿರಾಗಾಂಧಿ ಮುಕ್ತ ವಿಶ್ವವಿದ್ಯಾಲಯ, ಬೆಂಗಳೂರಿನ ಪ್ರಾದೇಶಿಕ ವಿಭಾಗದ ಜೊತೆಗೆ, ರಾಜ್ಯದ್ದೇ ಆದ ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದ ಸ್ಥಾಪನೆ, ಪ್ರತ್ಯೇಕ ತಾಂತ್ರಿಕ ವಿಶ್ವವಿದ್ಯಾಲಯ, ಪ್ರತ್ಯೇಕ ವೈದ್ಯಕೀಯ ವಿಶ್ವವಿದ್ಯಾಲಯದ ಪ್ರಸ್ತಾವನೆಗಳು ಈ ಆಯೋಗದ ಪರಿಶೀಲನಾ ವ್ಯಾಪ್ತಿಗೆ ಒಳಪಟ್ಟಿವೆ.

· ೧೯೯೩ರಲ್ಲಿ ಸಂಭವಿಸಿದ ಒಂದು ಪ್ರಮುಖ ಮಹತ್ತರ ಹಾಗೂ ಅದ್ಭುತವಾದ ಸಂಗತಿ, ಉನ್ನತ ಶಿಕ್ಷಣದ ವೃತ್ತಿಪರ ಅಂಗಗಳಾದ ಇಂಜಿನಿಯರಿಂಗ್, ವೈದ್ಯಕೀಯ, ದಂತ ಹಾಗೂ ಫಾರ್ಮಸಿ ಶಿಕ್ಷಣಕ್ಕೆ ಸಂಬಂಧಿಸಿದ್ದು. ೧೯೭೦ರ ದಶಕದಲ್ಲಿ ಬೀಜಾಂಕುರ ಹೊಂದಿದ ಕ್ಯಾಪಿಟೇಷನ್ ಆಧಾರದ ಶಿಕ್ಷಣ ಒಂದು ಪೀಡೆಯಾಗಿ ಬೆಳೆದು, ೧೯೮೦ರ ದಶಕದಲ್ಲಿ ಒಂದು ಪೆಡಂಭೂತವಾಗಿ ನಿಂತಿತು. ಜನಸಾಮಾನ್ಯರಲ್ಲಿ ಸಾಕಷ್ಟು ಕೋಲಾಹಲವನ್ನೂ ಸಾಮಾಜಿಕ ಅಶಾಂತಿಯನ್ನೂ ತಂದಿತ್ತು. ಈ ಸಮಸ್ಯೆ ಹಲವು ಮುಖಗಳನ್ನು ಧರಿಸಿ ದೇಶದ ಶ್ರೇಷ್ಠ ನ್ಯಾಯಾಲಯದ ತನಕ ಹೋಯಿತು. ಕ್ಯಾಪಿಟೇಷನ್ ವ್ಯವಸ್ಥೆ ಏಕಕಾಲದಲ್ಲಿ ಪ್ರಜಾತಂತ್ರಾತ್ಮಕವಾದ ಸಾಮಾಜಿಕ ನ್ಯಾಯ, ಸಮಾನತೆಯ ಮೌಲ್ಯಗಳನ್ನೂ ರಾಷ್ಟ್ರದ ದೀರ್ಘಕಾಲಿಕ ಹಿತದೃಷ್ಟಿಯ ಪ್ರತಿಭಾಪುರಸ್ಕಾರದ ಮೌಲ್ಯಗಳನ್ನೂ ತುಳಿಯುತ್ತಿದೆ ಎಂಬ ಆರೋಪವನ್ನು, ಶ್ರೇಷ್ಠ ನ್ಯಾಯಾಲಯ ಸರಿ ಎಂದು ನಿರ್ಣಯಿಸಿತು. ಜೆ.ಪಿ. ಉನ್ನಿಕೃಷ್ಣನ್ ಅವರು ಹೂಡಿದ್ದ ಮೊಕದ್ದಮೆಯ ಮೇಲೆ ೪.೨.೧೯೯೩ರಂದು ಚಾರಿತ್ರಿಕವಾಗುವ ನ್ಯಾಯನಿರ್ಣಯ ಮಾಡಿ ಒಮ್ಮಿಂದೊಮ್ಮೆಗೇ, ಕ್ಯಾಪಿಟೇಷನ್ ಪೆಡಂಭೂತವನ್ನು ಸರ್ವನಾಶ ಮಾಡಿತು. ಹೀಗಾಗಿ, ಸಾವಿರಾರು ಪ್ರತಿಭಾವಂತ ಬಡವಿದ್ಯಾರ್ಥಿಗಳಿಗೆ ಮಹದುಪಕಾರವಾಯಿತು. ನಿಖರವಾಗಿ ಹೇಳುವುದಾದರೆ, ಸುಮಾರು ೯೦೦೦ ಇಂಜಿನಿಯರಿಂಗ್ ಹಾಗೂ ೨೩೦೦ ವೈದ್ಯಕೀಯ ವಿದ್ಯಾರ್ಥಿಗಳಿಗೆ ಈ ಆದೇಶದಿಂದ ಲಾಭವಾಯಿತು. ನ್ಯಾಯಾಲಯದ ತೀರ್ಪು ಕೆಲವು ಹಿತಾಸಕ್ತಿಗಳಿಗೆ ಧಕ್ಕೆ ಉಂಟು ಮಾಡಿದ ಕಾರಣ ೧೯೯೩ರಲ್ಲಿ ಸ್ವಲ್ಪಕಾಲ ಗದ್ದಲ

ಪರಿಸ್ಥಿತಿ ಇದ್ದುದರಿಂದ ವೃತ್ತಿಪರ ಕೋರ್ಸ್‌ಗಳು ಸ್ವಲ್ಪ ತಡವಾಗಿ ಪ್ರಾರಂಭವಾದುವು. ಈ ಪರಿಸ್ಥಿತಿ ಮುಂದಿನ ವರ್ಷಗಳಲ್ಲಿ ಮುಂದುವರಿಯದೇ ಇರುವುದಕ್ಕಾಗಿ ರಾಜ್ಯ ಸರ್ಕಾರ ಒಂದು ತಜ್ಞರ ಸಮಿತಿಯನ್ನು ಈಗಾಗಲೇ ನೇಮಿಸಿದೆ.

**ಸಂಪೂರ್ಣ ಸಾಕ್ಷರತಾ ಆಂದೋಲನ**

ರಾಜ್ಯದಲ್ಲಿ ಭರದಿಂದ ಸಾಗುತ್ತಿರುವ ಸಂಪೂರ್ಣ ಸಾಕ್ಷರತಾ ಆಂದೋಲನದ ಬಗ್ಗೆ ನಾಲ್ಕು ಮಾತು. ರಾಜ್ಯದ ೧೫ ಜಿಲ್ಲೆಗಳಿಗೆ ಸಾಕ್ಷರತಾ ಆಂದೋಲನ ೧೯೯೩ರಲ್ಲಿ ಪಸರಿಸಿತು. ಹಿಂದೆಯೇ ಪ್ರಾರಂಭವಾಗಿದ್ದ ದಕ್ಷಿಣ ಕನ್ನಡ, ಶಿವಮೊಗ್ಗ, ತುಮಕೂರು, ಮಂಡ್ಯ ಜಿಲ್ಲೆಗಳಲ್ಲಿ ೨ನೇ ಹಂತವಾದ ನಿರಂತರ ಶಿಕ್ಷಣ ಪ್ರಾರಂಭವಾಯಿತು. ಹೆಚ್ಚಾಗಿ ಮಹಿಳೆಯರಿಗೆ, ಹಿಂದುಳಿದ ವರ್ಗದವರಿಗೆ, ಅಲ್ಪಸಂಖ್ಯಾತರಿಗೆ ಈ ಕಾರ್ಯಕ್ರಮದಿಂದ ಲಾಭ/ಪ್ರಯೋಜನ ಆಗಿದೆ ಎಂದು ಸಮೀಕ್ಷೆಗಳು ಸಾದರಪಡಿಸಿದುವು. ಹೆಚ್ಚು ಸಾಫಲ್ಯ ಪಡೆಯದಿದ್ದ ರಾಯಚೂರು, ಬೀದರ್ ಮುಂತಾದ ಜಿಲ್ಲೆಗಳಲ್ಲಿ ಪುನಃಶ್ಚೇತನ ಕಾರ್ಯಕ್ರಮ ಕೈಗೊಳ್ಳಲಾಯಿತು. ೧೯೯೩ರ ಗ್ರಾಮ ಪಂಚಾಯಿತಿ ಚುನಾವಣೆಗಳಿಗೆ ಹೆಬ್ಬೆಟ್ಟಿನವರ ಪ್ರಮಾಣ/ಸಂಖ್ಯೆ ಕಡಿಮೆ ಆಗಿ ಹಸ್ತಾಕ್ಷರದವರ ಪ್ರಮಾಣ ಹೆಚ್ಚಿತು ಎನ್ನುವ ವರದಿ ಆಗಿದೆ. ಇದು ಒಂದು ಗಮನಾರ್ಹ ಬೆಳವಣಿಗೆ.



# ಪ್ರಾಥಮಿಕ ಶಿಕ್ಷಣ: ಭಾಷಾ ಬೋಧನೆ

*ಕೆ.ವಿ. ನಾರಾಯಣ*

ನಮ್ಮ ಶಾಲಾಶಿಕ್ಷಣದಲ್ಲಿ ಭಾಷಾ ಬೋಧನೆ ಕುರಿತಂತೆ ಚಿಂತನೆ, ಪ್ರಯೋಗಗಳು ನಡೆದಿರುವುದು ಕಡಿಮೆ. ಇರುವ ಕೆಲವು ನಿದರ್ಶನಗಳು ಕೂಡ ಅಸ್ಪಷ್ಟವಾಗಿವೆ. ತೊಂದರೆ ಪ್ರಾರಂಭವಾಗುವುದು ಭಾಷಾಯೋಜನೆಯ ಕೊರತೆಯಿಂದ. ನಮ್ಮ ಶಿಕ್ಷಣಕ್ರಮದಲ್ಲಿ 'ಸದ್ಯಕ್ಕೆ ಹೇಗೋ ಇರಲಿ' ಎಂಬ ಧಾಟಿಯ ಭಾಷಾಯೋಜನೆಗಳು ಜಾರಿಯಲ್ಲಿವೆ. ಭಾಷೆಯ ಕಲಿಕೆ/ಬೋಧನೆಯ ಸ್ವರೂಪವೇನು? ಏಕೆ ಭಾಷೆಯನ್ನು ಕಲಿಸಬೇಕು? ಎಷ್ಟು ಕಲಿಸಬೇಕು? ಯಾವಾಗ, ಹೇಗೆ ಕಲಿಸಬೇಕು? ಕಲಿಕೆಯ ಸಾಧನಗಳು ಯಾವುವು? ಕಲಿಕೆಯ ಪರಿಣಾಮಗಳನ್ನು ತಿಳಿಯುವುದು ಹೇಗೆ? ಕಲಿಕೆಯ ಆವಿಷ್ಕಾರಗಳು ಯಾವುವು? ಎಂಬ ಪ್ರಶ್ನೆಗಳನ್ನು ನಮ್ಮ ಭಾಷಾಯೋಜಕರು ಎದುರಿಸಿಲ್ಲ.

ಶಾಲೆಗಳಲ್ಲಿ ಭಾಷೆ ಔಪಚಾರಿಕ ಶಿಕ್ಷಣದ ಭಾಗವಾಗುತ್ತದೆ; ಕಲಿಯುವುದೂ ಭಾಷೆಯ ಔಪಚಾರಿಕ ರೂಪವನ್ನು. ಈ ರೂಪದ ಬಳಕೆಗೆ ವಿದ್ಯಾರ್ಥಿಯನ್ನು ಸಿದ್ಧಗೊಳಿಸುವುದು ಸಾಮಾನ್ಯ ಶಿಕ್ಷಣದ ಸ್ಥೂಲ ಗುರಿ. ಕನ್ನಡದ ಔಪಚಾರಿಕ ರೂಪ ಅಥವಾ ಪ್ರಮಾಣ ರೂಪದ ಲಕ್ಷಣಗಳನ್ನು ಇನ್ನೂ ಖಚಿತಪಡಿಸಿಕೊಂಡಿಲ್ಲ. ಹೀಗಾಗಿ ನಾವು ತಿಳಿದಂತೆ ಪ್ರಮಾಣರೂಪ ಯಾವುದೋ ಅದನ್ನೇ ಬಳಸುತ್ತಿದ್ದೇವೆ. ದಶಕಗಳು ಉರುಳಿದರೂ ಈ ಸಮಸ್ಯೆ ಬಗೆಹರಿದಿಲ್ಲ. ತರಗತಿಯಲ್ಲಿ ಭಾಷೆಯನ್ನು ಕಲಿಯಲು ಬರುವವರು ಸಾಮಾನ್ಯವಾಗಿ ಮೂರು ಗುಂಪಾಗುತ್ತಾರೆ. (೧) ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಹೊಂದಿರುವವರು. (೨) ಕನ್ನಡವನ್ನು ದ್ವಿತೀಯ ಭಾಷೆಯನ್ನಾಗಿ ಕಲಿಯುವವರು. (೩) ಕನ್ನಡ ಪ್ರಥಮ ಭಾಷೆಯಾಗಿದ್ದರೂ ಅದನ್ನು ಎರಡನೇ ಔಪಚಾರಿಕ ಭಾಷೆಯನ್ನಾಗಿ ಕಲಿಯುತ್ತಿರುವವರು. ಇದು ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸುತ್ತದೆ.

ಸಾಮಾನ್ಯ ಶಿಕ್ಷಣದಲ್ಲಿ ಭಾಷೆಯ ಬೋಧನೆಯನ್ನು ಪಠ್ಯಕ್ರಮ, ಬೋಧನೆ ಹಾಗೂ ಮೌಲ್ಯಮಾಪನ ಎಂಬ ಮೂರು ಹಂತಗಳಲ್ಲಿ ಪರಿಶೀಲಿಸಬಹುದು. ಪಠ್ಯಕ್ರಮದಲ್ಲಿ ಪಠ್ಯಪುಸ್ತಕ ಹಾಗೂ ಕಲಿಕೆಯ ಗುರಿಗಳು ಸೇರುತ್ತವೆ. ಬೋಧನೆಯಲ್ಲಿ ಕಲಿಕೆಯ ತತ್ತ್ವ ವಿಧಾನಗಳು ಬರುತ್ತವೆ. ಮೌಲ್ಯಮಾಪನದ ಹಂತದಲ್ಲಿ ಕಲಿಕೆಯ ಸಾಮಾನ್ಯ ವಿಧಾನಗಳ ಚೌಕಟ್ಟಿನಲ್ಲಿ ಭಾಷೆಯ ಕಲಿಕೆಯನ್ನು ಮಾಪನಮಾಡುವ ಬಗೆಯನ್ನು ಚರ್ಚಿಸಲು ಸಾಧ್ಯ.

ಭಾಷಾ ಪಠ್ಯಗಳ/ ಪಠ್ಯಕ್ರಮದ ಹಿಂದೆ 'ಸರಳತೆಯಿಂದ ಕ್ಲಿಷ್ಟತೆ' ಯೆಡೆಗೆ ಎಂಬ ತತ್ತ್ವ ಬಲವಾಗಿರುತ್ತದೆ. ಅದರಲ್ಲೂ ಭಾಷೆಯ ಲಿಖಿತರೂಪದಲ್ಲಿ ವಿದ್ಯಾರ್ಥಿಗೆ ಪ್ರವೇಶ ಒದಗಿರಬೇಕೆಂಬ ಇರಾದೆ ಮುಖ್ಯವಾಗಿರುತ್ತದೆ. ಅಕ್ಷರ, ಪದ, ಪದಸಮುಚ್ಚಯ ಹಾಗೂ ವಾಕ್ಯಗಳ ವರೆಗೆ ವಿದ್ಯಾರ್ಥಿಯನ್ನು ಹಂತಹಂತವಾಗಿ ಒಯ್ಯಲಾಗುತ್ತದೆ. ಅನಂತರದಲ್ಲಿ ಭಾಷಾಪಠ್ಯ ಮತ್ತು ಇತರ ಪಠ್ಯಗಳ ನಡುವೆ ವ್ಯತ್ಯಾಸ ಕಡಿಮೆ. ಗಾಂಧಿಯ ಬಗ್ಗೆ ಭಾಷಾಪಠ್ಯದಲ್ಲಿ ಹಾಗೂ ಚರಿತ್ರೆಯ ಪಠ್ಯದಲ್ಲಿ ಬರಬಹುದಾದ ಪಾಠಗಳ ಸ್ವರೂಪ ಬಹುಮಟ್ಟಿಗೆ ಸಮಾನವಾಗಿರುತ್ತದೆ. ವಿಷಯ ಮತ್ತು ಭಾಷೆ ಇವೆರಡರ ನಡುವೆ ಗುರಿ ಮತ್ತು ಸಾಧನಗಳ ಸಂಬಂಧವೇರ್ಪಡುತ್ತದೆ. ಅಂದರೆ ಶಿಕ್ಷಣದ ಒಂದು ಹಂತ ಕಳೆದ ಮೇಲೆ ನಿಜವಾದ ಅರ್ಥದಲ್ಲಿ ಭಾಷಾಬೋಧನೆ ಎಂಬುದು ಇರುವುದೇ ಇಲ್ಲ.

ಪ್ರಥಮ ಭಾಷೆ ಕನ್ನಡವಾಗಿರುವ ವಿದ್ಯಾರ್ಥಿಗಳು ಶಾಲಾಶಿಕ್ಷಣದ ವ್ಯಾಪ್ತಿಗೆ ಬರುವಹೊತ್ತಿಗೆ ಕನ್ನಡವನ್ನು ಚೆನ್ನಾಗಿ ಕಲಿತಿರುತ್ತಾರೆ. ಅವರಿಗೆ ಕನ್ನಡವನ್ನು 'ಕಲಿಸಲು' ಏನೂ ಉಳಿದಿರುವುದಿಲ್ಲ. ' ಬಳಸಲು' ಕಲಿಸಬಹುದು. ಕನ್ನಡದ ಹತ್ತಾರು ಬಗೆಯ ಬಳಕೆಯ ಮಾದರಿಗಳಿಗೆ ಅವರು ತೆರೆದುಕೊಳ್ಳುವಂತೆ ಮಾಡಬೇಕಾಗುತ್ತದೆ. ಪಠ್ಯಕ್ರಮ/ ಪಠ್ಯಗಳು ಅದಕ್ಕೆ ತಕ್ಕಂತೆ ರೂಪುಗೊಳ್ಳುವುದು ಅವಶ್ಯ.

ಬರೆಹ ಮತ್ತು ಓದು ಭಾಷೆಯ ಎರಡು ಕೌಶಲಗಳು. ಇವೆರಡನ್ನೂ ಪಡೆದುಕೊಳ್ಳುವ ಹಾಗೂ ಬಳಸುವ ವೇಗ, ಪ್ರಮಾಣ ಮತ್ತು ಬಗೆಗಳಲ್ಲಿ ವ್ಯತ್ಯಾಸವಿರುತ್ತದೆ. ಬರೆಹ ಕೌಶಲವನ್ನು ಪಡೆಯುವ ವಿದ್ಯಾರ್ಥಿ ಓದಿನ ಕೌಶಲವನ್ನು ಅಧಿಕವಾಗಿ ಬಳಸುವ ಸಾಮರ್ಥ್ಯವನ್ನು ಪಡೆದಿರುತ್ತಾನೆ. ಈ ಸಾಮರ್ಥ್ಯದ ಬಳಕೆಗೆ ಪಠ್ಯಕ್ರಮದಲ್ಲಿ ಅವಕಾಶಗಳು ಪ್ರತ್ಯೇಕವಾಗಿ ಕಲ್ಪಿತವಾಗಬೇಕು, ಅವಶ್ಯ ಸಾಮಗ್ರಿ ಲಭ್ಯವಾಗಬೇಕಿದೆ. ಹೀಗೆ ದೊರೆಯುವ ಓದಿನ ಅವಕಾಶಗಳು ಭಾಷೆಯ ಶಿಕ್ಷಣದ ಅತಿದೊಡ್ಡ ಕೊರತೆಯನ್ನು ತುಂಬಲು ಶಕ್ತವಾಗುತ್ತವೆ.

ಬೋಧನಾ ಕ್ರಮದ ಬಗ್ಗೆ ಚರ್ಚೆ ಸಂಕೀರ್ಣವಾದುದು. ಏಕೆಂದರೆ ಇದು ಕೇವಲ ಶೈಕ್ಷಣಿಕ ಸಂದರ್ಭವನ್ನು ಮಾತ್ರವಲ್ಲದೆ ವಿಸ್ತಾರವಾದ ಸಾಮಾಜಿಕ ಸನ್ನಿವೇಶವನ್ನೂ ಒಳಗೊಳ್ಳುತ್ತದೆ. ಅದರಿಂದ ಪ್ರಭಾವಿತವಾಗುತ್ತದೆ. ಹೀಗಿರುವಾಗ ಬೋಧನಾ ಕ್ರಮದ ಸಿದ್ಧಾಂತಗಳು ಹಾಗೂ ವಾಸ್ತವ ಸ್ಥಿತಿಗಳ ನಡುವೆ ಅಗಾಧ ಕಂದರ ಬೀಳುತ್ತದೆ. ಈ ಕಂದರವನ್ನು ತುಂಬುವ ಹೊಣೆ ಸೀಮಿತ ಸಂಪನ್ಮೂಲಗಳನ್ನು ಪಡೆದ ಶಿಕ್ಷಕರ ಮೇಲೆ ಬೀಳುತ್ತದೆ. ಯೋಜನೆ ಒದಗಿಸಿದ ಪರಿಕರಗಳು ಶಿಕ್ಷಕನಿಗೆ ತರಗತಿಗಳಲ್ಲಿ ಎಷ್ಟರಮಟ್ಟಿಗೆ ನೆರವಾಗಬಲ್ಲವೆಂಬುದು ಯೋಚಿಸಬೇಕಾದ ವಿಷಯ.

ಪಠ್ಯಕ್ರಮದ ಮೂಲಕ ಏನನ್ನು ಸಾಧಿಸಬೇಕೆಂಬ ಬಗ್ಗೆ ಈಚಿನ ದಿನಗಳಲ್ಲಿ ರಾಷ್ಟ್ರವ್ಯಾಪಿ ಚರ್ಚೆ ನಡೆದಿದೆ. 'ಕನಿಷ್ಠ ಕಲಿಕಾ ಹಂತಗಳು' ಎಂಬ ಪರಿಕಲ್ಪನೆಯನ್ನು ಆರೇಳು ವರ್ಷಗಳಿಂದ ಬಲವಾಗಿ ಬಳಸಲಾಗುತ್ತಿದೆ. ಪ್ರಾಥಮಿಕ ಶಿಕ್ಷಣದ ಮೊದಲ ಐದುವರ್ಷಗಳವರೆಗೆ ಭಾಷಾ ಬೋಧನೆ- ಕಲಿಕೆಯಲ್ಲಿ ನಿರೀಕ್ಷಿಸುವ ಕನಿಷ್ಠ ಸಾಧನೆಗಳನ್ನು

ಪಟ್ಟಿ ಮಾಡಲಾಗಿದೆ. ಇದರಿಂದ ಪಠ್ಯರಚನೆಗೆ ನೆರವು ಒದಗಿದೆ. ಆದರೆ ಬೋಧನಾಕ್ರಮವನ್ನು ಇದರಿಂದ ಸ್ಪಷ್ಟಗೊಳಿಸಿಕೊಳ್ಳುವುದು ಸಾಧ್ಯವಾಗಿಲ್ಲ. ಬೋಧನೆ-ಕಲಿಕೆ ಸರಣಿಯಲ್ಲಿ ಶಿಕ್ಷಕನ ಸ್ಥಾನವನ್ನು ಮರುವಿವೇಚನೆಗೆ ಗುರಿಪಡಿಸುವ ಸಾಧ್ಯತೆ ಹೆಚ್ಚಾಗುತ್ತಿದೆ. ಔಪಚಾರಿಕ ಮತ್ತು ಅನೌಪಚಾರಿಕ (ದೂರ ಶಿಕ್ಷಣ, ಸ್ವಕಲಿಕೆ ಎಲ್ಲ ಸೇರಿ) ಶಿಕ್ಷಣಗಳ ನಡುವೆ ಗೆರೆ ತೆಳುವಾಗುತ್ತಿದೆ.

ಭಾಷಾ ಬೋಧನೆಯನ್ನು ಸಾಮಾನ್ಯ ಕಲಿಕೆಯ ಚೌಕಟ್ಟಿನಲ್ಲಿ ಇರಿಸುತ್ತಿರುವುದು ಇನ್ನೊಂದು ಸಮಸ್ಯೆ. ಸಾಮಾನ್ಯ ಕಲಿಕೆಯ ತಂತ್ರಗಳು ಅನ್ವಯಗೊಳ್ಳುವ ಕ್ರಮವನ್ನೇ ಭಾಷಾ ಕಲಿಕೆಯಲ್ಲೂ ಅನುಸರಿಸಲಾಗುತ್ತಿದೆ. ಹೀಗಾಗಿ ಭಾಷೆಗೆ ಇರುವ ಸ್ವಾಯತ್ತ ಕಲಿಕಾ ಸಾಮರ್ಥ್ಯವನ್ನು ವ್ಯವಸ್ಥಿತವಾಗಿ ಬಳಸಲಾಗುತ್ತಿಲ್ಲ; ಅಥವಾ ಭಾಷೆಯನ್ನು ನಾವಿನ್ನೂ ಒಂದು ಸಾಧನವೆಂದು ಪರಿಗಣಿಸುತ್ತಿದ್ದೇವೆ; ವ್ಯಕ್ತಿತ್ವದ ಒಂದು ಅಂಗವೆಂದು ತಿಳಿದಿಲ್ಲ.

ಬೋಧನೆ ಕಲಿಕೆಯ ಮೌಲ್ಯಮಾಪನ ಅವಶ್ಯ. ಪ್ರಮಾಣೀಕರಣಗೊಂಡ ಮೌಲ್ಯಮಾಪನ ವಿಧಾನಗಳು ಒಂದು ಕಡೆ. ನಿರಂತರ ಹಾಗೂ ವ್ಯಕ್ತಿಕೇಂದ್ರಿತ ಮೌಲ್ಯಮಾಪನ ಇನ್ನೊಂದು ಕಡೆ. ಇವೆರಡೂ ನಡೆಯಬೇಕಾದ ಕೆಲಸಗಳು. ಪಠ್ಯದ ಜತೆಗೆ ಶಿಕ್ಷಕನಿಗೆ ಇಂಥ ಮೌಲ್ಯಮಾಪನದ ವಿಧಾನಗಳಲ್ಲಿ ತೊಡಗಿಕೊಳ್ಳಲು ಅನುಕೂಲವಾಗುವ ಸಾಮಗ್ರಿಯನ್ನು ಸಿದ್ಧಪಡಿಸಿಕೊಡುವ ಅವಶ್ಯಕತೆಯಿದೆ.

ಮೌಲ್ಯಮಾಪನ ವಿದ್ಯಾರ್ಥಿಯ ಕಲಿಕೆಯ ಮಟ್ಟ ಹಾಗೂ ಸಾಮರ್ಥ್ಯಗಳನ್ನು ಒರೆಗೆ ಹಚ್ಚುವಂತೆ ಪಠ್ಯ ಮತ್ತು ಬೋಧನಾಕ್ರಮಗಳ ಉಪಯುಕ್ತತೆಯನ್ನೂ ಪರೀಕ್ಷೆಗೆ ಒಡ್ಡುತ್ತದೆ. ಇದರಿಂದ ಭಾಷಾಯೋಜಕರೂ ಕಲಿಯಬೇಕಾದು ಬಹಳವಿರುತ್ತದೆ.



# ಮಾತೃಭಾಷೆಯಲ್ಲಿ ಶಿಕ್ಷಣ

*ಎಂ. ಚಿದಾನಂದಮೂರ್ತಿ*

---

**ಸರ್ವೋನ್ನತ ನ್ಯಾಯಾಲಯದ ಸಮ್ಮತಿ**

ಚೆನ್ನಗಿರಿ ತಾಲ್ಲೂಕಿನ ಉರ್ದು ಶಾಲಾಭಿವೃದ್ಧಿ ಸಮಿತಿ ಮತ್ತು ಇತರ ಸಮಿತಿಗಳು ೧೯೮೯ರಲ್ಲಿ ಕರ್ನಾಟಕ ಇಂಗ್ಲಿಷ್ ಮಾಧ್ಯಮ ವಿದ್ಯಾರ್ಥಿಗಳ ಪೋಷಕರ ಸಂಘವು ೧೯೯೧ರಲ್ಲಿ ಕರ್ನಾಟಕ ಸರ್ಕಾರದ ವಿರುದ್ಧ ಸರ್ವೋನ್ನತ ನ್ಯಾಯಾಲಯಕ್ಕೆ ಸಿವಿಲ್ ಅಪೀಲ್ ಮತ್ತು ರಿಟ್ ಅರ್ಜಿಗಳನ್ನು ಸಲ್ಲಿಸಿದ್ದವು. ಅವು ಒಂದೇ ಬಗೆಯಾದ್ದರಿಂದ ಸರ್ವೋನ್ನತ ನ್ಯಾಯಾಲಯವು ಅವೆಲ್ಲವನ್ನು ಒಟ್ಟಿಗೆ ವಿಚಾರಣೆಗೆ ತೆಗೆದುಕೊಂಡು ೮.೧೨. ೯೩ ರಂದು ತೀರ್ಪು ನೀಡಿತು. ಆ ತೀರ್ಪಿನ ಪ್ರತಿಯು ಈಗ ಲಭ್ಯವಿರುವುದರಿಂದ ಅದರ ಹಿನ್ನೆಲೆ, ಸ್ವರೂಪ, ಮಹತ್ವ, ಕರ್ನಾಟಕ ಸರ್ಕಾರ ಕೈಗೊಳ್ಳಬೇಕಾದ ಕ್ರಮ ಇವನ್ನು ಸ್ವಲ್ಪ ವಿಸ್ತಾರವಾಗಿ ಪರಿಶೀಲಿಸುವುದು ಅಗತ್ಯ. ಆ ತೀರ್ಪು ಕೇವಲ ಭಾಷೆಗೆ ಸಂಬಂಧಿಸಿದೆ. ಕರ್ನಾಟಕದ (ಮತ್ತು ಒಂದು ರೀತಿಯಲ್ಲಿ ಇಡೀ ಭಾರತದ) ಮಕ್ಕಳ ಶಿಕ್ಷಣದ ಭವಿಷ್ಯವನ್ನೇ ಆ ಮೂಲಕ ಭಾರತೀಯ ಸಂಸ್ಕೃತಿಯ ಭವಿಷ್ಯವನ್ನೇ ನಿರ್ಧರಿಸುವಂತಹದಾದ್ದರಿಂದ ಅದನ್ನು ಎಲ್ಲರೂ ತಿಳಿಯುವುದು ಮತ್ತು ಆ ಬಗ್ಗೆ ಅತ್ಯಂತ ಗಂಭೀರವಾಗಿ ಚಿಂತಿಸುವುದು ಇಂದು ತೀರ ಅಗತ್ಯವಾಗಿದೆ.

**ಗೋಕಾಕ್ ಸೂತ್ರ**

ಎಪ್ಪತ್ತರ ದಶಕದಲ್ಲಿ ಪ್ರೌಢಶಾಲೆಗಳ ವಿದ್ಯಾರ್ಥಿಗಳು ಓದಬೇಕಾದ ಮೂರು ಭಾಷೆಗಳಲ್ಲಿ (೧೫೦+೧೦೦+೫೦) ಮೊದಲ ಭಾಷೆಯಾಗಿ ಕನ್ನಡದ ಬದಲು ಹೆಚ್ಚು ಅಂಕಗಳನ್ನು ಪಡೆಯುವ ಆಸೆಯಿಂದ ಸಂಸ್ಕೃತವನ್ನು ಆಯ್ಕೆ ಮಾಡಿಕೊಳ್ಳುವ ಪ್ರವೃತ್ತಿ ಹೆಚ್ಚಾಗುತ್ತಾ ಬಂದಿತು. ಅನೇಕ ಪ್ರೌಢಶಾಲೆಗಳಲ್ಲಿ ಕನ್ನಡದ ಸೆಕ್ಷನ್ನುಗಳನ್ನೇ ರದ್ದು ಮಾಡುವ ಪರಿಸ್ಥಿತಿ ಉದ್ಭವವಾಯಿತು. ಅಲ್ಲದೆ ಒಂದನೇ ತರಗತಿಯಿಂದ ಪದವಿಯವರೆಗೆ ಎಲ್ಲೂ ಕನ್ನಡವನ್ನು ಓದದೆ ಶಿಕ್ಷಣ ಮುಗಿಸಲು ಸಾಧ್ಯವಿತ್ತು. ಇದನ್ನು ಗಂಭೀರವಾಗಿ ತೆಗೆದುಕೊಳ್ಳಲು ಸರ್ಕಾರದ ಮೇಲೆ ಒತ್ತಡ ಬಂದು ಆ ಬಗ್ಗೆ ಕೂಲಂಕಷವಾಗಿ ವಿಚಾರಿಸಿ ಒಂದು ವರದಿ ಸಲ್ಲಿಸಲು ಪ್ರೊ. ವಿ. ಕೃ. ಗೋಕಾಕರ ಅಧ್ಯಕ್ಷತೆಯಲ್ಲಿ ಆರು ಜನರ ಒಂದು ಸಮಿತಿಯನ್ನು ಸರ್ಕಾರವು ನೇಮಿಸಿತು. ಆ ಸಮಿತಿಯು ೨೭. ೧. ೧೯೮೧ ರಂದು ತನ್ನ ವರದಿಯನ್ನು ಸಲ್ಲಿಸಿತು. ಆ ವರದಿಯ ಸಾರಾಂಶ ಹೀಗಿದೆ:

೧. ಎಲ್ಲ ಮಕ್ಕಳಿಗೂ ಮೂರನೇ ತರಗತಿಯಿಂದ ಕನ್ನಡವನ್ನು ಕಡ್ಡಾಯವಾಗಿ ಕಲಿಸಬೇಕು.

೨. ಪ್ರೌಢ ತರಗತಿಯಲ್ಲಿ ಎಂದರೆ ಎಂಟು, ಒಂಬತ್ತು, ಹತ್ತನೇ ತರಗತಿಗಳಲ್ಲಿ ಎಲ್ಲಾ ವಿದ್ಯಾರ್ಥಿಗಳೂ ೧೫೦ ಅಂಕಗಳ ಕನ್ನಡವನ್ನು ಕಡ್ಡಾಯವಾಗಿ ಓದಬೇಕು. ಇದು ಕನ್ನಡ ಮಾತೃಭಾಷೆಯ ವಿದ್ಯಾರ್ಥಿಗಳಿಗೆ ೧೯೮೧-೮೨ ರಿಂದಲೇ ಜಾರಿಗೆ ಬರತಕ್ಕದ್ದು. ಕನ್ನಡೇತರ ವಿದ್ಯಾರ್ಥಿಗಳಿಗೆ ಮಾತ್ರ ೮೧-೮೨ ರಿಂದಲೇ ಕನ್ನಡವನ್ನು ಮೂರನೆಯ ತರಗತಿಯಿಂದ ಕಲಿಸಲು ಆರಂಭಿಸಿ ಅವರಿಗೆ ಎಂಟನೆಯ ತರಗತಿಯಿಂದ ೧೯೮೬-೮೭ ರಿಂದ ೧೫೦ ಅಂಕಗಳ ಕನ್ನಡವನ್ನು ಮೊದಲ ಭಾಷೆಯಾಗಿ ಕಲಿಸಬೇಕು.

೩. ಕನ್ನಡ ಬಿಟ್ಟು ಉಳಿದ ಭಾಷೆಗಳಲ್ಲಿ (ಇಂಗ್ಲಿಷ್, ಉರ್ದು, ತಮಿಳು, ತೆಲುಗು, ಮರಾಠಿ, ಹಿಂದಿ, ಸಂಸ್ಕೃತ, ಮಲಯಾಳ) ಎರಡನ್ನು ೧೦೦ ಮತ್ತು ೫೦ ಅಂಕಗಳಿಗೆ. 'ಗೋಕಾಕ್ ವರದಿ'ಯನ್ನು ಜಾರಿಗೆ ತರಲು ಒಪ್ಪದ ಕರ್ನಾಟಕ ಸರ್ಕಾರದ ವಿರುದ್ಧ ೧೯೮೨ ರಲ್ಲಿ ರಾಜ್ಯದಾದ್ಯಂತ ನಡೆದ ಚಳುವಳಿ ಈಗ 'ಗೋಕಾಕ್ ಚಳುವಳಿ'ಯೆಂದೇ ಪ್ರಖ್ಯಾತವಾಗಿದೆ. ಆ ಚಳುವಳಿಗೆ ಸರ್ಕಾರವು ಮಣಿದರೂ ಗೋಕಾಕ ವರದಿಯನ್ನು ಮಾರ್ಪಡಿಸಿ ಆದೇಶ ಹೊರಡಿಸಿತು. ೧೫೦ ಅಂಕಗಳ ಮೊದಲು ಭಾಷೆಯಲ್ಲಿ ಆಯ್ಕೆ ಮಾಡಿಕೊಳ್ಳಬೇಕು. ಮೂರು ಭಾಷೆಗಳೂ ಪರೀಕ್ಷಾ ವಿಷಯಗಳು.

ಕನ್ನಡದ ಜೊತೆ ಇತರೆ ಭಾಷೆಗಳನ್ನೂ ಸೇರಿಸಿ ೧೫೦+೧೦೦+೧೦೦ ಈ ಅಂಕಗಳ ಮೂರು ಭಾಷೆಗಳನ್ನು ನಿಗದಿಪಡಿಸಿ ೩೦. ೪. ೧೯೮೨ ರಲ್ಲಿ ಒಂದು ಆಜ್ಞೆ ಹೊರಡಿಸಿತು. ಏಕೈಕ ಪ್ರಥಮ ಭಾಷೆಯಾಗಿ ಕನ್ನಡವನ್ನೇ ಗೊತ್ತುಪಡಿಸಲು ಅದು ನಿರಾಕರಿಸಿತು. ಕನ್ನಡವು ಏಕೈಕ ಪ್ರಥಮ ಭಾಷೆಯಾಗಬೇಕೆಂದು ಒತ್ತಾಯಿಸಿ ಮತ್ತೆ ಚಳುವಳಿ ತೀವ್ರಗೊಂಡು ಕೊನೆಗೆ ಕನ್ನಡ ಚಳುವಳಿಗಾರರನ್ನು ಕರ್ನಾಟಕ ಸರ್ಕಾರವು ಸಂಧಾನಕ್ಕೆ ಆಹ್ವಾನಿಸಿತು. ಅಂದು ಒಪ್ಪಿತವಾದ ಸೂತ್ರವು ಮುಂದೆ ಶಾಸನಸಭೆಯ ಮುಂದೆ ಮಂಡಿತವಾಗಿ ಒಪ್ಪಿಗೆಯನ್ನು ಪಡೆಯಿತು. ಆ ಹೊಸ ಸೂತ್ರದ ಪ್ರಕಾರ ಪ್ರೌಢಶಾಲೆಗಳಲ್ಲಿ (ಎಂಟು, ಒಂಬತ್ತು, ಹತ್ತನೇ ತರಗತಿಗಳಲ್ಲಿ) ಕನ್ನಡವು ೧೨೫ ಅಂಕಗಳ ಏಕೈಕ ಪ್ರಥಮ ಭಾಷೆಯಾಗಿರಬೇಕು ಮತ್ತು ವಿದ್ಯಾರ್ಥಿಗಳು ಅದರ ಜೊತೆಗೆ ೧೦೦+೧೦೦ ಈ ಅಂಕಗಳಿಗೆ ಉಳಿದ ಗೊತ್ತುಪಡಿಸಿದ ಭಾಷೆಗಳಲ್ಲಿ ಎರಡು ಭಾಷೆಗಳನ್ನು ಆರಿಸಿಕೊಳ್ಳಬೇಕು. ಈ ಮೂರರಲ್ಲೂ ತೇರ್ಗಡೆಯಾಗುವುದು ಅಗತ್ಯ. ಶಾಸನ ಸಭೆಯು ಕನ್ನಡವನ್ನು ಎಲ್ಲ ವಿದ್ಯಾರ್ಥಿಗಳಿಗೂ ಒಂದನೇ ತರಗತಿಯಿಂದಲೇ ಕಲಿಸಬೇಕೆಂದು ತೀರ್ಮಾನಿಸಿತು. ಈ ಬಗ್ಗೆ ೨೦. ೭. ೮೨ ರಂದು ಸರ್ಕಾರದ ಆದೇಶವು ಹೊರಟು ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಕನ್ನಡವು ಮಾತೃಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ಮತ್ತು ಹಿಂದಿ ಮಾತೃಭಾಷೆಯಲ್ಲದ ಕನ್ನಡ ವಿದ್ಯಾರ್ಥಿಗಳಿಗೆ ಹಿಂದಿಯಲ್ಲಿ ಶೇಕಡ ಹದಿನೈದು ಕೃಪಾಂಕಗಳಿರುತ್ತವೆಯೆಂದು ನಿಗದಿಪಡಿಸಿತು.

೨೦. ೭. ೮೨ ರ ಆದೇಶವನ್ನು ಪ್ರಶ್ನಿಸಿ ಕೆಲವು ಸಂಸ್ಥೆಗಳು ಕರ್ನಾಟಕದ ಉನ್ನತ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದವು. ಸರ್ಕಾರದ ಆದೇಶವು ಭಾಷಾ ಅಲ್ಪ ಸಂಖ್ಯಾತರ ಭಾಷೆ ಮತ್ತು ರಕ್ಷಣೆಗಾಗಿ ಇರುವ ಸಂವಿಧಾನದ ೧೪, ೨೯ ಮತ್ತು ೩೦ನೇ ವಿಧಿಗಳ ಉಲ್ಲಂಘನೆ ಮಾಡುವುದೆಂದು ಅರ್ಜಿಗಳಲ್ಲಿ ವಾದಿಸಲಾಗಿತ್ತು. ಅದೊಂದು ಮಹತ್ವದ ವಿಷಯವಾಗಿದ್ದುದರಿಂದ ೨೭. ೧. ೮೪ ರಂದು ಅದನ್ನು ಕರ್ನಾಟಕದ ಪೂರ್ಣ ಪೀಠದ ಪರಿಶೀಲನೆಗೆ ಒಪ್ಪಿಸಲಾಯ್ತು. ಅದು ಕೊಟ್ಟ ಬಹುಮತದ ತೀರ್ಪಿನಲ್ಲಿ ಕನ್ನಡವನ್ನು ಮೊದಲ ತರಗತಿಯಿಂದಲೇ ಭಾಷಾ ಅಲ್ಪಸಂಖ್ಯಾತರ ಶಾಲೆಗಳಲ್ಲಿ ಕಡ್ಡಾಯವಾಗಿ ಕಲಿಸುವ ಬಗ್ಗೆ, ಪ್ರೌಢಶಾಲೆಗಳಲ್ಲಿ ಕನ್ನಡವನ್ನು ಏಕೈಕ ಪ್ರಥಮ ಭಾಷೆಯಾಗಿ ಗೊತ್ತು ಮಾಡಿರುವುದರ ಬಗ್ಗೆ ತನ್ನ ಒಪ್ಪಿಗೆಯಿಲ್ಲವೆಂದು ಹೇಳಿತು. ಅಂತಹ ಕ್ರಮವು ಸಂವಿಧಾನದ ೧೪ನೇ ವಿಧಿಯ ಉಲ್ಲಂಘನೆಯೆಂದಿತು. ಈ ವಿಷಯದಲ್ಲಿ ಹೆಚ್ಚಿನ ಪರಿಶೀಲನೆ ಅಗತ್ಯವೆಂದು ಅರ್ಜಿಗಳನ್ನು ಅಂತಿಮ ತೀರ್ಪಿಗಾಗಿ ಡಿವಿಜನ್ ಬೆಂಚಿಗೆ ಒಪ್ಪಿಸಿತು.

**ಸರ್ಕಾರದ ನೀತಿ**

ಕರ್ನಾಟಕ ಶ್ರೇಷ್ಠ ನ್ಯಾಯಾಲಯವು ೨೫. ೧. ೮೯ ರಂದು ತನ್ನ ಅಂತಿಮ ತೀರ್ಪನ್ನು ಕೊಟ್ಟಿತು. ಆ ತೀರ್ಪಿನ ಹಿನ್ನೆಲೆಯಲ್ಲಿ ಮತ್ತು ಆ ತೀರ್ಪಿಗನುಗುಣವಾಗಿ ಸರ್ಕಾರವು ೧೯. ೬. ೧೯೮೯ ರಂದು ಹೊರಡಿಸಿದ ಆದೇಶದಲ್ಲಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣದ ತನ್ನ ನೀತಿಯನ್ನು ಹೀಗೆ ನಿರೂಪಿಸಿತ್ತು :

೧. ಒಂದನೇ ತರಗತಿಯಿಂದ ನಾಲ್ಕನೇ ತರಗತಿಯವರೆಗೆ ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಿರುತ್ತದೆ.

೨. ಅವರ ಮಾತೃಭಾಷೆಯ ಜೊತೆ ಕನ್ನಡವನ್ನು ಐಚ್ಛಿಕವಾಗಿ ಮೂರನೇ ತರಗತಿಯಿಂದ ಕನ್ನಡೇತರ ವಿದ್ಯಾರ್ಥಿಗಳಿಗೆ ಕಲಿಸಲಾಗುತ್ತದೆ. ಆದರೆ ಕನ್ನಡವು ಪರೀಕ್ಷಾ ವಿಷಯವಾಗ್ಗಿರುವುದಿಲ್ಲ.

೩. ಮಾತೃಭಾಷೆಯ ಜೊತೆ ಎರಡನೆಯ ಭಾಷೆಯನ್ನು ಐದನೇ ತರಗತಿಯಿಂದ ಕಲಿಸುವ ವ್ಯವಸ್ಥೆ ಎಲ್ಲೆಡೆ ಇದೆ. ಅದರಂತೆ ಐದನೇ ತರಗತಿಯಿಂದ ಕನ್ನಡ ಮಗುವು ಕನ್ನಡೇತರ ಭಾಷೆಯೊಂದನ್ನು, ಕನ್ನಡೇತರ ಮಗವು ಕನ್ನಡವನ್ನು ಕಡ್ಡಾಯವಾಗಿ ಕಲಿಯಬೇಕು. ಅದು ಪರೀಕ್ಷಾ ವಿಷಯವೂ ಆಗಿರುತ್ತದೆ ಮತ್ತು ಅದೇ ಐದನೇ ತರಗತಿಯಿಂದ ಮಗುವಿಗೆ ಮೂರನೆಯ ಭಾಷೆಯನ್ನು ಕಲಿಸುವ ವ್ಯವಸ್ಥೆ ಇರುತ್ತದೆ. ಈ ವ್ಯವಸ್ಥೆ ಏಳನೆಯ ತರಗತಿಯವರೆಗೆ.

೪. ಪ್ರೌಢಶಾಲಾ ಹಂತದಲ್ಲಿ (ಎಂಟು, ಒಂಬತ್ತು, ಹತ್ತನೇ ತರಗತಿಗಳಲ್ಲಿ) ಮೂರು ಭಾಷೆಗಳ ಅಧ್ಯಯನ ಕಡ್ಡಾಯ (೧೨೫+೧೦೦+೧೦೦). ಕನ್ನಡವನ್ನು ಮೊದಲ ಭಾಷೆಯಾಗಿ ಆಯ್ಕೆ ಮಾಡಿಕೊಳ್ಳದೇ ಇರುವವರು ಉಳಿದ ಎರಡು ಭಾಷೆಗಳಲ್ಲಿ ಒಂದನ್ನು ಕಡ್ಡಾಯವಾಗಿ ಕನ್ನಡವನ್ನೇ ಆರಿಸಿಕೊಳ್ಳಬೇಕು. ಎಂದರೆ ಮೂರು ಭಾಷೆಗಳಲ್ಲಿ

ಕನ್ನಡವು ಒಂದು ಭಾಷೆಯಾಗಿ ಕಡ್ಡಾಯ. ಕನ್ನಡೇತರ ಮಕ್ಕಳಿಗೆ ಕನ್ನಡದಲ್ಲಿ ಕನ್ನಡ ಮಕ್ಕಳಿಗೆ ಹಿಂದಿಯಲ್ಲಿ ಶೇಕಡ ಹದಿನೈದು ಕೃಪಾಂಕಗಳಿರುತ್ತವೆ.

ಕರ್ನಾಟಕ ಇಂಗ್ಲಿಷ್ ಮಾಧ್ಯಮ ವಿದ್ಯಾರ್ಥಿಗಳ ಪೋಷಕರ ಸಂಘವು ಮೇಲಿನ ಸರ್ಕಾರದ ಆದೇಶದ ವಿರುದ್ಧವಾಗಿ ಸರ್ವೋನ್ನತ ನ್ಯಾಯಾಲಯಕ್ಕೆ ರಿಟ್ ಅರ್ಜಿ ಸಲ್ಲಿಸಿ ಭಾಷಾ ಅಲ್ಪಸಂಖ್ಯಾತರ ಮಕ್ಕಳಿಗೆ ಸಂವಿಧಾನದ ೧೪ ರ ವಿಧಿಯ ಅನ್ವಯ ಸಮಾನಾವಕಾಶ ದೊರಕಿಲ್ಲವೆಂದೂ ಭಾಷೆಗಳ ಆಯ್ಕೆಯ ವಿಷಯದಲ್ಲಿ ಸಂವಿಧಾನದ ೩೫೦-ಎ ವಿಧಿಯು ಕೊಟ್ಟಿರುವ ಸ್ವಾತಂತ್ರ್ಯವನ್ನು ಮೇಲಿನ ಆದೇಶವು ಕಿತ್ತುಕೊಂಡಿದೆಯೆಂದೂ ವಾದಿಸಿತು. ಮತ್ತು ಮಕ್ಕಳಿಗೆ ಮೂರು ಭಾಷೆಗಳನ್ನು ಪ್ರಾಥಮಿಕ ಹಂತದಿಂದಲೇ ಕಲಿಸುವುದು ಅವರ ಮನಸ್ಸಿನ ಮೇಲೆ ಮಿತಿಮೀರಿದ ಭಾರ ಹೇರಿದಂತಾಗುವುದೆಂದೂ ಹೇಳಿತು. ಮಗುವಿನ ಪರವಾಗಿ ಅವರ ತಂದೆ ತಾಯಿಂದಿರು ಭಾಷೆಗಳನ್ನು ಆಯ್ಕೆ ಮಾಡಿಕೊಳ್ಳಲು ಸ್ವಾತಂತ್ರ್ಯವಿರಬೇಕೆಂದೂ ಹೇಳಿತು.

## ಪ್ರತಿವಾದ

ಕರ್ನಾಟಕ ಸರ್ಕಾರದ ಅಡ್ವೋಕೇಟ್ ಜನರಲ್‌ರು ತಮ್ಮ ಸರ್ಕಾರದ ಆದೇಶವು ಕರ್ನಾಟಕ ಉನ್ನತ ನ್ಯಾಯಾಲಯದ ಪೂರ್ಣ ಪೀಠದ ತೀರ್ಪಿಗೆ ಅನುಗುಣವಾಗಿದೆಯೆಂದು ಹೇಳಿದರಲ್ಲದೆ ಕನ್ನಡವು ಕರ್ನಾಟಕದ ಅಧಿಕೃತ ಭಾಷೆಯಾಗಿರುವುದರಿಂದ ಅಲ್ಲಿನ ಭಾಷಾ ಅಲ್ಪಸಂಖ್ಯಾತರ ಭಾಷೆಗಳಲ್ಲಿ ಕನ್ನಡ ಬೋಧನೆಗೆ ಅವಕಾಶವಿರುವುದು ಅನಿವಾರ್ಯವೆಂದು ಪ್ರತಿಪಾದಿಸಿದರು. ಪ್ರಾಥಮಿಕ ಹಂತದಲ್ಲಿ ಎಂದರೆ ಒಂದರಿಂದ ನಾಲ್ಕರವರೆಗೆ ಕನ್ನಡವು ಕಡ್ಡಾಯವಲ್ಲ. ಭಾಷಾ ಅಲ್ಪಸಂಖ್ಯಾತರ ಮಕ್ಕಳು ತಮ್ಮ ಮಾತೃಭಾಷೆಯ ಮೂಲಕ ಶಿಕ್ಷಣ ಪಡೆದು ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಅವಕಾಶವಿದೆ ಎಂದರು. ಒಂದರಿಂದ ನಾಲ್ಕರವರೆಗೆ ಮಗುವಿನ ಮಾಧ್ಯಮವನ್ನು ಸರ್ಕಾರದ ಆದೇಶವು ಪ್ರತಿಪಾದಿಸುವುದೇ ಹೊರತು, ಎಲ್ಲಿಯೂ ಕನ್ನಡ ಮಾಧ್ಯಮ ಎಂದಿಲ್ಲ. ಸಂವಿಧಾನದ ೩೫೦-ಎ ವಿಧಿಯು ಭಾರತದ ಪ್ರತಿ ಪ್ರಾಂತವೂ ಭಾಷಾ ಅಲ್ಪಸಂಖ್ಯಾತರ ಮಕ್ಕಳ ಶಿಕ್ಷಣವು ಅವರ ಮಾತೃಭಾಷೆಯಲ್ಲಿರತಕ್ಕದ್ದು ಎನ್ನುತ್ತದೆ. ಸರ್ಕಾರದ ಆದೇಶವು ಪ್ರತಿಪಾದಿಸುವ ನೀತಿಯೂ ಅದೇ ಆಗಿದೆ. ಪ್ರೌಢಶಾಲೆಗಳ ಮೂರು ಭಾಷೆಗಳಲ್ಲಿ ಕರ್ನಾಟಕದ ಅಧಿಕೃತ ಭಾಷೆಯಾದ ಕನ್ನಡವನ್ನು ಕಡ್ಡಾಯಗೊಳಿಸಿದ್ದರೂ (ಮೊದಲ ಭಾಷೆಯಾಗಿ ಅಲ್ಲ) ಭಾಷಾ ಅಲ್ಪಸಂಖ್ಯಾತ ವಿದ್ಯಾರ್ಥಿ ಇಷ್ಟಪಟ್ಟಲ್ಲಿ ತನ್ನ ಮಾತೃಭಾಷೆಯನ್ನು ಆರಿಸಿಕೊಳ್ಳಲು ಬೇಕಾದರೆ ಮೊದಲ ಭಾಷೆಯಾಗಿ ಆರಿಸಿಕೊಳ್ಳಲು ಅವಕಾಶವಿದ್ದೇ ಇದೆ. ಹೀಗಿರುವಾಗ ಪ್ರಾಥಮಿಕ ಹಂತದಲ್ಲಾಗಲಿ ಪ್ರೌಢಶಾಲಾ ಹಂತದಲ್ಲಾಗಲಿ ಕನ್ನಡವು ಏಕೈಕವೂ ಆಗಿಲ್ಲ, ಕಡ್ಡಾಯವೂ ಆಗಿಲ್ಲ - ಇದು ಸರ್ಕಾರದ ವಾದದ ಸಾರಾಂಶ.

ಕರ್ನಾಟಕದ ಉನ್ನತ ನ್ಯಾಯಾಲಯದ ತೀರ್ಪು ಕರ್ನಾಟಕ ಸರ್ಕಾರದ ಆದೇಶ ಮತ್ತು ಆ ಆದೇಶದ ಪರವಾಗಿ ಮಂಡಿಸಿದ ಅಡ್ವೊಕೇಟ್ ಜನರಲ್ ಅವರ

ವಾದವೆಲ್ಲವನ್ನು ಸರ್ವೋನ್ನತ ನ್ಯಾಯಾಲಯವು ತನ್ನ ತೀರ್ಪಿನಲ್ಲಿ (೮.೧೨.೯೩) ಸಂಪೂರ್ಣವಾಗಿ ಅನುಮೋದಿಸಿದೆ.

**ತೀರ್ಪಿನ ಸಾರಾಂಶ**

ಮಗುವಿನ ಮಾನಸಿಕ ಬೆಳವಣಿಗೆಗೆ ಅಗತ್ಯವಾದ ಮಾತೃಭಾಷೆಯನ್ನು ಬಿಟ್ಟು ಬೇರೊಂದು ಭಾಷೆಯನ್ನು ಅದರ ಮೇಲೆ ಹೇರುವುದು ಮಾತೃಭೂಮಿಯ ವಿರುದ್ಧ ಎಸಗುವ ಒಂದು ಪಾಪವೆಂದು ಗಾಂಧೀಜಿ ಹೇಳಿದರು.

ಶಿಕ್ಷಣ ತಜ್ಞರೆಲ್ಲರೂ ಮಕ್ಕಳ ಶಿಕ್ಷಣವೂ ಅವುಗಳ ಮಾತೃಭಾಷೆಯಲ್ಲೇ ಆರಂಭವಾಗಬೇಕೆಂದು ಒತ್ತಿ ಹೇಳಿದ್ದಾರೆ. ಬೇರೊಂದು ಭಾಷೆಯ ಮೂಲಕ ನಡೆಯುವ ಶಿಕ್ಷಣವು ಮಕ್ಕಳ ಮನಸ್ಸಿನ ಮೇಲೆ ಅತ್ಯಂತ ಕ್ರೂರವಾದ ಭಾರವನ್ನು ಹೇರುತ್ತದೆ. ಅಂತಹ ಶಿಕ್ಷಣ ಕ್ರಮವು ಕೃತಕವೂ ಹೌದು, ಹಿಂಸಾಮಯವೂ ಹೌದು. ಮಗುವು ಐದನೆಯ ತರಗತಿಯನ್ನು ಮುಟ್ಟುವ ಹೊತ್ತಿಗೆ ಅದು ಸ್ವಲ್ಪ ಬೆಳೆದಿರುತ್ತದೆ. ಆಗ ಕನ್ನಡೇತರ ಮಗುವಿಗೆ ಕನ್ನಡವನ್ನು ಎರಡನೆಯ ಭಾಷೆಯಾಗಿ ಕಲಿಸುವುದು ಸರಿಯಾಗಿದೆ. ಪ್ರೌಢಶಾಲೆಯಲ್ಲಿ ಕನ್ನಡೇತರ ಮಕ್ಕಳಿಗೆ ಕನ್ನಡಕ್ಕೆ ಶೇಕಡ ಹದಿನೈದು ಕೃಪಾಂಕಗಳಿರುತ್ತವೆ. ಕನ್ನಡವನ್ನು ಎಲ್ಲರಿಗೂ ಪ್ರಾಥಮಿಕ ಮತ್ತು ಪ್ರೌಢ ಹಂತದಲ್ಲಿ ಕಲಿಸುವ ವ್ಯವಸ್ಥೆ ಮಾಡಿರುವ ಕರ್ನಾಟಕ ಸರ್ಕಾರದ ಕೆಲಸ ಸರಿಯಾಗಿದೆ. ಪ್ರಾಥಮಿಕ ಹಂತದಲ್ಲಿ ಮಾತೃಭಾಷಾ ಶಿಕ್ಷಣವನ್ನು ಪ್ರತಿಪಾದಿಸುವ ಕರ್ನಾಟಕ ಸರ್ಕಾರದ ಶಿಕ್ಷಣ ನೀತಿಯು ಸಮರ್ಪಕವಾಗಿದೆ. ಶಿಕ್ಷಣ ಮಾಧ್ಯಮದಲ್ಲಿ ಮೂಲಭೂತ ಬದಲಾವಣೆ ಆಗಲೇಬೇಕೆಂದೂ ಪ್ರಾದೇಶಿಕ ಭಾಷೆಗಳೇ ಶಿಕ್ಷಣ ಮಾಧ್ಯಮವಾಗಬೇಕೆಂದೂ ಈಗಿನ ಆಂಗ್ಲ ಮಾಧ್ಯಮವೂ ಇನ್ನೂ ಹೆಚ್ಚು ಹೆಚ್ಚು ಕೆಡಕನ್ನು ಉಂಟುಮಾಡುತ್ತಾ ಹೋಗುವುದರ ಬದಲು ಪ್ರಾದೇಶಿಕ ಭಾಷೆಗಳು ಶಿಕ್ಷಣ ಮಾಧ್ಯಮವಾಗಿ ಕೆಲಕಾಲ ಗೊಂದಲಮಯ ಪರಿಸ್ಥಿತಿ ನಿರ್ಮಾಣವಾದರೂ ಚಿಂತೆಯಿಲ್ಲವೆಂದೂ ಮಹಾತ್ಮ ಗಾಂಧಿ ಹೇಳುತ್ತಾರೆ. ಇದನ್ನೆಲ್ಲ ಗಮನಿಸಿದರೆ ಸರ್ಕಾರದ ಶಿಕ್ಷಣದ ನೀತಿ ವಿವೇಕದಿಂದ ಕೂಡಿದೆಯೆಂಬುದು ಸ್ಪಷ್ಟ. ಕರ್ನಾಟಕ ಸರ್ಕಾರದ ಆದೇಶದಲ್ಲಿ ಸಂವಿಧಾನದ ೨೯ ಅಥವಾ ೩೦ನೇ ವಿಧಿಗಳಲ್ಲಿ ಅಲ್ಪ ಸಂಖ್ಯಾತರ ಹಕ್ಕುಗಳಿಗೆ ಎಳ್ಳೂ ಚ್ಯುತಿ ಬಂದಿಲ್ಲ. ಕರ್ನಾಟಕ ಸರ್ಕಾರವು ಶೈಕ್ಷಣಿಕ ಶಿಸ್ತನ್ನು ತರಬಯಸಿ ಶಿಕ್ಷಣದಲ್ಲಿ ಒಂದು ಕ್ರಮವನ್ನು ತರಲು ಕೈ ಹಾಕಿದೆ. ತನ್ನ ನೀತಿಯನ್ನು ಕಾರ್ಯರೂಪಕ್ಕೆ ತರುವ ವಿಧಾನವು ಸರ್ಕಾರಕ್ಕೆ ತಿಳಿದಿರುವುದರಿಂದ ಆ ವಿಧಾನದ ಬಗ್ಗೆ ತಾನು ಕೈ ಹಾಕುವುದಿಲ್ಲ. ಈ ಹಿನ್ನೆಲೆಯಲ್ಲಿ ಸರ್ಕಾರದ ಆದೇಶದ ವಿರುದ್ಧ ಹಾಕಿರುವ ಮೇಲ್ಮನವಿಗಳನ್ನು ವಜಾ ಮಾಡಲಾಗಿದೆ.

**ಐತಿಹಾಸಿಕ**

ಯಾವುದೇ ದೃಷ್ಟಿಯಿಂದ ನೋಡಿದರೂ ಇದು ಒಂದು ಐತಿಹಾಸಿಕ ಮಹತ್ವದ ತೀರ್ಪು. ಸರ್ವೋನ್ನತ ನ್ಯಾಯಾಲಯವು ಕೊಟ್ಟಿರುವ ಅತ್ಯಂತ ಮಹತ್ವದ ತೀರ್ಪುಗಳಲ್ಲಿ ಇದೂ ಒಂದು ಎಂದು ಎಸ್. ನಿಜಲಿಂಗಪ್ಪನವರು ಉದ್ಗರಿಸಿದ್ದರಲ್ಲಿ ಆಶ್ಚರ್ಯವಿಲ್ಲ.

ಅಲ್ಲದೆ ವೀರಪ್ಪ ಮೊಯಿಲಿಯವರು ಶಿಕ್ಷಣ ಸಚಿವರಾಗಿದ್ದಾಗ ೧೯೯೧ ರಲ್ಲಿ ನೇಮಿಸಿದ್ದ ತಜ್ಞರ ಸಮಿತಿಯ ಶಿಫಾರಸು ಸಂಪೂರ್ಣವಾಗಿ ಮಾತೃಭಾಷಾ ಪರವಾಗಿದೆ. ಎಲ್ಲ ಅನಧಿಕೃತ ಆಂಗ್ಲ ಮಾಧ್ಯಮ ಶಾಲೆಗಳು ಅನುದಾನ ಸಂಹಿತೆಯ ನಿಯಮಗಳಿಗೆ ಅನುಗುಣವಾಗಿದ್ದರೆ ಅವನ್ನು ಮಾತೃಭಾಷಾ ಮಾಧ್ಯಮ ಶಾಲೆಗಳಾಗಿ ಕ್ರಮಬದ್ಧಗೊಳಿಸಬಹುದೆಂಬ ಸಮಿತಿಯ ಶಿಫಾರಸನ್ನು ಸರ್ಕಾರವು ಒಪ್ಪಿಕೊಂಡಿದೆ. ಅನಧಿಕೃತ ಆಂಗ್ಲ ಮಾಧ್ಯಮ ಶಾಲೆಗಳಲ್ಲದೆ ರಾಜ್ಯದ ಎಲ್ಲ ಆಂಗ್ಲಶಾಲೆಗಳನ್ನು ಮಾತೃಭಾಷಾಶಾಲೆಗಳಾಗಿ ಪರಿವರ್ತಿಸಿದರೆ ಈಗ ಮುಖ್ಯಮಂತ್ರಿಯಾಗಿರುವ ವೀರಪ್ಪ ಮೊಯಿಲಿಯವರ ಕಾರ್ಯವು ಐತಿಹಾಸಿಕ ದೃಷ್ಟಿಯಿಂದ ಮಹತ್ವದ್ದಾಗಬಹುದು. ಅಷ್ಟೇ ಅಲ್ಲ ಭಾರತದ ಇತರ ರಾಜ್ಯಗಳಿಗೂ ಮಾದರಿಯಾಗಿರುತ್ತದೆ.

ಈ ಪ್ರಶ್ನೆಯನ್ನು ಹಲವರು ಕೇಳುತ್ತಾರೆ. ನಮ್ಮ ಮಕ್ಕಳು ಇಂಗ್ಲಿಷ್ ಓದಬಾರದೇ? ಅವರು ಇಂಜಿನಿಯರ್, ಡಾಕ್ಟರು ಆಗಬಾರದೇ? ನಮ್ಮ ಉತ್ತರವೂ ಸ್ಪಷ್ಟವಾಗಿದೆ - ಅವರು ಆಗಬೇಕು. ಮಕ್ಕಳಿಗೆ ಈಗಿನಗಿಂತ ಚೆನ್ನಾಗಿ ಇಂಗ್ಲಿಷ್ ಕಲಿಸಬೇಕು. ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಸುವುದು ಬೇಡ ಎಂದು ಯಾರೂ ಹೇಳಿಲ್ಲ. ಪ್ರಾಥಮಿಕ ಹಂತದಲ್ಲಿ ಮಗುವು ತನ್ನ ಶಿಕ್ಷಣವನ್ನು ಮಾತೃಭಾಷೆಯ ಮೂಲಕ ಆರಂಭಿಸಿ ಕೆಲ ವರ್ಷಗಳ ಬಳಿಕ ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಯುವ ವ್ಯವಸ್ಥೆಯನ್ನು ಯಾರೂ ಅಲ್ಲಗಳೆಯರು. ಇಂಗ್ಲಿಷ್ ಮೂಲಕ ಶಿಕ್ಷಣ ಮತ್ತು ಒಂದು ಭಾಷೆಯಾಗಿ ಇಂಗ್ಲಿಷ್ ಕಲಿಕೆ ಇವೆರಡರಲ್ಲಿ ಇರುವ ವ್ಯತ್ಯಾಸವನ್ನು ಗಮನಿಸಬೇಕು. ಎಲ್ಲಾ ಪ್ರಜ್ಞಾವಂತರೂ ವಿರೋಧಿಸುತ್ತಿರುವುದು ಮೊದಲಿನದನ್ನು.

**ಮುಂದೇನು ?**

ಕರ್ನಾಟಕ ಸರ್ಕಾರ ಪ್ರಗತಿಪರ ದಿಟ್ಟ ಹೆಜ್ಜೆ ಇಡಲು ಈಗ ಸಕಾಲ. ಎಲ್ಲವೂ ಅಂತಹ ಹೆಜ್ಜೆ ಇಡಲು ಅನುಕೂಲವಾಗಿದೆ ಮಾತ್ರವಲ್ಲ ಕಾನೂನಿನ ನ್ಯಾಯಾಲಯಗಳ ಮತ್ತು ಸಂವಿಧಾನದ ಬೆಂಬಲವೂ ಇದೆ. ಸದನಗಳ ಮುಂದೆ ಮಂಡಿಸಿಯೋ ಸುಗ್ರೀವಾಜ್ಞೆಯ ಮೂಲಕವೇ ಕಾನೂನು ಮಾಡಿ ಕರ್ನಾಟಕದ ಎಲ್ಲ ಪ್ರಾಥಮಿಕ ಆಂಗ್ಲ ಶಾಲೆಗಳನ್ನು ಮಾತೃಭಾಷಾ ಶಾಲೆಗಳಾಗಿ ಪರಿವರ್ತಿಸಬೇಕು. ಇದು ಹಳ್ಳಿ-ನಗರ ಎಂಬ ಭೇದವಿಲ್ಲದೆ ಆಗಬೇಕು. ಸರ್ಕಾರದ ವ್ಯಾಪ್ತಿಗೊಳಪಡುವ ಯಾವುದೇ ಆಂಗ್ಲಶಾಲೆಯೂ ಇರಕೂಡದು. ಇಂಗ್ಲಿಷ್ ಮಾತೃಭಾಷೆಯ ಆಂಗ್ಲೋ ಇಂಡಿಯನ್ನರಿಗಾಗಿ ಒಂದು ಆಂಗ್ಲ ಶಾಲೆ ಬೆಂಗಳೂರಿನಲ್ಲಿ, ಕೇಂದ್ರ ಸರ್ಕಾರದ ಉದ್ಯೋಗಿಗಳ ಮಕ್ಕಳಿಗೆ ನಾಲ್ಕು ಡಿವಿಜನ್ ಕೇಂದ್ರಗಳಲ್ಲಿ ನಾಲ್ಕು ಆಂಗ್ಲ ಶಾಲೆಗಳು ಸಾಕು. ಅಲ್ಲಿಯೂ ನಿಗದಿತ ಮಕ್ಕಳು ದೊರಕದಿದ್ದರೆ ಕೆಲವು ಮಕ್ಕಳಿಗಾಗಿಯೇ ಆಂಗ್ಲ ಶಾಲೆ ನಡೆಸಲಾಗುವುದಿಲ್ಲ. ಗಮನಿಸಬೇಕಾದ ಸಂಗತಿಯೆಂದರೆ ಕನ್ನಡೇತರ ಮಕ್ಕಳಿಗೆ ಕನ್ನಡವು ಪರಿಸರ ಭಾಷೆಯಾಗಿರುವುದರಿಂದ ಅದು ಅವರಿಗೆ ಎರಡನೆಯ ಮಾತೃಭಾಷೆಯಾಗಿರುತ್ತದೆ.

ಆಂಗ್ಲ ಶಾಲೆಗಳು ಶಿಕ್ಷಣದಲ್ಲಿ ಹಳ್ಳಿ-ನಗರ ಎಂಬ ಭೇದವನ್ನು ಬಡವ-ಶ್ರೀಮಂತ ಎಂಬ ಭೇದವನ್ನು ಸೃಷ್ಟಿಸಿ ಸಮಾಜವನ್ನು ಒಡೆದಿದೆ. ದೇಶೀಯ ಸಂಸ್ಕೃತಿಯನ್ನು

ಮೂಲೆಗೆ ಒತ್ತರಿಸಿ ವಿದೇಶಿ ಸಂಸ್ಕೃತಿಗೆ ಮಕ್ಕಳನ್ನು ಒತ್ತೆ ಇಟ್ಟಿವೆ. ಮಕ್ಕಳ ಆಲೋಚನಾ ಶಕ್ತಿಯನ್ನು ಕುಂಠಿತಗೊಳಿಸಿ ಅವು ಕೇವಲ ವಿದೇಶಿ ಭಾಷೆಯ(ಇಂಗ್ಲಿಷ್) ಕಲಿಕೆಯೇ ಜ್ಞಾನ ಎಂಬ ಭ್ರಮೆಯನ್ನು ಹುಟ್ಟಿಸಿವೆ. ಭಾರತವು ಶತಶತಮಾನಗಳವರೆಗೆ ದಾಸ್ಯ ಸ್ಥಿತಿಯಲ್ಲಿರುವಂತೆ ಅವು ಮಾಡುತ್ತವೆ. ಅವು ಭ್ರಷ್ಟಾಚಾರದ ಕೂಪಗಳು, ಹಣ ದುಡಿಯುವ ಸಾಧನಗಳು. ಇದಕ್ಕೆಲ್ಲ ಎಲ್ಲ ಆಂಗ್ಲ ಮಾಧ್ಯಮ ಶಾಲೆಗಳನ್ನೂ ಮಾತೃಭಾಷಾ ಮಾಧ್ಯಮ ಶಾಲೆಗಳಾಗಿ ಪರಿವರ್ತಿಸುವುದೊಂದೇ ಮದ್ದು. ಜನ ಗಂಭೀರವಾಗಿ ತಾಳ್ಮೆಯಿಂದ ಚಿಂತಿಸುವ ಕಾಲ ಬಂದಿದೆ. ಅದಕ್ಕಿಂತ ಹೆಚ್ಚಾಗಿ ಸರ್ಕಾರವು ಕ್ಷಿಪ್ರವಾಗಿ ಕ್ರಿಯಾತ್ಮಕ ಕ್ರಮಕೈಗೊಳ್ಳುವ ಕಾಲ ಬಂದಿದೆ. ಈ ಅವಕಾಶವನ್ನು ಕಳೆದುಕೊಂಡರೆ ಮಾತೃಭಾಷಾ ಶಿಕ್ಷಣದ ಮಾತನ್ನು ಶಾಶ್ವತವಾಗಿ ಮರೆಯಬೇಕಾಗುತ್ತದೆ ಮತ್ತು ಮುಂದೆ ಶತಶತಮಾನಗಳವರೆಗೆ ಅಥವಾ ಶಾಶ್ವತವಾಗಿ ಕರ್ನಾಟಕದ ಮಕ್ಕಳು ನರಳಬೇಕಾಗುತ್ತದೆ.

ಸರ್ವೋನ್ನತ ನ್ಯಾಯಾಲಯದ ತೀರ್ಪು ಜನತೆಯ ಚಳುವಳಿಯಾದ ಗೋಕಾಕ ಚಳುವಳಿ ನೀಡಿದ ನಿಜವಾದ ಫಲ. ಎಲ್ಲಾ ಆಂಗ್ಲ ಮಾಧ್ಯಮ ಶಾಲೆಗಳೂ ಮಾತೃಭಾಷಾ ಶಾಲೆಗಳಾಗಿ ಪರಿವರ್ತನೆ ಆದಾಗಲೇ ಆ ಫಲದ ಸಾರ್ಥಕತೆ ಆಗುತ್ತದೆ.



# ಅಕಾಡೆಮಿ ಪ್ರಶಸ್ತಿ ವಿಜೇತರು



## ಪಿ. ಲಂಕೇಶ್

*ಟಿ. ಪಿ. ಅಶೋಕ*

೧೯೯೩ರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಕನ್ನಡದ ಅತ್ಯುತ್ತಮ ಕಥೆಗಾರ ಶ್ರೀ ಪಿ. ಲಂಕೇಶ್ ಅವರಿಗೆ ಬಂದಿದೆ. ೧೯೩೫ರಲ್ಲಿ ಶಿವಮೊಗ್ಗೆಯ ಹತ್ತಿರದ ಕೊನಗವಳ್ಳಿಯಲ್ಲಿ ಜನಿಸಿದ ಶ್ರೀಯುತರು ಇಂಗ್ಲಿಷ್ ಅಧ್ಯಾಪಕರಾಗಿ, ಕವಿಯಾಗಿ, ಕಥೆಗಾರರಾಗಿ, ನಾಟಕಕಾರರಾಗಿ, ಕಾದಂಬರಿಕಾರರಾಗಿ, ಅನುವಾದಕರಾಗಿ, ಚಲನಚಿತ್ರ ನಿರ್ದೇಶಕರಾಗಿ ಮತ್ತು ಲಂಕೇಶ್ ಪತ್ರಿಕೆಯ ಸಂಪಾದಕರಾಗಿ ಖ್ಯಾತಿ ಪಡೆದಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿರುವ ಕೃತಿ ''ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು'' ಲಂಕೇಶ್‌ರ ನಾಲ್ಕನೆಯ ಕಥಾಸಂಕಲನ. ''ಕೆರೆಯ ನೀರನು ಕೆರೆಗೆ ಚೆಲ್ಲಿ'' (೧೯೬೩), ''ನಾನಲ್ಲ'' (೧೯೭೦), ''ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ'' ( ೧೯೭೩)- ಈ ಸಂಕಲನಗಳ ನಂತರದ ದೀರ್ಘ ಅವಧಿಯಲ್ಲಿ ಲಂಕೇಶ್ ತುಂಬ ಬೆಳೆದಿದ್ದಾರೆ. ಈ ಬೆಳವಣಿಗೆ ''ಮುಸ್ಸಂಜೆಯ ಕಥಾಪ್ರಸಂಗ'' (೧೯೭೮) ಕಾದಂಬರಿಯಲ್ಲಿ ಒಂದು ನಿಟ್ಟಿನಲ್ಲಿ ವ್ಯಕ್ತವಾದರೆ ಇನ್ನೊಂದು ನಿಟ್ಟಿನಲ್ಲಿ ಅವರ ಈ ಕಥಾ ಸಂಕಲನದಲ್ಲಿ ನಿಚ್ಚಳವಾಗುತ್ತದೆ. ಸ್ವತಃ ಲಂಕೇಶರೇ ತಮ್ಮ ಹೊಸ ಕಥೆಗಳಲ್ಲಿನ ಹೊಸತನದ ಬಗ್ಗೆ ಸೂಚ್ಯವಾಗಿ ಪ್ರಸ್ತಾಪಿಸಿದ್ದಾರೆ: 'ಮುಟ್ಟಿಸಿಕೊಂಡವನು', 'ದೇವಿ' ಮುಂತಾದ ಕಥೆಗಳನ್ನು ಆಗ ಬರೆಯಲು ಆಗುತ್ತಿರಲಿಲ್ಲ. ಈಗ '' ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ', 'ನಾನಲ್ಲ', 'ರೊಟ್ಟಿ' ಬರೆಯುವುದಿಲ್ಲ..... ಇಲ್ಲಿ ಮೊದಲ ಕಥೆಗಳಲ್ಲಿಲ್ಲದ ಸಾಮಾಜಿಕ ತಿಳುವಳಿಕೆಯ ಜೊತೆಗೇ ಮಾಂತ್ರಿಕತೆಯ ತೀವ್ರತೆಯನ್ನು ನಾನು ಗಮನಿಸಿದ್ದೇನೆ.'' ಅವರ 'ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು' ಸಂಕಲನದ ಅತ್ಯುತ್ತಮ ಕಥೆಗಳಲ್ಲಿ ಒಂದು ''ಸ್ಟೆಲ್ಲಾ ಎಂಬ ಹುಡುಗಿ''. ಅವರ ಸದ್ಯದ

ಸೃಜನಶೀಲತೆಯ ಸ್ವರೂಪ ಮತ್ತು ಅದರ ಹಿಂದಿನ ಪ್ರೇರಣೆಗಳಿಗೆ ಇದು ಬಹುಮುಖ್ಯ. ಲಂಕೇಶ್ ಈಗ angry youngman ಅಲ್ಲ. ಅವರು ಎಷ್ಟು ಮಾಗಿದ್ದಾರೆ, ಪಕ್ವಗೊಂಡಿದ್ದಾರೆ, ಪ್ರಬುದ್ಧರಾಗಿದ್ದಾರೆ ಎಂಬುದಕ್ಕೆ ''ಸ್ಟೆಲ್ಲಾ ಎಂಬ ಹುಡುಗಿ'' ಒಂದು ಉತ್ತಮ ಉದಾಹರಣೆ. ಈ ಕಥೆ ಸಾಮಾನ್ಯ ಕಲಾವಿದನೊಬ್ಬನ ಕೈಯಲ್ಲಿ ನರ್ಸೊಬ್ಬಳ ಗೋಳು ಕಥೆಯ ಪ್ರಗತಿಶೀಲ ಜಾಡಿನ ಸಾಮಾನ್ಯ ರಚನೆಯಾಗಿಬಿಡಬಹುದಿತ್ತು. ಅಥವಾ ಸುಬ್ಬಣ್ಣನ ಆತ್ಮಾನ್ವೇಷಣೆಯ ರೋಚಕತೆಯನ್ನೇ ವಿಜೃಂಭಿಸುವ ಕೆಟ್ಟ ನವ್ಯಕಥೆಯಾಗಿಬಿಡಬಹುದಿತ್ತು. ಒಂದು ದೃಷ್ಟಿಯಿಂದ ಸುಬ್ಬಣ್ಣನ ಕಥೆಯೇ ಬೇರೆ; ಸ್ಟೆಲ್ಲಾಳ ಕಥೆಯೇ ಬೇರೆ. ಎರಡೂ ಇಬ್ಬರು ವಿಭಿನ್ನ ನೆಲೆಗಳಿಂದ ಬಂದ ವ್ಯಕ್ತಿಗಳ ಕಥೆಗಳು. ಆದರೆ ಲಂಕೇಶರ ಪ್ರತಿಭೆ ಈ ವಿಭಿನ್ನ ನೆಲೆಗಳನ್ನು ಗುರುತಿಸಿಯೂ ಮನುಷ್ಯಾವಸ್ಥೆಯ ಮೂಲಕ್ಕೇ ಕೈಚಾಚುತ್ತದೆ. ಸುಬ್ಬಣ್ಣನ ಭೂತ, ಸ್ಟೆಲ್ಲಾಳ ಭವಿಷ್ಯ ಅವರಿಬ್ಬರ ವರ್ತಮಾನದಲ್ಲಿ ಮುಖಾಮುಖಿಯಾಗಿ ಮಾನವನ ಬಾಳಿನ ಕರಾಳ ಸತ್ಯಗಳ ದರ್ಶನ ಮಿಂಚುತ್ತದೆ. ಅವಳ ಏಕಾಂಗಿತನ ಮತ್ತು ಅಸಹಾಯಕತೆಗಳಿಗೆ ಸರಳ ಉತ್ತರಗಳಿಲ್ಲ. ಮನುಷ್ಯ ತನ್ನ ಆಳದಲ್ಲಿ ಈ ಕುರಿತು ಧ್ಯಾನಿಸಬೇಕು; ತನ್ನ ಬದುಕಿನ ಮಿತಿಗಳ ಬಗ್ಗೆ, ಈ ಲೋಕದಲ್ಲೇ ಫಲಿಸುವ ಬಗ್ಗೆ ಚಿಂತಿಸಬೇಕು. ಈ ಧ್ಯಾನ ಆತ್ಮಲೋಲುಪತೆಯಲ್ಲ. ಅದು ಇಡೀ ಬದುಕನ್ನು, ಎಲ್ಲ ಮಾನವರನ್ನೂ ಕುರಿತು ಒಳಗೊಂಡು ಚಿಂತಿಸುವಂಥದ್ದು. ಹಾಗಾಗಿ ಈ ಕಥೆಯಲ್ಲಿ ಸರಿತಪ್ಪುಗಳ ಸರಳ ನೈತಿಕ ಸೂತ್ರೀಕರಣವಿಲ್ಲ. ಎಲ್ಲ ಮನುಷ್ಯರನ್ನು ಪ್ರೀತಿಸುವ, ಅವರ ಮಿತಿಗಳ ಬಗ್ಗೆ ಅನುಕಂಪದ, ಸರ್ವರ ಹಿತಕ್ಕಾಗಿ ಧ್ಯಾನಿಸುವ ಧೋರಣೆ ಇದೆ. ಒಂದು ಪಾತ್ರದ ಕೇವಲ ಭಾವಲಹರಿಯಲ್ಲಿ ಇದು ನಿಜವಾಗದೆ ಕಥೆಗಾರನ ಗ್ರಹಿಕೆಯಲ್ಲಿ ಗಟ್ಟಿಗೊಳ್ಳುವ ಈ ಧೋರಣೆಯಿಂದಾಗಿ ''ಸ್ಟೆಲ್ಲಾ ಎಂಬ ಹುಡುಗಿ'' ಗಾಢ ತಲ್ಲಣದ ತುಂಬಾ disturbing ಕಥೆಯಾಗುತ್ತದೆ. ಸುಬ್ಬಣ್ಣನ ಸಂಕಟ ಮತ್ತು ಸ್ಟೆಲ್ಲಾಳ ತಲ್ಲಣ ಒಂದು ಕೇಂದ್ರದಲ್ಲಿ ಸಂಧಿಸಿ ಧ್ಯಾನವಾಗುವ, ಪ್ರಾರ್ಥನೆಯಾಗುವ ಅದ್ಭುತ ಸ್ಥಿತಿ ಇಲ್ಲಿದೆ. ಈ ಹಿನ್ನೆಲೆಯಲ್ಲಿ ಸುಬ್ಬಣ್ಣನ ಮಗ ಸುರೇಶ ಮತ್ತು ಸೊಸೆ ಸಾವಿತ್ರಿಯರ ಪಾಡೂ ಕಥೆಗಾರರ ಸಹಾನುಭೂತಿಗೆ ಯೋಗ್ಯವಾಗುತ್ತದೆ. ಹಾಗೆ ನೋಡಿದರೆ ಕಥೆಯ ಯಾವ ಪಾತ್ರವನ್ನೂ ಲಂಕೇಶರು evil ಎಂಬಂತೆ ಚಿತ್ರಿಸಹೋಗಿಲ್ಲ. ಯಾವ ಮನುಷ್ಯನೂ evil ಅಲ್ಲ; evil ಎಲ್ಲ ಮನುಷ್ಯರ ಅವಸ್ಥೆಯಲ್ಲೇ ಇದೆ.

ಈ ಸಂಕಲನದ ಅನೇಕ ಕಥೆಗಳು ಬದುಕಿನ ಸಾಫಲ್ಯ, ವೈಫಲ್ಯಗಳ ಧ್ಯಾನವೇ ಆಗಿದೆ. ''ಸುಭದ್ರ', ''ಕೃತಜ್ಞತೆ'', ''ಕಣ್ಮರೆ'' ಇಂಥ ಕಥೆಗಳು. ಸುಭದ್ರಳ ವ್ರತ ಮತ್ತು ಹೆಗ್ಗಡೆಯ ಅಹಂಕಾರ ಎರಡೂ ಮೇಲುನೋಟಕ್ಕೆ ಅವರ ಬದುಕುಗಳಿಗೆ ಯಶಸ್ಸನ್ನು ತಂದುಕೊಟ್ಟಂಥವೇ. ಆದರೆ ಇವುಗಳಿಂದ ಹೂತುಹೋಗಿರುವ ಜೀವನವನ್ನು ಮತ್ತೆ ಮರಳಿ ಪಡೆಯುವುದೇ ಅವರ ಬದುಕಿನ ನಿಜವಾದ ಯಶಸ್ಸು. ಕೊನೆಗೂ ಗೆಲ್ಲುವುದು ವಿನಯವೇ. ಇಲ್ಲಿಯೂ ಆತ್ಮ ವಿಮರ್ಶೆ ಲೋಲುಪತೆಗೆ ಇಳಿಯುವುದಿಲ್ಲ. ಮನುಷ್ಯನನ್ನು ಆವರಿಸಿರುವ ಭ್ರಮೆಗಳು; ಈ ಭ್ರಮೆಗಳನ್ನು ಕೊಡವಿಕೊಂಡಾಗಲೇ ಜೀವನಕ್ಕೆ ಹತ್ತಿರವಾಗುವುದು ಎಂಬ ಸತ್ಯವನ್ನು ಲಂಕೇಶರ ಕಥೆಗಳು ಮತ್ತೆ ಮತ್ತೆ

ಒತ್ತಿಹೇಳುತ್ತವೆ. ಈ ಭ್ರಮೆಗಳು- ಹಣ, ಕಾಮ, ಕೀರ್ತಿ, ಅಧಿಕಾರ, ಸೌಂದರ್ಯ, ಬಲ, ಯಶಸ್ಸು, ಮೋಕ್ಷ- ಮನುಷ್ಯನ ಬದುಕಿಗೆ ಅಡ್ಡಿಯಾಗುವ, ಪಾತಕವಾಗುವ ಪರಿಯನ್ನು ದಟ್ಟ ಆತಂಕದಲ್ಲಿ ಗಮನಿಸುವ ಲಂಕೇಶರ ಕಥೆಗಳು ಈ ಭ್ರಮೆಗಳಿಂದ ಸುತ್ತುವರಿದಿರುವ ಮನುಷ್ಯರನ್ನು ಸಹಾನುಭೂತಿಯಿಂದ, ಬಿಡಿಸಿಕೊಳ್ಳಲು ಪ್ರಯತ್ನಿಸುವ ವ್ಯಕ್ತಿಗಳನ್ನು ಮೆಚ್ಚುಗೆಯಿಂದ ನೋಡುತ್ತವೆ. ಹಿಂದಿನ ಸಂಕಲನಗಳಲ್ಲಿ ಕಾಣುತ್ತಿದ್ದ ಗೇಲಿ, ವ್ಯಂಗ್ಯ, ಆತ್ಮಪೀಡೆ ಇಲ್ಲಿ ಮಾಯವಾಗಿ ಒಂದು ಬಗೆಯ ಧ್ಯಾನದ, ಪ್ರಾರ್ಥನೆಯ ಆರ್ತಧಾಟಿ ಕಾಣುತ್ತದೆ. ಹಾಗೆ ನೋಡಿದರೆ ''ದಾಹ'' ಲಂಕೇಶರ ಹಳೆಯ ಕಥೆಗಳಿಗೆ ಹೆಚ್ಚು ಹತ್ತಿರವಾಗಿದೆ. ''ದಾಹ''ಕ್ಕೂ ''ಕೃತಜ್ಞತೆ'' ಅಥವಾ ''ಕಣ್ಮರೆ'' ಕಥೆಗೂ ಇರುವ ವ್ಯತ್ಯಾಸ ಅಭ್ಯಾಸ ಯೋಗ್ಯವಾಗಿದೆ. ''ಕುರುಡು ಕಾಂಚಾಣ'' ಮತ್ತು ''ಒಂದು ಬಾಗಿಲು'' ಕಥೆಗಳಿಗಿರುವ ವ್ಯತ್ಯಾಸಗಳನ್ನು ಗಮನಿಸಿದರೆ ಲಂಕೇಶರ ಬೆಳವಣಿಗೆಯ ದಿಕ್ಕು ಸ್ಪಷ್ಟವಾಗುತ್ತದೆ. ಲಂಕೇಶ್ ನವ್ಯದ ಶಿಸ್ತನ್ನು ಬಿಟ್ಟುಕೊಟ್ಟಿಲ್ಲ. ಆದರೆ ನವ್ಯತೆಯನ್ನಾಗಲೀ, ಪ್ರಗತಿಶೀಲತೆಯನ್ನಾಗಲೀ ಒಂದು ಗೀಳನ್ನಾಗಿ ಮಾಡಿಕೊಳ್ಳದೆ, form ಬಗ್ಗೆ ತೀರಾ ತಲೆಕೆಡಿಸಿಕೊಳ್ಳದೆ ಬರೆಯುತ್ತಿದ್ದಾರೆ. ಜೀವಪರತೆ ಈ ಎಲ್ಲ ಕಥೆಗಳ ಮುಖ್ಯ ಗುಣ. ಆದರೆ ಇದು ಸರಳ ರೊಮ್ಯಾಂಟಿಕ್ ಧೋರಣೆಯಾಗಿ ಅಳ್ಳಕಗೊಂಡಿಲ್ಲ. ''ದೇವಿ'' ಕಥೆಯ ದೇವಿ, ''ವೃಕ್ಷದ ವ್ಯಕ್ತಿ'' ಕಥೆಯ ಪಾರ್ವತಜ್ಜಿ, ''ತೋಟದವನು'' ಕಥೆಯ ತಮ್ಮಣ್ಣ ಹೀಚು ಕಾಯಾಗಿ ಹಣ್ಣಾಗುವಷ್ಟು ಸಹಜವಾಗಿ ಮಾಗುತ್ತಾರೆ; ಮಾಗಿ ಹುಳಿ ಕಳೆದುಕೊಂಡು ಮಧುರವಾಗುತ್ತಾರೆ. ಸುಭದ್ರೆ, ನಿರ್ಮಲಾ, ''ಕಣ್ಮರೆ'' ಕಥೆಯ ಸಾವಿತ್ರಿಯರದು ಅರಿವಿನ ಪ್ರಕ್ರಿಯೆ ಮತ್ತು ದಿಗ್ಭ್ರಮೆಗಳ ಕಥೆಯಾದರೆ ಪಾರ್ವತಜ್ಜಿ, ತಮ್ಮಣ್ಣ, ದೇವಿಯರದು ಮನುಷ್ಯ ಜೀವನದ ಸಫಲತೆ, ಸಾರ್ಥಕ್ಯಗಳ ಕಥೆ.

ಲಂಕೇಶರ ಮನೋಭಾವ, ಜೀವನದೃಷ್ಟಿ ಬೆಳೆದಂತೆ ಅವರ ಸಾಹಿತ್ಯದೃಷ್ಟಿ, ಬರವಣಿಗೆಯ ಧಾಟಿಯೂ ಬದಲಾಗಿವೆ. ''ಸಂವೇದಿತ'' ವಿಭಾಗದ ''ಮೃಗ ಮತ್ತು ಸುಂದರಿ'', ''ಅಧಿಕಾರಿಗಳು ಮತ್ತು ಕೆಲಸದವ'' ಈ ಬರಹಗಳನ್ನು ನೋಡಿದಾಗ ಲಂಕೇಶರು, ವಾಸ್ತವವಾದದ ಎಲ್ಲ ಕಟ್ಟುಪಾಡುಗಳೂ ಮುರಿದುಹೋದ, ಅಡುಗೂಲಜ್ಜಿ ಕಥೆಗಳನ್ನು ನೆನಪಿಸುವ, ಫೇರಿ ಟೇಲ್ ಮಾದರಿಯ ಸಹಜ, ಸ್ವಚ್ಛಂದ ಕಥನಕ್ಕೆ ಒಲಿಯುತ್ತಿರುವ ಸೂಚನೆಗಳು ಕಾಣುತ್ತವೆ. ಜೀವನದೃಷ್ಟಿ ಮಾಗಿ ವಿನಯವೆಂಬುದು ಒಂದು ಮುಖ್ಯ ಮೌಲ್ಯವಾಗಿರುವಂತೆ ಬರವಣಿಗೆಯ ಕಟ್ಟುಪಾಡುಗಳಿಗೆ ಬಂಧಿಸಿಕೊಳ್ಳದೆ ಮುಕ್ತ ಅಭಿವ್ಯಕ್ತಿಗೆ ಲಂಕೇಶರು ತಮ್ಮ ಇಡೀ ವ್ಯಕ್ತಿತ್ವವನ್ನು ಒಪ್ಪಿಸಿಕೊಳ್ಳುತ್ತಿದ್ದಾರೆ. ವಾಸ್ತವವಾದೀ ಬರವಣಿಗೆಗಿಂತ ಭ್ರಾಮಕಗಳು, ಅದ್ಭುತ ರಮ್ಯ ಕಥಾನಕಗಳು ಅವರಿಗೆ ಇಷ್ಟವಾಗುತ್ತಿವೆ ಎಂದು ಈ ಮಾತಿನ ಅರ್ಥವಲ್ಲ. ಬದುಕನ್ನು ಕೃತಕ ಕಟ್ಟುಪಾಡುಗಳಿಂದ ವಿಮೋಚಿಸಿಕೊಳ್ಳುವಂತೆ ಬರವಣಿಗೆಯ ಶರತ್ತುದಿಂದ ಬಿಡಿಸಿಕೊಳ್ಳುವುದೂ ಅವರಿಗೆ ಪ್ರಾಯಶಃ ಅಷ್ಟೇ ಮುಖ್ಯವಾದ ತಾತ್ವಿಕ ಕಳಕಳಿಯಾಗಿರಬಹುದು. ಒಟ್ಟಿನಲ್ಲಿ ಲಂಕೇಶರ ಹೊಸಕಥೆಗಳು ಎಲ್ಲ ದೃಷ್ಟಿಯಿಂದಲೂ ಒಂದು ದೊಡ್ಡ break through. ಅವರ ಬರವಣಿಗೆಯ ಭಾವ ತೀವ್ರತೆ ಎಲ್ಲ ಬಗೆಯ ಹಿನಿಕತನ, ಸಣ್ಣತನಗಳಿಂದ ಬಿಡಿಸಿಕೊಂಡು ಒಮುಗರಲ್ಲಿ ಅಪಾರವಾದ ಜೀವನಪ್ರೀತಿಯನ್ನೂ ಬದುಕಿನ ಬಗ್ಗೆ ಗೌರವವನ್ನೂ

ಹುಟ್ಟಿಸುತ್ತದೆ. ನರಕಸದೃಶ ಬದುಕಿನ ಕತ್ತಲ ಕೋಣೆಗಳನ್ನು ತೋರಿಸುವಾಗಲೇ ಬದುಕನ್ನು ಸಫಲಗೊಳಿಸಿಕೊಳ್ಳುವ ಸಂಕಲ್ಪಬಲ ಮನುಷ್ಯನಲ್ಲೇ ಇದೆ ಎಂಬುದನ್ನು ಕಾಣಿಸುತ್ತಾ ಮುಖ್ಯವಾಗುತ್ತದೆ. ''ಅಧಿಕಾರಿಗಳು ಮತ್ತು ಕೆಲಸದವ'' ನಾಗರಿಕತೆಯ ಭ್ರಮೆಗಳನ್ನೂ ಮನುಷ್ಯನ ಮಿತಿಗಳನ್ನೂ ಬಯಲಿಗೆಳೆಯುತ್ತಲೇ ಬದುಕಿನ ಮೂಲಸೆಲೆಗಳ ದರ್ಶನವನ್ನೂ ಮೂಡಿಸುತ್ತದೆ.

''ಮೃಗ ಮತ್ತು ಸುಂದರಿ'' ಪ್ರೀತಿ, ಪ್ರೇಮ, ಪ್ರಾಮಾಣಿಕತೆ, ವಿನಯಗಳ ಗೆಲುವಿನ ಕಥೆಯಾಗುತ್ತದೆ. ಈ ಗುಣಗಳನ್ನು ಲಂಕೇಶರ ಹಲವಾರು ಕಥೆಗಳಲ್ಲಿ ಗಮನಿಸಬಹುದಾಗಿದೆ. ಈ ದೃಷ್ಟಿಯಿಂದ ''ವೃಕ್ಷದ ವೃತ್ತಿ'' ಮತ್ತು ''ತೋಟದವನು'' ಲಂಕೇಶರ ಒಟ್ಟು ಕಥಾಸಾಹಿತ್ಯದ ಸಂದರ್ಭದಲ್ಲಿ ತೀರಾ ವಿಶಿಷ್ಟವಾದ ಕಥೆಗಳಾಗಿವೆ. ಲಂಕೇಶ್ ಇಲ್ಲಿ ಲಲಿತವಾಗಿ ಕಥೆ ಹೇಳುತ್ತಲೇ ತಮ್ಮ ಎಲ್ಲ ಮುಖ್ಯ ಕಾಳಜಿಗಳನ್ನೂ ಪ್ರಕಟಪಡಿಸಿದ್ದಾರೆ.

ಲಂಕೇಶರು ಈಚೆಗೆ ತಮ್ಮ ಬರವಣಿಗೆಯ ಧಾಟಿ, ಶೈಲಿ ಮತ್ತು ಬಂಧದ ನಿಷ್ಠೆಗಳ ಬಗ್ಗೆ ಪ್ರಜ್ಞಾಪೂರ್ವಕವಾಗಿ ಎಂಥ ದಿವ್ಯ ನಿರ್ಲಕ್ಷ್ಯ ತೋರುತ್ತಿದ್ದರೂ ಅವರ ಕಥೆಗಳು ಉತ್ತಮ ಕಲಾಕೃತಿಗಳೂ ಆಗಿರುವುದು ಮೆಚ್ಚುಗೆ, ಗೌರವ ಹುಟ್ಟಿಸುತ್ತವೆ. ''ಉರಿದ ಊರಿನವರು'' ಕಥೆಯ ಕೆಂಚಜ್ಜ, ''ವೃಕ್ಷದ ವೃತ್ತಿ''ಯ ಪಾರ್ವತಜ್ಜಿ, ''ತೋಟದವನು'' ಕಥೆಯ ತಮ್ಮಣ್ಣ ಇವರೆಲ್ಲ ಕಥೆಗಾರರೂ ಹೌದು. ಲಂಕೇಶರ ಈಚಿನ ಕಥೆಗಳಲ್ಲಿ ಈ ತೆರನಾದ ಗ್ರಾಮೀಣ, ಜನಪದ ಕಸುವು, ಟಾಲ್‌ಸ್ಟಾಯ್‌ನ ಪ್ರೌಢ ನೈತಿಕ ಕಳಕಳಿ, ಕನ್ನಡ ನವೋದಯ, ಪ್ರಗತಿಶೀಲ, ನವ್ಯ ಚಳುವಳಿಗಳ ಅತ್ಯುತ್ತಮ ಅಂಶಗಳ ಎಚ್ಚರ, ಆಧುನಿಕ ದೃಷ್ಟಿ ಪರಿಸರ ಪ್ರಜ್ಞೆ ಇವೆಲ್ಲ ಸೇರಿ ಹದಗೊಂಡ ಮನಃಸ್ಥಿತಿ ಕಾಣುತ್ತದೆ. ಹೀಗಾಗಿ ಲಂಕೇಶರ ಕಥೆಗಳ ಕಲಾತ್ಮಕ ಯಶಸ್ಸು ಬೇರೆಯಲ್ಲ, ಅವರ ನೈತಿಕ-ತಾತ್ತ್ವಿಕ ಕಾಳಜಿ ಬೇರೆಯಲ್ಲ ಎನಿಸುತ್ತದೆ. ಕೆಂಚಜ್ಜ, ಪಾರ್ವತಜ್ಜಿ ತಮ್ಮಣ್ಣರಷ್ಟೇ ಸರಳವಾಗಿ, ಸರಾಗವಾಗಿ ಆದರೆ ಅನುಭವದ ಎಲ್ಲ ಎಚ್ಚರ, ಪಕ್ವತೆಗಳೊಂದಿಗೆ ಲಂಕೇಶರು ಕಥೆ ಹೇಳುತ್ತಾರೆ. ಅವುಗಳ ಸಾಹಿತ್ಯಕ ಯಶಸ್ಸಿನ ಬಗ್ಗೆ ಪ್ರಜ್ಞಾಪೂರ್ವಕವಾದ ಪ್ರಯತ್ನದ ಪೋಸು ಇಲ್ಲದೆ, ಓದುಗ-ವಿಮರ್ಶಕರ ಮರ್ಜಿಗೆ ತಲೆಕೆಡಿಸಿಕೊಳ್ಳದೆ ಬರೆಯುತ್ತಾರೆ. ಭಾಷಣ, ಪ್ರಬಂಧ, ಹರಟೆ, ಕಥೆ, ಕಾದಂಬರಿ, ಫೇರಿಟೇಲ್ ಮುಂತಾದ ಹಲವು ರೂಪಗಳನ್ನು ಯಾವುದೇ ವಿಕಾರವಿಲ್ಲದೆ ಬಳಸಿಕೊಂಡು ಮನುಷ್ಯ ಸಂಪರ್ಕ ಸಾಧಿಸುತ್ತಾರೆ.

ಜಾತಿ ಸಂಬಂಧಗಳ ವಿಶ್ಲೇಷಣೆಯಲ್ಲಿ ''ಕಲ್ಲು ಕರಗುವ ಸಮಯ'', ''ಸಹಪಾಠಿ'' ಮತ್ತು ''ಮುಟ್ಟಿಸಿಕೊಂಡವನು'' ಕಥೆಗಳು ತೋರುವ ಹೊಸತನ ಮತ್ತು ಒಳನೋಟಗಳು ಗಂಭೀರ ಪರಿಶೀಲನೆಗೆ ಯೋಗ್ಯವಾಗಿವೆ. ಅಸ್ಪೃಶ್ಯತೆಯ ಸಮಸ್ಯೆಯ ದುರಂತಗಳನ್ನು ಪ್ರಗತಿಶೀಲ ಬಂಡಾಯ ನೆಲೆಗಳಿಗೆ ವಿಭಿನ್ನವಾದ ರೀತಿಯಲ್ಲಿ ಗ್ರಹಿಸಿರುವ ಲಂಕೇಶ್ ಇದಕ್ಕೆ ಪರಿಹಾರವನ್ನೂ ಗಾಂಧೀಮಾರ್ಗದಲ್ಲಿ ಅರಸುತ್ತಿದ್ದಾರೆ. ಸ್ಪರ್ಶದ ಮೂಲಕವೇ ಅಸ್ಪೃಶ್ಯತೆಯ ನಿವಾರಣೆ ಸಾಧ್ಯ ಎಂದು ಅವರು

ಸೂಚಿಸುತ್ತಿರಬಹುದು. ಲಂಕೇಶ್ ಕಥೆ ಕಾದಂಬರಿಗಳಲ್ಲಿ ಭೌತಿಕ ಸ್ಪರ್ಶ ಒಂದು ಮುಖ್ಯ ವಿವರವಾಗಿ ಬರುತ್ತದೆಯಷ್ಟೆ. ''ಸಹಪಾಠಿ'', ''ಮುಟ್ಟಿಸಿಕೊಂಡವನು'' ಕಥೆಗಳಲ್ಲಿ ಈ ಸ್ಪರ್ಶದ ಆಯಾಮ ಭೌತಿಕವಷ್ಟೇ ಅಲ್ಲ, ಸಾಂಸ್ಕೃತಿಕವೂ ಹೌದು. ಆದರೆ ಅಸ್ಪೃಶ್ಯತೆಯನ್ನು ಸೃಷ್ಟಿಸಿದ ಸಮಾಜದಲ್ಲಿ ಸ್ಪರ್ಶ ಧ್ಯಾನ ಪ್ರಾರ್ಥನೆಗಳ ಸ್ತರವನ್ನು ಏರುವುದು ತೀರ ಪ್ರಯಾಸಕಾರಿ ಅನುಭವ. ದಲಿತರು ಸವರ್ಣೀಯರ ಸಂಬಂಧ ಮಾನವೀಯವಾಗುವುದು ಪರಸ್ಪರ ಸ್ಪರ್ಶದ ಮೂಲಕವೇ. ಮೈಗಳೂ ಸ್ಪರ್ಶಿಸದ ಸಂಸ್ಕೃತಿಯೊಂದರಲ್ಲಿ ಮನಸ್ಸುಗಳು ಸ್ಪರ್ಶಿಸುವುದು ಹೇಗೆ? ಇದನ್ನು ಮೊದಮೊದಲು ಪ್ರಾಯಶಃ ವ್ರತದ ನಿಷ್ಠೆಯಲ್ಲಿ ಸಾಧಿಸಬೇಕು. ''ಸಹಪಾಠಿ'' ಕಥೆಯಲ್ಲಿ ಬಸವೇಗೌಡ ಜೋಸಿಯನ್ನಾಗಲೀ, ಶಿವಪ್ಪನನ್ನಾಗಲೀ ಮುಟ್ಟುವ ಕ್ರಿಯೆ ಯಾಕೆ ಒಂದು ಕಠಿಣವಾದ ರಿಚುಯಲ್ (ಆಚರಣೆ)ಯಾಗುತ್ತದೆ ಎಂದು ಈಗ ಅರಿವಾಗುತ್ತದೆ. ಗಾಂಧೀಜಿ ಯಾಕೆ ಅಷ್ಟೊಂದು ಹಠದಿಂದ ಈ ಸಮಸ್ಯೆಗೆ ಸ್ಪಂದಿಸಿದರು ಎಂಬುದು ಅರ್ಥವಾಗತೊಡಗಿದೆ. ಇದು ಕೇವಲ ಕನಸುಗಾರಿಕೆಯಲ್ಲ. ಹುಸಿ ಆದರ್ಶದ ಭೋಳೆತನವಲ್ಲ. ದಲಿತರು ಮತ್ತು ಮಹಿಳೆಯರ ಸಮಸ್ಯೆಗಳನ್ನು ತಮ್ಮ ಕಾರ್ಯಕ್ಷೇತ್ರದ ಕೇಂದ್ರಸ್ಥಾನದಲ್ಲಿ ಚಿಂತಿಸಿದ ಗಾಂಧೀಜಿ ಲಂಕೇಶ್ ಮೇಲೆ ಮಾಡಿರುವ ಪ್ರಭಾವ ಆಳವಾದದ್ದು. ಲಂಕೇಶ್ ಕಥೆಗಳಲ್ಲಿ ವ್ಯಕ್ತವಾಗುವ ಸ್ತ್ರೀದೃಷ್ಟಿಕೋನ ನಮ್ಮ ಸಮಕಾಲೀನ ಮಹಿಳಾ ಬರಹಗಾರರ ಸಂವೇದನೆಗಿಂತ ಎಷ್ಟೋ ಪಾಲು ಪ್ರಖರವಾದದ್ದು. ನವೋದಯದ ಹಿರಿಯರಾದ ಕುವೆಂಪು, ಕಾರಂತ, ಮಾಸ್ತಿಯವರನ್ನು ಬಿಟ್ಟರೆ ಅವರ ಮುಂದಿನ ಪೀಳಿಗೆಯಲ್ಲಿ ತುಂಬು ಹೆಣ್ಣು ಪಾತ್ರಗಳನ್ನು ಸೃಷ್ಟಿಸಿದ್ದು ಲಂಕೇಶರೊಬ್ಬರೇ.

''ಸಹಪಾಠಿ''ಯ ಆಚರಣವಾದೀ ಶೈಲಿ ಅದ್ಭುತರಮ್ಯಕ್ಕೆ ಸಮೀಪವೆನಿಸಿದರೆ ''ಮುಟ್ಟಿಸಿಕೊಂಡವನು'' ತನ್ನ ಸರಳ, ನಗ್ನ ಶೈಲಿಯಿಂದ ಗಮನಸೆಳೆಯುತ್ತದೆ. ಇಲ್ಲಿ ಕೆಳವರ್ಣದ ದಲಿತ ವಿದ್ಯಾವಂತನಾಗಿ ಮೇಲ್ವರ್ಗದವನು. ಸವರ್ಣೀಯ ರೈತ ವಿದ್ಯೆ-ಹಣದಿಂದ ಕೆಳವರ್ಗದವನು. ಆದರೆ ನಮ್ಮದು ಮೂಲಭೂತವಾಗಿ ವರ್ಗಸಮಾಜವಲ್ಲ, ವರ್ಣಸಮಾಜ. ವಿದ್ಯೆ, ಹಣ ಕೂಡ ವರ್ಣಭೇದವನ್ನು ತೊಡೆದುಹಾಕುವ ಮೌಲ್ಯಗಳಾಗಲಾರವು. ಸ್ಪರ್ಶ, ಕೇವಲ ಸ್ಪರ್ಶ, ಮೈ-ಮನಗಳನ್ನು ಹತ್ತಿರಕ್ಕೆ ತರಬಲ್ಲ ಸ್ಪರ್ಶ ಮಾತ್ರ ಜಾತಿಸಮಾಜಕ್ಕೆ ವಿಮೋಚನೆ ತರಬಲ್ಲದು. ತನ್ನನ್ನು ಮುಟ್ಟಿದ ವೈದ್ಯ ತಿಮ್ಮಪ್ಪ ಅಸ್ಪೃಶ್ಯ ಜಾತಿಗೆ ಸೇರಿದವನೆಂದು ಸವರ್ಣೀಯ ಬಸಲಿಂಗಪ್ಪ ಅನುಭವಿಸುವ ತಲ್ಲಣದ ಮೂಲಕ ಲಂಕೇಶ್ ಇಡೀ ಸಮಾಜದ ಸ್ವರೂಪವನ್ನು ಕಾಣಿಸುತ್ತಿದ್ದಾರೆ. ದಲಿತನ ಸ್ಪರ್ಶ ಮಾತ್ರ ಈ ತಲ್ಲಣವನ್ನು ಉಂಟುಮಾಡುತ್ತದೆ ಎಂದರೆ ವರ್ಣಸಂಬಂಧಗಳ ಸ್ವರೂಪ ಎಷ್ಟು ಸಂಕೀರ್ಣ ಎಂಬುದನ್ನು ಊಹಿಸಿಕೊಳ್ಳಬಹುದು.



## ಕೀರ್ತಿನಾಥ ಕುರ್ತಕೋಟಿ

*- ಬಿ.ಎಂ. ಪುಟ್ಟಯ್ಯ*

ಕೀರ್ತಿನಾಥ ಕುರ್ತಕೋಟಿ ಕನ್ನಡ ವಿಮರ್ಶೆಯಲ್ಲಿ ಪರಿಚಿತ ಹೆಸರು. ೧೯೯೩ರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಇವರ 'ಮರ್ಹಾಟಿ ಸಂಸ್ಕೃತಿ' ಕೃತಿಗೆ ಸಿಕ್ಕಿದೆ. ಇದು ಅನುವಾದ ಕೃತಿ. ಮೂಲ ಕೃತಿಯನ್ನು ಬರೆದವರು ಶಂಬಾ ಜೋಶಿಯವರು. ಈ ಪ್ರಶಸ್ತಿ ಕುರ್ತಕೋಟಿಯವರಿಗೆ ಗೌರವವನ್ನು ತಂದಿದೆ.

ಕೀರ್ತಿನಾಥರು ಅಕ್ಟೋಬರ್ ೧೩, ೧೯೨೮ ರಂದು ಕುರ್ತಕೋಟಿಯಲ್ಲಿ ಜನಿಸಿದರು. ತಂದೆ ಹಾಗೂ ಅಜ್ಜ ವಿದ್ವಾಂಸರು. ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣವನ್ನು ಗದುಗಿನಲ್ಲಿ ಮುಗಿಸಿದರು. ಮುಂದಿನದು ಧಾರವಾಡದಲ್ಲಿ ನಡೆಯಿತು.

ಬಾಲ್ಯದಲ್ಲೇ ಸಾಹಿತ್ಯದ ಆಸಕ್ತಿಯನ್ನು ಮೈಗೂಡಿಸಿಕೊಂಡಿದ್ದ ಇವರು. ಅಧ್ಯಯನ ಮಾತ್ರವಲ್ಲ, ಕವಿತೆ, ನಾಟಕ, ಹರಟೆಗಳನ್ನು ಬರೆಯುತ್ತಿದ್ದರು. ಸ್ನಾತಕೋತ್ತರ ಪದವಿಗಾಗಿ ಧಾರವಾಡಕ್ಕೆ ತೆರಳಿದ ಶ್ರೀಯುತರು ಇಂಗ್ಲಿಷಿನಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು. ಆಗಲೇ ಧಾರವಾಡದ ಗೆಳೆಯರ ಬಳಗ ಹಾಗೂ ಮನೋಹರ ಗ್ರಂಥಮಾಲೆಯ ಆತ್ಮೀಯ ಒಡನಾಟ ಇವರಿಗಾಯಿತು.

ಬಿ.ಎ. ಪದವಿ ನಂತರ ಸುಮಾರು ೫ ವರ್ಷಗಳ ಕಾಲದ ಗದುಗಿನಲ್ಲಿ ಶಿಕ್ಷಕರಾಗಿ ಕೆಲಸ ಮಾಡಿದರು. ಕೆಲ ಸಮಯ ಪುಣೆಯಲ್ಲೂ ಅಧ್ಯಾಪಕರಾಗಿದ್ದರು. ಅಲ್ಲಿಂದ ಗುಜರಾತಿನ ವಲ್ಲಭಭಾಯಿ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಸೇರಿಕೊಂಡರು.

'ಆ ಮನೆ'- ಎನ್ನುವುದು ಕುರ್ತಕೋಟಿಯವರ ಒಂದು ನಾಟಕ. 'ಚಂದ್ರಗುಪ್ತ,' 'ಸ್ವಪ್ನವಾಸವದತ್ತ'- ಇವು ಭಾಸ ಕವಿಯ ಸಂಸ್ಕೃತ ನಾಟಕಗಳ ಅನುವಾದಗಳು. 'ಸ್ವಪ್ನದರ್ಶಿ ಮತ್ತು ಇತರ ಗೀತ ನಾಟಕಗಳು'' ಹೆಸರೇ ಹೇಳುವಂತೆ ಗೀತ ನಾಟಕಗಳ ಒಂದು ಸಂಕಲನ (೧೯೫೬).

ಕುರ್ತಕೋಟಿಯವರ ಉಳಿದ ಸಾಹಿತ್ಯವೆಲ್ಲ ವಿಮರ್ಶೆಯದೆ. ಮನೋಹರ ಗ್ರಂಥಮಾಲೆಯ ಬೆಳ್ಳಿ ಹಬ್ಬದ ನಿಮಿತ್ತ ಪ್ರಕಟವಾದ 'ನಡೆದು ಬಂದ ದಾರಿ'ಯ ಮೂರು ಸಂಪುಟಗಳಿಗೆ ಬರೆದ ಪ್ರಸ್ತಾವನಾ ಪ್ರಬಂಧಗಳು ''ಯುಗಧರ್ಮ ಹಾಗೂ ಸಾಹಿತ್ಯದರ್ಶನ'' (೧೯೬೨) ಎಂಬ ಹೆಸರಿನಲ್ಲಿ ಪ್ರತ್ಯೇಕ ಪುಸ್ತಕವಾಯಿತು.

ಕುರ್ತಕೋಟಿಯವರು ವಿಮರ್ಶೆಯ ಕೆಲಸವನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಅವರು ಬೇಕಾದಷ್ಟು ಬರೆದಿದ್ದರೂ ಪುಸ್ತಕ ರೂಪದಲ್ಲಿ ಪ್ರಕಟವಾಗಿರುವುದು ಬಹಳವಿಲ್ಲ. ಮನ್ವಂತರ, ನವ್ಯ ಕಾವ್ಯ ಪ್ರಯೋಗ (೧೯೬೩), ಭೃಂಗದ ಬೆನ್ನೇರಿ (೧೯೭೫), ವಿಮರ್ಶೆಯ ವಿನಯ - ಕಾದಂಬರಿ ( ೧೯೮೨), ವಿಮರ್ಶೆಯ ವಿನಯ - ನಾಟಕ (೧೯೮೫), ಸಂಸ್ಕೃತಿ ಸ್ಪಂದನ (೧೯೮೬) ಪುಟ ಬಂಗಾರದ ಐದನೆಯ ಸಂಪುಟ 'ಶ್ರಾವಣ ಪ್ರತಿಭೆ' (೧೯೮೭) ಬಯಲು ಆಲಯ (೧೯೯೨) ಮತ್ತು ಉರಿಯ ನಾಲಿಗೆ (೧೯೯೩).

ಇಂಗ್ಲಿಷ್ ನವ್ಯಕಾವ್ಯ ಪರಂಪರೆ ಕನ್ನಡದಲ್ಲಿ ಅದು ತಲೆದೋರಿದ ಬಗೆ ಇವುಗಳನ್ನು ಆರು ಜನ ಕನ್ನಡ ಕವಿಗಳ ಕಾವ್ಯದ ಉದಾಹರಣೆಗಳೊಂದಿಗೆ ಚರ್ಚಿಸಿರುವುದೇ 'ನವ್ಯಕಾವ್ಯ ಪ್ರಯೋಗ'; 'ಭೃಂಗದ ಬೆನ್ನೇರಿ' ಪುಸ್ತಕದಲ್ಲಿ ಬೇಂದ್ರೆಯವರ ಕಾವ್ಯ ದರ್ಶನವಿದೆ. 'ವಿಮರ್ಶೆಯ ವಿನಯ' ಎಂಬ ಮಾಲಿಕೆಯಲ್ಲಿ ಕಾದಂಬರಿ ಮತ್ತು ನಾಟಕಗಳನ್ನು ಕುರಿತು ಎರಡು ಸಂಪುಟಗಳು ಬಂದಿವೆ. ಇಲ್ಲಿನ ಲೇಖನಗಳಲ್ಲಿ ಒಂಭತ್ತು ಜನ ಕಾದಂಬರಿಕಾರರೂ ಹದಿನಾರು ನಾಟಕ ಸಂಬಂಧಿಯಾದ ವಿಷಯಗಳೂ ಸೇರಿವೆ. ಒಬ್ಬ ಲೇಖಕನನ್ನೋ ಒಂದು ಕೃತಿಯನ್ನೋ ಕುರಿತಂತೆ ಈ ಲೇಖನಗಳು ಚರ್ಚೆ ಮಾಡುತ್ತವೆ. ಸಂಸ್ಕೃತಿಯ ವಿವಿಧ ಮುಖಗಳ ಸ್ಥೂಲ ವಿವೇಚನೆಯ ಹದಿನಾಲ್ಕು ಪ್ರಬಂಧಗಳ ಸಂಕಲನವೇ 'ಸಂಸ್ಕೃತಿ ಸ್ಪಂದನ'. ಅಭಿಜಾತ ಜಾನಪದದಿಂದ ತೊಡಗಿ, ಕಥನ ತಂತ್ರದವರೆಗೆ ಈ ಲೇಖನಗಳು ಬಹು ಬಗೆಯವು. ಸಾಂಸ್ಕೃತಿಕ ದೃಷ್ಟಿಯೊಂದು ಸಮಾನಾಗಿ ಇವುಗಳನ್ನು ಸ್ಪರ್ಶಿಸುವ ಅಂಶ. 'ಶ್ರಾವಣ ಪ್ರತಿಭೆ'ಯಲ್ಲಿ ಬೇಂದ್ರೆಯವರ ಒಂದು ನೂರು ಕವಿತೆಗಳ ವಿವೇಚನೆ ಇದೆ. ಇದು ಕುರ್ತಕೋಟಿ ಮತ್ತು ವಾಮನ ಬೇಂದ್ರೆಯವರ ಜೊತೆ ಕೆಲಸ. ನವೋದಯದ ಐದು ಜನ ಲೇಖಕರ ಸಾಹಿತ್ಯವನ್ನು ಕುರಿತು ಬರೆದ ಪ್ರಬಂಧಗಳ ಸಂಕಲನ 'ಬಯಲು ಆಲಯ'. 'ಉರಿಯ ನಾಲಿಗೆ'ಯು ಪತ್ರಿಕೆಯಲ್ಲಿ ಬರೆದ ಅಂಕಣ ಬರಹಗಳ ಸಂಕಲನ. ಇವುಗಳ ವಸ್ತು ಗತಕಾಲದ ಪುರಾಣಗಳಿಂದ ಹಿಡಿದು ವರ್ತಮಾನದ ಸಿನಿಮಾ, ಋತುಗಳು ಹಬ್ಬಗಳವರೆಗೆ ಹರಡಿವೆ.

'ಮರ್ಹ್ಯಾಟಿ ಸಂಸ್ಕೃತಿ'ಯು ಶಂಬಾ ಜೋಶಿಯವರ ಮುಖ್ಯ ಕೃತಿಗಳಲ್ಲಿ ಒಂದು. ಇದನ್ನು ಮೊದಲು ಶಂಬಾ ಬರೆದದ್ದು ಮರ್ಹ್ಯಾಟಿಯಲ್ಲಿಯೇ. ಮರ್ಹ್ಯಾಟಿ ಕೃತಿಯು ೧೯೫೨ರಲ್ಲಿ ಸ.ಜ. ಭಾಗವತರ ಅಂತರ ಭಾರತಿ ಪ್ರಕಾಶನದ ಮುಖಾಂತರ ಪ್ರಕಟವಾಯಿತು. ಶಂಬಾ ಜೋಶಿ ಇದರಲ್ಲಿ ವ್ಯಕ್ತಪಡಿಸಿರುವ ವಿಚಾರಗಳನ್ನು ೧೯೩೪ ರಲ್ಲಿಯೇ 'ಮಹಾರಾಷ್ಟ್ರದ ಮೂಲ' ಅಥವಾ 'ಮೂಲಮಹಾರಾಷ್ಟ್ರ' ಎಂಬ ಕೃತಿಯಲ್ಲಿ ಸ್ಥೂಲವಾಗಿ ಪ್ರತಿಪಾದಿಸಿದ್ದರು. ತಮ್ಮ ವಿಚಾರಗಳಿಗೆ ಹಲವಾರು ಕಡೆಯಿಂದ ಆಧಾರಗಳನ್ನು, ಇಂಬುಗಳನ್ನು ಪಡೆದಂತೆಲ್ಲಾ ಬಿಡಿ ಬಿಡಿ ಬರಹದಲ್ಲಿ ವ್ಯಕ್ತಪಡಿಸುತ್ತ ಹೋದರು. ತಮ್ಮ ಬರಹಗಳನ್ನು ಮೊದಲು ಮರ್ಹ್ಯಾಟಿಯಲ್ಲಿಯೇ ಬರೆದರು. ಅವು ನವಭಾರತ ಟೈಂಸ್‌ನಲ್ಲಿ ಪ್ರಕಟವಾದವು. ಇವು ಸಾರ್ವಜನಿಕರ ಹಾಗೂ ವಿಚಾರವಂತರ ಗಮನಕ್ಕೆ ಬಿದ್ದವು. ''ಈಗಿರುವ ಮಹಾರಾಷ್ಟ್ರವು ಮೊದಲು ಕರ್ನಾಟಕದ ಭಾಗವಾಗಿತ್ತು'' ಎಂಬ ಮುಖ್ಯ ಪ್ರಮೇಯವು ಅವರ ವಿಚಾರದ ನೆಲೆಯಾಗಿತ್ತು. ಇದು ಮಹಾರಾಷ್ಟ್ರದ ವಿದ್ವಾಂಸರಲ್ಲೇ ಕೋಲಾಹಲವನ್ನು ಹೆಚ್ಚಿಸಿತು. ಮಹಾರಾಷ್ಟ್ರ ಸಂಸ್ಕೃತಿಯ ಅಧ್ಯಯನಕ್ಕೆ ಇದು ಹೊಸತಿರುವನ್ನು ಕೊಟ್ಟಿತು.

'ಮರ್ಹ್ಯಾಟಿ ಸಂಸ್ಕೃತಿ ಕಾಯಿ ಸಮಸ್ಯಾ' ಎಂಬ ಹೆಸರಿನ ಈ ಕೃತಿಯನ್ನು ಕನ್ನಡದ ಮುಖ್ಯ ವಿಮರ್ಶಕರಲ್ಲಿ ಒಬ್ಬರಾದ ಪ್ರೊ. ಕೀರ್ತಿನಾಥ ಕುರ್ತುಕೋಟಿಯವರು ೧೯೯೦ರಲ್ಲಿ ಕನ್ನಡಿಸಿದರು. ಕನ್ನಡದಲ್ಲಿ ಸಹಜವಾಗಿ ಶಂಬಾ ಜೋಶಿ ಅವರ ಬರಹ ಕಠಿಣ ಎಂಬ ಮಾತಿದೆ. ಸಂವಹನದ ದೃಷ್ಟಿಯಿಂದ ಶಂಬಾ ಅವರ ಬರವಣಿಗೆಗಳು ತೀರ ಕಷ್ಟ ಎಂಬ ಮಾತು ಸಾಮಾನ್ಯವಾಗಿ ಎಲ್ಲಾ ಕಡೆಯೂ ಇದೆ. ಈ ಮಾತು ಸ್ವಲ್ಪ ಮಟ್ಟಿಗೆ ನಿಜ. ಆದರೆ, ಮೂಲ ಮರ್ಹ್ಯಾಟೀ ಕೃತಿಯನ್ನು ಶ್ರೀ ವಸಂತರಾವ್ ದೇಶಪಾಂಡೆ ಎಂಬ ಈಚಿನ ಸಂಶೋಧಕರು ತಿದ್ದಿ, ಪರಿಷ್ಕರಿಸಿದ್ದಾರೆ. ಆ ಕೃತಿಯನ್ನೇ ಕುರ್ತಕೋಟಿ ಅವರು ಅನುವಾದಕ್ಕೆ ಬಳಸಿಕೊಂಡಿದ್ದಾರೆ. ಶಂಬಾ ಜೋಶಿ ಅವರ ಅಧ್ಯಯನ ಮೂರು ನೆಲೆಯಲ್ಲಿ ಸಾಗಿದೆ. ಮೊದಲನೆಯದು ಕನ್ನಡ ಸಂಸ್ಕೃತಿಗೆ ಸಂಬಂಧಿಸಿದ್ದು, ಎರಡನೆಯದು ಭಾರತಿಯ ಸಂಸ್ಕೃತಿಗೂ ಮೂರನೆಯದು ಜಾಗತಿಕ ಸಂಸ್ಕೃತಿಗೂ ಸಂಬಂಧಿಸಿವೆ. ಶಂಬಾ ಜೋಶಿ ಅವರ ಮೊದಲ ಬಗೆಯ ಬರಹಗಳು ಸಂವಹನದ ದೃಷ್ಟಿಯಿಂದ ಮಾತ್ರವಲ್ಲ; ವಿಚಾರದ ದೃಷ್ಟಿಯಿಂದಲೂ ಮಹತ್ತ್ವವುಳ್ಳವಾಗಿವೆ. ಕನ್ನಡ ಸಂಸ್ಕೃತಿಯ ಅಧ್ಯಯನಕ್ಕೆ ದೇಸೀನೆಲೆಯ ಒತ್ತನ್ನು ನೀಡಿದ್ದು ಅವರೇ. ಅವರ ಅಧ್ಯಯನ ಕ್ರಮ ವಿಸ್ತಾರಗೊಂಡಂತೆ ಅಥವಾ ಈ ಮಾತನ್ನು ಹೀಗೂ ಹೇಳಬಹುದು - ಕನ್ನಡ ಸಂಸ್ಕೃತಿಯ ಸಮಸ್ಯೆಗಳು ಕೇವಲ ಏಕರೂಪದ್ದಲ್ಲ. ಈ ಸಮಸ್ಯೆ ಅಖಿಲ ಭಾರತೀಯ ವ್ಯಾಪ್ತಿಯುಳ್ಳದೆಂಬ ವಿಚಾರ ಬಂದಂತೆ ಭಾರತೀಯ ಸಂಸ್ಕೃತಿಯ ಅಧ್ಯಯನಕ್ಕೆ ತೊಡಗಿದರು. ಇಲ್ಲಿನ ಬರಹ ತುಸು ಕಠಿಣವೆನಿಸಿದರೂ ಮೂರನೇ ಬಗೆಯ ಬರಹಗಳಿಗೆ ಹೋಲಿಸಿದರೆ ತೀರ ಸರಳವೆಂದೇ ಹೇಳಬೇಕು. ಮೊದಲ ಮತ್ತು ಎರಡನೆಯ ಬಗೆಯ ಅಧ್ಯಯನ ಕ್ರಮ ಅವರ ವಿಸ್ತಾರವಾದ ಓದು ಮತ್ತು ಸಂಸ್ಕೃತಿಯನ್ನು ಕುರಿತು ಮಾಡಿಕೊಂಡ ವ್ಯಾಖ್ಯೆ ತುಂಬ ಗಟ್ಟಿಯಾದದ್ದು.

ಶಂಬಾ ಜೋಶಿಯವರ ವಿಚಾರಗಳು ಜಾಗತಿಕ ಮಟ್ಟದವು. ಅವುಗಳನ್ನು ಕುರ್ತಕೋಟಿ ಅವರು 'ಮರ್ಹಾಟಿ ಸಂಸ್ಕೃತಿ' ಅನುವಾದ ಮಾಡುವುದರ ಮುಖಾಂತರ ಸಂಸ್ಕೃತಿ ಅಧ್ಯಯನಕ್ಕೆ ಹೊಸ ಪ್ರವೇಶಿಕೆಯನ್ನು ಒದಗಿಸಿಕೊಟ್ಟಿದ್ದಾರೆ. ಈ ಕೃತಿಯಲ್ಲಿ ಪ್ರಸ್ತಾಪಿತವಾಗಿರುವ ವಿಚಾರಗಳು ಎಷ್ಟು ಪ್ರಾಚೀನವೋ ಅಷ್ಟೇ ಆಧುನಿಕ. ಇಲ್ಲಿನ ಅಧ್ಯಯನ ಕ್ರಮವಂತೂ ತುಂಬಾ ಹೊಚ್ಚ ಹೊಸದು. ಸಮಕಾಲೀನ ಸಮಸ್ಯೆ ಮತ್ತು ವಿಚಾರಗಳ ಪಲ್ಲಟಗಳಿಗೆ ಭೂತವೂ ಪರ್ಯಾಯವಾಗಿ ಕಾರಣವೆಂಬ ಕಾರಣ ಮೀಮಾಂಸೆಯನ್ನು ಇಲ್ಲಿ ತುಡುಕಿದ್ದಾರೆ. ಸಮಾಜಶಾಸ್ತ್ರ, ಮಾನವ ಸಂಸ್ಕೃತಿ ಶಾಸ್ತ್ರದ ಅಧ್ಯಯನಕ್ಕೆ ಶಂಬಾ ಅವರ ಚಿಂತನೆ ಒಂದು ರೀತಿ ತಲಕಾವೇರಿಯೇ. ಶಂಬಾ ಅವರಿಗೆ ಮನುಷ್ಯನೇ ಕೇಂದ್ರವಸ್ತುವಾಗಿದ್ದಾನೆ. ಮನುಷ್ಯ ನಿರ್ಮಿತ ಸಮಾಜಗಳ ಏರು ಮತ್ತು ಇಳಿವುಗಳನ್ನು ಸಾಮಾಜಿಕ ಅಧ್ಯಯನದ ಪರಿಪ್ರೇಕ್ಷ್ಯವಾಗಿ ನಿಂತು ನೋಡಲು ಹೊರಟಿದ್ದಾರೆ. ಇದು ನಮ್ಮ ಹೊಸ ಬಗೆಯ ಅಧ್ಯಯನಗಳಿಗೆ ಅತ್ಯುತ್ತಮವಾದ ಮಾದರಿಗಳನ್ನು ನೀಡಬಲ್ಲದು. ಕುರ್ತಕೋಟಿ ಅವರ ಬರಹಗಳಿಗೆ ಹೋಲಿಸಿಕೊಂಡು ಅವರ ಅನುವಾದದ ಬಗೆಯನ್ನು ಗಮನಿಸುವುದಾದರೆ, ಸಜೀವತೆ ಮತ್ತು ವಸ್ತುನಿಷ್ಠತೆಗಳು ಒಂದರೊಡನೊಂದು ಅಪರೂಪವಾಗಿ ಹೊಂದಾಣಿಕೆಯಾಗಿದೆ.





## ತೇಜಸ್ವಿನಿ ನಿರಂಜನ

*ಎಸ್. ಸುಗತ*

ಕನ್ನಡದ ಪ್ರಖ್ಯಾತ ಪ್ರಗತಿಶೀಲ ಬರಹಗಾರ ದಿ. ನಿರಂಜನರ ಮಗಳು ತೇಜಸ್ವಿನಿ ನಿರಂಜನ, ಅವರು ಈ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಹಿರಿಯ ವಿಮರ್ಶಕರಾದ ಕೀರ್ತಿನಾಥ ಕುರ್ತಕೋಟಿ ಅವರೊಂದಿಗೆ ಹಂಚಿಕೊಂಡಿದ್ದಾರೆ. ತೇಜಸ್ವಿನಿ ಅವರು ಕನ್ನಡದಿಂದ ಇಂಗ್ಲಿಷಿಗೆ ಭಾಷಾಂತರಿಸಿರುವ ಕೃತಿ, ಕಾದಂಬರಿಗಾರ್ತಿ ಎಂ.ಕೆ. ಇಂದಿರಾ ಅವರ 'ಫಣಿಯಮ್ಮ'. ಹಿಂದೆ ಈ ಕಾದಂಬರಿ ಪ್ರೇಮಾ ಕಾರಂತರ ನಿರ್ದೇಶನದಲ್ಲಿ ಸಿನಿಮಾ ಆಗಿ ಪ್ರಶಸ್ತಿ ಗಳಿಸಿತು.

ತೇಜಸ್ವಿನಿ ಅವರ ಭಾಷಾಂತರಗಳಿಗೆ ಒಂದು ಪುಟ್ಟ ಇತಿಹಾಸವೇ ಇದೆ. ೭೦ನೆಯ ದಶಕದ ಮೊದಲ ವರ್ಷಗಳಲ್ಲಿ, ಬಹಳ ಕಿರಿಯ ವಯಸ್ಸಿಗೇ ಶೇಕ್ಸ್‌ಪಿಯರ್‌ನ ಜೂಲಿಯಟ್ ಸೀಝರ್, ಪೋಲಿಷ್ ಕವಿತೆಗಳು, ನೆರೂಡನ ಕವಿತೆಗಳೊಂದಿಗೆ ಪ್ರಾರಂಭವಾದ ಅವರ ಭಾಷಾಂತರದ ಯಾತ್ರೆ, ಈಗ ಅಚ್ಚಿನ ಮನೆಯಲ್ಲಿರುವ 'ಮೃತ್ಯುಂಜಯ' ಕಾದಂಬರಿವರೆಗೂ ಸಾಗಿದೆ. ಸುಮಾರು ಇಪ್ಪತ್ತೈದು ವರ್ಷಗಳ ಈ ಅವಧಿಯ ನಡುವಿನಲ್ಲಿ ಹೊರಬಂದಂಥ ನಿರಂಜನರ 'ವಿಮೋಚನೆ' ಕಾದಂಬರಿಯ ಅನುವಾದ 'Wait for the moon', 'ಚಿರಸ್ಮರಣೆ' ಕಾದಂಬರಿಯ ಅನುವಾದ 'The stars shine brightly', ನಿರಂಜನರ ಕೆಲವು ಕಥೆಗಳ ಅನುವಾದ, ಇಂದಿರಾ ಅವರ 'ಫಣಿಯಮ್ಮ' ಕಾದಂಬರಿಯ ಅನುವಾದ ಅತ್ಯಂತ ಸಾರ್ಥಕವಾಗಿ ಹೊರಬಂದಿವೆ. ತೇಜಸ್ವಿನಿ ಅವರು ಬಹಳಷ್ಟು ಕಾಲ ಇಂಗ್ಲಿಷಿನಲ್ಲಿ ಕಾವ್ಯಾಭ್ಯಾಸ ಮಾಡಿದರು. ಇದಕ್ಕೆ

ಸಾಕ್ಷಿಯಾಗಿ ಅವರು ೧೯೭೪ರಲ್ಲಿ ಪ್ರಕಟಿಸಿದ 'Liquied sapphire' ಮತ್ತು ೧೯೭೮ರಲ್ಲಿ ಪ್ರಕಟಿಸಿದ 'Burnt smoke and wood Ash' ಸಂಕಲನಗಳಿವೆ.

ತೇಜಸ್ವಿನಿ ಇಂಗ್ಲಿಷ್ ಸಾಹಿತ್ಯದ ಗಂಭೀರ ವಿದ್ಯಾರ್ಥಿನಿಯೂ ಹೌದು. ಮುಂಬೈ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ (೧೯೮೧) ಪಡೆದು. ಅನಂತರ ಲಾಸ್ ಏಂಜಲೀಸ್‌ನಲ್ಲಿರುವ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದಲ್ಲಿ ಭಾಷಾಂತರದ ತತ್ವಗಳ ಮೇಲೆ ಪಿಎಚ್.ಡಿ (೧೯೮೮) ಪದವಿಯನ್ನು ಪಡೆದರು. ಪ್ರಸ್ತುತ ಹೈದರಾಬಾದ್‌ನಲ್ಲಿರುವ ಕೇಂದ್ರೀಯ ವಿಶ್ವವಿದ್ಯಾಲಯದ ಆಂಗ್ಲ ವಿಭಾಗದಲ್ಲಿ ಉಪನ್ಯಾಸಕಿಯಾಗಿದ್ದಾರೆ. ೧೯೯೨-೯೪ ರ ಅವಧಿಯಲ್ಲಿ, ಪ್ರತಿಷ್ಠಿತ ಹೋಮಿಬಾಬಾ ಫೆಲೋ ಆಗಿರುವ ಅವರು ಅಮೆರಿಕಾದ ಚಿಕಾಗೋ ವಿಶ್ವವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ.

ಪುರುಷ ನಿರ್ಮಿತ ಮೌಲ್ಯಗಳ ಸಮಾಜವೊಂದರಲ್ಲಿ, ಬ್ರಾಹ್ಮಣ 'ಸಂಪ್ರದಾಯದ ಭಾರ'ದ ಅಡಿಯಲ್ಲಿ ಸಿಕ್ಕಿಹಾಕಿಕೊಂಡು ಸೊರಗುವ ನಡುವೆಯೂ ಜೀವನದ ಬಗ್ಗೆ ಕಹಿಯಾಗದೆ ಸಾಗುವ ಪುಟ್ಟ ವಿಧವೆಯ ಕಥೆಯನ್ನು ಮನೋಜ್ಞವಾಗಿ ಚಿತ್ರಿಸುವ 'ಫಣಿಯಮ್ಮ' ಕಾದಂಬರಿ ತೇಜಸ್ವಿನಿಯವರ ಪ್ರಜ್ಞಾವಂತ ಆಯ್ಕೆ. ತೇಜಸ್ವಿನಿಯವರಿಗೆ 'ಫಣಿಯಮ್ಮ'ದಲ್ಲಿ ಅನುವಾದಕ್ಕೊಗ್ಗುವ ಗುಣವೆಂದರೆ ಅದರ ಮಹಿಳಾ ಪ್ರಶ್ನೆಗಳು. ೧೯೭೬ರಲ್ಲಿ ಧಾರವಾಡದ ಮನೋಹರ ಗ್ರಂಥಮಾಲೆಯಲ್ಲಿ ಪ್ರಕಟವಾದ ಶ್ರೀಮತಿ ಎಂ.ಕೆ. ಇಂದಿರಾ ಅವರ ಮಹತ್ವದ ಕಾದಂಬರಿ 'ಫಣಿಯಮ್ಮ'. ಇದು ೧೯೭೬ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಪಡೆಯಿತು. 'ಫಣಿಯಮ್ಮ' ಕಾದಂಬರಿಗಾರ್ತಿಯ 'ಅಜ್ಜನ ತಂಗಿ'. ಆಕೆ ಮಲೆನಾಡಿನ ಅವಿಭಕ್ತ ಹಾಗೂ ಮಡಿವಂತ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದವಳು. ಇವಳಿಗೆ ಒಂಬತ್ತು ವರ್ಷಕ್ಕೆ ಬಾಲ್ಯವಿವಾಹವಾಯಿತು. ಅದು ಅವಳ ಮೈನೆರೆಯದ ವಯಸ್ಸು, ಆಗ ಗಂಡನಿಗೆ ಹದಿನೈದು ವರ್ಷ. ಆದರೆ ಮದುವೆಯಾದ ತಿಂಗಳಿಗೇ ಆತನ ಆಕಸ್ಮಿಕ ಸಾವಿನಿಂದಾಗಿ ಆಕೆ ಬಾಲ ವಿಧವೆಯಾದಳು. ಆ ಮೇಲೆ ಅವಳ ಹೋರಾಟದ ಬದುಕು ಆರಂಭವಾಯಿತು. ಪುರುಷ ಪ್ರಧಾನವಾದ ಹಾಗೂ ಸಂಪ್ರದಾಯಬದ್ಧ ಸಮಾಜವು ವಿಧವೆಯ ಮೇಲೆ, ಸ್ತ್ರೀಕುಲದ ಮೇಲೆ ನಡೆಸುವ ಶೋಷಣೆಗಳಿಗೆ, ದೌರ್ಜನ್ಯಗಳಿಗೆ ಫಣಿಯಮ್ಮ ಪ್ರತಿಕ್ರಿಯಿಸುತ್ತ, ಒಬ್ಬ ಆದರ್ಶ ವಿಧವೆಯಾಗಿ 'ಕಸುವಿನ ಎಲೆಯ ಮೇಲಿನ ನೀರಿನ ಹಾಗೆ' ತನ್ನ ನೂರಾ ಹನ್ನೆರಡು ವಸಂತಗಳ ದೀರ್ಘ ವಿಧವಾ ಜೀವನವನ್ನು ತುಂಬಿಸಿ ರುದ್ರಭೂಮಿ ಸೇರುತ್ತಾಳೆ. ಕುತೂಹಲಕಾರಿ ಕಥೆಯನ್ನು ಹೊಂದಿರುವ ಇದು ಮೂಲದಲ್ಲೂ ಒಂದು ಉತ್ತಮ ಕಾದಂಬರಿ.

'ಫಣಿಯಮ್ಮ' ಅನುವಾದ ಮಾಡುವುದರ ಮೂಲಕ ತೇಜಸ್ವಿನಿಯವರು ಮಹಿಳಾ ಹಕ್ಕುಗಳ ಹೋರಾಟಕ್ಕೆ, ಚರಿತ್ರೆಯ ಪುನರ್‌ರಚನೆಗೆ ನೆರವಾಗಿದ್ದಾರೆ.




## ಬಾಲಧನ್ವಿ ಜಗ್ಗು ವಕುಲಭೂಷಣ

*ಎಂ.ಕೆ. ಶ್ರೀಧರ್*

ಸಂಸ್ಕೃತಜ್ಞರಾಗಿ, ಕವಿಗಳಾಗಿ ಖ್ಯಾತಿಗಳಿಸಿರುವ ಶ್ರೀ ಜಗ್ಗುಆಳ್ವಾರ್ ಅಯ್ಯಂಗಾರ್ ಅವರು ಇಪ್ಪತ್ತನೆಯ ಶತಮಾನದ ಸಂಸ್ಕೃತ ಕವಿಗಳಲ್ಲಿ ಅಗ್ರಗಣ್ಯರು. ಅವರು ಬರೆದ 'ಜಯಂತಿಕಾ' ಎಂಬ ಗದ್ಯ ಕಾವ್ಯಕ್ಕೆ ೧೯೭೯ನೇ ವರ್ಷದಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ಮೂವತ್ತು ವರ್ಷಗಳ ಕಾಲ ಮಂಡ್ಯ ಜಿಲ್ಲೆಯ ಮೇಲುಕೋಟೆಯ ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕರಾಗಿ ಕಾರ್ಯನಿರ್ವಹಿಸಿ ಈಗ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ.

'ಜಗ್ಗುವಕುಲ ಭೂಷಣ' ಎಂಬ ಕಾವ್ಯನಾಮದಿಂದ ಪ್ರಖ್ಯಾತಿ ಹೊಂದಿರುವ ಶ್ರೀ ಆಳ್ವಾರ್ ಅಯ್ಯಂಗಾರ್ ಅವರು ೧೯೦೨ರಲ್ಲಿ ಮೇಲುಕೋಟೆಗೆ ಸಮೀಪದಲ್ಲಿರುವ 'ಕೊಡೆಕೊಪ್ಪಲು' ಎಂಬ ಸ್ಥಳದಲ್ಲಿ ಜನ್ಮತಾಳಿದರು. ಇವರ ತಂದೆ ಜಗ್ಗು ತಿರುನಾರಾಯಣ ಅಯ್ಯಂಗಾರ್, ತಾಯಿ ಶಿಂಗಮ್ಮ, ಇವರ ತಾತ ಪ್ರಸಿದ್ಧ ವಿದ್ವಾಂಸರಾದ ಜಗ್ಗು ಶಿಂಗರಾರ್ಯ ಎಂಬುವರು. ಇವರ ವಿದ್ಯಾಗುರುಗಳು 'ಸಾಂಖ್ಯ ತೀರ್ಥ', 'ಸಾಹಿತ್ಯ ರತ್ನ' ಎಂಬ ಬಿರುದುಗಳನ್ನು ಪಡೆದ ಜಗ್ಗು ವೆಂಕಟಾಚಾರ್.

ವಕುಲ ಭೂಷಣರು ಸಂಸ್ಕೃತ ಮತ್ತು ಕನ್ನಡ ಸೇರಿ ಒಟ್ಟು ಎಪ್ಪತ್ತಾರು ಗ್ರಂಥಗಳನ್ನು ರಚಿಸಿದ್ದಾರೆ. ಸಂಸ್ಕೃತದ ಸಾಹಿತ್ಯ ಪ್ರಕಾರಗಳಾದ ಮಹಾಕಾವ್ಯ, ಖಂಡಕಾವ್ಯ, ಗದ್ಯ, ಚಂಪೂ, ಸ್ತೋತ್ರ, ಮುಕ್ತಕಗಳು, ನಾಟಕ ಮುಂತಾದವನ್ನು ರಚಿಸಿದ್ದಾರೆ. ಶ್ರೀಮನ್ನಾಲ್ಮಡಿ ಕೃಷ್ಣರಾಜ ಒಡೆಯರ್ ಅವರು ಈ ಕವಿಗೆ ಚಿನ್ನದ ಪದಕವನ್ನು ಕೊಟ್ಟು 'ವಿದ್ಯಾವಿಶಾರದ' ಎಂಬ ಬಿರುದನ್ನು ನೀಡಿ ಗೌರವಿಸಿದ್ದಾರೆ. ಶ್ರೀ ಜಯಚಾಮರಾಜೇಂದ್ರ

ಒಡೆಯರ್ ಅವರು ಜೋಡಿಶಾಲನ್ನೂ ನಗದನ್ನೂ ನೀಡಿ ಬಹುಮಾನಿಸಿದ್ದಾರೆ. ಕರ್ನಾಟಕ ಸರ್ಕಾರವು 'ರಾಜ್ಯ ಪ್ರಶಸ್ತಿ'ಯನ್ನು ನೀಡಿದೆ. ಕೇಂದ್ರ ಸರ್ಕಾರವು 'ರಾಷ್ಟ್ರಪತಿ ಪ್ರಶಸ್ತಿ'ಯನ್ನು ನೀಡಿ ಗೌರವಿಸಿದೆ.

ಜಗ್ಗುವಕುಲ ಭೂಷಣರು ತಮ್ಮ ಪ್ರಪ್ರಥಮ ಕೃತಿಯಾದ 'ಜಯಂತಿಕಾ' ಸಂಸ್ಕೃತ ಗದ್ಯಕಾವ್ಯವನ್ನು ಬರೆದಾಗ ಅವರಿನ್ನೂ ಹದಿನೆಂಟು ವರ್ಷದ ವಿದ್ಯಾರ್ಥಿಯಾಗಿದ್ದರು. ಇದು ಬಾಣನ 'ಕಾದಂಬರಿ' ಮಾದರಿಯಲ್ಲಿ ರಚಿತವಾಗಿದೆ. ದಂಡಿಯ 'ದಶಕುಮಾರ ಚರಿತಂ' ಮತ್ತು 'ಕಾದಂಬರಿ' ಕಾವ್ಯಗಳಲ್ಲಿ ಬರುವ ಕಥೆಗಳಿಗಿಂತ ಇದು ಸಂಕೀರ್ಣವಾಗಿದೆ. 'ಕಾದಂಬರಿ'ಯಂತೆ ಇಲ್ಲೂ ಸಹ ನಾಯಕ-ನಾಯಕಿಯರ ಪ್ರಣಯ ಎರಡು ಜನ್ಮಗಳಲ್ಲಿ ಮುಂದುವರಿಯುತ್ತದೆ. ಕಥೆಯು ಕಲ್ಪಿತವಾಗಿದ್ದು ಜೀವಸೇನ ಎಂಬ ನಾಯಕನ ಪ್ರೇಯಸಿ ಜಯಂತಿಕೆಯ ಪ್ರಣಯವನ್ನು ಚಿತ್ರಿಸುತ್ತದೆ.

ಶ್ರೀಯುತರು ಬಾಣನನ್ನು ಅನುಕರಿಸಿದ್ದರೂ ವರ್ಣನೆಗಳಲ್ಲಿ ದೀರ್ಘ ಸಮಾಸಗಳಿಲ್ಲ. ಮನುಷ್ಯರನ್ನು, ವನಸಿರಿಯನ್ನು, ಗಿರಿಗಹ್ವರಗಳನ್ನು, ಋತುಗಳನ್ನು, ನದಿ-ಜಲಾಶಯಗಳನ್ನು ವರ್ಣಿಸುವಾಗ ಶ್ಲೇಷೋಪಮೆ, ಶ್ಲೇಷಾರ್ಥ, ಪರಿಸಂಖ್ಯಾ ವಿರೋಧಾಭಾಸ, ಉತ್ಪ್ರೇಕ್ಷೆಗಳ ಸಮಯೋಜಿತ ಬಳಕೆ ಮಾಡಿದ್ದಾರೆ.

ಕಾವ್ಯದ ಮುಖ್ಯರಸ ಶೃಂಗಾರವೇ ಆಗಿದ್ದರೂ ಸೂಕ್ತ ಸ್ಥಳಗಳಲ್ಲಿ ಕರುಣ, ಅದ್ಭುತ, ಭಯಾನಕ, ಬೀಭತ್ಸ ಮುಂತಾದ ಸಹಾಯಕ ರಸಗಳನ್ನು ಉಪಯೋಗಿಸಿದ್ದಾರೆ. ಈ ಗದ್ಯಕಾವ್ಯದಲ್ಲಿ ಸಾಹಸಮಯ ಸನ್ನಿವೇಶಗಳು ವಿಪುಲವಾಗಿವೆ. ಶ್ಮಶಾನದ, ದುರ್ಗಾಮಂದಿರದ ವರ್ಣನೆಗಳು ಓದುಗರಲ್ಲಿ ಭಯಗೊಳಿಸುವ ಮಟ್ಟಿಗೆ ಸಮರ್ಥವಾಗಿವೆ. ವೃದ್ಧಳಾದ ವರಮಾಲಿನಿಯ ವರ್ಣನೆ ಅತ್ಯಂತ ಸೂಕ್ಷ್ಮಯುತವಾಗಿದೆ.

ಜಗ್ಗುವಕುಲ ಭೂಷಣರ ಕಾವ್ಯ ಶೈಲಿ ಸತ್ವಯುತವಾಗಿದೆ, ಗಂಭೀರಯುತವಾಗಿದೆ, ಅಡೆತಡೆ ಇಲ್ಲದೆ ಗಂಗಾನದಿಯಂತೆ ಹರಿಯುತ್ತದೆ. ಬಾಣನ ಶೈಲಿಯಂತೆ ಕಿವಿಗಳಿಗೆ ಆಪ್ಯಾಯಮಾನವಾಗಿದೆ. ನಾದಮಿಶ್ರಿತ ರಸಭಾವಗಳು ಓದುಗರನ್ನು ಸಂಮೋಹನಗೊಳಿಸುತ್ತವೆ. ಕನ್ನಡದಲ್ಲಿ ಬಳಕೆಯಲ್ಲಿರುವ ಹಲವಾರು ಗಾದೆಗಳನ್ನು, ನುಡಿಗಟ್ಟುಗಳನ್ನು ಸಂಸ್ಕೃತಕ್ಕೆ ಅನುವಾದಿಸಿ ಪ್ರಾದೇಶಿಕ ಭಾಷೆಯ ವೈಶಿಷ್ಟ್ಯವನ್ನೂ ಮೆರೆಸಿದ್ದಾರೆ.





## ಕೆರೆಮನೆ ಶಂಭು ಹೆಗಡೆ

*ವಿಶ್ವನಾಥ ಬದಿಕಾನ*

ಬಡಗುತಿಟ್ಟು ಯಕ್ಷಗಾನದ ಹಿರಿಯ ಕಲಾವಿದರಲ್ಲಿ ಶ್ರೀ ಕೆರೆಮನೆ ಶಂಭುಹೆಗಡೆಯವರು ಒಬ್ಬರು. ಇವರು ಯಕ್ಷಗಾನ ಪರಂಪರೆಯಲ್ಲಿ ಜನಿಸಿದವರು. ಇವರ ತಂದೆಯ ಹೆಸರು ಶ್ರೀ ಕೆರೆಮನೆ ಶಿವರಾಮ ಹೆಗಡೆ, ಅಜ್ಜನ ಹೆಸರು ಶಂಭುಹೆಗಡೆ. ಶಿವರಾಮ ಹೆಗಡೆಯವರು ಬಡಗುತಿಟ್ಟು ಯಕ್ಷಗಾನ ಪರಂಪರೆಯಲ್ಲಿ ಒಬ್ಬ ಶ್ರೇಷ್ಠ ಕಲಾವಿದ. ಇವರಿಗೆ ಇಬ್ಬರು ಮಕ್ಕಳು. ಒಬ್ಬರು 'ಯಕ್ಷಗಾನ ಲೋಕದ ಸುಂದರಿ' ಎಂದೇ ಹೆಸರಾದ ಕರಾವಳಿಯ ಸುಪ್ರಸಿದ್ಧ ಕಲಾವಿದ ದಿ. ಗಜಾನನ ಹೆಗಡೆ. ಇನ್ನೊಬ್ಬರು ಅಂತಾರಾಷ್ಟ್ರೀಯ ಖ್ಯಾತಿ ಗಳಿಸಿದ ಕಲಾವಿದ ಶಂಭು ಹೆಗಡೆ. ಮತ್ತು ರಾಷ್ಟ್ರ ಪ್ರಶಸ್ತಿ ಗಳಿಸಿದ ಮಹಾಬಲಹೆಗಡೆ ಶಿವರಾಮ ಹೆಗಡೆಯ ಅಣ್ಣನ ಮಗ. ಹೀಗೆ ಯಕ್ಷಗಾನ ಕಲಾವಿದ ಕುಟುಂಬವೊಂದರ ರಂಗ ಪ್ರತಿಭೆಯನ್ನು ಮೈಗೂಡಿಸಿಕೊಂಡ ಶಂಭುಹೆಗಡೆಯವರು, ಮೇಳದ ಕಲಾವಿದರಾಗಿ, ಸಂಚಾಲಕರಾಗಿ- ಸಮರ್ಥರು ಎಂಬ ಮನ್ನಣೆಗೆ ಪಾತ್ರರಾದವರು. ಹಾಗೂ ಬಡಗುತಿಟ್ಟು ಯಕ್ಷಗಾನ ಪ್ರತಿಭೆಯನ್ನು ಅಂತಾರಾಷ್ಟ್ರೀಯ ವೇದಿಕೆಯಲ್ಲಿ ಪ್ರದರ್ಶಿಸಿ ಯಕ್ಷಗಾನ ಲೋಕವನ್ನು ವಿಶ್ವವಿಖ್ಯಾತ ಮಾಡಿದವರು. ಖ್ಯಾತ ನೃತ್ಯಕಲಾವಿದೆ ಮಾಯಾರಾವ್ ಅವರ ಶಿಷ್ಯರಾಗಿ ಕೋರಿಯೋಗ್ರಫಿ ಶಿಕ್ಷಣ ಪಡೆದವರು.

೧೯೩೪ರಲ್ಲಿ 'ಶ್ರೀ ಇಡಗುಂಜಿ ಮಹಾಗಣಪತಿ ಪ್ರಸಾದಿತಾ ಯಕ್ಷಗಾನ ಮಂಡಳಿ'ಯು ಸ್ಥಾಪನೆಯಾಯಿತು. ಈ ಮೇಳದ ಸ್ಥಾಪಕರು ಶ್ರೀಕೆರೆಮನೆ ಶಿವರಾಮ ಹೆಗಡೆಯವರು. ಆ ಸಂದರ್ಭದಲ್ಲಿ ಕರಾವಳಿ ಕರ್ನಾಟಕದ ೮೭ ಮೇಳಗಳಲ್ಲಿ ಇದು

ಒಂದು ಪ್ರಮುಖ ಮೇಳವೆಂದು ಕರೆಸಿಕೊಂಡಿತ್ತು. ಮುಂದೆ ಸುಮಾರು ಐದು ದಶಕಗಳ ಕಾಲ ನಾಡಿನಾದ್ಯಂತ ದಿಗ್ವಿಜಯ ಸಾಧಿಸಿತು. ಆದರೆ ಇದು ಸ್ಥಾಪನೆಯಾಗಿ ಹಲವು ವರ್ಷಗಳವರೆಗೆ ಪೂರ್ಣ ಅವಧಿಯ ಮೇಳವಾಗಿರಲಿಲ್ಲ. ನಂತರ ಶಂಭುಹೆಗಡೆಯವರ ಸಂಚಾಲಕತ್ವದಲ್ಲಿ ಸುಸಜ್ಜಿತ ಪೂರ್ಣ ಅವಧಿ ಮೇಳವಾಗಿ ಪ್ರಸಿದ್ಧಿ ಪಡೆಯಿತು. ಈ ಮೇಳವು ಸಂಪ್ರದಾಯನಿಷ್ಠವಾಗಿದ್ದು ಸುಸಂಬದ್ಧವಾದ ಸುಧಾರಣೆಯೊಂದಿಗೆ ಮೇಲುಮಟ್ಟದ ಪ್ರೇಕ್ಷಕರಲ್ಲಿ ತುಂಬ ಜನಪ್ರಿಯವಾಯಿತು. ಒಳ್ಳೆಯ ಪ್ರೇಕ್ಷಕ ವರ್ಗವನ್ನು ಕಟ್ಟಿದ ಈ ಮೇಳ ಯಕ್ಷಗಾನಕ್ಕೆ ಹೊಸ ತಿರುವನ್ನು ಕಲ್ಪಿಸಿತು. ರಂಗಸ್ಥಳ ಮತ್ತು ತೆರೆ ಸುಧಾರಿತ ಅರ್ಧಚಂದ್ರಾಕೃತಿಯವಾಗಿದ್ದವು. ದೀಪದ ವ್ಯವಸ್ಥೆ ಮತ್ತು ಬಣ್ಣದ ಮನೆ ವ್ಯವಸ್ಥೆಯಲ್ಲಿ ಅಚ್ಚುಕಟ್ಟು ತರಲು ಶಂಭುಹೆಗಡೆಯವರು ಪ್ರಯತ್ನಿಸಿದರು. ಇದರಿಂದಾಗಿ ಯಕ್ಷಗಾನ ಕಲಾವಿದರಿಗೆ ಮೇಲುಮಟ್ಟದ ಗೌರವ ಸಲ್ಲು ವಂತೆ ಮಾಡಿತು. ದೂರದರ್ಶನದಲ್ಲಿ ಪ್ರದರ್ಶನಗೊಳ್ಳುವುದಕ್ಕೆ ಪ್ರಾರಂಭವಾಯಿತು. ಈ ಎಲ್ಲಾ ಬದಲಾವಣೆಗಳು ಕಲಾವಿದನ ಬದುಕಿಗೆ ಗಂಭೀರ ಚೌಕಟ್ಟನ್ನು ನಿರ್ಮಿಸಿತು. ಹೀಗೆ ಯಕ್ಷಲೋಕಕ್ಕೆ ಶಂಭುಹೆಗಡೆಯವರು ಕೊಟ್ಟ ಕೊಡುಗೆ ಅಪಾರ.

ಶಂಭುಹೆಗಡೆಯವರು ಮೇಳದ ಸಂಚಾಲಕರಾಗಿ ಹಲವು ಸಮಸ್ಯೆಗಳನ್ನು ಎದುರಿಸಬೇಕಾಯಿತು. ಆದರೆ ರಂಗಕ್ಕಿಳಿದಾಗ ಅವೆಲ್ಲವನ್ನೂ ಮರೆತು ರಂಗಪ್ರವೇಶ ದೊಡನೆ ತನ್ಮಯತೆಯಿಂದ ಅಭಿನಯಿಸಿ ಪೂರ್ಣನ್ಯಾಯ ಒದಗಿಸುತ್ತಿದ್ದರು. ಈಶ್ವರ. ಕೃಷ್ಣ, ದುಷ್ಟಬುದ್ಧಿ, ಕರ್ಣ. ಹರಿಶ್ಚಂದ್ರ, ಕೀಚಕ, ವಿಶ್ವಾಮಿತ್ರ, ಜರಾಸಂಧ- ಮುಂತಾಗಿ ಯಾವುದೇ ಪಾತ್ರಗಳನ್ನು ರಸೋಚಿತವಾಗಿ ಮನಮುಟ್ಟುವಂತೆ ಅಭಿನಯಿಸಬಲ್ಲ ಪ್ರತಿಭಾವಂತ ಕಲಾವಿದ. ಇವರ ನೃತ್ಯಾಭಿನಯಕ್ಕೆ ತಂದೆಯ ಬಳುವಳಿಯಿದೆ.

ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಲ್ಲಿ ಯಕ್ಷಗಾನ ಕೇಂದ್ರವೊಂದನ್ನು ತೆರೆದು ಅದರ ನಿರ್ದೇಶಕರಾದರು. ಇಬೀಗ ೧೯೯೩ನೆಯ ಸಾಲಿನ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿಗೆ ಆಯ್ಕೆಯಾದ ಮೂವತ್ತು ಮಂದಿ ಮಹಾನ್ ಕಲಾವಿದರಲ್ಲಿ ಶ್ರೀ ಕೆರೆಮನೆ ಶಂಭುಹೆಗಡೆಯವರು ಒಬ್ಬರಾಗಿದ್ದಾರೆ.



## ರಾಜ್ಯೋತ್ಸವ ಪ್ರಶಸ್ತಿ

*ಎ.ಆರ್. ಪ್ರಕಾಶ್*

ಕನ್ನಡ ಸಾಹಿತ್ಯ, ಶಿಕ್ಷಣ, ಕಲೆ, ನಾಟಕ, ಕ್ರೀಡೆ, ವಿಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ ಕರ್ನಾಟಕ ಸರ್ಕಾರದ ಪರವಾಗಿ ರಾಜ್ಯ ಪ್ರಶಸ್ತಿ ನೀಡುವ ಪರಿಪಾಠ ೧೯೬೬ರಿಂದಲೂ ನಡೆದುಬಂದಿದೆ. ಮೊದಲ ಬಾರಿ ೧೯೬೬ರಲ್ಲಿ ಹತ್ತು ಮಂದಿಗೆ ಈ ಪ್ರಶಸ್ತಿ ನೀಡಲಾಗಿತ್ತು. ೧೯೯೨ರಲ್ಲಿ ಸರ್ಕಾರ ೧೭೫ ಮಂದಿಗೆ ಪ್ರಶಸ್ತಿ ನೀಡಿ ತೀವ್ರ ಟೀಕೆಗೂ ಗುರಿಯಾಗಿತ್ತು.

ಈ ಹಿನ್ನೆಲೆಯಲ್ಲಿ ೧೯೯೩ನೇ ವರ್ಷದ ರಾಜ್ಯೋತ್ಸವ ಪ್ರಶಸ್ತಿ ವಿಜೇತರ ಆಯ್ಕೆ ಮಾಡುವ ಸಲುವಾಗಿ ಡಾ. ಶಿವರಾಮಕಾರಂತರ ನೇತೃತ್ವದಲ್ಲಿ ಪರಿಣತರ ಸಮಿತಿಯನ್ನು ನೇಮಿಸಲಾಗಿತ್ತು. ಶಿಕ್ಷಣ ತಜ್ಞ ಡಾ. ಎಚ್. ನರಸಿಂಹಯ್ಯ, ನಿವೃತ್ತ ಅಧಿಕಾರಿ ಶ್ರೀ ಕೋಟಿ, ಸಂಗೀತ ವಿದ್ವಾಂಸ ಶ್ರೀ ತಿಟ್ಟೆಕೃಷ್ಣ ಅಯ್ಯಂಗಾರ್ ಮತ್ತು ಶಾಸಕ ಶ್ರೀ ಇದಿನಬ್ಬ ಇವರುಗಳು ಆಯ್ಕೆ ಸಮಿತಿಯಲ್ಲಿದ್ದರು. ಇದಕ್ಕೆ ಮುಂಚೆ ಮುಖ್ಯಮಂತ್ರಿ ಅವರ ಅಧ್ಯಕ್ಷತೆಯ ಸಂಪುಟ ಉಪ ಸಮಿತಿ ರಾಜ್ಯಪ್ರಶಸ್ತಿ ವಿಜೇತರನ್ನು ಆಯ್ಕೆಮಾಡುತ್ತಿತ್ತು.

೧೯೭೭ರಲ್ಲಿ ಜನತಾಪಕ್ಷ ಅಧಿಕಾರದಲ್ಲಿದ್ದಾಗ ೩ ವರ್ಷ ರಾಜ್ಯದಲ್ಲಿ ರಾಜ್ಯೋತ್ಸವ ಪ್ರಶಸ್ತಿ ನೀಡಿಕೆಯನ್ನು ನಿಲ್ಲಿಸಲಾಗಿತ್ತು. ಈ ವರ್ಷವೂ ಸೇರಿ ಇದುವರೆಗೆ ೮೪೧ ಮಂದಿಗೆ ಪ್ರಶಸ್ತಿ ನೀಡಲಾಗಿದೆ.

ಕರ್ನಾಟಕ ರಾಜ್ಯ ಉದಯವಾಗಿ ೩೭ವರ್ಷ ಆಗಲಿದ್ದು ೧೯೯೩ನೇ ಸಾಲಿನಲ್ಲಿ ೩೭ ಜನರಿಗೆ ಪ್ರಶಸ್ತಿ ನೀಡಬೇಕೆಂದು ಸರ್ಕಾರದ ಆಶಯವಾಗಿದ್ದರೂ ಆಯ್ಕೆ ಸಮಿತಿ ಮಾತ್ರ ೩೬ ಗಣ್ಯರನ್ನು ಆಯ್ಕೆ ಮಾಡಿದೆ. ರಾಜ್ಯದ ವಿವಿಧ ಕ್ಷೇತ್ರದಲ್ಲಿ ಗಣನೀಯ ಸೇವೆಸಲ್ಲಿಸಿ ಈ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಪಡೆದವರ ವಿವರ ಈ ಕೆಳಕಂಡಂತಿದೆ.

*ಸಾಹಿತ್ಯ:* ಸನ್ಮಾನ್ಯರಾದ ಗೌರೀಶ ಕಾಯ್ಕಿಣಿ, ಶಾಂತಿನಾಥ ದೇಸಾಯಿ, ಶ್ರೀನಿವಾಸ ಹಾವನೂರು, ಬಿ.ಆರ್. ನಾರಾಯಣ.

*ಶಿಕ್ಷಣ:* ಸನ್ಮಾನ್ಯರಾದ ಎಂ. ಷಡಕ್ಷರ ಸ್ವಾಮಿ, ಎಸ್. ರಾಮೇಗೌಡ.

*ಸಂಗೀತ:* ಸನ್ಮಾನ್ಯರಾದ ಆರ್.ಆರ್. ಕೇಶವಮೂರ್ತಿ, ಎಚ್.ಟಿ. ನಾಗಣ್ಣ,

ಎಂ.ಎಸ್. ರಾಮಯ್ಯ, ಯು.ಎಸ್. ಕೃಷ್ಣರಾವ್, ಜಯಲಕ್ಷ್ಮಿ ಆಳ್ವ, ಗಣಪತಿಭಟ್ಟ ಹಾಸಣಗಿ, ಕಾಳು ಶೇರಿಗಾರ್.

*ಲಲಿತಕಲೆ:* ಸನ್ಮಾನ್ಯರಾದ ಎಸ್.ಜಿ. ವಾಸುದೇವರಾವ್, ಡಿ. ಪಿ. ನಾರಾಯಣಭಟ್ಟ.

*ನಾಟಕ:* ಶ್ರೀ ಸಿಂಧುವಳ್ಳಿ ಅನಂತಮೂರ್ತಿ.

*ಸಂಸ್ಕೃತ:* ಸನ್ಮಾನ್ಯರಾದ ರಾಮಚಂದ್ರಶಾಸ್ತ್ರಿಸೂರಿ, ಎಸ್. ರಂಗನಾಥಶರ್ಮ.

*ಜನಪದ ಮತ್ತು ಯಕ್ಷಗಾನ:* ಸನ್ಮಾನ್ಯರಾದ ಬಿ.ಆರ್. ದೇವೇಂದ್ರಪ್ಪ, ಫಕೀರಪ್ಪ ಹುಡಿಸಾಗರ, ಕಡತೋಕ ಮಂಜುನಾಥ ಭಾಗವತ, ಪೆರ್ಲ ಕೃಷ್ಣಭಟ್ಟ, ಶರಣಪ್ಪ ಭೂತೇರ.

*ಪತ್ರಿಕೋದ್ಯಮ:* ಸನ್ಮಾನ್ಯರಾದ ಇ.ಆರ್. ಸೇತೂರಾಮ್, ನರಸಿಂಹರಾವ್

*ವಿಜ್ಞಾನ:* ಸನ್ಮಾನ್ಯರಾದ ಎಚ್. ಶರತ್‌ಚಂದ್ರ, ಎಸ್.ಎಸ್. ಕಟಗೀಹಳ್ಳಿ ಮಠ.

*ಸಮಾಜಸೇವೆ:* ಸನ್ಮಾನ್ಯರಾದ ಮಲ್ಲಪ್ಪ, ಪಿ.ವಿ. ದೀನದಯಾಳು ನಾಯ್ಡು

*ಕ್ರೀಡೆ:* ಶ್ರೀ ಸಿ. ಎಚ್. ಪೂಣಚ್ಚ

*ಕೊಂಕಣಿ ಜಾನಪದ ಸಂಗೀತ:* ಶ್ರೀ ಎರಕ್ ಓಜಾರಿಯೋ

*ವೈದ್ಯಕೀಯ:* ಸನ್ಮಾನ್ಯರಾದ ಡಾ. ವಿ.ಎಸ್. ಮೆಟಗುಡ್, ಮೆಹಬೂಬ ಖಾನ್

*ಗ್ರಂಥಾಲಯ:* ಶ್ರೀ ಕೆ.ಎಸ್. ದೇಶಪಾಂಡೆ

*ಗಮಕ:* ಶ್ರೀ ಬಿ.ಎಸ್.ಎಸ್. ಕೌಶಿಕ್

*ಚಲನಚಿತ್ರ:* ಶ್ರೀ ಆರ್. ಎನ್.ಜಯಗೋಪಾಲ್



# ಕರ್ನಾಟಕ ಸಾಹಿತ್ಯ ಅಕಾಡೆಮಿ

## ೧೯೯೩ರ ಸಾಲಿನ ಬಹುಮಾನ ಪಡೆದ ಕೃತಿಗಳು

**ಅತ್ಯುತ್ತಮ ಸೃಜನ ಪ್ರಧಾನ ಕೃತಿ**

| | |
|---|---|
| 'ತಂತು' | ಎಸ್.ಎಲ್.ಭೈರಪ್ಪ |

**ಅತ್ಯುತ್ತಮ ಚಿಂತನ ಪ್ರಧಾನ ಕೃತಿ**

| | |
|---|---|
| 'ಉರಿಯನಾಲಗೆ' | ಕೀರ್ತಿನಾಥ ಕುರ್ತಕೋಟಿ |

**ಅನುವಾದಿತ ಕೃತಿ (ವಿಶೇಷ ಪುಸ್ತಕ ಬಹುಮಾನ)**

| | |
|---|---|
| 'ದಿ ಬುದ್ಧ ಸ್ಮೈಲ್' | ಶ್ರೀನಿವಾಸರಾವ್<br>ಸುಮತೀಂದ್ರ ನಾಡಿಗ |
| ನಿರಿಂದ್ರಯ (ಕಾದಂಬರಿ) | ಕುಸುಮಾಕರ ದೇವರ ಗೆಣ್ಣೂರ |
| ಅವಳಿದೆಯ ಜಂಗಮ(ಕಾವ್ಯ) | ಎಸ್.ಜಿ.ಸಿದ್ಧರಾಮಯ್ಯ |
| ಶಿಶುಕಂಡ ಕನಸು (ಸಣ್ಣಕತೆ) | ಬಿದರಹಳ್ಳಿ ನರಸಿಂಹಮೂರ್ತಿ |
| ಇಂಗ್ಲೆಂಡಿನಲ್ಲಿ ಅಲೆಮಾರಿ (ಪ್ರವಾಸ ಸಾಹಿತ್ಯ) | ಎಸ್.ರಾಮಸ್ವಾಮಿ |
| ಏಕಾಂತ ಮತ್ತು ಇತರ ಪ್ರಬಂಧಗಳು (ಲಲಿತ ಪ್ರಬಂಧ) | ಎಚ್.ಜಿ.ಸಣ್ಣಗುಡ್ಡಯ್ಯ |
| ಕನ್ನಡ ಹಸ್ತಪ್ರತಿ ಶಾಸ್ತ್ರ (ಸಂಶೋಧನೆ) | ಎಂ.ಎಂ. ಕಲಬುರ್ಗಿ |
| ಲಕ್ಷ್ಮೀಶನ ಜೈಮಿನಿ ಭಾರತ(ಗ್ರಂಥಸಂಪಾದನೆ) | ಬಿ.ಎಸ್. ಸಣ್ಣಯ್ಯ<br>ರಾಮೇಗೌಡ |
| ಪ್ರತಿ ಸಂಸ್ಕೃತಿ (ಸಾಹಿತ್ಯ ವಿಮರ್ಶೆ) | ರಹಮತ್ ತರೀಕೆರೆ |
| ವೈದ್ಯಲೋಕದ ಕೌತುಕಗಳು(ವಿಜ್ಞಾನ ಸಾಹಿತ್ಯ) | ಡಾ.ಎಚ್.ಡಿ. ಚಂದ್ರಪ್ಪಗೌಡ |
| ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ (ಭಾಷಾಶಾಸ್ತ್ರ) | ಎಂ.ಎಚ್.ಕೃಷ್ಣಯ್ಯ |
| ಹಗರಣ (ವಿನೋದ ಸಾಹಿತ್ಯ) | ಅನಂತ ಕಲ್ಲೋಳ |

| | |
|---|---|
| ಬೆಳಕಿನಲ್ಲೊಂದು ಕಿರಣ ಮೇರಿಕ್ಯೂರಿ (ಜೀವನ ಚರಿತ್ರೆ) | ನೇಮಿಚಂದ್ರ |
| ನವಮಾನವತಾವಾದ (ಮಾನವಿಕ) | ಗಿರೀಶ ಕಾಯ್ಕಿಣಿ |
| ಸಂಸ್ಕೃತಿ ಮತ್ತು ಶಂಬಾ (ಮಾನವಿಕ) | ಮಲ್ಲೇಪುರಂ ಜಿ.ವೆಂಕಟೇಶ |
| ಸರಳ ವಿಜ್ಞಾನ ಪ್ರಯೋಗ (ಮಕ್ಕಳ ಸಾಹಿತ್ಯ) | ಡಿ.ಆರ್.ಬಳೂರಗಿ |
| ಕಾಡಿನ ಕತೆಗಳು (ಅನುವಾದ) | ಕೆ. ಪಿ. ಪೂರ್ಣಚಂದ್ರ ತೇಜಸ್ವಿ |
| ಸ್ಯಾಫೋಕಾವ್ಯ (ಅನುವಾದ) | ಕೆ.ಎಸ್. ವಿಜಯಲಕ್ಷ್ಮಿ |
| ಮೇಘನಾದ ಸಹಾ (ಅನುವಾದ) | ಜೆ.ಆರ್.ಲಕ್ಷ್ಮಣರಾವ್ |
| ಒಂದು ಸೈನಿಕ ವೃತ್ತಾಂತ (ನಾಟಕ) | ಎಚ್.ಎಸ್.ವೆಂಕಟೇಶಮೂರ್ತಿ |
| ಅಂತರಂಗ ಬಹಿರಂಗ (ಸಂಕೀರ್ಣ) | ಸಂತೋಷಕುಮಾರ ಗುಲ್ವಾಡಿ |
| ತುಟ್ಲಿಲಿಂಕಾಳ್ಜಾಂ (ಕೊಂಕಣಿ) | ಗ್ಲೇಡಿಗ್ ರೇಗೊ |

**ಲೇಖಕರ ಪ್ರಥಮ ಪುಸ್ತಕಕ್ಕೆ ಬಹುಮಾನ**

| | |
|---|---|
| ಸೃಜನ ಪ್ರಧಾನ ಕೃತಿ 'ಮತ್ತೊಬ್ಬ ಸರ್ವಾಧಿಕಾರಿ' | ನಟರಾಜ್ ಹುಳಿಯಾರ್ |
| ಚಿಂತನ ಪ್ರಧಾನ ಕೃತಿ 'ನಾಟಕ ಪ್ರವೇಶಿಕ' | ಎ.ಆರ್.ನಾಗಭೂಷಣ |

**೧೯೯೩ ರ ಗೌರವ ಪ್ರಶಸ್ತಿ ಪಡೆದ ಲೇಖಕರು**

೧. ಡಾ. ಕೆ. ವಿ. ತಿರುಮಲೇಶ್

೨. ನಾ. ಡಿಸೋಜ

೩. ಕೆ. ವೀರಭದ್ರ

೪. ಪ್ರೊ. ಕ. ವೆಂ. ರಾಜಗೋಪಾಲ

೫. ದು. ನಿಂ. ಬೆಳಗಲಿ

## ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ

### ೧೯೯೩ರ ಪ್ರಶಸ್ತಿ ವಿಜೇತರು

#### ಜಾನಪದ ತಜ್ಞ ಪ್ರಶಸ್ತಿ

ಡಾ. ಎಂ. ಚಿದಾನಂದಮೂರ್ತಿ

ಶ್ರೀ ಟಿ. ಆರ್. ತಿಪ್ಪೇಸ್ವಾಮಿ

ಡಾ.ಎನ್.ಆರ್.ನಾಯಕ್

#### ಜನಪದ ಕಲಾವಿದ ಪ್ರಶಸ್ತಿ

| | |
|---|---|
| ಶ್ರೀ ಅಪ್ಪಯ್ಯ ಗುರುಪಾದಯ್ಯ ಗುಡ್ಡದಮಠ | ಶ್ರೀಮತಿ ಯಮುನವ್ವ ಸತ್ಯವ್ವ ಮಾದರ |
| ಶ್ರೀ ಕಿಷ್ಟಯ್ಯ ಭೀಮಯ್ಯದಾಸರ | ಶ್ರೀಮತಿ ರತ್ನಮ್ಮ |
| ಶ್ರೀ ಕೆಂಪರಾಮಯ್ಯ | ಶ್ರೀ ರಾಜೇಗೌಡರ ಸಿಂಗೇಗೌಡ |
| ಶ್ರೀ ಗೋಪಾಲ ನ್ಯಾಕ | ಶ್ರೀ ರಾಮಯ್ಯ ಕುಸುನಯ್ಯ ದಾಸರ |
| ಶ್ರೀ ಕೆ.ಚೆಂಗಪ್ಪ ಚಿನ್ನಹಳ್ಳಿ | ಶ್ರೀಮತಿ ವಾಗೀಶ್ವರೀ ಶಾಸ್ತ್ರಿ |
| ಶ್ರೀ ಎಸ್. ಜಾನೋಜಿ ರಾವ್ | ಶ್ರೀ ವಿಠಲದಾಸ ಅಂಬಾದಾಸ ಜಿತ್ತೂರಿ |
| ಭಾಗವತ ಎಚ್.ಸಿ.ತಮ್ಮಣ್ಣಾಚಾರ್ | ಶ್ರೀ ಶ್ರೀಶೈಲ ಈರಪ್ಪ ಬಹುರೂಪಿ |
| ಶ್ರೀ ಪಾಲಂದಿರ ಪಿ.ದೇವಯ್ಯ | ಶ್ರೀ ಸದಾನಂದ ನಾರಾಯಣ ಮಹಾಲೆ |
| ಶ್ರೀ ಎನ್.ಎಸ್.ನಾರಾಯಣ ಮೂರ್ತಿ | ಶ್ರೀ ಸಣ್ಣ ನರಸಿಂಹಪ್ಪ |
| ಶ್ರೀ ಬಿ. ಶೀನಪ್ಪ ಭಂಡಾರಿ | ಶ್ರೀ ಕೋಲಾಟದ ಸಿರಿಯಪ್ಪ |
| ಶ್ರೀ ಬಸಪ್ಪ ಭಕ್ತನಕಟ್ಟೆ | ಶ್ರೀಮತಿ ಸೋಬಾನೆ ಹೊನ್ನಮ್ಮ |

# ಕರ್ನಾಟಕ ಜಾನಪದ ಪರಿಷತ್ತು

ಕರ್ನಾಟಕ ಜಾನಪದ ಪರಿಷತ್ತು ೧೯೭೯ರಲ್ಲಿ ಸ್ಥಾಪನೆಯಾಯಿತು. ಆಧುನಿಕತೆಯ ಪ್ರವಾಹದಲ್ಲಿ ಸ್ಥಿತ್ಯಂತರಗೊಳ್ಳುತ್ತಿರುವ ಗ್ರಾಮೀಣ ಸಂಸ್ಕೃತಿಯ ಪುನರುಜ್ಜೀವನ, ಪೋಷಣೆ ಮತ್ತು ಪ್ರಸಾರ ಪರಿಷತ್ತಿನ ಧ್ಯೇಯೋದ್ದೇಶಗಳು. ಜನಪದ ಗೀತೆಗಳು, ಗ್ರಾಮೀಣರ ಬದುಕು, ಹಬ್ಬ-ಹರಿದಿನಗಳು, ನೃತ್ಯ-ನಾಟಕಗಳು, ವಿಗ್ರಹ -ಗೊಂಬೆ -ಚಿತ್ತಾರಗಳ ಧ್ವನಿ ಮುದ್ರಿಕೆಗಳನ್ನು, ವಿಡಿಯೋ ಕ್ಯಾಸೆಟ್ಟುಗಳನ್ನು, ಸ್ಲೈಡ್ಸ್ ಮತ್ತು ಸಾಕ್ಷ್ಯ ಚಿತ್ರಗಳನ್ನು ಸಂಗ್ರಹಿಸಿ ಒಂದು ಭಂಡಾರವನ್ನು ಸ್ಥಾಪಿಸಿದೆ. ಜೊತೆಗೆ ಪರಿಷತ್ತು ಜನಪದ ಸಾಹಿತ್ಯ ಹಾಗೂ ಕಲೆಗಳ ಅಧ್ಯಯನಕ್ಕೆ ಮೀಸಲಾದ 'ಜಾನಪದ ಜಗತ್ತು' ಎಂಬ ಪತ್ರಿಕೆಯನ್ನು ಪ್ರಕಟಿಸುತ್ತಿದೆ. ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ರಾಮನಗರದ ಬಳಿ ೧೫ ಎಕರೆ ಪ್ರದೇಶದಲ್ಲಿ ಗ್ರಾಮೀಣರ ಮಧ್ಯೆ 'ಜಾನಪದ ಲೋಕ' ಎಂಬ ಸಾಂಸ್ಕೃತಿಕ ಕೇಂದ್ರವೊಂದನ್ನು ಕಳೆದ ಆರು ವರ್ಷಗಳಿಂದ ನಿರ್ಮಿಸಲಾಗುತ್ತಿದೆ. ಇದರಲ್ಲಿ 'ಲೋಕ ಮಹಲ್', 'ಲೋಕ ಮಾತಾ ಮಂದಿರ', 'ಲೋಕ ಕುಟೀರ' ಮತ್ತು 'ಲೋಕಶಿಲ್ಪ ಮಾಳ' ಎಂಬ ನಾಲ್ಕು ವಸ್ತುಸಂಗ್ರಹಾಲಯಗಳಿವೆ.

ಗಾಳಿಪಟ ಹಾರಿಸುವುದು ಒಂದು ಜಾನಪದ ಕ್ರೀಡೆ. ಜಾನಪದ ಪರಿಷತ್ತು ಕಳೆದ ಹಲವಾರು ವರ್ಷಗಳಿಂದ ಈ ಉತ್ಸವವನ್ನು ನಡೆಸಿಕೊಂಡು ಬಂದಿದೆ. ಈ ಸಲವೂ ಗಾಳಿಪಟ ಸ್ಪರ್ಧೆಯನ್ನು ಜುಲೈ ೨೫ ರಂದು ಬೆಂಗಳೂರಿನಲ್ಲಿ ಏರ್ಪಡಿಸಿತ್ತು. ಗಾಳಿಪಟ ಉತ್ಸವವನ್ನು ಜನಪ್ರಿಯಗೊಳಿಸಲು ಮತ್ತು ಯುವಕರಲ್ಲಿ ಅದರ ಬಗ್ಗೆ ಆಸಕ್ತಿ ಹುಟ್ಟಿಸಲು ಇಂತಹ ಸ್ಪರ್ಧೆಗಳು ಅನಿವಾರ್ಯ ಎಂದು ಪರಿಷತ್ತಿನ ಅಧ್ಯಕ್ಷ ಶ್ರೀಎಚ್.ಎಲ್. ನಾಗೇಗೌಡರು ಹೇಳಿದರು.

'ಜಾನಪದ ಲೋಕ'ದಲ್ಲಿ ಅಕ್ಟೋಬರ್ ೯ ರಂದು ನೆಲಚಿತ್ತಾರ (ರಂಗೋಲಿ), ಗೋಡೆ ಚಿತ್ತಾರ, ಗೂಡು ಚಿತ್ತಾರ, ಮಡಿಕೆ ಚಿತ್ರಗಳ ಸ್ಪರ್ಧೆಯನ್ನು ಏರ್ಪಡಿಸಿತ್ತು. ಈ ಸ್ಪರ್ಧೆಯಲ್ಲಿ ರಾಜ್ಯದ ಎಲ್ಲ ವಯಸ್ಸಿನ ಗ್ರಾಮಾಂತರ ಹಾಗೂ ನಗರ ಪ್ರದೇಶದ ಮಹಿಳೆಯರು ಪಾಲ್ಗೊಂಡು ರಂಗೋಲಿಗಳನ್ನು ಬಿಡಿಸಿದರು.

# ಕರ್ನಾಟಕ ನಾಟಕ ಅಕಾಡೆಮಿ

## ೧೯೯೩ನೇ ಸಾಲಿನ ಪ್ರಶಸ್ತಿ

**ಫೆಲೋಶಿಪ್**

ಗೊ. ರು. ಚೆನ್ನಬಸಪ್ಪ: ಬೆಂಗಳೂರು
ಗಿರಡ್ಡಿ ಗೋವಿಂದರಾಜ: ಧಾರವಾಡ
ಶಾಂತರಸ: ರಾಯಚೂರು
ಕೆ. ಎಸ್. ನಿಸಾರ್ ಅಹಮದ್ :ಬೆಂಗಳೂರು

**ಪ್ರಶಸ್ತಿ :ಹೊರರಾಜ್ಯ**

ಎಂ. ವಿ. ನಾರಾಯಣರಾವ್:ದೆಹಲಿ
ಕೆ. ಜೆ. ರಾವ್, ನಟ: ಮುಂಬಯಿ
ವಿ. ಸುಬ್ಬರಾವ್: ಕಲ್ಕತ್ತ

**ಪ್ರಶಸ್ತಿ**

ಬಾಬಣ್ಣ ಹಾವೇರಿ:ವೃತ್ತಿನಟ:ಬಿಜಾಪುರ
ಎಲ್ಲಪ್ಪ ಕಾಕನೂರ:ವೃತ್ತಿನಟ:ಬಿಜಾಪುರ
ಪ್ರಮಿಳಾ ಇಟ್ಟಿಗಿ ಗುಡೂರು:ವೃತ್ತಿನಟಿ:ಬಿಜಾಪುರ
ಯೋಗೇಂದ್ರ ಸಿಂಗ್:ಪ್ರಕಾಶನ:ಬಿಜಾಪುರ
ಕೊಟ್ರೇಶ್ ಗೋಕಾಕ್:ವೃತ್ತಿನಟ:ಬೆಳಗಾಂ
ಜಿ. ಎಸ್. ರಾಘವೇಂದ್ರ:ನಾಟಕಕಾರ:ಧಾರವಾಡ
ನಾರಂಗಯ್ಯ ಸ್ವಾಮಿ ಸಾರಂಗಮಠ: ವೃತ್ತಿನಟ:ಧಾರವಾಡ
ಸಂಕಣ್ಣ ಡಂಬಳ:ವೃತ್ತಿನಟ:ಧಾರವಾಡ
ಶಿವಶಂಕರ ಬ್ಯಾಳ:ವೃತ್ತಿನಾಟಕಕಾರ:ಧಾರವಾಡ
ಅಪ್ಪುರಾಜ್ ಮುಧೋಳ್:ವೃತ್ತಿನಟ:ಧಾರವಾಡ
ಸುಮಿತ್ರಮ್ಮ ಕೌಲಿಲ:ವೃತ್ತಿನಟಿ:ಧಾರವಾಡ
ಥೆರಸಮ್ಮ ಮೈಸೂರು:ವೃತ್ತಿನಟಿ:ಧಾರವಾಡ
ಶ್ರೀಧರರಾವ್:ಹವ್ಯಾಸಿ ನಟ: ಗುಲಬರ್ಗಾ
ಬಾಬಣ್ಣ ಕಲ್ಮನೆ: ವೃತ್ತಿನಟ :ರಾಯಚೂರು
ಜಯಲಕ್ಷ್ಮಿ ಪಾಟೀಲ :ವೃತ್ತಿನಟಿ:ರಾಯಚೂರು
ಶಿರಗುಂಬಿ ರುದ್ರಪ್ಪ : ವೃತ್ತಿನಟ:ಚಿತ್ರದುರ್ಗ
ಮನೋರಮ :ವೃತ್ತಿನಟಿ:ತುಮಕೂರು
ಶಾಮಮೂರ್ತಿ:ರಂಗಸಂಘಟಕ ನಿರ್ದೇಶಕ:ಶಿವಮೊಗ್ಗ

ಹೂಲಿ ಶೇಖರ್: ನಾಟಕಕಾರ:ಉತ್ತರ ಕನ್ನಡ
ಎಸ್. ಕೆ. ಶ್ರೀಧರ:ರಂಗಸಂಘಟಕ :ದಕ್ಷಿಣ ಕನ್ನಡ
ಬೇಲೂರು ಕೃಷ್ಣಮೂರ್ತಿ:ನಾಟಕಕಾರ:ಹಾಸನ
ಎಚ್. ಎಸ್. ಉಮೇಶ್:ವೃತ್ತಿನಟ:ಮೈಸೂರು
ಗುಬ್ಬಿ ಪ್ರಭಾವತಮ್ಮ:ವೃತ್ತಿನಟಿ:ಮೈಸೂರು.
ರಾನಾ ಶ್ರೀನಿವಾಸ್: ನಿರ್ದೇಶಕ:ಕೋಲಾರ
ಎ. ಎಸ್. ಮೂರ್ತಿ:ಬೀದಿನಾಟಕಕಾರ:ಬೆಂಗಳೂರು
ಪಿ. ವಜ್ರಪ್ಪ:ಸಂಗೀತಗಾರ ಪೌರಾಣಿಕ:ಬೆಂಗಳೂರು
ಸಂಪಗಿ:ಪೌರಾಣಿಕ ನಾಟಕ :ಬೆಂಗಳೂರು
ಸಿ. ಹೆಚ್. ಲೋಕನಾಥ್ : ಹವ್ಯಾಸಿ ನಟ:ಬೆಂಗಳೂರು
ಹೊನ್ನಯ್ಯ :ಕಾರ್ಮಿಕ ನಟ:ಬೆಂಗಳೂರು
ವೀರಭದ್ರಾಚಾರ್: ರಂಗೋಪಕರಣ ವಿನ್ಯಾಸಕಾರ:ಬೆಂಗಳೂರು
ಬೊ. ನಾ. ರಾಮಮೂರ್ತಿ :ರಂಗ ಪ್ರಾಯೋಜಕ:ಬೆಂಗಳೂರು
ಪುಷ್ಪಾರಾಣಿ: ಮಹಿಳಾ ತಂಡ:ಬೆಂಗಳೂರು
ಬಾಬಣ್ಣ: ಸ್ಟೇಜ್ ಮೇಸ್ತ್ರಿ :ಬೆಂಗಳೂರು
ಲಲಿತ ಪಾತ್ರೋಟ :ಜಾನಪದ ರಾಧಾನಟಿ ಕಲಾವಿದೆ:ಬೆಳಗಾಂ

**ಪುರಸ್ಕಾರ :ಹೊರರಾಜ್ಯ**

ಜಯರಾಮ ಅಳ್ವ:ರಂಗಪ್ರಾಯೋಜಕ:ಮುಂಬಯಿ
ಬಿ. ಜಿ. ಜೀವೂರ :ವೃತ್ತಿನಟ:ಸೊಲ್ಲಾಪುರ (ಮಹಾರಾಷ್ಟ್ರ)
ಕಾಸರಗೋಡು ಚಿನ್ನ:ನಟ:ಕೇರಳ (ಕಾಸರಗೋಡು)

**ಪುರಸ್ಕಾರ**

ಎಸ್. ಹನುಮಂತಯ್ಯ:ಪೌರಾಣಿಕ ನಾಟಕ:ಬೆಂಗಳೂರು ಗ್ರಾಮಾಂತರ
ಲಕ್ಷ್ಮಣರಾವ್:ಹವ್ಯಾಸಿ ನಟ:ಬೆಂಗಳೂರು ಗ್ರಾಮಾಂತರ
ಸತ್ಯಮುಳಕಟ್ಟೆ:ಹವ್ಯಾಸಿ ನಟ:ಬೆಂಗಳೂರು
ಶಶಿಧರ ಅಡಪ:ರಂಗವಿನ್ಯಾಸ: ಬೆಂಗಳೂರು
ಸಿದ್ದಪ್ಪ ಮಾಸ್ತರ್ ಓಜಿನಾಳ:ವೃತ್ತಿನಟ:ರಾಯಚೂರು
ಬಿ. ಆರ್. ಪೋಲಿಸ್ ಪಾಟೀಲ್: ಜನಪದ ರಂಗಭೂಮಿ:ಬಿಜಾಪುರ
ಏಣಗಿ ಕಾಸಿಂ ಸಾಬ್: ವೃತ್ತಿನಟ: ಬಳ್ಳಾರಿ
ಬಿ. ಎ. ಶಾಂತಾದೇವಿ:ವೃತ್ತಿನಟಿ:ಮೈಸೂರು.

# ಭಾಗ – ೨

## ಅಭಿವ್ಯಕ್ತಿಯ ಹುಡುಕಾಟ

* ಚಿತ್ರಕಲೆ
* ರಂಗಭೂಮಿ
* ಚಿತ್ರರಂಗ
* ಸಾಹಿತ್ಯ ಪ್ರಕಾರ
* ಸಾಹಿತ್ಯ– ಸಂಸ್ಕೃತಿ ಮಾಲೆ

## ಚಿತ್ರಕಲೆ

*ಕೆ.ಎಸ್. ಶ್ರೀನಿವಾಸಮೂರ್ತಿ*

---

ಬದುಕಿನ ಆಂತರಿಕ ಅಥವಾ ಭಾಷಿಕ ಸಮಸ್ಯೆಗಳು, ಸವಾಲುಗಳು ಕಲಾಪ್ರಕಾರಗಳ ಸ್ವರೂಪವನ್ನು ನಿರ್ಧರಿಸುತ್ತಿರುತ್ತವೆ. ಕರ್ನಾಟಕದ ಕಲಾಸನ್ನಿವೇಶದ ಮಟ್ಟಿಗೆ ಹೇಳುವುದಾದರೆ, ಸಾಮಾನ್ಯವಾಗಿ, ಈ ಎರಡನೆಯ ರೀತಿಯ ಕಾಳಜಿಗಳೇ ನಮ್ಮ ಕಲಾಪ್ರಕಾರಗಳ ಸ್ವರೂಪಗಳನ್ನು ಪ್ರಧಾನವಾಗಿ ನಿರ್ಧರಿಸುತ್ತ ಬಂದಿವೆ. ಇದಕ್ಕೆ ೧೯೯೩ರ ಕಲಾಸನ್ನಿವೇಶವೂ ಅಪವಾದವಲ್ಲ. ನಮ್ಮ ಸುತ್ತಲಿನ ಸಾಮಾಜಿಕ ಸನ್ನಿವೇಶದೊಂದಿಗೇ ಆಗಲೀ, ನಿತ್ಯಬದುಕಿನ ದೃಶ್ಯಸಂಸ್ಕೃತಿಗೇ ಆಗಲೀ ನಮ್ಮ ಚಿತ್ರಕಲಾ ಕ್ಷೇತ್ರವು ನೇರ, ಸಾರ್ಥಕ ಸಂಬಂಧವೊಂದನ್ನು ಇನ್ನೂ ಕಂಡುಕೊಳ್ಳಬೇಕಾಗಿದೆ. ಕೆಲವು ಸಾಮೂಹಿಕ ಕ್ರಿಯೆಗಳ ಮೂಲಕ ಹತ್ತಿರದ ಜನರೊಂದಿಗೆ ಆತ್ಮೀಯರಾಗುವ ಪ್ರಯತ್ನಗಳನ್ನೇನೋ ನಮ್ಮ ಕಲಾವಿದರು, ಕಲಾಸಕ್ತರು ಪ್ರತಿವರ್ಷ ಮಾಡುತ್ತಲಿದ್ದಾರೆ. ೧೯೯೩ರಲ್ಲಿ ಮಾಡಿದ ಈ ರೀತಿಯ ಕೆಲವು ಸಾಮೂಹಿಕ ಪ್ರಯತ್ನಗಳಲ್ಲಿ ಸಾಕಷ್ಟು ಗಮನಾರ್ಹ ಪ್ರಮಾಣವೆಂದರೆ, ಬೆಂಗಳೂರಿನಲ್ಲಿ ನಡೆದ ಆರನೆಯ ಕಲಾಮೇಳ (ಜೂನ್, ವೆಂಕಟಪ್ಪ ಆರ್ಟ್ ಗೆಲರಿ), ಅಯೋಧ್ಯಾ ಹಗರಣದ ಹಿನ್ನೆಲೆಯಲ್ಲಿ 'ಸಹಮತ್' ಗುಂಪಿನ ಪರವಾಗಿ ಪ್ರದರ್ಶಿತಗೊಂಡ ಚಿತ್ರಗಳು (ಆಗಸ್ಟ್, ರವೀಂದ್ರ ಕಲಾಕ್ಷೇತ್ರ), ಅಕ್ಷರತುಂಗ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ರಾಜ್ಯದ ವಿವಿಧ ಅಕಾಡೆಮಿಗಳು ಸೇರಿ ನಡೆಸಿದ, 'ಸೃಜನಶೀಲತೆ' ಯನ್ನು ಕುರಿತ ಶಿಬಿರ (ಸೆಪ್ಟೆಂಬರ್, ತುಮರಿ, ಶಿವಮೊಗ್ಗ), ಗುಲ್ಬರ್ಗಾದ ಐಡಿಯಲ್ ಫೈನ್ ಆರ್ಟ್ಸ್ ಸೊಸೈಟಿಯು ವ್ಯವಸ್ಥೆ ಮಾಡಿದ ಅಂತರ್‌ರಾಷ್ಟ್ರೀಯ ಕಲಾಶಿಬಿರ (ಡಿಸೆಂಬರ್, ಗುಲ್ಬರ್ಗಾ), ಹಾಗೆಯೇ ಸೋಣಂಗೇರಿಯಲ್ಲಿ (ಮೇ) ಇಡೀ ಗ್ರಾಮವನ್ನೇ 'ಬಯಲು ಚಿತ್ರಾಲಯ'ವನ್ನಾಗಿಸಲು ನಡೆಸಿದ ಪ್ರಯತ್ನ. ಈ ಪ್ರತಿಯೊಂದು ಚಟುವಟಿಕೆಗೂ ಅದರದೇ ಆದ ವ್ಯಾಪ್ತಿ, ಉದ್ದೇಶಗಳಿವೆ, ವಿಶಿಷ್ಟ ಮಹತ್ವವಿದೆ. ಕಲಾಮೇಳ ಅಥವಾ ಸೋಣಂಗೇರಿಯಲ್ಲಿ ಗುರುತಿಸಬಹುದಾದ ಪ್ರಯತ್ನಗಳ ಮೂಲಕ ಸಾರ್ವಜನಿಕರು ಈ ಕಲಾಪ್ರಕಾರದಲ್ಲಿ ಕುತೂಹಲ ತಾಳುವಂತೆ ಪ್ರೇರೇಪಿಸುವುದು ಸುಲಭವಾಗಬಹುದು. ಕಲಾವಿದರನ್ನು, ಪ್ರಾಯಶಃ ಅವರ ಕಲಾಕೃತಿಗಳನ್ನು, ಸಮೂಹದ ಹತ್ತಿರಕ್ಕೆ ತರುವ ದಿಕ್ಕಿನಲ್ಲಿ ಇಂಥ ಚಟುವಟಿಕೆಗಳು ಮಹತ್ವವಾದವು. ಆಯಾ ಕಲಾಪ್ರಕಾರಕ್ಕೆ ಸಂಬಂಧಿಸಿದ ಒಂದು ಮಟ್ಟದ ತಿಳುವಳಿಕೆಯನ್ನು ಈ ಮೂಲಕ ಜನರಲ್ಲಿ ಬೆಳೆಸಬಹುದು.ಕಲಾಕೃತಿಗಳನ್ನು

ಜನರ ನಡುವೆ, ಪ್ರತ್ಯಕ್ಷವಾಗಿ ರಚಿಸುವ ಕ್ರಿಯೆಗೆ ಅಂಥ ಸಾಮರ್ಥ್ಯವಿದೆ. ಹೀಗಾಗಿ, ಉದಾಹರಣೆಗೆ, ಕಲಾಮೇಳವು ''ಜನತೆ ಹಾಗೂ ಕಲಾವಿದರ ನಡುವೆ, ಇರುವ ಅಂತರವನ್ನು ಕಡಿಮೆಗೊಳಿಸುವ ಸೇತುವೆಯಾಗಿದೆ''ಎಂಬ ಆಶಯವು ಸೂಕ್ತವಾದದ್ದು, ಪ್ರಾಮಾಣಿಕವಾದದ್ದು. ಇದನ್ನು ಸಮರ್ಥಿಸುವಷ್ಟು ಸಂಖ್ಯೆಯಲ್ಲಿ ಹಿರಿಯ, ಕಿರಿಯ ಸುಮಾರು ೩೨೫ ಜನ ಕಲಾವಿದರು ಆರನೆಯ ಕಲಾಮೇಳದಲ್ಲಿ ಭಾಗವಹಿಸಿದ್ದು ಹೆಮ್ಮೆಯ ವಿಷಯ. ಆದರೆ, ಪ್ರತಿಬಾರಿಯೂ ಈ ಮೇಳವು ''ಗುಣಾತ್ಮಕ''ವಾಗಿಯೂ ಪ್ರಗತಿ ಹೊಂದುತ್ತಿದೆಯೆಂಬುದನ್ನು ಒಪ್ಪುವುದು ಕಷ್ಟ. ಇದನ್ನು ಸಮರ್ಥಿಸುವಂಥ ಕಲಾಕೃತಿಗಳಾಗಲೀ ಕಾರ್ಯಚಟುವಟಿಕೆಗಳಾಗಲೀ ಈ ವರ್ಷದ ಕಲಾಮೇಳದಲ್ಲಿ ಕಾಣಲಿಲ್ಲ.

ಸಣ್ಣ ಪ್ರಮಾಣದಲ್ಲಿ ನಡೆದ 'ಸಹಮತ್'ಗುಂಪಿನ ಪರವಾಗಿ ರೂಪತಾಳಿದ ಚಿತ್ರಗಳಲ್ಲಿ ಹೊಸಸಂವೇದನೆಯ ಯುವಕಲಾವಿದರದೇ ಹೆಚ್ಚು. (ಶೀಲಗೌಡ, ರಾಘವೇಂದ್ರರಾವ್, ರವಿ ಓಂಪ್ರಕಾಶ್, ಸುರೇಖ, ಸ್ಟೀಫನ್, ರಸ್ನ ಭೂಷಣ್, ಧನರಾಜ್, ಸೋಮು ಮತ್ತು ಸುದರ್ಶನ್).ಇಲ್ಲಿನ ರಚನಾ ವೈಖರಿಯೇ ಸಾಕಷ್ಟು ಕುತೂಹಲಕಾರಿಯದ್ದು. ಸುಮಾರು ೬ ಅಡಿ ಎತ್ತರ ಮತ್ತು ೨೫೦ ಅಡಿ ಉದ್ದದ ಪಾಲಿಥೀನ್ ಹಾಳೆಗಳನ್ನು ಪಾರದರ್ಶಕ ಗೋಡೆಗಳ ಹಾಗೆ, ತೆರೆಗಳ ರೀತಿ, ಬೊಂಬುಗಳ ಸಹಾಯದಿಂದ ಇಲ್ಲಿ ವೃತ್ತಾಕಾರವಾಗಿ ಎಳೆದು ನಿಲ್ಲಿಸಲಾಗಿತ್ತು. ಈ ಪಾರದರ್ಶಕ ಹಾಳೆಗಳ ಮೇಲೆ ವಿಭಿನ್ನ ಧರ್ಮ, ಸಾಹಿತ್ಯ, ಪ್ರಸಿದ್ಧ ಕಲಾವಿದರ ಕೃತಿಗಳನ್ನು ಆಧರಿಸಿದ ಚಿತ್ರ, ಕಾವ್ಯಗಳನ್ನು ಏಕಕಾಲದಲ್ಲಿ ಒಂದು ಕಡೆ ರಚಿಸಲಾಯಿತು. ಧಾರ್ಮಿಕ, ಸಾಮಾಜಿಕ ಅಡ್ಡಗೋಡೆಗಳನ್ನು ಮುರಿಯುವ ಸೌಹಾರ್ದತೆಯ ಆಶಯವನ್ನು ಸರಳವಾಗಿ, ಪರಿಣಾಮಕಾರಿಯಾಗಿ, ಹಾಗೂ ಸಾಕಷ್ಟು ಕಲಾತ್ಮಕವಾಗಿ ಈ ಕಲಾವಿದರು ಜನರ ಮುಂದಿಟ್ಟರು. ಹೀಗೆ ತಮ್ಮ ವೈಯಕ್ತಿಕ ಪ್ರತಿಭೆಯ ಹರವನ್ನು ವಿಸ್ತಾರಗೊಳಿಸುವ ಈ ಕಳಕಳಿಯಿಂದ ಇಂಥ ಪ್ರಯತ್ನಗಳಿಗೆ ವಿಶೇಷ ಮಹತ್ವವುಂಟಾದರೆ ಆಶ್ಚರ್ಯವಿಲ್ಲ. ಸಾಮೂಹಿಕ ಉದ್ದೇಶಗಳಲ್ಲೂ ಸೃಜನಶೀಲ ಮನಸ್ಸೊಂದರ ನಿಷ್ಠುರ ಪ್ರಾಮಾಣಿಕತೆಯು ಅಗತ್ಯ. ಇದಾಗದಿರುವುದರಿಂದಲೇ ನಮ್ಮ ಕಲಾಗ್ರಹಿಕೆಯಿನ್ನು ಕೆಲವು ಸರಳ ಆಯಾಮಗಳನ್ನು ಅಥವಾ ಮೇಲ್ಪದರದ ಗ್ರಹಿಕೆಗಳನ್ನು ಮೀರಲು ಸಾಧ್ಯವಾಗಿಲ್ಲ. ಈ ದೃಷ್ಟಿಯಿಂದ, ಬೆಂಗಳೂರಿನ ನಿರ್ಮಲ ಆರ್ಟ್ ವರ್ಕ್ಸ್‌ಶಾಪ್ ಅವರು ಕಳೆದ ಆರುವರ್ಷಗಳಿಂದ ನಡೆಸಿಕೊಂಡು ಬರುತ್ತಿರುವ ಕಾರ್ಯಾಗಾರಗಳು ಅತ್ಯಂತ ಮೌಲಿಕವಾದವು. ಈ ವರ್ಷದ ಆರನೆಯ ಕಾರ್ಯಾಗಾರದಲ್ಲಿ (ಏಪ್ರಿಲ್) ಪ್ರದರ್ಶಿಸಲಾಗಿದ್ದ ಮಕ್ಕಳ 'ಸ್ವಚಿತ್ರ'ಗಳೂ ಇದಕ್ಕೆ ಒಳ್ಳೆಯ ಉದಾಹರಣೆಗಳು. ಈ ಕೃತಿಗಳಲ್ಲಿರುವ ಮುಕ್ತ ಭಾವಾಭಿವ್ಯಕ್ತಿ ಮತ್ತು ಪ್ರವೃತ್ತಿ ಸಹಜ ರಚನಾಕ್ರಮಗಳು ನಮ್ಮ ಕಲಾಗ್ರಹಿಕೆಯ ಪ್ರಬುದ್ಧತೆಗೆ ಅತ್ಯಂತ ಅಗತ್ಯ.

ಇಂಥ ಸೃಜನಶೀಲ ಮನಸ್ಸಿರುವ ಹಲವಾರು ಹಿರಿಯ, ಕಿರಿಯ ಕಲಾವಿದರು ತಮ್ಮ ಕಲಾಪ್ರದರ್ಶನಗಳ ಮೂಲಕ ೧೯೮೩ರಲ್ಲಿಯೂ ನಮ್ಮ ಗಮನ ಸೆಳೆದಿದ್ದಾರೆ. ಇಲ್ಲಿ

ಪ್ರತಿಭೆ, ಕೌಶಲಗಳ ಕೊರತೆಯೇನಿಲ್ಲವಾದರೂ, ಆರ್ಥಿಕ, ಸಾಮಾಜಿಕ ಒತ್ತಡಗಳಿಗೆ ಮಣಿದಿರುವ ಕಲಾವಿದರ ಸಂಖ್ಯೆಯೇನೂ ಕಮ್ಮಿಯಿಲ್ಲ. ಹೊಸ ಪೀಳಿಗೆಯ ಹಲವು ಕಲಾವಿದರಲ್ಲಿ ಕಾಣುವ ಕೆಲವು ಪ್ರಚಲಿತ ರಚನಾಕ್ರಮ, ಶೈಲಿಗಳ ವ್ಯಾಪ್ತಾನುಕರಣೆಯು ಇದಕ್ಕೊಂದು ಉದಾಹರಣೆ. ಹಾಗೆಯೇ, ಹಿರಿಯ ತಲೆಮಾರಿನ ಕೆಲವು ಪ್ರತಿಷ್ಠಿತ ಕಲಾವಿದರು ತಮ್ಮ ನಿರ್ದಿಷ್ಟ ಶೈಲಿಯ ಪುನರಾವರ್ತನೆಗೆ ಶರಣಾಗಿರುವುದೂ ಈ ವರ್ಷ ಮತ್ತೆ ಮತ್ತೆ ಕಾಡಿದೆ. ನಮ್ಮ ಕಲಾ ಸನ್ನಿವೇಶದಲ್ಲಿ ಉಂಟಾಗಿರುವ ತೀವ್ರ ಸ್ಪರ್ಧಾತ್ಮಕ ಸನ್ನಿವೇಶ ಮತ್ತು ಅದಕ್ಕೆ ಪೂರಕವಾಗಿ ಬೆಳೆಯುತ್ತಿರುವ ಇತರ- ಸಮೂಹಮಾಧ್ಯಮ, ಗೆಲರಿ, ಸಂಗ್ರಹಕಾರರು, ಮುಂತಾದ-ಒತ್ತಡಗಳನ್ನೂ ಇದು ಸೂಚಿಸುತ್ತದೆ. ನೋಡುಗರ, ಕಲಾಸಕ್ತರ ದೃಷ್ಟಿಯಿಂದಂತೂ ಈ ಒತ್ತಡಗಳು ಆತಂಕಕಾರಿಯೇ ಆಗಿವೆ. ಅಗತ್ಯವಾದ ಪೂರ್ವಸಿದ್ಧತೆಗಳಿಂದ ವಂಚಿತವಾಗಿರುವ ಈ ನೋಡುಗ ವರ್ಗವು ಈಗ ಒಂದೇ ಏಟಿಗೆ ವಿಹ್ವಲಗೊಳಿಸುವಷ್ಟು ಸಂಖ್ಯೆಯ ವೈವಿಧ್ಯ, ಪ್ರಯೋಗಗಳನ್ನು ಎದುರಿಸಬೇಕಾಗಿದೆ. ಈ ಒತ್ತಡಗಳನ್ನು ನಮ್ಮ ಸೃಜನಶೀಲ ಕಲಾವಿದರು ಹೇಗೆ ಎದುರಿಸುತ್ತಾರೆಂಬುದು ಕುತೂಹಲಕಾರಿ.

೧೯೯೩ರಲ್ಲಿ ಆಗಿರುವ ವಿವಿಧ ಕಲಾಪ್ರದರ್ಶನಗಳು ಕಲಾಚಟುವಟಿಕೆಗಳಿಗೆ ಮೇಲೆ ಸೂಚಿಸಿರುವ ಸಂಕೀರ್ಣ ಹಿನ್ನೆಲೆಯಿದೆ. ರಾಜ್ಯದ ವಿವಿಧ ಕೇಂದ್ರಗಳಲ್ಲಿ ಆಗಿರುವ ಅಸಂಖ್ಯ ಕಲಾಪ್ರದರ್ಶನಗಳನ್ನು ಇಲ್ಲಿ ಹೆಸರಿಸುವುದೂ ಅಸಾಧ್ಯ. ಇಲ್ಲಿ ಸೂಚಿಸಲಾಗಿರುವ ಕಲಾ ಪ್ರದರ್ಶನಗಳ ಬಗೆಗಿನ ವಿವರಗಳೂ ಸಾಲವು. ಈ ದೃಷ್ಟಿಗಳಿಂದ ಈ ಬರೆಹವು ಖಂಡಿತ ಅಸಮಗ್ರ. ಆದರೆ, ರಾಜ್ಯದ ಪ್ರಮುಖ ಕಲಾವಿದರ, ಕಲಾಶಿಕ್ಷಕರ, ವಿದ್ಯಾರ್ಥಿಗಳ ಕೃತಿಗಳು ಬೆಂಗಳೂರಿನಲ್ಲಿ ಈವರೆಗೂ ಪ್ರದರ್ಶಿತವಾಗುತ್ತಲೇ ಇವೆ. ಹೀಗಾಗಿ, ಈ ನಗರದಲ್ಲಿ ಆಗಿರುವ ಕಲಾಪ್ರದರ್ಶನಗಳು ಒಟ್ಟು ರಾಜ್ಯದ ಕಲಾಸನ್ನಿವೇಶದ ಆಶಯಗಳನ್ನು, ಗೊತ್ತು-ಗುರಿಗಳನ್ನು ಸಾಕಷ್ಟು ಪ್ರಾತಿನಿಧಿಕವಾಗಿ ಪ್ರಕಟಿಸಿದ್ದರೆ ಆಶ್ಚರ್ಯವಿಲ್ಲ.

೧೯೯೩ರ ಗಮನಾರ್ಹ ಏಕವ್ಯಕ್ತಿ ಕಲಾಪ್ರದರ್ಶನಗಳಲ್ಲಿ ಶೀಲಗೌಡ ಅವರ ಕಲಾಕೃತಿಗಳು (ಏಪ್ರಿಲ್, ವೆಂಕಟಪ್ಪ ಆರ್ಟ್ ಗೆಲರಿ) ಹಲವಾರು ವರ್ಷ ನೆನಪಿನಲ್ಲಿ ಉಳಿಯುವಂಥವು. ಒಬ್ಬ ಸೂಕ್ಷ್ಮ ಮನಸ್ಸಿನ ಕಲಾವಿದೆಯಾಗಿ ಶೀಲಗೌಡ ಅವರು ತಮ್ಮ ಕಲಾಕೃತಿಗಳ ಮೂಲಕ, ಸುತ್ತಲಿನ ಸಾಮಾಜಿಕ ಸನ್ನಿವೇಶಕ್ಕೆ ಸ್ಪಂದಿಸಿರುವ ರೀತಿಯು ನಮ್ಮಕಲಾಸನ್ನಿವೇಶದಲ್ಲಿ ಅತ್ಯಂತ ಅಪೂರ್ವವಾದದ್ದು. ತನ್ನ ಮಾಧ್ಯಮದ ಅನನ್ಯತೆಯನ್ನು ಅರ್ಥಪೂರ್ಣವಾಗಿ ಗ್ರಹಿಸಿ, ಪರಿಣಾಮಕಾರಿಯಾಗಿ ದುಡಿಸಿಕೊಂಡಿರುವ ನಮ್ಮ ಕೆಲವೇ ಕಲಾವಿದರಲ್ಲಿ ಶೀಲ ಅವರು ಒಬ್ಬ ಮಹತ್ವದ ಕಲಾವಿದೆ. ಹೊರನೋಟಕ್ಕೆ ಈ ಕೃತಿಗಳು ಸ್ತ್ರೀಪರ ನಿಲುವೊಂದನ್ನು ಮುಂದಿಡುವ ಹಾಗೆನಿಸಬಹುದು: ಮಹಿಳೆಯ ಸಾಮಾಜಿಕ, ಧಾರ್ಮಿಕ ಸ್ಥಾನಗಳ ಜೊತೆಗೆ ಅವಳ ಶಾರೀರಕ ವಿನ್ಯಾಸಗಳು ಈ ಕೃತಿಗಳಲ್ಲಿ ಅಷ್ಟು ಪ್ರಬಲವಾಗಿವೆ. ಆದರೆ, ಸ್ತ್ರೀಯ ಸಾಮಾಜಿಕ ಶೋಷಣೆಯ ಆಚೆಗೆ, ಒಟ್ಟು ಬದುಕಿನ-ಹುಟ್ಟು, ಸಾವಿನಂಥ- ನಿರಂತರ ಘರ್ಷಣೆಯ ಸಂಕೀರ್ಣತೆಗೇ ಈ ಕೃತಿಗಳು ಪರಿಣಾಮಕಾರಿಯಾಗಿ ರೂಪಕಗಳಾಗಿವೆ.

ಈ ರೀತಿಯಲ್ಲಿ ಹತ್ತಿರದ ಬದುಕಿಗೆ ಸ್ಪಂದಿಸುವ ಕಳಕಳಿಯಲ್ಲಿಯೂ ತಮ್ಮ ಅಭಿವ್ಯಕ್ತಿ ಕ್ರಮವನ್ನೇ ವಿಶೇಷವಾಗಿ ಪರಿಶೋಧಿಸುವ ಆಸಕ್ತಿಯು ನಮ್ಮ ಒಟ್ಟು ಕಲಾಸನ್ನಿವೇಶದಲ್ಲಿ ಮೊದಲಿನಿಂದಲೂ ಎದ್ದುಕಾಣುತ್ತದೆ. ಅಂದರೆ, ಯಾವುದೇ ನಿರ್ದಿಷ್ಟ ವಿಚಾರ, ಸಮಸ್ಯೆಯನ್ನೇ ಕೈಗೆತ್ತಿಕೊಂಡಾಗಲೂ ಅದನ್ನು ಹೇಗೆ 'ಕಲಾತ್ಮಕ'ವಾಗಿ ನಿರೂಪಿಸಬೇಕೆಂಬ ಆಶಯವೇ ಇಲ್ಲಿ ಪ್ರಬಲವಾಗಿದೆ. ಆದರೆ ಈ 'ಕಲಾತ್ಮಕ'ತೆಯನ್ನು ನಿರ್ದಿಷ್ಟ ಶೈಲಿಯಿಂದಾಗಿ ಕಲ್ಪಿಸಿಕೊಂಡಿರುವ ಉದಾಹರಣೆಗಳೇ ಇಲ್ಲಿ ಹೆಚ್ಚು. ಇದರಿಂದ, ಈ ಆಶಯವು ಹೇಗೆ ಸೂಕ್ಷ್ಮಗ್ರಹಿಕೆ, ಒಳನೋಟಗಳಿಗೆ ದಾರಿ ಮಾಡಿದೆಯೋ ಹಾಗೆಯೇ, ಕೆಲವು ಗಂಭೀರ ತೊಡಕುಗಳಿಗೂ ಆಸ್ಪದಕೊಟ್ಟಿದೆ. ಗುಲ್ಬರ್ಗಾದ ದಿ ಐಡಿಯಲ್ ಫೈನ್ ಆರ್ಟ್ಸ್ ಸೊಸೈಟಿಯವರ ೧೯೯೩ರ ವಾರ್ಷಿಕ ಕಲಾಪ್ರದರ್ಶನದಲ್ಲಿ ('ಮಿಕ್ಸೆಡ್ ಬ್ಯಾಗ್' ೧೧ನೇ ಕಲಾಪ್ರದರ್ಶನ, ಏಪ್ರಿಲ್, ವೆಂಕಟಪ್ಪ ಗೆಲರಿ) ಈ ಎರಡೂ ಉದಾಹರಣೆಗಳಿವೆ. ಇಲ್ಲಿನ ಕೆಲವು ವಿದ್ಯಾರ್ಥಿಗಳು ಸಿದ್ಧಶೈಲಿಗಳನ್ನು ಇನ್ನೂ ರೂಢಿಸಿಕೊಂಡು ಬರುತ್ತಿರುವುದು ಇಂಥ ತೊಡಕುಗಳಿಗೊಂದು ನಿದರ್ಶನ. ಹಾಗೆಯೇ ಹೆಚ್ಚು ಮುಕ್ತ ಮನಸ್ಸಿನಿಂದ ಪ್ರಚಲಿತ ರಚನಾಕ್ರಮಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ತಮ್ಮ ಗ್ರಹಿಕೆಯ ಆಳ-ಹರವುಗಳನ್ನು ವಿಸ್ತರಿಸಿಕೊಳ್ಳಲು ಹವಣಿಸಿರುವ ಕಲಾವಿದ್ಯಾರ್ಥಿಗಳೂ ಇಲ್ಲಿದ್ದಾರೆ. ಇಂಥ ಸಾಮೂಹಿಕ ಕಲಾಪ್ರದರ್ಶನಗಳಲ್ಲಿ ಪ್ರತಿ ಕಲಾವಿದ ಅಥವಾ ವಿದ್ಯಾರ್ಥಿಯ ಒಂದೆರಡೇ ಕಲಾಕೃತಿಗಳನ್ನು ನೋಡುವುದು ಸಾಧ್ಯ. ಇದಿಷ್ಟೇ ಆಧಾರದ ಮೇಲೆ ಆಯಾ ಕಲಾವಿದನ/ಕಲಾವಿದೆಯ ಒಟ್ಟು ಸಾಮರ್ಥ್ಯವನ್ನು ಗ್ರಹಿಸಲಾರೆವು. ಹೀಗಾಗಿ ಇನ್ನಷ್ಟು ಹೆಚ್ಚಿನ ಸಂಖ್ಯೆಯ ಕೃತಿಗಳಿಂದ ಕೂಡಿದ ಇತರ ಕೆಲವು ಕಲಾಪ್ರದರ್ಶನಗಳನ್ನು ನಾವು ವಿಶ್ಲೇಷಿಸುವುದು ಅನುಕೂಲ. (ಇದೇ ಕಾರಣಕ್ಕಾಗಿ ಕೆಲವು ಸಾಮೂಹಿಕ ಕಲಾಪ್ರದರ್ಶನಗಳನ್ನು ಇಲ್ಲಿ ಕೇವಲ ಪಟ್ಟಿ ಮಾಡುವುದಷ್ಟೇ ಸಾಧ್ಯವಾಗಿದೆ.)

ಅರುಣ್ ಕೆ.ಜಿ., ಬಾಬು ಈಶ್ವರ್ ಪ್ರಸಾದ್ ಮತ್ತು ಸುರೇಶ್ ಜಯರಾಂ ಅವರ ಸಾಮೂಹಿಕ ಕಲಾಪ್ರದರ್ಶನವು (ಸೆಪ್ಟೆಂಬರ್, ಅಲೆನ್ ಫ್ರಾಂಕೆ) ಆಶಾದಾಯಕವಾದದ್ದು. ತೀಕ್ಷ್ಣ ವರ್ಣಪ್ರಜ್ಞೆ, ರೂಪ/ಆಕೃತಿಗಳನ್ನು ದೃಶ್ಯಭಾಷೆಯ ಪರಿಣಾಮಕಾರಿ ಪರಿಕರಗಳಾಗಿ ದುಡಿಸಿಕೊಳ್ಳಬಲ್ಲ ಸಾಮರ್ಥ್ಯ ಮುಂತಾದವುಗಳಿಂದ ಬಾಬು ಈಶ್ವರ ಪ್ರಸಾದರು ಹೊಸಪೀಳಿಗೆಯ ಅತ್ಯಂತ ಗಮನಾರ್ಹ ಕಲಾವಿದರಲ್ಲಿ ಒಬ್ಬರಾಗಿದ್ದಾರೆ. ಕಲಾವಿಮರ್ಶಕರಾಗಿಯೂ ಸಕ್ರಿಯರಾಗಿರುವ ಸುರೇಶ್ ಜಯರಾಂ ಅವರ ಭಾವತೀವ್ರ ರೇಖಾಚಿತ್ರಗಳಲ್ಲಿ ಆಗಲೀ, ಅರುಣ್ ಕೆ.ಜಿ. ಅವರ ಮಾನವಾಕೃತಿಗಳಿಂದ ಕೂಡಿದ ಮರದ ಶಿಲ್ಪಗಳಲ್ಲಿಯಾಗಲಿ, ರಾಷ್ಟ್ರಮಟ್ಟದ ಪ್ರಚಲಿತ ಅಭಿವ್ಯಕ್ತಿಕ್ರಮಗಳ ಅರಿವು ಪ್ರಕಟವಾಗಿದೆ. ಈ ಮಾತು ಈ ಅವಧಿಯಲ್ಲಿ ನಡೆದ ಹಲವಾರು ಯುವಕಲಾವಿದರ ಕಲಾಪ್ರದರ್ಶನಗಳಿಗೂ ಒಪ್ಪುತ್ತದೆ. ಮೈಸೂರಿನ ರಂಗಾಯಣದ ಆವರಣದಲ್ಲಿ ಯು. ರಮೇಶ್, ದ್ವಾರಕಾನಾಥ್ ಮತ್ತು ಉಮೇಶ್ ಅವರು ಆಗಸ್ಟ್‌ನಲ್ಲಿ ಕೈಗೆತ್ತಿಕೊಂಡ 'ಆಶುಶಿಲ್ಪ'ದಲ್ಲಿಯೂ ಮಾಧ್ಯಮನಿಷ್ಠ ಆಸಕ್ತಿಯು ನೇರವಾಗಿ ಸಕ್ರಿಯವಾಗಿದೆ. ಚಿತ್ರಕಲಾ ಪ್ರಕಾರಕ್ಕೆ ಸೀಮಿತವಾದ ಪ್ರಸ್ತುತ ಬರೆಹದಲ್ಲಿ, ಕೃಷ್ಣರಾಜೇಂದ್ರ ಕುಮಾರ್,

ಟಿ.ಎಸ್. ಪ್ರತಿಭ ಮತ್ತು ಎ. ಶ್ರೀಧರಮೂರ್ತಿಯವರು ವೆಂಕಟಪ್ಪ ಗ್ಯಾಲರಿಯಲ್ಲಿ (ಅಕ್ಟೋಬರ್) ನಡೆಸಿದ ಕಲಾ ಪ್ರದರ್ಶನವು ಹೆಚ್ಚು ಸೂಕ್ತವಾದ ಉದಾಹರಣೆ. ನಿರ್ದಿಷ್ಟ ವಿಚಾರ, ಆಶಯಗಳನ್ನು ಪ್ರಜ್ಞಾಪೂರ್ವಕವಾಗಿ ತಮ್ಮ ಕೃತಿಗಳಲ್ಲಿ ತರುವ ಪ್ರಯತ್ನಗಳು ಇಂಥ ಕಲಾವಿದರ ಕೃತಿಗಳಲ್ಲಿ ಪ್ರಧಾನವಾಗಿದೆ. ಆದರೆ, ಆಯಾ ಮಾಧ್ಯಮದ ವಿಭಿನ್ನ, ಸೂಕ್ಷ್ಮ ಆಯಾಮಗಳು, ವ್ಯಾಪ್ತಾನುಭವಗಳು ಇಲ್ಲಿ ಕಾಣದೆ, ಈ ಕೃತಿಗಳು ಕೇವಲ ಪ್ರಾಮಾಣಿಕ ಆಶಯವೊಂದನ್ನು ಮಾತ್ರ ಸೂಚಿಸುತ್ತವೆ.

ಸಾಕ್ಷಿ ಗೆಲರಿಯು (ಮಾರ್ಚ್‌ನಲ್ಲಿ) ಏರ್ಪಡಿಸಿದ್ದ 'ಫೋರ್ ಯಂಗ್ ಕಂಟೆಂಪೊರರೀಸ್' ಕಲಾಪ್ರದರ್ಶನವು ಹೆಚ್ಚು ಗಮನಾರ್ಹವಾದದ್ದು. ಈ ಪ್ರದರ್ಶನದ ನಾಲ್ವರು ಕಲಾವಿದರಲ್ಲಿ ಓವೈಸ್ ಹುಸೇನ್ ಹೊರತಾಗಿ, ಮಿಕ್ಕ ಮೂವರೂ - ಆರ್. ಗಿರಿಧರಗೌಡ, ಓಂ ಪ್ರಕಾಶ್ ಮತ್ತು ಕೆ. ವಿ. ರಾಘವೇಂದ್ರರಾವ್ - ಕರ್ನಾಟಕದಲ್ಲಿಯೇ ತಮ್ಮ ಕಲಾಶಿಕ್ಷಣವನ್ನು ಪ್ರಾರಂಭಿಸಿದವರು. ಈಗಾಗಲೇ ಪ್ರಸಿದ್ಧರಾಗಿರುವ ಇವರ ಸಮಕಾಲೀನ ಯುವ ಕಲಾವಿದರೇ ಈ ನಾಲ್ವರು ಕಲಾವಿದರ ಮೇಲೆ ಅಪಾರ ಪ್ರಭಾವ ಬೀರಿದ್ದಾರೆನ್ನಬಹುದು.

ಓಂ ಪ್ರಕಾಶ್ ಇದೇ ವರ್ಷ ಲಂಡನ್ನಿನ ರಾಯಲ್ ಕಾಲೇಜ್ ಆಫ್ ಆರ್ಟ್ಸ್‌ನಲ್ಲಿ ಶಿಲ್ಪಕಲಾಭ್ಯಾಸಂಗಕ್ಕಾಗಿ ಇನ್‌ಲ್ಯಾಕ್ ಸ್ಕಾಲರ್‌ಶಿಪ್ ಗಳಿಸಿದರು. ಹಿಂಸೆ, ಶೋಷಣೆ ಮುಂತಾದ ಕೆಲವು ಅನಾಗರಿಕ ಸನ್ನಿವೇಶಗಳಲ್ಲಿ ರಾಘವೇಂದ್ರರಾವ್ ಅವರ ಪ್ರಧಾನ ಕಾಳಜಿಯಿದೆ. ಆದರೆ, ಒಂದೇ ಕೃತಿಯಲ್ಲಿ, ಏಕಕಾಲದಲ್ಲಿ ವಿಭಿನ್ನ ಆಕೃತಿ, ವಿಚಾರಗಳನ್ನು ತರುವುದರಿಂದ ಇಲ್ಲಿ ಅಸ್ಪಷ್ಟತೆ, ಗೊಂದಲಗಳ ಅನುಭವವುಂಟಾಗುತ್ತದೆ. ಇತರ ಯುವಕಲಾವಿದರ, ಕಲಾವಿದೆಯರ ನಿರ್ದಿಷ್ಟ ಸಾಧನೆಯ ಪ್ರತೀಕವೇ ಆಗಿದೆ. ಹಿರಿಯ ಕಲಾವಿದರಲ್ಲಿ ಈಗಾಗಲೇ ಪ್ರಸಿದ್ಧರಾಗಿರುವ ಎಸ್. ಜಿ. ವಾಸುದೇವ್, ಜಿ. ಎಸ್. ಶೆಣೈ, ಜೆ. ಎಂ. ಎಸ್. ಮಣಿ, ಯೂಸುಫ್ ಅರಕ್ಕಲ್, ಭಾಸ್ಕರರಾವ್ ಮುಂತಾದವರು ೧೯೯೩ರಲ್ಲೂ ತಮ್ಮ ಹೊಸಕಲಾಕೃತಿಗಳನ್ನು ಪ್ರದರ್ಶಿಸಿದ್ದಾರೆ. ಎಸ್. ಜಿ. ವಾಸುದೇವ್ ಅವರ ಕೃತಿಗಳ ('ಇನ್‌ಸ್ಕೇಪ್',ನವೆಂಬರ್, ಸಾಕ್ಷಿ ಗೆಲರಿ) ವಿಭಿನ್ನ ಮೈವಳಿಕೆಗಳು, ಕಾಂತಿಯುತ ಬಣ್ಣಗಳು ಉಂಟುಮಾಡುವ ಲವಲವಿಕೆಯಾಗಲಿ, ಶೆಣೈ ಅವರ ನಯವಾದ ರಚನೆಗಳ ಮೋಹಕತೆಯಾಗಲಿ (ಯಂಗ್ ಡಿಸೈನ್ಸ್ ಗೆಲರಿ, ಜೂನ್-ಜುಲೈ) ಹಲವಾರು ವರ್ಷಗಳಿಂದ ನಮ್ಮ ಕಲಾಸನ್ನಿವೇಶದಲ್ಲಿ ಅತ್ಯಂತ ಆತ್ಮೀಯವಾದವು. ೧೯೯೩ರಲ್ಲಿ ಈ ಹಿರಿಯರು ನಡೆಸಿದ ಕಲಾಪ್ರದರ್ಶನಗಳೂ ಅವರ ಹಿಂದಿನ ಆಶಯ, ಉದ್ದೇಶಗಳ ಮುಂದುವರಿಕೆಯೇ ಆಗಿದೆ. ವಾಸುದೇವ್ ಅವರು ಕೆಲವು ಪಾರಂಪರಿಕ ಪುರಾಣ ಪ್ರತಿಮೆಗಳನ್ನು ಸೃಷ್ಟಿ ಕ್ರಿಯೆಯ ರೂಪಕಗಳನ್ನಾಗಿಸಲು ತೊಡಗುತ್ತಾರೆ. ಶೆಣೈ ಅವರು ವಾಸ್ತವಲೋಕದ ಕೆಲವು ಆಕಾರಗಳನ್ನು ಕಲಾತ್ಮಕಗೊಳಿಸುತ್ತಾರೆ. ಇವರಿಬ್ಬರ ಕಲಾಕೃತಿಗಳಲ್ಲಿ ಅಪಾರ ಕೌಶಲವಿದೆ. ಆದರೆ, ಈ ಕೃತಿಗಳು ಮುಂದಿಡಲು ಪ್ರಯತ್ನಿಸುವ ಆಶಯವಾಗಲೀ, ಅನುಸರಿಸುವ ನಿರ್ವಹಣಾ ಕ್ರಮವಾಗಲೀ ಈಗಾಗಲೇ ಪೂರ್ವಸಿದ್ಧವಾಗಿದ್ದು, ಬದಲಾಗುತ್ತಿರುವ ಸಂವೇದನೆಗೆ ದೂರವಾಗಿಬಿಡುತ್ತವೆ. ಅಂದರೆ, ರೂಢಿಗತ ನಿರ್ವಹಣಾಕ್ರಮಗಳನ್ನು ಪ್ರಶ್ನಿಸುವುದೇ ಒಂದು ಗೀಳಾಗಿರುವ ಅಥವಾ



ಮ್ಯಾನ್‌ಸ್ಕೇಪ — ಎಸ್. ಜಿ. ವಾಸುದೇವ



ಓಂ — ಎಸ್. ಜಿ. ವಾಸುದೇವ

ಮಾಧ್ಯಮದ ಸಾಧ್ಯತೆಗಳ ಪರಿಶೋಧನೆಯನ್ನು ಒಂದು ಗಂಭೀರ ಸವಾಲಾಗಿ ಸ್ವೀಕರಿಸಿರುವ ಪ್ರಸ್ತುತ ಕಲಾ ಸನ್ನಿವೇಶದಲ್ಲಿ ಈ ಹಿರಿಯರ ಆಶಯ, ರಚನಾಕ್ರಮಗಳು "ಪರಿಣಾಮಕಾರಿಯಾಗದೆ ಹೋಗುತ್ತವೆ''. ಇದೇ ವರ್ಷ ನವೆಂಬರಿನಲ್ಲಿ ಹಿರಿಯ ಕಲಾವಿದ, ಕಲಾಶಿಕ್ಷಕ ಆರ್. ಎಂ. ಹಡಪದ್ ಅವರ ಕೆಲವು ಹಿಂದಿನ ಜಲವರ್ಣ, ತೈಲವರ್ಣ, ಪ್ರಕೃತಿ ಚಿತ್ರಗಳನ್ನು, ಭಾವಚಿತ್ರಗಳನ್ನು ಸಂಯೋಜನೆಗಳನ್ನು ಹಂಪಿ, ಕನ್ನಡ ವಿಶ್ವವಿದ್ಯಾಲಯ ಪ್ರದರ್ಶಿಸಿತು. ಮಾಧ್ಯಮದ ದೃಷ್ಟಿಯಿಂದಾಗಲೀ ವಿಷಯದ ದೃಷ್ಟಿಯಿಂದಾಗಲೀ ಹಡಪದ್ ಅವರ (ಸುಮಾರು ಮೂರು-ನಾಲ್ಕು ದಶಕಗಳ) ಕೃತಿಸಮೂಹದಲ್ಲಿ ಅಗಾಧ ವೈವಿಧ್ಯತೆ ಮತ್ತು ಪ್ರಯೋಗಶೀಲತೆಗಳು ಎದ್ದು ಕಾಣುತ್ತವೆ. ಹಂಪಿಯಲ್ಲಿ ನಡೆದ ಕಲಾ ಪ್ರದರ್ಶನವು, ಈ ಹಿನ್ನೆಲೆಯಲ್ಲಿ ಅತ್ಯಂತ ಸಣ್ಣ ಪ್ರಮಾಣದ್ದು, ಆದರೂ ಹಡಪದ್ ಅವರ ಆಸಕ್ತಿಯ ಹರವನ್ನು ಸೂಕ್ತವಾಗಿ ಪರಿಚಯಿಸುವಷ್ಟು ಇದು ಪ್ರಾತಿನಿಧಿಕವಾಗಿತ್ತೆನ್ನಬಹುದು.

ಯೂಸುಫ್ ಅರಕ್ಕಲ್ ಅವರು ಸಣ್ಣ ಪ್ರಮಾಣದ ಕೆಲವು ಭಾವಚಿತ್ರಗಳನ್ನು ಕ್ರಿಂಸನ್ ಗೆಲರಿಯಲ್ಲಿ (ಅಕ್ಟೋಬರ್) ಪ್ರದರ್ಶಿಸಿದರು. ತೈಲಮಾಧ್ಯಮದಲ್ಲಿ ವಿಶೇಷ ಆಸಕ್ತಿಯನ್ನು ಬೆಳೆಸಿಕೊಂಡು ಬಂದಿರುವ ಯೂಸುಫ್ ಅರಕ್ಕಲ್ ಅವರಿಗೆ ಕ್ಯಾನ್ವಾಸಿನ ಮೈವಳಿಕೆಯು ಒಂದು ಪ್ರಧಾನ ಆಸಕ್ತಿ. ಇವರ ಕೃತಿಗಳು ಸಾಮಾನ್ಯವಾಗಿ ಒಂದೋ, ಎರಡೋ ಆಕೃತಿಗಳನ್ನಷ್ಟೇ ನಿರೂಪಿಸುತ್ತವೆ. ಈ ಸೀಮಿತ ಸಂಖ್ಯೆಯ ಆಕೃತಿಗಳ ಹಿನ್ನೆಲೆಯಲ್ಲಿ ವಿಶಾಲ ತೆರಪುಂಟಾಗುತ್ತದೆ. ಈ ತೆರಪನ್ನು ಹೇಗೆ ಸಾಧ್ಯವಾದಷ್ಟೂ ಕುತೂಹಲಕಾರಿಯಾಗಿ ನಿರ್ವಹಿಸಬೇಕೆಂಬುದೇ ಇಲ್ಲಿನ ಮುಖ್ಯ ಕಾಳಜಿ. ಇದು ಅವರ ಇಂದಿನ ಈ ಕೃತಿಗಳಲ್ಲಿ ಯಾವುದೇ ಒಂದು ಸವಾಲಾಗದೆ ಕೇವಲ ಆಕರ್ಷಕ ಮೇಲ್ಮೈಯನ್ನು ಕೌಶಲ ಪೂರ್ಣವಾಗಿ, ಜಾಣ್ಮೆಯಿಂದ ಪುನರಾವರ್ತಿಸುವ ಕ್ರಿಯೆಯಷ್ಟೇ ಆಗಿ ನಿರಾಶೆಯುಂಟಾಗುತ್ತದೆ.

ಜೆ. ಎಂ. ಎಸ್. ಮಣಿ ಅವರು, ಜಿ. ಎಸ್. ಶೆಣೈ ಅವರೊಂದಿಗೆ, ಸಿಂಗಪುರ ಮತ್ತು ಮಲೇಶಿಯಗಳಲ್ಲಿಯೂ ಈ ವರ್ಷ ತಮ್ಮ ಹೊಸ ಕೃತಿಗಳನ್ನು ಪ್ರದರ್ಶಿಸಿದ್ದಾರೆ. ಮಣಿಯವರ ಕೃತಿಗಳಲ್ಲಿ ಭಾವತೀವ್ರತೆ ಮತ್ತು ಲಯಬದ್ಧತೆಗಳು ವಿಶೇಷವಾಗಿ ಎದ್ದು ಕಾಣುತ್ತವೆ. ಈ ಅಂಶಗಳನ್ನು ಒಳಗೊಂಡ, ಬಾದಾಮಿಯ ಜನ-ಜೀವನವನ್ನು ನಿರೂಪಿಸುವ, ಅವರ ಕೆಲವು ಜನಪ್ರಿಯ ಕೃತಿಗಳು ಇಲ್ಲಿ ಸೇರ್ಪಡೆಯಾಗಿದ್ದವು. ವೃತ್ತಿಯಿಂದ ಇಂಜಿನಿಯರಾಗಿರುವ, ಸ್ವಂತ ಕಲಿಕೆಯಿಂದ ಕಲಾವಿದರಾಗಿರುವ ಭಾಸ್ಕರರಾವ್ ಈಗಾಗಲೇ ಪ್ರಸಿದ್ಧ ಕಲಾವಿದರಾಗಿದ್ದಾರೆ. ಹತ್ತಿರದ ಜೀವನ, ಪರಿಸರಗಳನ್ನು ಸೆರೆಹಿಡಿಯುವ ಅವರ ಮೂಲಭೂತ ಅಸಕ್ತಿಯು ೧೯೯೩ರ ಅವರ ಕಲಾಪ್ರದರ್ಶನದಲ್ಲೂ ಪ್ರಧಾನವಾಗಿದೆ. ಈ ಕೃತಿಗಳಲ್ಲಿನ ಅಕೃತಿ ಅಥವಾ ಸನ್ನಿವೇಶಗಳಲ್ಲಿ ಒಂದು ರೀತಿಯ ಅಚಲತೆಯು ಎದ್ದು ಕಾಣುತ್ತದೆ. ಹತ್ತಿರದ ಸಾಮೂಹಿಕ ಜೀವನದಲ್ಲಿ ಆಸಕ್ತಿ ವಹಿಸಿರುವ ಕೆ. ಟಿ. ಶಿವಪ್ರಸಾದ್ ಅಥವಾ ಯೂಸುಫ್ ಅರಕ್ಕಲ್ ಅವರಂಥ ಕಲಾಕೃತಿಗಳಿಗೆ ಹೋಲಿಸಿದಾಗ ಇವು ಪೇಲವವೆನಿಸಿದರೆ

ಆಶ್ಚರ್ಯವಿಲ್ಲ. ಶಿವಪ್ರಸಾದರ ಕೃತಿಗಳ ಜೀವನೋತ್ಸಾಹವಾಗಲಿ, ಅರಕ್ಕಲ್ ಅವರ ಕೃತಿಗಳ ಮೈವಳಿಕೆ ಅಥವಾ ತೆರಪಿಗೆ ಸಂಬಂಧಿಸಿದ-ಯಾವುದೇ ಮಟ್ಟದ-ಲವಲವಿಕೆಯಾಗಲೀ ಇಲ್ಲಿ ಕಾಣುವುದಿಲ್ಲ. ಹಾಗೆ ನೋಡಿದರೆ, ರಿನೆಸಾನ್ಸ್ ಗೆಲರಿಯಲ್ಲಿ (ಡಿಸೆಂಬರ್‌ನಲ್ಲಿ) ಆದ 'ಕಾವಾ'ದ ಕಲಾಶಿಕ್ಷರ ಪ್ರದರ್ಶನದ ಮೂಲಕ, ಇದೇ ಪೀಳಿಗೆಯ ರಾಂದಾಸ್ ಆದ್ಯಂತಾಯ ಅವರು ಹೊಸ ನಿರೀಕ್ಷೆ, ಭರವಸೆಗಳನ್ನು ಉಂಟುಮಾಡಿದ್ದಾರೆ.(ಈ ಕಲಾಪ್ರದರ್ಶನದಲ್ಲಿ ಪಾಲ್ಗೊಂಡ ಇತರ ಕಲಾವಿದರು ಬಸವರಾಜ ಮುಸಾವಳಗಿ, ಎಸ್. ಎಸ್. ಪ್ರದೀಪ್‌ಕುಮಾರ್, ವಿ. ಎ. ದೇಶಪಾಂಡೆ, ಜಿ. ಎಸ್. ಶೆಣೈ ಮತ್ತು ಉಲ್ಲಾಸ್.) ರಾಂದಾಸ್ ಅವರು ಪೂರ್ವಸಿದ್ಧ ಶೈಲಿಗಳಿಗೆ ಕಟ್ಟು ಬೀಳದೆ ಅಪಾರ ದಿಟ್ಟತನ ಮತ್ತು ಆತ್ಮವಿಶ್ವಾಸಗಳನ್ನು ಪ್ರಕಟಿಸಿದ್ದಾರೆ. ದೆಹಲಿಯ ಟ್ರಿನಾಲೆಯಲ್ಲಿ ಪ್ರಶಸ್ತಿಗಳಿಸಿದ ಪಾಶ್ಚಾತ್ಯ ಕಲಾವಿದೆ ಗಿಲಿಯನ್ ಐಯರ್ಸ್ ಅವರ ಪ್ರಭಾವವು ರಾಂದಾಸರ ಈ ಕೃತಿಗಳ ಮೇಲೆ ಮುಜುಗರ ಪಡಿಸುವಷ್ಟು ನೇರವಾಗಿದೆ. ಆದರೂ, ಈ ಮೂಲಕ ರಾಂದಾಸರು ಸೂಚಿಸಿರುವ ಮುಕ್ತ ಮನಸ್ಸು ಅವರ ಪೀಳಿಗೆಗೇ ವಿಶೇಷವಾದ್ದು. ಮೂಲಭೂತವಾಗಿ ಕಾಂತಿಯುತ ಬಣ್ಣ, ಅಮೂರ್ತ ಆಕೃತಿಗಳಿಂದ ಪರಿಣಾಮಕಾರಿ ಚಿತ್ರಗಳಾಗಿರುವ ಇವು ರಾಂದಾಸರ ಮುಂದಿನ ಬೆಳವಣಿಗೆಯಲ್ಲಿ ಕುತೂಹಲ ಕೆರಳಿಸಿವೆ. ಇಂಥ ಕಲಾಪ್ರದರ್ಶನಗಳಾಚೆಗೆ, ಇನ್ನಷ್ಟು ವ್ಯಾಪ್ತ ಮಟ್ಟದಲ್ಲಿ ಆಗಿರುವ ಈ ವರ್ಷದ ಇತರ ಬೆಳವಣಿಗೆಗಳೂ ಅತ್ಯಂತ ಆಶಾದಾಯಕವಾಗಿವೆ. ಬೆಂಗಳೂರು ಆರ್ಟ್ ಸೊಸೈಟಿಯವರು ಸೆಪ್ಟೆಂಬರ್‌ನಲ್ಲಿ ಏರ್ಪಡಿಸಿದ್ದ, ರಾಜಾರವಿವರ್ಮನನ್ನು ಕುರಿತ ವಿಚಾರ ಸಂಕೀರ್ಣವು ಇಂಥ ಬೆಳವಣಿಗೆಗಳಲ್ಲಿ ಒಂದು. ರವಿವರ್ಮನ ಓಲಿಯೋಗ್ರಾಫ್‌ಗಳನ್ನು, ಕೆಲವು ಕಲಾಕೃತಿಗಳ ಸ್ಲೈಡ್‌ಗಳನ್ನು ಈ ಕಾರ್ಯಕ್ರಮದ ಭಾಗವಾಗಿ ಪ್ರದರ್ಶಿಸಲಾಗಿತ್ತು. ನಮ್ಮ ಅಭಿರುಚಿ, ಗ್ರಹಿಕೆಗಳ ಪುನರ್‌ಪರಿಶೀಲನೆಗೆ ಇಂಥ ಕಾರ್ಯಕ್ರಮಗಳು ಅನಿವಾರ್ಯವೇ ಆಗಿವೆ. ಸೃಜನಶೀಲ ಕಲೆಗಳಿಗೆ ಮೀಸಲಾದ 'ಸಂಕುಲ' ದ್ವೈಮಾಸಿಕದ ಮೊದಲ ಸಂಚಿಕೆಯೂ ಹೊರಬಂದಿದೆ.

ಹೊರರಾಜ್ಯದ ಹಲವಾರು ಗಣ್ಯಕಲಾವಿದರ ಕೃತಿಗಳನ್ನು ಬೆಂಗಳೂರಿನ ಕಲಾಗೆಲರಿಗಳು ಕಳೆದ ಐದಾರು ವರ್ಷಗಳಿಂದ ಪ್ರದರ್ಶಿಸುತ್ತಲೇ ಇವೆ. ೧೯೯೩ರಲ್ಲಿ ನಡೆದ ಇಂಥ ಕೆಲವು ಪ್ರದರ್ಶನಗಳಲ್ಲಿ ಅಕ್ಬರ್ ಪದಾಮ್ಸಿ, ಅಚ್ಯುತನ್ ಕುಡಲೂರ್, ನವಜೊತ್ ಮತ್ತು ಅಲ್ತಾಫ್ ('ಸಾಕ್ಷಿ'ಗೆಲರಿ) ಆದಿವ್ರೇಕರ್ ( ಮಾರ್ಚ್, 'ಕ್ರಿಂಸನ್') ಆದಿ ಮೂಲಂ (ನವೆಂಬರ್,ಕ್ರಿಂಸನ್) ಸೂರ್ಯಪ್ರಕಾಶ್ (ಜೂನ್, ಕ್ರಿಂಸನ್) ಮುಂತಾದವರ ಏಕವ್ಯಕ್ತಿ ಪ್ರದರ್ಶನಗಳು ಇಲ್ಲಿ ನೆನಪಿಗೆ ಬರುತ್ತವೆ. ಈ ಕಲಾಪ್ರದರ್ಶನಗಳಲ್ಲಿ ಸಾಮಾನ್ಯವಾಗಿ ಆಯಾ ಕಲಾವಿದರೂ ಸ್ವತ: ಉಪಸ್ಥಿತರಾಗಿ ತಮ್ಮ ವಿಚಾರಗಳನ್ನು ಹಂಚಿಕೊಂಡಿದ್ದಾರೆ. ಇಂಥ ಕಲಾವಿದರಲ್ಲಿ ಅಕ್ಬರ್ ಪದಾಮ್ಸಿಯವರು ಒಬ್ಬ, ಸೃಜನಶೀಲ ಕಲಾವಿದರಾಗಿ ತಮ್ಮ ಮಾತು ಮತ್ತು ಕಲಾಕೃತಿಗಳೆರಡಲ್ಲೂ ಪ್ರಕಟ ಮಾಡಿರುವ ಗಂಭೀರ ಆಸಕ್ತಿಗಳು ನಮ್ಮ ಗ್ರಹಿಕೆಯ ಕ್ರಮ ಮತ್ತು ರಚನಾ ತಂತ್ರಗಳಿಗೊಂದು ಹೊಸ ದಿಕ್ಕನ್ನು ಸೂಚಿಸಬಹುದು

ನಮ್ಮ ಕಲಾಸನ್ನಿವೇಶದ ಒಂದು ವಿಶಿಷ್ಟ ಗುಣವೆಂದರೆ, ವೈವಿಧ್ಯ. ಇದು ಎಷ್ಟರ ಮಟ್ಟಿಗೆ ಆಯಾ ಕಲಾವಿದರ ಸತ್ವವಾಗಿದೆ ಎಂಬುದು ಬೇರೆಯೇ ಪ್ರಶ್ನೆ. ಈ ವೈವಿಧ್ಯಕ್ಕೆ ಮುಕ್ತಮನಸ್ಸಷ್ಟೇ ಕಾರಣವಾಗಿದೆಯೇ ಎಂಬುದನ್ನು ಖಚಿತವಾಗಿ ಹೇಳಲಾರೆ.

**೧೯೯೩ರ ಕೆಲವು ಮುಖ್ಯ ಸಾಮೂಹಿಕ ಕಲಾಪ್ರದರ್ಶನಗಳು**

-ಫೆಬ್ರುವರಿ, ಧಾರವಾಡ: ಕಲಾಶಿಬಿರ ಮತ್ತು ಕಲಾಪ್ರದರ್ಶನಗಳಿಂದ ಕೂಡಿದ 'ವಧಾಮೇಳ'.

- ಏಪ್ರಿಲ್, ಬೆಂಗಳೂರು: ಉಡುಪಿಯ ಆರ್ಟಿಸ್ಟ್ ಫೋರಂನ ಕಲಾವಿದರ ಸಾಮೂಹಿಕ ಕಲಾಪ್ರದರ್ಶನ.

- ಜೂನ್, ಬೆಂಗಳೂರು: ಅಂತಾರಾಷ್ಟ್ರೀಯ ಖ್ಯಾತಿಯ ಗ್ರಾಫಿಕ್ ಕಲಾವಿದ ಡಾ.ಕೃಷ್ಣ ರೆಡ್ಡಿಯವರ ಕಲಾಕೃತಿಗಳ ಪ್ರದರ್ಶನ ಚಿತ್ರಕಲಾ ಪರಿಷತ್ತಿನಲ್ಲಿ.

- ಜೂನ್, ಬೆಂಗಳೂರು: ರಾಜ್ಯ ಲಲಿತಕಲಾ ಅಕಾಡೆಮಿಯು ನಡೆಸಿದ ಅಖಿಲಭಾರತ ಗ್ರಾಫಿಕ್ ಕಲಾಪ್ರದರ್ಶನ.

- ಆಗಸ್ಟ್, ಶಹಾಬಾದ್: ಹೊಯ್ಸಳ ಚಿತ್ರಕಲಾನಿಕೇತನದ ಕಲಾವಿದರು ಏರ್ಪಡಿಸಿದ್ದ ತಮ್ಮ ಸಾಂಪ್ರಾದಾಯಿಕ ಕಲಾಕೃತಿಗಳ ಎರಡನೇ ಕಲಾಪ್ರದರ್ಶನ.

- ಆಗಸ್ಟ್, ಮೈಸೂರು: ನಾಗಪುರದ ದಕ್ಷಿಣ ಮಧ್ಯಮವಲಯ ಸಂಸ್ಕೃತಿ ಕೇಂದ್ರ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯೊಂದಿಗೆ ನಡೆಸಿಕೊಟ್ಟ ಸಾಂಪ್ರದಾಯಿಕ ಚಿತ್ರಕಲಾಶಿಬಿರ.

- ಸೆಪ್ಟೆಂಬರ್, ಮಧುಗಿರಿ: ಬೆಂಗಳೂರಿನ ಚಿತ್ರಕಲಾಪರಿಷತ್ತು ಏರ್ಪಡಿಸಿದ್ದ ರಾಜ್ಯಮಟ್ಟದ ಜಲವರ್ಣ ಕಲಾಶಿಬಿರ.

- ಸೆಪ್ಟೆಂಬರ್, ಧಾರವಾಡ: ಕರ್ನಾಟಕ ವಿದ್ಯಾವರ್ಧಕ ಸಂಘವು ನಡೆಸಿದ ರಾಜ್ಯಮಟ್ಟದ ಚಿತ್ರಕಲಾವಿದೆಯರ ಶಿಬಿರ.

- ನವೆಂಬರ್, ಮೈಸೂರು: ರಾಜ್ಯಲಲಿತಕಲಾ ಅಕಾಡೆಮಿಯ ಪ್ರಥಮ "ಅಖಿಲ ಭಾರತ ಛಾಯಾಚಿತ್ರ ಪ್ರದರ್ಶನ''.

-ನವೆಂಬರ್,ಧಾರವಾಡ: ರಾಜ್ಯ ಲಲಿತಕಲಾ ಅಕಾಡೆಮಿಯ ೨೩ನೇ ವಾರ್ಷಿಕ ಕಲಾ ಪ್ರದರ್ಶನ.

- ಡಿಸೆಂಬರ್, ಬೆಂಗಳೂರು: ಕಲಾಮಂದಿರವು ತನ್ನ ಅಮೃತ ಮಹೋತ್ಸವ ವರ್ಷದ ಅಂಗವಾಗಿ ನಡೆಸಿದ ಚಿತ್ರಕಲಾ ಪ್ರದರ್ಶನ.

-ಡಿಸೆಂಬರ್, ಬೆಂಗಳೂರು: ಕರ್ನಾಟಕ ಚಿತ್ರಕಲಾ ಪರಿಷತ್ತಿನ "೧೫ನೇ ಅಖಿಲಭಾರತ ಕಲಾಪ್ರದರ್ಶನ -೧೯೯೩".

## ವಿವಿಧ ಪ್ರಶಸ್ತಿ, ಪುರಸ್ಕಾರ, ವ್ಯಾಸಂಗವೇತನಗಳು

*ಕರ್ನಾಟಕ ಲಲಿತಕಲಾ ಅಕಾಡೆಮಿಯ ವಾರ್ಷಿಕ ಗೌರವ ಪ್ರಶಸ್ತಿ :*

೧. ಎಲ್. ಪಿ. ಅಂಚನ್, ಬೆಂಗಳೂರು
೨. ವಿ. ಆರ್. ಶೆಟ್ಟಿ, ಕುಮುಟ
೩. ರಾಮನರಸಯ್ಯ, ಮೈಸೂರು
೪. ಎಂ. ಜೆ. ಕಮಲಾಕ್ಷಿ, ಬೆಂಗಳೂರು
೫. ಶಂಕರಗೌಡ ಬೆಟ್ಟದೂರು, ರಾಯಚೂರು.

*ಕರ್ನಾಟಕ ಲಲಿತಕಲಾ ಅಕಾಡೆಮಿಯ ೨೩ನೇ ವಾರ್ಷಿಕ ಕಲಾಪ್ರದರ್ಶನ ಬಹುಮಾನಿತರು :*

೧. ವಿ. ಬಿ. ಹಿರೇಗೌಡರ್
೨. ವಿ.ಸಂಪತ್‌ಕುಮಾರ್
೩. ಬಸವರಾಜ ಎಲ್. ಜಾನೆ
೪. ಶಿವಾನಂದ ಬಂಟನೂರು
೫. ಬಿ. ಸರಸ್ವತಿ

*ಬೇಂದ್ರೆ-ಹುಸೇನ್ ಶಿಷ್ಯವೇತನ :*

ಮುಂಬಯಿಯ ಬಾಂಬೆ ಆರ್ಟ್ ಸೊಸೈಟಿಯವರು ೨೫ ರಿಂದ ೩೫ರ ವಯಸ್ಸಿನ ಒಳಗಿರುವ ಕಲಾವಿದ್ಯಾರ್ಥಿಗಳಿಗೆ ಬೇಂದ್ರೆ-ಹುಸೇನ್ ಶಿಷ್ಯವೇತನವನ್ನು ನೀಡುತ್ತಿದೆ. ಈ ವರ್ಷದ ಶಿಷ್ಯವೇತನವು ಯುವಕಲಾವಿದ ಎಂ. ಸಿ. ರಮೇಶ್ ಅವರಿಗೆ ದೊರಕಿದೆ.

*ಇನ್‌ಲ್ಯಾಕ್ಸ್ ಶಿಷ್ಯವೇತನ-ವಿದೇಶವ್ಯಾಸಂಗ :*

೧೯೯೩-೧೯೯೪ರ ಶೈಕ್ಷಣಿಕ ವರ್ಷದ. ವಿದೇಶ ವ್ಯಾಸಂಗಕ್ಕಾಗಿ, ಕೆನ್ ಕಲಾಶಾಲೆಯ ಓಂ ಪ್ರಕಾಶ್ ಅವರಿಗೆ ಇನ್‌ಲ್ಯಾಕ್ಸ್ ಶಿಷ್ಯವೇತನ ಸಿಕ್ಕಿದೆ. ಇವರು ಈಗ ಲಂಡನ್ನಿನ ರಾಯಲ್ ಕಾಲೇಜ್ ಆಫ್ ಆರ್ಟ್ಸ್‌ನಲ್ಲಿ ಶಿಲ್ಪಕಲಾ ವ್ಯಾಸಂಗ ಮಾಡುತ್ತಿದ್ದಾರೆ.

*ಇನ್‌ಲಾಕ್ಸ್ ಶಿಷ್ಯವೇತನದಿ ಭಾರತದಲ್ಲಿ ವ್ಯಾಸಂಗ :*

ಭಾರತದ ಒಳಗೆ ಅಧ್ಯಯನ, ಕಲಾಕೃತಿಗಳ ರಚನೆಯಲ್ಲಿ ತೊಡಗಲು ಮೀಸಲಾಗಿರುವ ಈ ವೇತನವು ಈ ಬಾರಿ ತರುಣ ಕಲಾವಿದರಾದ ಎಸ್.ರವಿ ಶಂಕರರಾವ್ ಮತ್ತು ರಾಘವೇಂದ್ರರಾವ್ ಅವರಿಗೆ ದಕ್ಕಿದೆ.

# ಸಮೂಹ ಶಿಲ್ಪಶಿಬಿರ

ಕರ್ನಾಟಕ ಲಲಿತಕಲಾ ಅಕಾಡೆಮಿಯು ಕನ್ನಡ ವಿಶ್ವವಿದ್ಯಾಲಯದ ಸಹಯೋಗದಲ್ಲಿ ಮುಂದಿನ ವರ್ಷ ಶಿಲ್ಪಕಲಾ ಶಿಬಿರವೊಂದನ್ನು ನಡೆಸಲಿದೆ ಎಂದು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಪಿ.ಅರ್. ತಿಪ್ಪೇಸ್ವಾಮಿ ಅವರು ಹೇಳಿದರು. ಕನ್ನಡ ವಿಶ್ವವಿದ್ಯಾಲಯದ ಲಲಿತಕಲೆಗಳ ನಿಕಾಯವು ತಂಜಾವೂರಿನ ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರದ ಸಹಯೋಗದೊಂದಿಗೆ ಮೂರು ತಿಂಗಳ ಕಾಲ ನಡೆಸಲಿರುವ'ಸಮೂಹ ಶಿಲ್ಪ ಶಿಬಿರ'ವನ್ನು ಡಿಸೆಂಬರ್ ೧೫ ರಂದು ಹಂಪಿಯಲ್ಲಿ ಅವರು ಉದ್ಘಾಟಿಸಿ ಮಾತನಾಡಿದರು."ಕರ್ನಾಟಕದಲ್ಲಿ ಹೆಸರಾಂತ ಶಿಲ್ಪಿಗಳಿದ್ದರೂ ಅವರಿಗೆ ತಕ್ಕ ಮನ್ನಣೆ, ಅವಕಾಶಗಳು ನಮ್ಮಲ್ಲಿ ಸಿಗುತ್ತಿಲ್ಲ. ಕನ್ನಡ ವಿಶ್ವವಿದ್ಯಾಲಯ ಈಗ ಪ್ರಾರಂಭಿಸಿರುವ 'ಸಮೂಹ ಶಿಲ್ಪ ಶಿಬಿರ' ಕರ್ನಾಟಕದ ಶಿಲ್ಪಿಗಳಿಗೆ ಪ್ರೋತ್ಸಾಹ ನೀಡುವುದು" ಎಂಬ ಆಶಯವನ್ನು ಅವರು ವ್ಯಕ್ತಪಡಿಸಿದರು.

ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಕರ್ನಾಟಕ ಜಾನಪದ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎಚ್. ಎಲ್. ನಾಗೇಗೌಡ ಅವರು "ಭಾರತದ ಪ್ರತಿ ಹಳ್ಳಿಯಲ್ಲೂ ನಾವು ಒಂದಲ್ಲ ಒಂದು ಬಗೆಯ ಶಿಲ್ಪಕಲಾಕೃತಿಗಳನ್ನು ಕಾಣುತ್ತೇವೆ. ವೀರಗಲ್ಲು, ಮಾಸ್ತಿಗಲ್ಲು ಅಂತಹವುಗಳಲ್ಲಿ ಮುಖ್ಯವಾದವುಗಳು. ಇವುಗಳನ್ನು ಪ್ರಾಚ್ಯವಸ್ತು ಸಂಗ್ರಹಾಲಯಗಳು ಸಂರಕ್ಷಿಸಲು ಆಗುತ್ತಿಲ್ಲ. ಕನ್ನಡ ವಿಶ್ವವಿದ್ಯಾಲಯವು ತನ್ನ ಪರಿಸರದಲ್ಲಿರುವ ಇಂತಹ ಶಿಲ್ಪಕೃತಿಗಳನ್ನು ಸಂಗ್ರಹಿಸಿ, ಸಂರಕ್ಷಿಸುವ ಕಾರ್ಯವನ್ನು ಮಾಡಬೇಕು"ಎಂದು ಸಲಹೆ ಮಾಡಿದರು.

ಮಾನ್ಯ ಕುಲಪತಿಗಳು ಅಧ್ಯಕ್ಷತೆ ವಹಿಸಿ ಮಾತನಾಡಿ, "ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರಕ್ಕೆ (ತಂಜಾವೂರು) ಕರ್ನಾಟಕ ಸರ್ಕಾರ ಹಣವನ್ನು ಕೊಟ್ಟಿದೆ. ತಮಿಳುನಾಡು, ಕೇರಳ, ಆಂಧ್ರಪ್ರದೇಶ ರಾಜ್ಯ ಸರ್ಕಾರಗಳು ಕೂಡ ಹಣವನ್ನು ನೀಡಿವೆ. ಆದರೆ ನಾಲ್ಕು ರಾಜ್ಯಗಳಿಗೂ ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಸಮಾನವಾಗಿ ಹಣ ನೀಡುತ್ತಿಲ್ಲ. ಇಂಥ ಸಂಸ್ಥೆಯಲ್ಲಿ ಕರ್ನಾಟಕದ ಅಧಿಕಾರಿಗಳು ಒಬ್ಬರೂ ಇಲ್ಲ. ಸಭೆಗಳನ್ನು ಕರೆಯುವಾಗ, ಯೋಜನೆಗಳನ್ನು ಸಿದ್ಧಪಡಿಸಿ ತನ್ನಿ ಎಂದು ಹೇಳುತ್ತಾರೆ. ಯೋಜನೆಗಳನ್ನು ತಲುಪಿಸುವುದರೊಳಗೆ ಸಭೆಗಳನ್ನು ಮುಗಿಸಿ ಬಿಟ್ಟಿರುತ್ತಾರೆ. ಇದೆಲ್ಲಾ ಒಂದು ಬಗೆಯ ಹುನ್ನಾರವಾಗಿದೆ. ಈ ವರ್ಷ ಕನ್ನಡ ವಿಶ್ವವಿದ್ಯಾಲಯ ರೂಪಿಸಿ ಕಳಿಸಿದ್ದ ಸಮೂಹ ಶಿಲ್ಪ ಶಿಬಿರ, ಬಯಲಾಟಗಳ ಉತ್ಸವ, ಜಾನಪದ ಕಲಾ ಮಹೋತ್ಸವ ಈ ಮೂರು ಯೋಜನೆಗಳಿಗೆ ಮಂಜೂರಾತಿ, ದೊರೆತಿತ್ತು. ಆದರೆ ಈ ವಿಷಯವನ್ನು ಕನ್ನಡ

ವಿಶ್ವವಿದ್ಯಾಲಯಕ್ಕಾಗಲಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಾಗಲಿ ತಿಳಿಸಲೇ ಇಲ್ಲ. ಕೇವಲ ಸಮೂಹ ಶಿಲ್ಪ ಶಿಬಿರಕ್ಕೆ ಮಾತ್ರ ಹಣದ ಸಹಾಯ ನೀಡಿದ್ದಾರೆ. ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರವು ಹೀಗೆ ತಾರತಮ್ಯ ತೋರುತ್ತಿದೆ" ಎಂದು ಕುಲಪತಿಗಳು ವಿಷಾದ ವ್ಯಕ್ತಪಡಿಸಿದರು.

ಕನ್ನಡ ವಿಶ್ವವಿದ್ಯಾಲಯವು ಏರ್ಪಡಿಸಿರುವ ಈ ಸಮೂಹ ಶಿಲ್ಪ ಶಿಬಿರವು ಪೂರ್ಣಗೊಂಡಾಗ ರಾಜ್ಯಕ್ಕೆ ಮಾದರಿಯಾದ ಶಿಲ್ಪವನ ರೂಪುಗೊಳ್ಳುವುದೆಂದು ಕುಲಪತಿಗಳು ಆಶಯ ವ್ಯಕ್ತಪಡಿಸಿದರು. ಕನ್ನಡ ವಿಶ್ವವಿದ್ಯಾಲಯದ ನೂತನ ಆವರಣ'ವಿದ್ಯಾರಣ್ಯ'ದಲ್ಲಿ ಮೂರು ತಿಂಗಳವರೆಗೆ ನಡೆಯುತ್ತಿರುವ ಈ ಶಿಬಿರದಲ್ಲಿ ಕರ್ನಾಟಕದ ವಿವಿಧೆಡೆಗಳಿಂದ ಬಂದಿರುವ ೧೬ ಮಂದಿ ಶಿಲ್ಪಿಗಳು ಭಾಗವಹಿಸಿದ್ದಾರೆ. ಸ್ಥಳೀಯ ಶಿಲ್ಪಿಗಳ ಸಹಕಾರವನ್ನು ಸಹ ಪಡೆದುಕೊಳ್ಳಲಾಗುತ್ತಿದೆ. ಕುಲಸಚಿವರಾದ ಡಾ ಕೆ. ವಿ. ನಾರಾಯಣ ಅವರು ಸ್ವಾಗತಿಸಿದರು. ಯೋಜನಾಧಿಕಾರಿಗಳಾದ ಶ್ರೀ ಎ. ವಿ. ನಾವಡ ಅವರು ಕಾರ್ಯಕ್ರಮ ನಿರ್ವಹಿಸಿದರು. ಶಿಬಿರದ ನಿರ್ದೇಶಕರಾದ ಶ್ರೀ ಜಿ. ಜಯಕುಮಾರ್ ವಂದಿಸಿದರು.

## ಮಣ್ಣಿನ ಕಲಾಕೃತಿ ರಚನಾ ಶಿಬಿರ

ಕನ್ನಡ ವಿಶ್ವವಿದ್ಯಾಲಯವು ಜನವರಿ ೨೬ ರಿಂದ ೩೦ರ ವರೆಗೆ ಕಮಲಾಪುರದ ಲಲಿತಕಲೆಗಳ ನಿಕಾಯದ ಆವರಣದಲ್ಲಿ ಮಣ್ಣಿನ ಕಲಾಕೃತಿ ರಚನಾ ಶಿಬಿರವನ್ನು ಏರ್ಪಡಿಸಿತ್ತು. ಐದುದಿನಗಳ ಕಾಲ ನಡೆದ ಈ ಶಿಬಿರದಲ್ಲಿ ರಾಜ್ಯದ ವಿವಿಧೆಡೆಗಳಿಂದ ಆಗಮಿಸಿದ ೨೬ಜನ ಶಿಬಿರಾರ್ಥಿಗಳು ಪಾಲ್ಗೊಂಡಿದ್ದರು. ಬೆಂಗಳೂರಿನ ಕೆನ್ ಕಲಾಶಾಲೆಯ ಕಲಾವಿದರಾದ ಶ್ರೀ ಜೆ. ಎಂ. ಎಸ್. ಮಣಿ ಶಿಬಿರದ ನಿರ್ದೇಶಕರಾಗಿದ್ದರು. ಈ ಶಿಬಿರದಲ್ಲಿ ಕಮಲಾಪುರದ ಕುಂಬಾರ ಮಹದೇವಪ್ಪನವರು ನೀಡಿದ ನೆರವು ಶಿಬಿರಕ್ಕೆ ಕಳೆತಂದಿತ್ತು. ಶಿಬಿರಾರ್ಥಿಗಳು ಹಂಪಿಯ ವಿವಿಧ ಸ್ಥಳಗಳನ್ನು ಸೆರೆಹಿಡಿದ ಕಲಾಕೃತಿಗಳ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ಕನ್ನಡ ವಿಶ್ವವಿದ್ಯಾಲಯದ ದೃಶ್ಯ ಕಲಾವಿಭಾಗದ ಅಧ್ಯಾಪಕ ಜಿ. ಜಯಕುಮಾರ್ ಅವರು ಶಿಬಿರದ ನೇತೃತ್ವ ವಹಿಸಿದ್ದರು.





# ರಂಗಭೂಮಿ

*ಶಿವಾನಂದ ಹಾಸಕ್ಕ*

ಭಾರತದ ಇತರ ಭಾಷೆಯ ರಂಗಭೂಮಿಗೆ ಹೋಲಿಸಿದರೆ ಕನ್ನಡ ರಂಗಭೂಮಿ ಕೊಡುವ ಸಂವೇದನೆ ವಿಶಿಷ್ಟವಾದದ್ದು. ನಮ್ಮಲ್ಲಿರುವ ಜಾನಪದ ರಂಗಭೂಮಿ, ವೃತ್ತಿ ಕಂಪನಿ, ಹವ್ಯಾಸಿ ರಂಗಭೂಮಿ, ಬೀದಿನಾಟಕ ಮುಂತಾದ ಪ್ರಯೋಗಗಳ ವೈವಿಧ್ಯಮಯ ರಂಗ ಚಟುವಟಿಕೆಗಳು ಇಂದಿಗೂ ನಡೆಯುತ್ತಿರುವುದು ಹೆಮ್ಮೆಯ ವಿಷಯ.

ಎಪ್ಪತ್ತರ ದಶಕದಲ್ಲಿ ರಂಗಭೂಮಿಗೆ ಲಂಕೇಶ್, ಗಿರೀಶ್ ಕಾರ್ನಾಡ್, ಚಂದ್ರಶೇಖರ ಕಂಬಾರ ಮುಂತಾದವರು ಹಾಕಿ ಕೊಟ್ಟ ಅಡಿಗಲ್ಲ ಮೇಲೆ ಆಧುನಿಕ ಕನ್ನಡ ರಂಗಭೂಮಿಗೆ ಭದ್ರ ಕಟ್ಟಡ ಕಟ್ಟುವ ಕೆಲಸವನ್ನು ಇಂದು ಹೊಸ ಪೀಳಿಗೆ ಮುಂದುವರಿಸಿಕೊಂಡು ಬರುತ್ತಿದೆ.

ಇಡೀ ವರ್ಷ ನಮ್ಮಲ್ಲಿ ನಾಟಕ ಪ್ರದರ್ಶನ, ನಾಟಕ ಸ್ಪರ್ಧೆ, ನಾಟಕೋತ್ಸವ, ರಂಗತರಬೇತಿ ಶಿಬಿರ, ವಿಚಾರ ಸಂಕಿರಣ, ನಾಟಕ ಪುಸ್ತಕಗಳ ಪ್ರಕಟಣೆ ಮುಂತಾದ ಚಟುವಟಿಕೆಗಳು ನಡೆಯುತ್ತಾ ಬಂದಿವೆ. ಇವುಗಳಲ್ಲಿ ಕೆಲವು ಮಹತ್ವದ ಸಂಗತಿಗಳನ್ನು ಇಲ್ಲಿ ದಾಖಲಿಸಬಹುದು.

ಕವಿ ಕುವೆಂಪು ಅವರನ್ನು ಕುರಿತ 'ರಸಋಷಿ' ನಾಟಕವನ್ನು ಸಿ. ಆರ್. ಸಿಂಹ ನಿರ್ದೇಶಿಸಿ ಅಭಿನಯಿಸಿದ ಮೊದಲ ಪ್ರದರ್ಶನ ಜನವರಿ ೧೩ರಂದು ಮೈಸೂರಿನಲ್ಲಿ ಜರುಗಿತು. ಸಿಂಹ ಅವರು ೨ನೇ ಬಾರಿ ವಿದೇಶ ಪ್ರಯಾಣ ಮಾಡಿ, ಅಕ್ಟೋಬರ್ ೨೬ರಿಂದ ಡಿಸೆಂಬರ್ ೧೮ರವರೆಗೆ ಇಂಗ್ಲೆಂಡ್ ಮತ್ತು ಅಮೆರಿಕಾದಲ್ಲಿ 'ಟಿಪಿಕಲ್ ಟಿ.ಪಿ. ಕೈಲಾಸಂ', 'ಮದುವೆ ಮದುವೆ', ಮತ್ತು ENCORE (ಇಂಗ್ಲಿಷ್) ನಾಟಕಗಳ ಒಟ್ಟು ೧೬ ಪ್ರದರ್ಶನ ನೀಡಿ ಬಂದಿದ್ದಾರೆ. ಪ್ರವಾಸದ ಜೊತೆಗಿದ್ದ ಶ್ರೀಮತಿ ಶಾರದ ಸಿಂಹ ಅವರು ರಚಿಸಿ, ನಿರ್ದೇಶಿಸಿದ 'ಮದುವೆ ಮದುವೆ' ನಾಟಕದಲ್ಲಿ ಅಭಿನಯಿಸಿದ್ದಾರೆ. ಫೆಬ್ರುವರಿ ತಿಂಗಳು ಅಗರತಾಲ್‌ನಲ್ಲಿ ನಡೆದ ನೌಕರರ ರಾಷ್ಟ್ರೀಯ ನಾಟಕೋತ್ಸವದಲ್ಲಿ ಬೆಂಗಳೂರಿನ ಸಚಿವಾಲಯ ಕ್ಲಬ್‌ನ ಸದಸ್ಯರು ಅಭಿನಯಿಸಿದ ಕನ್ನಡ ನಾಟಕ 'ದೇವರ ಹೆಣ' ಪ್ರದರ್ಶನವಾಯಿತು.

ಮಾರ್ಚ್‌ನಲ್ಲಿ ನಡೆದ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಅಂತರ ವಿಭಾಗ ರಾಜ್ಯ ಮಟ್ಟದ ನಾಟಕ ಸ್ಪರ್ಧೆಯಲ್ಲಿ ಗುಲ್ಬರ್ಗಾ, ಬಿಜಾಪುರ, ಮಂಗಳೂರು, ಹಾಸನ, ಬಳ್ಳಾರಿ, ಹುಬ್ಬಳ್ಳಿ, ಬೆಂಗಳೂರು ಮುಂತಾದ ೧೩ ವಿಭಾಗಗಳು ಭಾಗವಹಿಸಿದ್ದವು. ೪ ನೇ ರಾಜ್ಯ ಮಟ್ಟದ ಪುಟ್ಟಣ್ಣ ಕಣಗಾಲ್ ನಾಟಕ ಸ್ಪರ್ಧೆಯನ್ನು ರಂಗಗಂಗೋತ್ರಿ ಏರ್ಪಡಿಸಿತ್ತು.

ನವೆಂಬರ್ ೧೪ ರಿಂದ ೧೭ ರವರೆಗೆ ಸ್ಫೂರ್ತಿ ಕಲಾವಿದರು ಏರ್ಪಡಿಸಿದ್ದ ೬ನೆಯ ಅಖಿಲ ಕರ್ನಾಟಕ ಮಕ್ಕಳ ನಾಟಕ ಸ್ಪರ್ಧೆಯಲ್ಲಿ ಕಾರವಾರ, ಚಿತ್ರದುರ್ಗ, ಬೆಂಗಳೂರು ಮುಂತಾದ ಜಿಲ್ಲೆಗಳಿಂದ ಬಂದ ೨೫ ಶಾಲೆಯ ಮಕ್ಕಳು ಅಭಿನಯಿಸಿದ ೨೫ ನಾಟಕಗಳು ಪ್ರದರ್ಶನಗೊಂಡವು.

ಉಡುಪಿಯ ರಂಗಭೂಮಿ ತಂಡ ನವೆಂಬರ್ ೨೦ ರಿಂದ ಡಿಸೆಂಬರ್ ೪ ರವರೆಗೆ ಏರ್ಪಡಿಸಿದ್ದ ರಾಜ್ಯ ಮಟ್ಟದ ನಾಟಕ ಸ್ಪರ್ಧೆಯಲ್ಲಿ ೧೫ ನಾಟಕಗಳು ಪ್ರದರ್ಶನಗೊಂಡವು. ಬೈಂದೂರಿನ ಲಾವಣ್ಯ ತಂಡ ಅಭಿನಯಿಸಿದ 'ಏಕಲವ್ಯ' ನಾಟಕ ಪ್ರಥಮ ಬಹುಮಾನ ಗಳಿಸಿತು.

ಜನವರಿ ೧೫ ರಿಂದ ೩೧ರವರೆಗೆ ಉಡುಪಿಯಲ್ಲಿ ೪ನೇ ಅಖಿಲ ಭಾರತ ಕೊಂಕಣಿ ನಾಟಕ ಸ್ಪರ್ಧೆಯನ್ನು ರಂಗಭೂಮಿ ತಂಡ ಏರ್ಪಡಿಸಿತ್ತು. ಆನಂದಗಾಣಿಗ ರಚಿಸಿ, ನಿರ್ದೇಶಿಸಿದ 'ಗುವೆಲ್ ಕಳವು ಆತಂಡ್' ತುಳು ನಾಟಕ ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ೮ ಪ್ರದರ್ಶನಗಳನ್ನು ಕಂಡಿದೆ.

ಅಕ್ಟೋಬರ್ ೨೦ ರಿಂದ ೨೩ರವರೆಗೆ ಕಾರ್ಕಳದ ಮುಕುಂದ ಶೆಣೈ ಮತ್ತು ಗೆಳೆಯರ ನೇತೃತ್ವದಲ್ಲಿ ಬೆಂಗಳೂರಿನ ಪ್ರಯೋಗ ರಂಗ ತಂಡ ೪ ನಾಟಕಗಳ ಉತ್ಸವ ಆಚರಿಸಿತು.

ಮೈಸೂರು ದಸರಾ ವಸ್ತುಪ್ರದರ್ಶನದಲ್ಲಿ ಮೊಟ್ಟ ಮೊದಲ ಬಾರಿಗೆ ''ರಂಗಭೂಮಿ ನಡೆದು ಬಂದ ದಾರಿ'' ವಸ್ತುಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ಎ. ಎಸ್. ಮೂರ್ತಿಯವರು ಅತ್ಯಂತ ಸಮರ್ಪಕವಾಗಿ ನಿರ್ವಹಿಸಿದ್ದ ಈ ಪ್ರದರ್ಶನವನ್ನು ಸುಮಾರು ೨ ತಿಂಗಳ ಕಾಲ ಜನ ವೀಕ್ಷಿಸಿದರು.

ಶಂಕರ್‌ನಾಗ್ ನಾಟಕೋತ್ಸವವನ್ನು ಬೆಂಗಳೂರು ಲಲಿತಾ ಕಲಾ ಪರಿಷತ್ ಹಾಗೂ ಸಂಕೇತ್ ತಂಡ ಸಂಯುಕ್ತವಾಗಿ ಡಾ. ಎಚ್. ಎನ್. ಕಲಾಕ್ಷೇತ್ರದಲ್ಲಿ ನವೆಂಬರ್ ೩ ರಿಂದ ೯ ರವರೆಗೆ ಏರ್ಪಡಿಸಿದ್ದರು. ಮೈಸೂರು ಸಮುದಾಯ, ಬೆಂಗಳೂರು ಸಮುದಾಯ, ಮರಿಯಮ್ಮನಹಳ್ಳಿ, ಐ.ಟಿ.ಐ, ನಟರಂಗ, ಪರಸ್ಪರ ಮತ್ತು ಸಂಕೇತ್ ತಂಡಗಳು ಅಭಿನಯಿಸಿದ ೭ ನಾಟಕಗಳು ಪ್ರದರ್ಶನಗೊಂಡವು.

ಗಿರೀಶ್ ಕಾರ್ನಾಡ್‌ರ 'ನಾಗಮಂಡಲ' ನಾಟಕವನ್ನು ಅಮೆರಿಕಾದ MINNEATOLISನಲ್ಲಿ ಸೆಪ್ಟಂಬರ್ ತಿಂಗಳಲ್ಲಿ ಪ್ರಸಿದ್ಧ ರಂಗ ತಂಡ THE GUTHRIE THEATER (ಗಾತ್ರಿ ಥಿಯೇಟರ್) ಇಂಗ್ಲಿಷ್‌ನಲ್ಲಿ ೩೦ ಪ್ರದರ್ಶನಗಳನ್ನು ನೀಡಿತು. ವಿಶೇಷ ಆಹ್ವಾನದ ಮೇರೆಗೆ ಗಿರೀಶ್ ಕಾರ್ನಾಡ್ ಅಮೆರಿಕಾಕ್ಕೆ ತೆರಳಿ ಇಂಗ್ಲಿಷ್ 'ನಾಗಮಂಡಲ' ನಾಟಕದ ನಿರ್ಮಾಣದಲ್ಲಿ ಭಾಗವಹಿಸಿದರು.

**ಕುವೆಂಪು ಕಲಾಕ್ಷೇತ್ರ**

ಬೆಂಗಳೂರಿನ ಒಕ್ಕಲಿಗರ ಸಂಘದ ಆವರಣದಲ್ಲಿರುವ 'ಸಂಜಯ' ಚಿತ್ರಮಂದಿರವನ್ನು ಸುಸಜ್ಜಿತ ರಂಗಮಂದಿರವನ್ನಾಗಿ ಪರಿವರ್ತಿಸಿ 'ಕುವೆಂಪು ಕಲಾಕ್ಷೇತ್ರ'ವೆಂದು ನಾಮಕರಣ ಮಾಡಿ ಏಪ್ರಿಲ್ ೫ ರಂದು ಉದ್ಘಾಟನೆ ಮಾಡಲಾಯಿತು. ರಂಗಮಂದಿರದ ವೇದಿಕೆ ಮತ್ತು ಬೆಳಕಿನ ವಿನ್ಯಾಸವನ್ನು ಕಪ್ಪಣ್ಣ ಅವರು ಮಾಡಿದ್ದರು.

ರಂಗಾಯಣದ 'ಎತ್ತ ಹಾರಿತು ಹಂಸ' ನಾಟಕದ ಪ್ರದರ್ಶನದೊಂದಿಗೆ ಪ್ರಾರಂಭವಾದ ಕುವೆಂಪು ಕಲಾಕ್ಷೇತ್ರದಲ್ಲಿ ಹಲವಾರು ಹೊಸ ನಾಟಕಗಳು ಪ್ರದರ್ಶನವಾಗಿವೆ. ಸ್ನೇಹ ಸಂಪದ ತಂಡ ಅಕ್ಟೋಬರ್ ೧೧ ರಿಂದ ೧೭ ರ ವರೆಗೆ ೧೦ ನಾಟಕಗಳ ಉತ್ಸವವನ್ನು ಯವನಿಕಾ ಸಭಾಂಗಣದಲ್ಲಿ ಏರ್ಪಡಿಸಿತ್ತು. ಮೈಸೂರಿನ 'ಸಮತೆಂತೊ' ತಂಡ ೨೫ನೇ ವರ್ಷದ ಬೆಳ್ಳಿಹಬ್ಬ ಆಚರಿಸಿತು.

ಶ್ರೀಮತಿ ಚಿಂದೋಡಿ ಲೀಲಾ ಅವರ ವೃತ್ತಿ ಕಂಪನಿ ಶ್ರೀ ಕೆ. ಬಿ. ಆರ್. ನಾಟ್ಯಸಂಘ ೬೫ನೇ ವಾರ್ಷಿಕೋತ್ಸವದ ಅಂಗವಾಗಿ ಆಗಸ್ಟ್ ತಿಂಗಳಲ್ಲಿ 'ಧರ್ಮದ ದೌರ್ಜನ್ಯ' ನಾಟಕವನ್ನು ರವೀಂದ್ರ ಕಲಾಕ್ಷೇತ್ರದಲ್ಲಿ ಅಭಿನಯಿಸಿತು.

ಮೈಸೂರಿನ ಕದಂಬ ರಂಗವೇದಿಕೆ ಮಾರ್ಚ್‌ನಲ್ಲಿ ಮಂಜುನಾಥ ಬೆಳಕೆರೆ ರಚಿಸಿದ 'ಇದಿಮುಂಡೆ ಮಗಳು' ನಾಟಕವನ್ನು ಅಭಿನಯಿಸಿತು. ಡಿಸೆಂಬರ್‌ನಲ್ಲಿ ಕುವೆಂಪು ಅವರ 'ಬಿರುಗಾಳಿ' ನಾಟಕವನ್ನು ಶಿವಮೊಗ್ಗ ಮತ್ತು ತೀರ್ಥಹಳ್ಳಿಯಲ್ಲಿ ಪ್ರದರ್ಶನಗಳನ್ನು ನೀಡಿದೆ.

ಕುವೆಂಪು ನಾಟಕೋತ್ಸವವನ್ನು ಕದಂಬ ರಂಗವೇದಿಕೆ, ನಾಟಕ ಅಕಾಡೆಮಿ ಸಹಕಾರದೊಂದಿಗೆ ಜನವರಿ ೧೦ ರಿಂದ ೧೪ ರವರೆಗೆ ಮೈಸೂರಿನಲ್ಲಿ ಏರ್ಪಡಿಸಿತ್ತು. ರಕ್ತಾಕ್ಷಿ, ಶೂದ್ರ ತಪಸ್ವಿ, ರಸಋಷಿ ಮತ್ತು ಬಿರುಗಾಳಿ ನಾಟಕಗಳು ಪ್ರದರ್ಶನಗೊಂಡವು.

ಸಮುದಾಯ ತಂಡದಿಂದ ಮದರ್ ಕರೇಜ್, ಬಿಮೆಲ್ ಕನ್ನಡ ಸಂಘದಿಂದ ನಾಟಕ ಸ್ಪರ್ಧೆ, ರೋಟರಿ ಕ್ಲಬ್‌ನಿಂದ ಯುವಕರಿಗಾಗಿ ನಾಟಕ ಸ್ಪರ್ಧೆ, ವಿನೋದ ಕಲಾನಿಕೇತನದಿಂದ ರಾಜಾನಂದ್ ನಾಟಕ ಸಪ್ತಾಹ ಮುಂತಾದ ಚಟುವಟಿಕೆಗಳು ಮೈಸೂರಿನಲ್ಲಿ ನಡೆದವು.

ಬಳ್ಳಾರಿಯ ಮಯೂರ ಕಲಾ ಸಂಘ 'ನೆಲದಡಿಯ ಬುರುಡೆಗಳು' ನಾಟಕ ಮತ್ತು ಪರಿಸರ ಕುರಿತ ಬೀದಿ ನಾಟಕಗಳನ್ನು ಅಭಿನಯಿಸಿದೆ.

ಬೆಂಗಳೂರಿನ ಅಭಿನಯ ತರಂಗ ಭಾನುವಾರದ ರಂಗ ಶಾಲೆ ವಿದ್ಯಾರ್ಥಿಗಳಿಗಾಗಿ ರಂಗ ಚರಿತ್ರೆ, ಜಗತ್ತಿನ ರಂಗಭೂಮಿ ಸಂಕ್ಷಿಪ್ತ ಇತಿಹಾಸ, ಭಾರತೀಯ ರಂಗಭೂಮಿ, ಅಭಿನಯ, ರಂಗ ನಿರ್ದೇಶನ, ರಂಗ ವಿನ್ಯಾಸ ಮತ್ತು ಪ್ರಾತ್ಯಕ್ಷಿಕೆ, ಬೆಳಕು, ಪ್ರಸಾದನ, ವಸ್ತ್ರವಿನ್ಯಾಸ, ಪೋಸ್ಟರ್ ಮತ್ತು ಪ್ರಚಾರ ಮುಂತಾದ ವಿಷಯ ಕುರಿತು ತರಬೇತಿ ನೀಡುತ್ತಾ ಬರುತ್ತಿದೆ.



ಕುರುಡುಕಾಂಚಾಣ ನಾಟಕದ ಒಂದು ದೃಶ್ಯ

ಶಾಲಾ ಮಕ್ಕಳಿಗಾಗಿ ನಾಟಕಗಳನ್ನು ಅಭಿನಯಿಸುತ್ತಿರುವ ಇಕ್ಬಾಲ್ ಅಹ್ಮದ್ ಅವರ ಚಿಣ್ಣಬಣ್ಣ ತಂಡ ಇದುವರೆಗೂ ೩೦೦ಕ್ಕೂ ಹೆಚ್ಚು ಪ್ರದರ್ಶನಗಳನ್ನು ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ನೀಡುತ್ತಾ ಬಂದಿದೆ. ಈ ವರ್ಷ ನೀಲಿಕುದುರೆ, ಶೇಕ್ಸ್‌ಪಿಯರ್‌ನ ತುಂಟ ಬೇತಾಳಪಕ್ ಮತ್ತು ಹ್ಯಾಮ್ಲೆಟ್ ನಾಟಕಗಳನ್ನು ಅಭಿನಯಿಸಿದೆ.

ವಿರಾಜಪೇಟೆಯ ಕೊಡಗು ಸೃಷ್ಟಿರಂಗ ಕನ್ನಡ ನಾಟಕಗಳ ಜತೆ 'ಕೊಡವ' ಭಾಷಾ ನಾಟಕಗಳ ಪ್ರದರ್ಶನವನ್ನು ನೀಡುತ್ತಿದೆ. ಪ್ರತಿವರ್ಷ ೪ ನಾಟಕಗಳ ತಯಾರಿ ನಡೆಸಿ ಕರ್ನಾಟಕದ ಎಲ್ಲೆಡೆ ಸುತ್ತಿ ಪ್ರದರ್ಶನ ನೀಡುತ್ತಿದೆ.

ಅನ್ವೇಷಣೆ ಸಾಹಿತ್ಯ ಪತ್ರಿಕೆ ಮತ್ತು ಸಂಘರ್ಷ ನಾಟಕ ತಂಡ ಸಂಯುಕ್ತವಾಗಿ ಕಾಲೇಜಿಗೊಂದು ಕವಿಗೊಷ್ಠಿ ಹಾಗೂ ಬೀದಿನಾಟಕ ಎಂಬ ಕಾರ್ಯಕ್ರಮವನ್ನು ಪ್ರತಿತಿಂಗಳ ೨ನೇ ಶನಿವಾರ ವಿವಿಧ ಕಾಲೇಜುಗಳಲ್ಲಿ ನಡೆಸುತ್ತಾ ಬಂದಿದೆ. ಇದರ ಸಂಚಾಲಕ ಡಿ. ಬಿ. ಮಲ್ಲಿಕಾರ್ಜುನಸ್ವಾಮಿ ಹಲವಾರು ನಾಟಕ ಮತ್ತು ಬೀದಿ ನಾಟಕಗಳನ್ನು ನಿರ್ದೇಶಿಸಿದ್ದಾರೆ.

೧೯೯೩ರ ದಕ್ಷಿಣ ವಲಯ ನಾಟಕೋತ್ಸವ ಮಧುರೆಯಲ್ಲಿ ಪ್ರದರ್ಶನಗೊಂಡ, ಬೆಂಗಳೂರಿನ ಸಮುದಾಯ ಅಭಿನಯಿಸಿದ ಎಚ್. ಎಸ್. ಶಿವಪ್ರಕಾಶರ 'ಮಹಾಚೈತ್ರ' (ನಿರ್ದೇಶನ : ಇಕ್ಬಾಲ್ ಅಹ್ಮದ್. ಸಂಗೀತ : ಸಿ. ಬಸವಲಿಂಗಯ್ಯ, ಬೆಳಕು : ಮುದ್ದಣ್ಣ) ನಾಟಕ ರಾಷ್ಟ್ರೀಯ ನಾಟಕೋತ್ಸವಕ್ಕೆ ಆಯ್ಕೆಯಾಗಿ ಚಂಡೀಘಡದಲ್ಲಿ ಪ್ರದರ್ಶನಗೊಂಡ ಈ ವರ್ಷದ ಏಕೈಕ ನಾಟಕ. ಉಳಿದ ನಾಟಕಗಳು ಕಳೆದ ವರ್ಷ ರಾಷ್ಟ್ರೀಯ ನಾಟಕೋತ್ಸವಕ್ಕೆ ಆಯ್ಕೆಯಾದ ನಾಟಕಗಳ ಮರು ಪ್ರದರ್ಶನಗಳಾಗಿದ್ದವು. ದೆಹಲಿಯ ಕರ್ನಾಟಕ ಸಂಘ ಮತ್ತು ರಾಷ್ಟ್ರೀಯ ನಾಟಕ ಶಾಲೆ (NSD) ಹಾಗೂ ಭೂಪಾಲದ ಭಾರತ ಭವನದಲ್ಲಿ ಕೂಡ ಮಹಾಚೈತ್ರದ ಪ್ರದರ್ಶನಗಳನ್ನು ನೀಡಿದೆ.

ಬೆಂಗಳೂರಿನ 'ಕಾದಂಬರಿ' ಸಾಂಸ್ಕೃತಿಕ ಸಂಸ್ಥೆಯ ಚಂದ್ರಾಜೈನ್ ಡಿಸೆಂಬರ್ ೧೭ ರಿಂದ ೧೯ರವರೆಗೆ ಹಬೀಬ್ ತನ್ವೀರ್ ಅವರ ದೇಖ್ ರಹೆ ಹೈನಹಿ, ಚರಣದಾಸಚೋರ್, ಲಾಲಾಶೋರತ್ ರಾಜ ಮತ್ತು ಗಾಂವ್ ಕ ನಾಮ್ ಸುಸರಲ್ - ಈ ನಾಲ್ಕು ಹಿಂದಿ ನಾಟಕಗಳ ಉತ್ಸವವನ್ನು ರವೀಂದ್ರ ಕಲಾಕ್ಷೇತ್ರದಲ್ಲಿ ಏರ್ಪಡಿಸಿದ್ದರು.

ಬಾಂಬೆ ಕನ್ನಡ ಸಂಘ ಡಿಸೆಂಬರ್ ೧೧ ರಿಂದ ೧೩ ರವರೆಗೆ ಏರ್ಪಡಿಸಿದ್ದ ನಾಟಕೋತ್ಸವದಲ್ಲಿ ಬೆಂಗಳೂರಿನ ನಟರಂಗ ತಂಡದ 'ಕುರುಡು ಕಾಂಚಾಣ', ಯಶಸ್ವಿ ಕಲಾವಿದರ 'ಸಂಸಾರದಲ್ಲಿ ಸರಿಗಮ' ಮತ್ತು ಐ ಟಿ ಐ ಲಲಿತಾ ಕಲಾ ಸಂಘದ ಡಾ.ಚಂದ್ರಶೇಖರ ಕಂಬಾರರ 'ಹುಲಿಯ ನೆರಳು' ನಾಟಕಗಳು ಪ್ರದರ್ಶನಗೊಂಡವು.

ಬಾಂಬೆ ಅಣುಶಕ್ತಿ ಕೇಂದ್ರದ ಕನ್ನಡ ಸಂಘಕ್ಕಾಗಿ ಡಿಸೆಂಬರ್ ೧೩ ರಂದು ನಟರಂಗ ತಂಡ ಕಪ್ಪಣ್ಣ ಅವರ ನಿರ್ದೇಶನದಲ್ಲಿ 'ಕುರುಡು ಕಾಂಚಾಣ' ನಾಟಕವನ್ನು ಅಭಿನಯಿಸಿತು.

ಪ್ರಯೋಗ ರಂಗದ 'ಮಂಟೇಸ್ವಾಮಿ ಕಥಾ ಪ್ರಸಂಗ', ಅರುಣ ಕಲಾವಿದರ 'ಸ್ನೋವೈಟ್', ಯಶಸ್ವಿ ಕಲಾವಿದರ 'ಸಂಸಾರದಲ್ಲಿ ಸರಿಗಮ'೧೯೯೩ರಲ್ಲಿ ಅತಿ ಹೆಚ್ಚಿನ ಪ್ರದರ್ಶನಗೊಂಡ ಜನಪ್ರಿಯ ನಾಟಕಗಳು.

ಇತ್ತೀಚೆಗೆ ರಂಗ ನಟರು, ನಿರ್ದೇಶಕರು, ತಂತ್ರಜ್ಞರು ಆಕರ್ಷಣೀಯವಾದ ಮಾಧ್ಯಮಗಳಾದ ಸಿನಿಮಾ, ದೂರದರ್ಶನಗಳತ್ತ ಸಾಗಿರುವುದರಿಂದ ಸಮರ್ಥ ನಾಟಕಗಳ ಪ್ರಯೋಗದ ಕೊರತೆಯಿಂದಾಗಿ ಪ್ರೇಕ್ಷಕರು ರಂಗಭೂಮಿಯಿಂದ ದೂರ ಉಳಿದಿದ್ದಾರೆ. ಆದರೆ ಈಗಲೂ ಮಾಸ್ಟರ್ ಹಿರಣ್ಣಯ್ಯನವರ ನಾಟಕಗಳ ಪ್ರದರ್ಶನ ಜನಮನ್ನಣೆಗೆ ಪಾತ್ರವಾಗಿರುವುದು ಕುತೂಹಲಕಾರಿಯಾಗಿದೆ.

ಆಗಾಗ ಪೌರಾಣಿಕ ನಾಟಕಗಳ ಪ್ರಯೋಗವು ನಡೆಯುತ್ತಿದೆ. ಉತ್ತರ ಕರ್ನಾಟಕದ ಬಹುಪಾಲು ಭಾಗಗಳಲ್ಲಿ ವೃತ್ತಿ ಕಂಪನಿ ನಾಟಕಗಳು ಪ್ರದರ್ಶನಗೊಳ್ಳುತ್ತಿವೆ. ಕರ್ನಾಟಕದ ಎಲ್ಲಾ ಕಡೆ ರಂಗ ಪ್ರದರ್ಶನಗಳು ನಡೆದಿವೆ. ಇವುಗಳ ಜೊತೆಗೆ ಇಲ್ಲಿ 'ರಂಗಾಯಣ' ಮತ್ತು 'ನೀನಾಸಂ' ಸಂಸ್ಥೆಗಳು ಈ ವರ್ಷ ನಡೆಸಿರುವ ನಾಟಕ ಪ್ರಯೋಗಗಳ ಚಟುವಟಿಕೆಗಳು ಗಮನಾರ್ಹವಾಗಿವೆ.

ನೀನಾಸಂ ತಿರುಗಾಟ ತಂಡವು ಈ ಬಾರಿ 'ಸ್ವಪ್ನನಾಟಕ', 'ಅಥೆನ್ಸಿನ ಅರ್ಥವಂತ' ಮತ್ತು 'ಗೋಕುಲ ನಿರ್ಗಮನ' ಎಂಬ ಮೂರು ನಾಟಕಗಳನ್ನು ಪ್ರದರ್ಶನಕ್ಕೆ ಆಯ್ದುಕೊಂಡು ರಾಜ್ಯದ ಒಳನಾಡು ಮತ್ತು ಹೊರನಾಡುಗಳ ವಿವಿಧ ಕಡೆಗಳಲ್ಲಿ ತನ್ನ ಯಶಸ್ವಿ ಪ್ರದರ್ಶನವನ್ನು ನೀಡಿದೆ. ಭಾಸನ ' ಸ್ವಪ್ನವಾಸವದತ್ತ' ಸಂಸ್ಕೃತ ನಾಟಕವನ್ನು ಕೀರ್ತಿನಾಥ ಕುರ್ತಕೋಟಿಯವರು, 'ತೈ ಮೊನ್ ಆಫ್ ಅಥೆನ್ಸ್' ನಾಟಕವನ್ನು ಕೆ. ವಿ. ಸುಬ್ಬಣ್ಣ ಅವರು 'ಅಥೆನ್ಸಿನ ಅರ್ಥವಂತ' ಎಂಬ ಹೆಸರಿನಿಂದ ಕನ್ನಡಿಸಿದ್ದು, ಚಿದಂಬರರಾವ್ ಜಂಬೆಯವರ ನಿರ್ದೇಶನದಲ್ಲಿ ಅದು ಪ್ರದರ್ಶನಗೊಂಡಿದೆ. ಪು. ತಿ. ನರಸಿಂಹಾಚಾರ್ಯರ 'ಗೋಕುಲ ನಿರ್ಗಮನ' ಗೀತ ನಾಟಕ ಬಿ. ವಿ. ಕಾರಂತರ ನಿರ್ದೇಶನದಲ್ಲಿ ಮೊತ್ತಮೊದಲ ಬಾರಿಗೆ ಯಶಸ್ವೀ ರಂಗಪ್ರಯೋಗ ಕಂಡಿದೆ.

ನೀನಾಸಂ ರಂಗಶಿಕ್ಷಣ ಕೇಂದ್ರವು ರಂಗಕಲೆಗಳನ್ನು ಕುರಿತ ಡಿಪ್ಲೊಮಾ ಇನ್ ಫೈನ್ ಆರ್ಟ್ಸ್ ಎಂಬ ತರಗತಿಗಳನ್ನು ನಡೆಸುತ್ತಿದೆ. ಪ್ರತಿವರ್ಷ ಈ ತರಗತಿಗಳಿಗೆ ವಿದ್ಯಾರ್ಥಿಗಳಿಗೆ ರಂಗಕಲ್ಪನೆ, ಇತಿಹಾಸ, ನಾಟಕ, ರಂಗ ನಟನೆ, ರಂಗ ಷವಸ್ತ್ರ

ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಸೈದ್ಧಾಂತಿಕ ಹಾಗೂ ಪ್ರಾಯೋಗಿಕ ಶಿಕ್ಷಣವನ್ನು ನೀಡಲಾಗುತ್ತದೆ.

ರಂಗಭೂಮಿ, ನಾಟಕ, ಸಾಹಿತ್ಯ, ರಸ-ಗ್ರಹಣಗಳಿಗೆ ಸಂಬಂಧಪಟ್ಟಂತೆ ಕಮ್ಮಟ-ವಿಶೇಷ ಉಪನ್ಯಾಸಗಳನ್ನು ಪ್ರತಿವರ್ಷದಂತೆ ಈ ವರ್ಷವು ಏರ್ಪಡಿಸಲಾಗಿತ್ತು. ಈ ವರ್ಷ ಕೆ. ವಿ. ಅಕ್ಷರ, ಯು. ಆರ್. ಅನಂತಮೂರ್ತಿ, ಕೀರ್ತಿನಾಥ ಕುರ್ತಕೋಟಿ, ಡಿ. ಆರ್. ನಾಗರಾಜ, ಗ್ಯಾಲಿ, ಶೇಣಿಗೋಪಾಲ ಕೃಷ್ಣಭಟ್ಟ ಮುಂತಾದ ಗಣ್ಯರು ವಿವಿಧ ವಿಷಯಗಳಿಗೆ ಸಂಬಂಧಪಟ್ಟಂತೆ ಉಪನ್ಯಾಸ ನೀಡಿದರು. ಆಗಸ್ಟ್ ೧೫ ರಂದು ಕೆರೆಮನೆ ಶಂಭು ಹೆಗಡೆಯವರು ಯಕ್ಷಗಾನ ಸ್ವರೂಪ ಹಾಗೂ ಅಭಿನಯ ಕುರಿತು ಪ್ರಾತ್ಯಕ್ಷಿಕೆಯೊಂದನ್ನು ನಡೆಸಿಕೊಟ್ಟರು. ಯೋಗ ನರಸಿಂಹ ಅವರು ರಂಗಗೀತೆ ಕಾರ್ಯಕ್ರಮವನ್ನು ಪ್ರಸ್ತುತ ಪಡಿಸುವುದರೊಂದಿಗೆ ವೃತ್ತಿ ರಂಗಭೂಮಿಯ ಸ್ಥಿತಿಗತಿಗಳನ್ನು ಪರಿಚಯ ಮಾಡಿಕೊಟ್ಟರು. ಖ್ಯಾತ ರಂಗತಜ್ಞ ರುಸ್ತಂ ಭರೂಚ ಅವರು ಒಂದುವಾರ ಅವಧಿಯ ಕಿರುನಾಟಕ ಕಮ್ಮಟವೊಂದನ್ನು ನಡೆಸಿಕೊಟ್ಟರು. ಬಿ. ವಿ. ನಾರಾಯಣ(ನಾಣಿ)ಅವರು ಪ್ರಸಾಧನ ಕಮ್ಮಟವೊಂದನ್ನು ನಡೆಸಿಕೊಟ್ಟು ರಂಗಕಲೆಯ ಹಿನ್ನೆಲೆ ಮುನ್ನೆಲೆಗಳನ್ನು ವಿಷದಪಡಿಸಿದರು. ಅಕ್ಟೋಬರ್ ೧೨ ರಂದು ಶ್ರೀ ಪೇತ್ರಿ ಮಾಧವ ನಾಯಕ್ ಮತ್ತು ಹೆರಂಜಾಲು ಗೋಪಾಲ ಭಾಗವತರ ನೇತೃತ್ವದಲ್ಲಿ ಯಕ್ಷಗಾನ ತರಬೇತಿಯೊಂದನ್ನು ನಡೆಸಿ, ಹಟ್ಟಿಯಂಗಡಿ ರಾಮಭಟ್ಟ ವಿರಚಿತ 'ಲವಕುಶ ಕಾಳಗ' ಎಂಬ ಯಕ್ಷಗಾನ ಪ್ರಸಂಗವನ್ನು ಆಡಿ ತೋರಿಸಲಾಯಿತು. ವಾಸ್ತವ ಶೈಲಿಯ ಅಭ್ಯಾಸದ ಅಂಗವಾಗಿ ಶ್ರೀ ಚಿದಂಬರರಾವ್ ಜಂಬೆಯವರ ನಿರ್ದೇಶನದಲ್ಲಿ ತಯಾರಾದ ಜಡಭರತರ 'ಮೂಕಬಲಿ' ನಾಟಕವನ್ನು ನವೆಂಬರ್ ೨೫, ೨೬, ೨೭ ಮತ್ತು ೨೮ ರಂದು ಪ್ರದರ್ಶಿಸಲಾಯಿತು.

ಅಕ್ಟೋಬರ್ ೧೬ರಿಂದ ೨೫ ರವರೆಗೆ ಹೆಗ್ಗೋಡಿನ ಶಿವರಾಮ ಕಾರಂತ ರಂಗ ಮಂದಿರದಲ್ಲಿ ನೀನಾಸಂ ತನ್ನ ೧೯೯೩ನೆಯ ಸಾಲಿನ ಸಂಸ್ಕೃತಿ ಶಿಬಿರವನ್ನು ನಡೆಸಿತು. ಸರಣಿಯಲ್ಲಿ ಹದಿನಾಲ್ಕನೆಯದಾದ ಪ್ರಸ್ತುತ ಶಿಬಿರದಲ್ಲಿ ರಾಜ್ಯದ ವಿವಿಧಡೆಗಳಿಂದ ಬಂದ ಒಟ್ಟು ೬೭ ಮಂದಿ ರಂಗಾಸಕ್ತರು ಭಾಗವಹಿಸಿದರು. ಯು. ಆರ್. ಅನಂತಮೂರ್ತಿಯವರು ಶಿಬಿರದ ನಿರ್ದೇಶಕರಾಗಿದ್ದು, ಚಂದ್ರಶೇಖರ ಕಂಬಾರ, ಕೀರ್ತಿನಾಥ ಕುರ್ತಕೋಟಿ, ಸತೀಶ ಬಹದ್ದೂರ್, ಬಿ. ವಿ. ಕಾರಂತ, ಸು. ರಂಗನಾಥ ಎಕ್ಕುಂಡಿ, ರಂಗನಾಥಶರ್ಮ, ದೇವೇಂದ್ರರಾಜ್ ಅಂಕುರ್, ಕಿ. ರಂ. ನಾಗರಾಜ, ಗಿರೀಶ್ ಕಾಸರವಳ್ಳಿ ಮುಂತಾದ ಗಣ್ಯರು ಅತಿಥಿ ಉಪನ್ಯಾಸಕರಾಗಿ ಪಾಲ್ಗೊಂಡರು. ರಂಗಭೂಮಿ, ಸಾಹಿತ್ಯ, ಸಂಗೀತ, ನೃತ್ಯ, ಚಲನಚಿತ್ರ ಇತ್ಯಾದಿ ಸಾಂಸ್ಕೃತಿಕ ಮಾಧ್ಯಮಗಳ ಸ್ವರೂಪ,

ವೈವಿಧ್ಯ, ಮೀಮಾಂಸೆ, ವಿಮರ್ಶೆ - ಈ ಎಲ್ಲಾ ಮಾಧ್ಯಮಗಳೊಳಗಿನ ಪರಸ್ಪರ ಸಂಬಂಧ; ಸಮಾಜದೊಂದಿಗೆ ಸಂಸ್ಕೃತಿ ಮತ್ತು ಧರ್ಮಗಳಿಗಿರುವ ಸಂಬಂಧ ಮೊದಲಾದ ವಿಷಯಗಳ ಕುರಿತು ಅಭ್ಯಾಸ, ಚರ್ಚೆ, ವಿಚಾರ ವಿನಿಮಯಗಳನ್ನು ನಡೆಸಲಾಯಿತು. ನಾಟಕ, ಚಲನಚಿತ್ರ, ಪಾರದರ್ಶಿಕೆಗಳ ಪ್ರದರ್ಶನಗಳಲ್ಲದೆ ಸಂಗೀತ ಕಾರ್ಯಕ್ರಮವನ್ನೂ ಈ ಸಂದರ್ಭದಲ್ಲಿ ವ್ಯವಸ್ಥೆಗೊಳಿಸಲಾಗಿತ್ತು. ಮಕ್ಕಳಿಗೆ ರಂಗಕಲೆಯ ಬಗ್ಗೆ ಆಸಕ್ತಿ ಮೂಡಿಸುವ 'ನೀನಾಸಂ ಶಾಲಾರಂಗ' ಎಂಬ ಯೋಜನೆಯ ಕಾರ್ಯಕ್ರಮವನ್ನು, 'ಕನ್ನಡ ಮರಾಠೀ ಮಕ್ಕಳ ಕಾರ್ಯಾಗಾರ'ವನ್ನು ಈ ಬಾರಿ ನೀನಾಸಂ ಏರ್ಪಡಿಸಿತ್ತು.

ಹೀಗೆ ೧೯೯೩ನೇ ಸಾಲಿನಲ್ಲಿ ಹತ್ತು ಹಲವು ವೈವಿಧ್ಯಮಯ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಿಕೊಂಡು ಬಂದಿರುವ 'ನೀಲಕಂಠೇಶ್ವರ ನಾಟ್ಯ ಸಂಘ'ವು ಆ ಮೂಲಕ ಕನ್ನಡ ಸಾಂಸ್ಕೃತಿಕ ಕ್ಷೇತ್ರದ ಬೆಳವಣಿಗೆಯಲ್ಲಿ ಮಹತ್ತರ ಪಾತ್ರ ವಹಿಸಿದೆ. ಗ್ರಾಮೀಣ ಪರಿಸರದಲ್ಲಿ ಹೊಸ ಸಾಂಸ್ಕೃತಿಕ ಚೈತನ್ಯವನ್ನು ಸೃಷ್ಟಿಸುವತ್ತ ಸತತವಾಗಿ ಶ್ರಮಿಸುತ್ತಿದೆ.

ಮೈಸೂರಿನಲ್ಲಿರುವ 'ರಂಗಾಯಣ'ವು ಕರ್ನಾಟಕದ ಒಂದು ಪ್ರಮುಖ ರಂಗಚಟುವಟಿಕೆಯ ಕೇಂದ್ರ. ಇದು ರಾಜ್ಯದ ವಿವಿಧ ಭಾಗಗಳಲ್ಲಿ ಹಲವಾರು ನಾಟಕಗಳ ಪ್ರದರ್ಶನಗಳನ್ನು ನೀಡಿದೆ. ದೇಶದ ನಾನಾ ಭಾಗಗಳಿಂದ ವಿದ್ವಾಂಸರನ್ನು, ರಂಗತಜ್ಞರನ್ನು ಆಹ್ವಾನಿಸಿ ರಂಗಕಲೆಯ ಬಗ್ಗೆ ಉಪನ್ಯಾಸ, ಚರ್ಚೆ, ಪ್ರಯೋಗಗಳನ್ನು ನಡೆಸಿದೆ. ೧೯೯೩ರ ಮಾರ್ಚ್ ತಿಂಗಳಿನಲ್ಲಿ ಒಂದು ತಿಂಗಳ ಕಾಲ ನಗರದ ವಿವಿಧ ಬಡಾವಣೆಗಳಲ್ಲಿ ಮೊಕ್ಕಾಂ ಹೂಡಿ ಜನರಿಗೆ ತನ್ನ ಪ್ರದರ್ಶನಗಳನ್ನು ಕೊಟ್ಟಿತು. ಇದಕ್ಕಾಗಿ ನಗರದ ವಿವಿಧ ಪ್ರದೇಶಗಳ ಬಯಲು ರಂಗಮಂದಿರ ಹಾಗೂ ಒಳಾಂಗಣ ರಂಗಮಂದಿರಗಳನ್ನು ಫಲಪ್ರದವಾಗಿ ಬಳಸಿಕೊಂಡು ಒಂದೇ ನಾಟಕದ ಹತ್ತಾರು ಪ್ರದರ್ಶನಗಳನ್ನು ಸತತವಾಗಿ ಕೊಟ್ಟು, ರಂಗ ಚಟುವಟಿಕೆಯನ್ನು ಚಳುವಳಿಯೋಪಾದಿಯಲ್ಲಿ ಬೆಳೆಸಲು ಬುನಾದಿಯನ್ನು ಹಾಕಿತು.

ಸುಮಾರು ನಾಲ್ಕು ದಶಕಗಳ ಕಾಲ ಕನ್ನಡ ರಂಗಭೂಮಿಗೆ ಅನೇಕ ಸ್ವತಂತ್ರ ನಾಟಕಗಳ ಕೊಡುಗೆಯನ್ನು ಕೊಟ್ಟಿದ್ದಲ್ಲದೆ ಕರ್ನಾಟಕದಲ್ಲಿ ರಂಗ ತರಬೇತಿಗೆ ಭದ್ರ ಬುನಾದಿಯನ್ನು ಹಾಕಿ, ಹವ್ಯಾಸಿ ರಂಗಭೂಮಿಯ ಬೆಳವಣಿಗೆಗೆ ಕಾರಣ ಪುರುಷರಾದ ಶ್ರೀರಂಗರನ್ನು ನೆನೆಯಲು ರಂಗಾಯಣ ಸೆಪ್ಟಂಬರ್ ತಿಂಗಳಿನಲ್ಲಿ ಮಹತ್ವದ ಕಾರ್ಯಕ್ರಮವನ್ನು ನಡೆಸಿತು.

ಶ್ರೀರಂಗರ ವ್ಯಕ್ತಿತ್ವ ಮತ್ತು ಅವರ ಕೃತಿಗಳಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಮಟ್ಟದ ಎರಡು ದಿನಗಳ ವಿಚಾರಸಂಕಿರಣವೊಂದನ್ನು ನಡೆಸಲಾಯಿತು. ಸೆಪ್ಟಂಬರ್ ೨೩ ಮತ್ತು



ಕುಸುಮಬಾಲೆ ನಾಟಕದ ಒಂದು ದೃಶ್ಯ

೨೬ ಈ ಎರಡು ದಿನಗಳ ಗೋಷ್ಠಿಗಳಲ್ಲಿ ನಾಡಿನ ಮತ್ತು ದೇಶದ ರಂಗತಜ್ಞರು ಹಾಗೂ ವಿದ್ವಾಂಸರುಗಳು ಆದ ಎನ್. ಸಿ. ಜೈನ್ ('ನಟರಂಗ' ಸಂಪಾದಕರು), ಶ್ರೀಮತಿ ಕೀರ್ತಿಜೈನ್ (ನಿರ್ದೇಶಕಿ :ರಾಷ್ಟ್ರೀಯ ನಾಟಕ ಶಾಲೆ, ದೆಹಲಿ), ಡಾ. ಜಿ. ಎಸ್. ಆಮೂರ, ಡಾ. ಗಿರಡ್ಡಿ ಗೋವಿಂದರಾಜ, ಸಿದ್ದಲಿಂಗಪಟ್ಟಣ ಶೆಟ್ಟಿ, ಡಾ. ಸಿಂಧುವಳ್ಳಿ ಅನಂತಮೂರ್ತಿ, ಪ್ರೊ. ಎಂ. ಎಸ್. ನಾಗರಾಜ್ ಅವರುಗಳು ಪಾಲ್ಗೊಂಡಿದ್ದರು. ಶ್ರೀರಂಗರ ನಾಟಕಗಳಲ್ಲಿ ನಟಿಸಿರುವ ಅನೇಕ ನಟರೂ ಅವರ ನಾಟಕಗಳನ್ನು ನಿರ್ದೇಶಿಸಿರುವ ನಿರ್ದೇಶಕರುಗಳೂ ಭಾಗವಹಿಸಿದ್ದರು.

ದಿನಾಂಕ ೬.೦೯.೧೯೯೩ ಶ್ರೀರಂಗರ ಜನ್ಮ ದಿನ. ಅಂದು ಖ್ಯಾತ ಕಲಾವಿದರಾದ ವಿ. ಎಮ್. ಶೋಲಂಪುರ್‌ಕರ್ ರಚಿಸಿರುವ ವರ್ಣಚಿತ್ರವನ್ನು ಪ್ರಖ್ಯಾತ ನಾಟಕಕಾರರೂ ನಿರ್ದೇಶಕರೂ ಆದ ಹಬಿಬ್ ತನ್ವೀರ್ ಅನಾವರಣಗೊಳಿಸಿದರು. ಶ್ರೀಮತಿ ಶಾರದಾ ಆದ್ಯ (ಶ್ರೀರಂಗರ ಪತ್ನಿ); ಶ್ರೀಮತಿ ಶಶಿದೇಶಪಾಂಡೆ (ಶ್ರೀರಂಗರ ಮಗಳು ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ವಿಜೇತೆ) ಹಾಗೂ ಗಿರೀಶ್ ಕಾರ್ನಾಡ್

ಅವರುಗಳು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಈ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಅವರು ತಾವು ಮತ್ತು ಶ್ರೀರಂಗರು ಹೊಂದಿದ್ದ ಒಡನಾಟವನ್ನು ಕುರಿತು ಹೇಳಿ, ರಂಗ ತರಬೇತಿಗೆ ಶ್ರೀರಂಗರು ನೀಡಿರುವ ಕಾಣಿಕೆಯನ್ನು ಶ್ಲಾಘಿಸಿದರು. ಅಂದು ಶ್ರೀರಂಗರ ನಾಟಕಗಳನ್ನು ನಗರದ ಸ್ಥಳೀಯ ರಂಗಸಂಸ್ಥೆಗಳು ಹಾಗೂ ರಂಗಾಯಣ ಪ್ರದರ್ಶಿಸಿದವು.



# ಚಿತ್ರರಂಗ

*ಮುರಳೀಧರ ಖಜಾನೆ*

---



‘ಆಕಸ್ಮಿಕ’ ಚಿತ್ರದಲ್ಲಿ ಡಾ. ರಾಜ್‌ಕುಮಾರ್

ಕನ್ನಡ ಚಿತ್ರರಂಗ ತನ್ನ ಷಷ್ಟ್ಯಬ್ದಿಯನ್ನು ಆಚರಿಸುತ್ತಿರುವ ವರ್ಷ ೧೯೯೩. ಕಳೆದ. ಕೆಲವು ವರ್ಷಗಳಿಂದ ತನ್ನ ಬೇರುಗಳನ್ನು ಕಳಚಿಕೊಂಡು ಕೇವಲ ತನ್ನ ಗತವೈಭವದ ನೆರಳಿನಲ್ಲಿಯೇ ಬದುಕುತ್ತಿರುವ ಕನ್ನಡ ಚಿತ್ರರಂಗ ತನ್ನ ಷಷ್ಟ್ಯಬ್ದಿಯ ವರ್ಷದಲ್ಲಿ ರೂಪಿಸಿದ ಎಲ್ಲಾ ಚಿತ್ರಗಳ ಸಮಗ್ರ ಸಮೀಕ್ಷೆ ಇದಲ್ಲ. ಕನ್ನಡ ಚಿತ್ರರಂಗ ೧೯೯೩ರಲ್ಲಿ ನಡೆದ ಹಾದಿ, ಕಂಡ ಸೋಲು, ನಡೆಸಿದ ಹೊಸಪ್ರಯತ್ನಗಳನ್ನು ಕುರಿತಾದ ವಿವರಗಳನ್ನಷ್ಟೇ ದಾಖಲಿಸುವ ಪ್ರಯತ್ನ ಇದು.

ಎಪ್ಪತ್ತರ ದಶಕದಲ್ಲಿ ನಮ್ಮ ಬದುಕಿನಲ್ಲಿ ಮಿಳಿತವಾಗಿರುವ ಮೌಢ್ಯ, ಗೊಂದಲ, ಅಸಮಾನತೆಯೇ ಮುಂತಾದ ಸಂಕೀರ್ಣ ಸಂಗತಿಗಳ ಬಗ್ಗೆ ಚಿತ್ರಗಳನ್ನು ತಯಾರಿಸಿ, ರಾಷ್ಟ್ರಮಟ್ಟದಲ್ಲಿ ತನಗೊಂದು ಸ್ಥಾನ ನಿರ್ಮಿಸಿಕೊಂಡಿದ್ದ ಕನ್ನಡ ಚಿತ್ರರಂಗ ಇಂದು ಏರಿದ ಒಂದೊಂದೇ ಮೆಟ್ಟಿಲುಗಳನ್ನು ಇಳಿಯತೊಡಗಿದೆ. ನಿಧಾನವಾಗಿ ಇದೊಂದು ಕೇವಲ ಮನರಂಜನಾ ಮಾಧ್ಯಮ, ಹಣ ತರುವ ಉದ್ಯಮ - ಎಂದು ನಂಬಿ ಪ್ರೇಕ್ಷಕರನ್ನು ಮೆಚ್ಚಿಸಿ ಹಣ ಬಾಚಿಕೊಳ್ಳುವ ಯತ್ನದಲ್ಲಿ ಪ್ರೇಕ್ಷಕರನ್ನು ಅರ್ಥಮಾಡಿಕೊಳ್ಳುವಲ್ಲಿ ವಿಫಲವಾಗಿದೆ. ಪ್ರೇಕ್ಷಕ ಇದನ್ನು ಮೆಚ್ಚಬಹುದು, ಅದನ್ನು ಮೆಚ್ಚಬಹುದು ಎಂಬ ಅರ್ಥಹೀನ ತರ್ಕದಡಿ ರೀಮೇಕ್, ಅಶ್ಲೀಲ, ಹಿಂಸಾಪ್ರಧಾನ ಕಳಪೆ ಚಿತ್ರಗಳಿಂದ ಪ್ರೇಕ್ಷಕನನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುವ ಪ್ರಯತ್ನವನ್ನು ಮಾಡಹೋಗಿ ಅನೇಕರು ಮುಗ್ಗರಿಸಿದ್ದಾರೆ. ಇವರೆಲ್ಲರ ಪ್ರಯತ್ನದ ಫಲವಾಗಿ ಇಂದು ಕನ್ನಡ ಚಿತ್ರರಂಗ ಕವಲು ಹಾದಿಯಲ್ಲಿ ನಿಂತಿದೆ.

ಕಳೆದ ವರ್ಷ ಬಿಡುಗಡೆಯಾದ ಚಿತ್ರಗಳತ್ತ ಒಮ್ಮೆ ಕಣ್ಣು ಹಾಯಿಸಿದರೆ ಮಾಧ್ಯಮಕ್ಕೆ ಇರಬೇಕಾದ ನಿಷ್ಠೆ, ಸಾಮಾಜಿಕ ಬದ್ಧತೆ, ಬೌದ್ಧಿಕ ತಳಮಳ, ಒಳತುಡಿತ, ಎಲ್ಲವೂ ನಿಧಾನವಾಗಿ ಮಾಯವಾಗಿರುವುದರ ಅರಿವಾಗುತ್ತದೆ. ಹಿಂದಿನ ವರ್ಷಗಳಲ್ಲಿ ರೀಮೇಕ್ ಅಲೆ ಏರಿ ಮುಗ್ಗರಿಸಿದ ಕನ್ನಡ ಚಿತ್ರರಂಗ ಈ ವರ್ಷ ಮೈ ಕೊಡವಿಕೊಂಡು ಅದ್ಭುತ ಯಶಸ್ಸು ಸಾಧಿಸುತ್ತದೆ ಎಂಬ ಭ್ರಮೆ ಯಾರಿಗೂ ಇರಲಿಲ್ಲ. ಇದು ಬಹಳ ವರ್ಷಗಳಲ್ಲಿ ಒಮ್ಮೊಮ್ಮೆ ಕಾಣುವ ಹಿನ್ನಡೆ ಎಂದೇ ಎಲ್ಲರೂ ನಂಬಿದ್ದರು. ಅಷ್ಟೇ ಅಲ್ಲ, ಕಳೆದ ವರ್ಷಗಳಲ್ಲಿ ಪ್ರೇಕ್ಷಕ ಅಜೀರ್ಣವಾಗುವಷ್ಟು ರೀಮೇಕ್, ಅಶ್ಲೀಲ, ಹಿಂಸಾಪ್ರಧಾನ ಚಿತ್ರಗಳಿಂದ ಹೇಸಿಹೋಗಿ ಈಗ ಉತ್ತಮ ಚಿತ್ರಗಳಿಗಾಗಿ ಹಾತೊರೆಯುತ್ತಿದ್ದಾನೆ ಎಂದು ಮತ್ತೆ ಕೆಲವರು ನಂಬಿದ್ದರು. ಆದರೆ ಬದಲಾದ ಪ್ರೇಕ್ಷಕನ ಮನೋಧರ್ಮ ಅರಿಯಲು ಉದ್ಯಮ ಸಂಪೂರ್ಣ ವಿಫಲವಾಯಿತು. ರೀಮೇಕ್ ಚಿತ್ರಗಳ ಜೊತೆಗೆ ಉತ್ತಮ ಅಭಿರುಚಿಯ ಚಿತ್ರಗಳೂ ಸೋತವು. ಹಣಮಾಡಿದ ಚಿತ್ರಗಳಲ್ಲಿ ಸಾಧಾರಣ ದರ್ಜೆಯ ಮಸಾಲೆ ಚಿತ್ರಗಳೂ ರೀಮೇಕ್‌ಗಳೂ ಸೇರಿಹೋದವು. ಯಶಸ್ಸಿನ ಅಲೆ ಏರಿ ಗಲ್ಲಾಪೆಟ್ಟಿಗೆಯಲ್ಲಿ ಗೆದ್ದ ಉತ್ತಮ ಚಿತ್ರಗಳ ಸಂಖ್ಯೆ ಕೈ ಬೆರಳೆಣಿಸುವಷ್ಟು ಮಾತ್ರ.

ಬಿಡುಗಡೆಯಾದ ಒಟ್ಟು ತೊಂಬತ್ತು ಚಿತ್ರಗಳಲ್ಲಿ ಒಂದೊಂದು ತುಳು ಮತ್ತು ಕೊಡವ ಚಿತ್ರಗಳೂ ಸೇರಿವೆ. ೧೯೯೬ರಲ್ಲಿ ರೀಮೇಕ್ ಚಿತ್ರಗಳ ಸಂಖ್ಯೆ ೧೭ಕ್ಕಿಳಿಯಿತು. ಕಾದಂಬರಿಯನ್ನು ಆಧರಿಸಿ ಕೇವಲ ೧೦ ಚಿತ್ರಗಳು ತಯಾರಾದವು. ಚಿತ್ರರಂಗ ಸುಮಾರು ೧೦ ಕೋಟಿ ರೂಪಾಯಿಗಳಷ್ಟು ನಷ್ಟ ಅನುಭವಿಸಿತು. ಭಾರೀ ತಾರಾಗಣ, ಅದ್ದೂರಿ ತಾರಾಗಣದ ಚಿತ್ರಗಳ ಸೋಲಿನಿಂದ ಚಿತ್ರರಂಗ ಕಂಗಾಲಾದರೂ ಮಧ್ಯೆಮಧ್ಯೆ ಹೊಸತನದ ಚಿತ್ರಗಳು ಬಂದು ನಿರಾಸೆಯ ಕಾರ್ಮೋಡದ ನಡುವೆ ಹೊಸತನದ ಮಿಂಚು ಕಾಣಿಸಿಕೊಂಡಿತು.

ಹಿಂದಿನ ವರ್ಷ ಪೇಲವವಾಗಿದ್ದ ಕನ್ನಡ ಚಿತ್ರರಂಗಕ್ಕೆ 'ಜೀವನಚೈತ್ರ'ದ ಮೂಲಕ ಜೀವ ಸಂಚಾರ ಮಾಡಿದ ಡಾ. ರಾಜ್‌ಕುಮಾರ್ ಈ ವರ್ಷ 'ಆಕಸ್ಮಿಕ'ದ ಮೂಲಕ



'ಚಿನ್ನಾರಿ ಮುತ್ತ' ದಲ್ಲಿ ಮಾ. ವಿಜಯ ರಾಘವೇಂದ್ರ

ಮತ್ತಷ್ಟು ಚೈತನ್ಯ ತುಂಬಿದರು. ರೀಮೇಕ್‌ಗಳಾದ 'ಅಣ್ಣಯ್ಯ', 'ರಾಯರು ಬಂದರು ಮಾವನ ಮನೆಗೆ', 'ಮುದ್ದಿನ ಮಾವ', 'ಕುಂಕುಮ ಭಾಗ್ಯ', 'ಗಡಿಬಿಡಿ ಗಂಡ', 'ಅಳಿಮಯ್ಯ' ಚಿತ್ರಗಳು ಗಲ್ಲಾಪೆಟ್ಟಿಗೆಯಲ್ಲಿ ಹಣಮಾಡಿದವು. 'ರಂಜಿತಾ ', 'ಮಹೇಂದ್ರವರ್ಮ', 'ಗೋಲಿಬಾರ್', 'ರಾಜಕೀಯ'ಗಳಂಥಾ ಸ್ವತಂತ್ರ ರಚನೆಯ ಚಿತ್ರಗಳೂ ತಕ್ಕಮಟ್ಟಿಗೆ ಯಶಸ್ಸನ್ನು ಕಂಡವು. 'ರಂಜಿತಾ', 'ಕಾದಂಬರಿ', 'ಮುಂಜಾನೆಯ ಮಂಜು', 'ಗೆಜ್ಜೆನಾದ 'ದಂಥಾ ಚಿತ್ರಗಳು ಅಶ್ಲೀಲತೆಯಿಂದ ದೂರವಾದ ಕಾರಣ ಪ್ರೇಕ್ಷಕರ ಗಮನವನ್ನು ತಮ್ಮತ್ತ ಸೆಳೆದುಕೊಂಡವು.

ಈ ನಡುವೆ ಇಂಗ್ಲಿಷ್ ಚಿತ್ರಗಳ ನಿರೂಪಣೆಯನ್ನೇ ನೆನಪಿಸುವಂತಿದ್ದ 'ಆತಂಕ', ಭಾರೀ ಭರವಸೆಯನ್ನು ಮೂಡಿಸಿದ್ದ ತ್ರಿವೇಣಿ ಕಾದಂಬರಿ ಆಧಾರಿತ ಬಾಬು ರಾಜೇಂದ್ರಸಿಂಗ್ ನಿರ್ದೇಶನದ ' ಹೂವುಹಣ್ಣು', ಸ್ವಲ್ಪ ವಿಭಿನ್ನವಾಗಿದ್ದ 'ಕ್ಯಾಪ್ಟನ್', 'ನಾನೆಂದೂ ನಿಮ್ಮವನೇ', ಮಕ್ಕಳ ಚಿತ್ರಗಳಾದ 'ಜಂಬೂ ಸವಾರಿ', 'ಕೀರ್ತಿ ತಂದ ಪುಟಾಣಿಗಳು', 'ಚುಕ್ಕಿ ಚಂದ್ರಮ'ಗಳಿಗೆ ಸರಿಯಾದ ಪ್ರೋತ್ಸಾಹ ದೊರೆಯದೆ ದಮನೀಯ ಸೋಲುಕಂಡು ಕನ್ನಡಿಗರ ಸದಭಿರುಚಿಯನ್ನು ಪ್ರಶ್ನಿಸುವಂತೆ ಮಾಡಿದವು.

ಈ ಸೋಲುಗೆಲುವುಗಳ ಲೆಕ್ಕಾಚಾರ ಏನೇ ಇದ್ದರೂ ಎಲ್ಲೋ ಕೆಲವು ಒಳ್ಳೆ

ಚಿತ್ರಗಳು ತೆರೆಕಂಡು ಕನ್ನಡದ ಮಾನ ಉಳಿಯುವಂತಾಯಿತು. ಕೆಲವು ಹೊಸಬರು ಪ್ರಾಮಾಣಿಕ ಪ್ರಯತ್ನ ಮಾಡಿ ಹೊಸ ಸಾಹಸಕ್ಕಿಳಿದರು. 'ಆಹಾ ಬ್ರಹ್ಮಚಾರಿ', 'ಅಮೃತ ಸಿಂಧು', 'ಹೊಸ ಲವ್ ಸ್ಟೋರಿ', 'ಕಾದಂಬರಿ ', 'ಶ್ ..!' ಎಲ್ಲವೂ ಹೊಸಬರ ಪ್ರಯತ್ನಗಳೇ .

ರಾಜೀವ್ ಹತ್ಯೆಯನ್ನು ನೆನಪಿಸುವ 'ವಾಂಟೆಡ್', ದ್ವಂದ್ವಾರ್ಥದಲ್ಲಿ ದಾಖಲೆ ಮಾಡಿದ ' ಬೊಂಬಾಟ್ ಹುಡುಗ', ಹಿಂಸೆಯ ವೈಭವೀಕರಣದ 'ಅಭಿಜಿತ್', 'ಸೂರ್ಯೋದಯ', ಜನರ ಧಾರ್ಮಿಕ ನಂಬಿಕೆಗಳನ್ನೇ ಬಂಡವಾಳ ಮಾಡಿಕೊಂಡ 'ಮಣಿಕಂಠನ ಮಹಿಮೆ', 'ಭಗವಾನ್ ಶ್ರೀ ಸಾಯಿಬಾಬಾ' ಇವು ಭಾರೀ ತಾರಾಗಣವಿದ್ದೂ ಸೋತ ಚಿತ್ರಗಳು.

ಲೈಂಗಿಕ ಶಿಕ್ಷಣದ ಹೆಸರಿನಲ್ಲಿ ತಯಾರಾದ 'ಯೌವನದ ಅನುಭವ', 'ಪ್ರತಿಫಲ', 'ಏಯ್ಡ್ಸ್', ' ಪ್ರೇಮದ ಕಾರಂಜಿ', ಸೆಕ್ಸ್ ಮಾತ್ರ ಬಂಡವಾಳವಾದ 'ಮೋಜಿನ ಮದುವೆ' ಚಿತ್ರಗಳ ಪೈಕಿ 'ಪ್ರೇಮದ ಕಾರಂಜಿ' ೭೫ದಿನಗಳ ಕಾಲ ನಡೆದು ಯಶಸ್ವಿ ಎನ್ನಿಸಿಕೊಂಡಿತು. 'ಆಕಸ್ಮಿಕ', 'ಅಣ್ಣಯ್ಯ', 'ಗಡಿಬಿಡಿ ಗಂಡ', 'ಬಂಗಾರ ಪಟ್ಲೇರ್', 'ಮುದ್ದಿನ ಮಾವ', 'ರಂಜಿತಾ' ಶತದಿನೋತ್ಸವ ಕಂಡವು.

ಇತ್ತೀಚಿನ ವರ್ಷಗಳಲ್ಲಿ ಕನ್ನಡ ಚಿತ್ರ ೧೯೯೩ರಲ್ಲಿ ಕಂಡಂಥ ಏರುಪೇರನ್ನು ಹಿಂದೆ ಕಂಡಿರಲಿಲ್ಲ. ಸಾಧಾರಣ ರೀತಿಯಲ್ಲಿ ಆರಂಭವಾದ ಹೊಸವರ್ಷ ದಿನಗಳುರುಳಿದಂತೆ ನಿಧಾನವಾಗಿ ಚೇತರಿಸಿಕೊಂಡಿತು. ಇನ್ನೇನು ಪರವಾಗಿಲ್ಲ ಎನ್ನುವ ವೇಳೆಗೆ ಸೋಲಿನ ಸರಮಾಲೆಯಿಂದ ನೆಲಕಚ್ಚಿತು. ಅಕ್ಟೋಬರ್ ನಂತರ ಮತ್ತೆ ಚೇತರಿಸಿಕೊಂಡು ಮುನ್ನಡೆಯಿತು.

ವರ್ಷಾರಂಭದಲ್ಲಿ ಭಾರೀ ಆರ್ಭಟದಿಂದ ಭಯಹುಟ್ಟಿಸಿದ್ದ ರೀಮೇಕ್, ಅಶ್ಲೀಲ ದ್ವಂದ್ವಾರ್ಥದ ಚಿತ್ರಗಳು ವರ್ಷಾಂತ್ಯದ ವೇಳೆಗೆ ಹೆಚ್ಚು ಕಡಿಮೆ ನಿಂತುಹೋದವು. ಪ್ರೇಕ್ಷಕನನ್ನು ನಾವು ಅರ್ಥಮಾಡಿಕೊಂಡಿದ್ದೇವೆ ಎಂಬ ಅಹಂಕಾರದಲ್ಲಿ ಮಾಡಿದ ಹಚ್. ಬಿಸಿ. ಕಳಪೆ ಚಿತ್ರಗಳು ಇನ್ನಿಲ್ಲದಂತೆ ನೆಲಕಚ್ಚಿದವು. ದ್ವಂದ್ವಾರ್ಥದ ಸೃಷ್ಟಿಕರ್ತರ ಸೃಷ್ಟಿಕ್ರಿಯೆಗೆ ಭಾರೀ ಆಘಾತವಾಯಿತು.

ಡಾ. ರಾಜಕುಮಾರ್ ಅವರನ್ನು ಹೊರತುಪಡಿಸಿದರೆ ಯಾವುದೇ ನಾಯಕ ನಾಯಕಿಯರು ಗಲ್ಲಾಪೆಟ್ಟಿಗೆಯಲ್ಲಿ ಸತತವಾಗಿ ತಮ್ಮ ಆಕರ್ಷಣೆ ಉಳಿಸಿಕೊಂಡಿಲ್ಲ ಎಂಬುದು ರುಜುವಾತಾದಂತಾಯಿತು. ಕನ್ನಡದಲ್ಲಿ ತಾರೆಯರ ಸ್ಥಿತಿ ಎಂದೂ ಹೀಗಿರಲಿಲ್ಲ. ತಾರಾಲೋಕ ೧೯೯೩ರಲ್ಲಿ ಸ್ವಲ್ಪಮಟ್ಟಿಗೆ ಅಲುಗಾಡಿತೆನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

ಕನ್ನಡ ಚಿತ್ರರಂಗದ ಹಿನ್ನೆಲೆ ಸಂಗೀತಕ್ಕೆ ಹೊಸದಿಕ್ಕು ತೋರಿದ ಸಂಗೀತ ಸಾಮ್ರಾಟ್ ಜಿ. ಕೆ. ವೆಂಕಟೇಶ್. ೪,೫೦೦ಕ್ಕೂ ಹೆಚ್ಚಿನ ಗೀತೆಗಳನ್ನು ಬರೆದು ಕನ್ನಡ ಚಿತ್ರರಂಗದ

ಬೆನ್ನೆಲುಬೆನ್ನಿಸಿಕೊಂಡಿದ್ದ ಹಾಡುಗಳ ಸರದಾರ ಚಿ. ಉದಯಶಂಕರ್, ಉತ್ತಮ ಛಾಯಾಗ್ರಾಹಕ ಎನ್. ಜಿ. ರಾವ್, ಕಂಚಿನ ಕಂಠದ ನಟ, ನಿರ್ದೇಶಕ ಸುಂದರ ಕೃಷ್ಣ ಅರಸ್, ನಿರ್ದೇಶಕ ಆರೂರು ಪಟ್ಟಾಭಿ, ಹಳೆಯ ತಲೆಮಾರಿನ ಕಲಾವಿದ ವಾಸುದೇವ ಗಿರಿಮಾಜಿ, 'ಕ್ರಮ'ಚಿತ್ರದ ನಿರ್ದೇಶಕ ಅಸ್ರಾರ್ ಅಬೀದ್ ಇವರುಗಳ ಅನಿರೀಕ್ಷಿತವಾದ ನಿಧನದಿಂದ ಕನ್ನಡ ಚಿತ್ರರಂಗ ಸೊರಗಿತು.

ಡಾ. ರಾಜಕುಮಾರ್ ಅವರಿಗೆ ಕನ್ನಡ ಚಿತ್ರರಂಗದ ಪ್ರತಿಷ್ಠಿತ ಗುಬ್ಬಿವೀರಣ್ಣ ಪ್ರಶಸ್ತಿ, 'ಹರಕೆಯ ಕುರಿ' ಗೆ ಪ್ರಾದೇಶಿಕ ಚಿತ್ರ ಪ್ರಶಸ್ತಿ, ಜಿ. ವಿ. ಅಯ್ಯರ್ 'ಭಗವದ್‌ಗೀತೆ'ಗೆ ಶ್ರೇಷ್ಠ ಚಿತ್ರ ರಾಷ್ಟ್ರೀಯ ಪ್ರಶಸ್ತಿ, ಎಂ. ಆರ್. ವಿಠಲ್, ಗೀತಪ್ರಿಯ ವೈ. ಆರ್. ಸ್ವಾಮಿ ಇವರುಗಳಿಗೆ ಮೂರು ವರ್ಷದ ಪುಟ್ಟಣ್ಣ ಕಣಗಾಲ್ ಪ್ರಶಸ್ತಿಗಳು ಲಭ್ಯವಾದವು.

೧೯೯೩ ರಲ್ಲಿ ಬಿಡುಗಡೆಯಾದ ಚಿತ್ರಗಳಲ್ಲಿ ಕೆಲವನ್ನಾದರೂ ನಿಕಷಕ್ಕೊಡ್ಡಿದರೆ ಕನ್ನಡ ಚಿತ್ರರಂಗ ತನ್ನ ಷಷ್ಟ್ಯಬ್ದಿಯ ವರ್ಷದ ವೇಳೆಗೆ ತಲುಪಿರುವ ಘಟ್ಟವನ್ನು ಅರ್ಥಮಾಡಿಕೊಳ್ಳಬಹುದು.

ಆರಂಭದ ದಿನಗಳಲ್ಲಿ ಬಿಡುಗಡೆಯಾದ 'ರಂಜಿತಾ' ಚಿತ್ರದ ಸ್ವಲ್ಪಮಟ್ಟದ ಯಶಸ್ಸಿಗೆ ಕಾರಣವೇನು? ಬದಲಾಗುತ್ತಿರುವ ಮಹಿಳೆಯ ಒಳತೋಟಿ ಈ ಚಿತ್ರದ ನಾಯಕಿಯ ಮೂಲಕ ಸಮರ್ಥವಾಗಿ ವ್ಯಕ್ತಗೊಂಡಿತು. ಇಲ್ಲಿ ಮುನಿದೆದ್ದ ಹೆಣ್ಣು ಸಂಪ್ರದಾಯವಾದಿ ಮೌಲ್ಯಗಳನ್ನು ತಿರಸ್ಕರಿಸಿ, ಹೊಸ ದಿಕ್ಕನ್ನು ಅರಸುವ ಪ್ರಯತ್ನವಿದೆ. ತೀರಾ ಕ್ಲಿಷ್ಟವಾದ ಸಮಸ್ಯೆ ಎದುರು 'ರಂಜಿತಾ'ದ ನಾಯಕಿ ದುಡುಕಿದಳು ಎಂಬುದನ್ನು ಸಂಪ್ರದಾಯವಾದಿಗಳೂ ಕೂಡ ಒಪ್ಪದಂತೆ ಈ ಚಿತ್ರ ರೂಪಗೊಂಡದ್ದು ಆದರ ಯಶಸ್ಸಿಗೆ ಕಾರಣವಾಯಿತು.

ಕೊಡ್ಲು ರಾಮಕೃಷ್ಣ ಅವರ 'ಕಾದಂಬರಿ', ವಿಜಯ್ ನಂಜುಡಪ್ಪ ಅವರ 'ಗೆಜ್ಜೆನಾದ' ತೀರಾ ಸಾಧಾರಣವಾದ ಪ್ರೇಮಕ್ಕಾಗಿಯಷ್ಟೇ ತುಡಿಯುವ, ಮದುವೆಯಾಗಲಷ್ಟೇ ತವಕಿಸುವ ಸೀಮಿತ ಗುರಿಯ ಚಿತ್ರಗಳಾದವು.

'ಮುಂಜಾನೆಯ ಮಂಜು' ಚಿತ್ರದಲ್ಲಿ ಗಂಡಿನ ಔದಾರ್ಯದ ಉರುಳಿನಲ್ಲಿ ಸಂತೃಪ್ತ ಲೋಕವೊಂದನ್ನು ಸೃಷ್ಟಿಸಿಕೊಳ್ಳಲು ಬಯಸುವ ಹೆಣ್ಣಿನ ಸಣ್ಣ ಸಂಘರ್ಷಕ್ಕೆ ಸೀಮಿತವಾಯಿತಾದರೂ ಈ ಚಿತ್ರ ಸಾಧಾರಣ ಯಶಸ್ಸು ಕಂಡಿತು.

ನಾಯಕ ಪ್ರಧಾನ ಸಂಸ್ಕೃತಿಯ ಕನ್ನಡ ಚಿತ್ರರಂಗಕ್ಕೆ ಸ್ವಲ್ಪ ಬಿಡುವು ಮಾಡಿಕೊಟ್ಟ ಚಿತ್ರಗಳೆಂದರೆ ' ರಂಜಿತಾ' ಮತ್ತು 'ಹೂವು ಹಣ್ಣು'(ಇದಕ್ಕೆ ಮಕ್ಕಳ ಚಿತ್ರಗಳೂ ಅಲ್ಪಮಟ್ಟದ ಕಾಣಿಕೆ ನೀಡಿತು). ಆದರೆ ಮಾಧ್ಯಮವನ್ನು ತೀವ್ರವಾಗಿ ಪರಿಗಣಿಸಿದ ಹೊಸ ಪ್ರಯತ್ನ ಕಾಣುವುದು 'ಹೂವು ಹಣ್ಣು' ಚಿತ್ರದಲ್ಲಿ. ಇಲ್ಲಿ ಹೆಣ್ಣಿನ ಹೋರಾಟದ ಕತೆಯೊಂದನ್ನು ನೇರವಾಗಿ ಹೇಳಿಬಿಡುವ ಪ್ರಯತ್ನ ಕಾಣದೆ, ಅದನ್ನು ಧ್ವನಿಪೂರ್ಣವಾಗಿ ಮಾಡುವ ಪ್ರಯತ್ನ ಕೂಡ ಕಾಣುತ್ತದೆ. 'ಹೂವು ಹಣ್ಣು'-ಕತೆಯ ಮೂಲ ತ್ರಿವೇಣಿ



'ಹೂವು ಹಣ್ಣು' ಚಿತ್ರದಲ್ಲಿ ಲಕ್ಷ್ಮಿ, ಬೇಬಿ ಶ್ಯಾಮಿಲಿ

ಅವರ ಕಾದಂಬರಿ. ಬದುಕಿನಲ್ಲಿ ತಾನು ಸಮಾಜದ ಕ್ರೌರ್ಯಕ್ಕೆ ಬಲಿಯಾದಂತೆ, ತನ್ನ ಮಗಳು ಬಲಿಯಾಗಬಾರದು ಎಂದು ವೇಶ್ಯೆ ತಾಯಿ ಹಂಬಲಿಸುವ, ಕನಸುಕಾಣುವ, ಈ ಕನಸು ನನಸು ಮಾಡಲು ಆಕೆ ನಡೆಸುವ ಹೋರಾಟ, ಇದರಿಂದ ಆಕೆ ಎದುರಿಸುವ ಸವಾಲುಗಳು, ಅಂತಿಮವಾಗಿ ಇವಳೇ ತನ್ನ ತಾಯಿಯೆಂದು ತಿಳಿಯದೆ, ಅವಳನ್ನು ಸಮಾಜದ ಇತರ ಕುತ್ಸಿತ ಮನಸ್ಸಿನ ಜನ ನಡೆಸಿಕೊಳ್ಳುವ ರೀತಿಯಲ್ಲೇ ತಾನೂ ನಡೆಸಿಕೊಳ್ಳುವ ಮಗಳ ಸುತ್ತ ಹೆಣೆದ ಕತೆಯಲ್ಲಿ ಜೀವನ ಸೌಂದರ್ಯಕ್ಕಾಗಿ ಹಂಬಲಿಸುವ ಹೆಣ್ಣಿನ ಬಾಳ ಚಿತ್ರಣವಿದೆ. ನಮ್ಮ ಈ ವ್ಯವಸ್ಥೆಯಲ್ಲಿ ಹೆಣ್ಣಿನ ಬಗೆಗಿರುವ ಮೌಲ್ಯಗಳಲ್ಲಿನ ದ್ವಂದ್ವ, ಅಸಂಬಂದ್ಧತೆ, ವೈರುಧ್ಯಗಳನ್ನು ತ್ರಿವೇಣಿ ಭಾಷೆಯ ಮಾಧ್ಯಮದಲ್ಲಿ ಹೇಳಿರುವುದಕ್ಕಿಂತ ಎತ್ತರದಲ್ಲಿ ಹೇಳಲು ಬಾಬು ಸಾಕಷ್ಟು ಪ್ರಯತ್ನಪಟ್ಟಿದ್ದಾರೆ. ಆದರೆ ಕೆಲವು ಕಮರ್ಷಿಯಲ್ ಕಾರಣಗಳಿಗಾಗಿ ಅವರು ಮಾಡಿಕೊಂಡಿರುವ ರಾಜಿಯಿಂದಾಗಿ ಅದರ ಬಂಧ ಸಡಿಲವಾಗಿದೆ. ಕತೆಯ ಕಾಲದಲ್ಲಿಲ್ಲದ ಫಿಯಟ್, ಕತೆಯ ಬಂಧದೊಳಕ್ಕೆ ನುಸುಳಿರುವುದರಿಂದ ಕಾಲಬದ್ಧತೆಯೊಂದಿಗೆ ಹೊಂದಿಕೊಳ್ಳಲಾರದೆ ಚಿತ್ರ ಸೋಲುತ್ತದೆ. ಚಿತ್ರದ ಅಂತಿಮ ಘಟ್ಟದ ದೃಶ್ಯಗಳನ್ನು ಇನ್ನಷ್ಟು ತರ್ಕಬದ್ಧವಾಗಿ ಜೋಡಿಸಿದ್ದಲ್ಲಿ ಚಿತ್ರದ ವ್ಯಾಪ್ತಿಯೇ ಬೇರೆಯಾಗುತ್ತಿತ್ತು ಎನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ. ಹಲವು ಕೊರತೆ

ನ್ಯೂನ್ಯತೆ ದೋಷಗಳ ನಡುವೆಯೂ ' ಹೂವು ಹಣ್ಣು' ಒಂದು ವಿಶಿಷ್ಟ ಪ್ರಯತ್ನ ಎನ್ನುವುದರಲ್ಲಿ ಅನುಮಾನವಿಲ್ಲ.

ರವಿ ಅವರು ನಿರ್ಮಿಸಿದ ಒಂದು ಮಕ್ಕಳ ಚಿತ್ರ 'ಜಂಬೂ ಸವಾರಿ'ಆದರ್ಶ-ಕನಸುಗಳೆರಡರ ಮಿಶ್ರಣ. ಈ ಎರಡೂ ಅಂಶಗಳನ್ನು ವಾಸ್ತವದ ನೆಲೆಯೊಳಗಿಟ್ಟು ಅರ್ಥಕಟ್ಟುವ ಪ್ರಯತ್ನ ಇಲ್ಲಿ ನಡೆದಿದೆ. ಅವಾಸ್ತವತೆಯ ಕ್ಯಾನ್‌ವಾಸ್‌ನ ಮೇಲೆ ಮಕ್ಕಳ ಕನಸುಗಳ ಬಣ್ಣ ಹರಡಿ ಹೊಸ ಚಿತ್ರವೊಂದನ್ನು ರೂಪಿಸುವ ಮಾಧ್ಯಮದ ಈ ಪ್ರಯೋಗ ನಾಗಾಭರಣರ 'ಚಿನ್ನಾರಿ ಮುತ್ತ'ಕ್ಕಿಂತ ಭಿನ್ನವಾದ ನೆಲೆಯಲ್ಲಿ ನಿಲ್ಲುತ್ತದೆ. ಬಾಲಕನೊಬ್ಬ ಕಳೆದುಹೋದ ಬದುಕಿನಲ್ಲಿ ಮತ್ತೆ ಭರವಸೆಯನ್ನು ಪಡೆದುಕೊಳ್ಳುವ ಪ್ರಯತ್ನ 'ಚಿನ್ನಾರಿ ಮುತ್ತ'ದ್ದು. ಈಗಾಗಲೇ ತೆಲುಗಿನಲ್ಲಿ ಬಂದಿರುವ 'ಅಶ್ವಿನಿ' ಕತೆಯನ್ನೇ ಹೆಚ್ಚು ಕಡಿಮೆ ಹೋಲುವಂತೆ ಕಂಡರೂ ಈ ಚಿತ್ರದ ಮೊದಲರ್ಧ ಸ್ವತಂತ್ರವಾಗಿದೆ. ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಗಳ ಸಾಲಿನಲ್ಲಿ ಈ ಚಿತ್ರ ಈ ವರ್ಷದ ಶ್ರೇಷ್ಠ ಪ್ರಾದೇಶಿಕ ಚಿತ್ರ ಪ್ರಶಸ್ತಿ ಪಡೆದಿದೆ. ಹಾಗೆಯೇ ಎಸ್. ಆರ್. ರಾಜನ್ ನಿರ್ದೇಶನದ ಕೊಡವ ಭಾಷೆಯ 'ಮಂದಾರ ಪೂ' ಮತ್ತು ಡಾ. ರಿಚರ್ಡ್ ಕ್ಯಾಸ್ಟಲಿನೊ ನಿರ್ದೇಶನದ ತುಳು ಭಾಷೆಯ 'ಬಂಗಾರ್ ಪಟ್ಲೇರ್' ಚಿತ್ರಗಳಿಗೆ ಪ್ರಾದೇಶಿಕ ಭಾಷಾ ಪ್ರಶಸ್ತಿಗಳು ಬಂದಿವೆ. ಟಿ. ಆರ್. ರಾಮರೆಡ್ಡಿ ನಿರ್ದೇಶನದ 'ದೇವರ ಕಾಡು' ಅತ್ಯುತ್ತಮ ಪರಿಸರ ಚಿತ್ರಪ್ರಶಸ್ತಿ ಪಡೆದಿದೆ.

ಉತ್ತಮ ಚಿತ್ರವಾಗುವ ಎಲ್ಲಾ ಸಾಧ್ಯತೆಗಳನ್ನು ಕತೆಯಲ್ಲಿ ಹುದುಗಿಸಿಕೊಂಡಿದ್ದ 'ಜೀವನ ಸಂಘರ್ಷ' ನಿರ್ದೇಶನದ ಕೊರತೆಯಿಂದ ಬಳಲಿದೆ. ನಿರೂಪಣಾ ವಿಧಾನದಿಂದ 'ಮಹೇಂದ್ರ ವರ್ಮ' ಯಶಸ್ವಿಯಾಗಿದೆ. ಎರಡೂ ಮೂರು ಶ್ರಮದ ಫಲ ಆನಂದ್‌ರ 'ಶೃಂಗಾರ ರಾಜ' ಎಂಬುದನ್ನು ನಂಬಲು ಕಷ್ಟವಾಗುತ್ತದೆ. 'ವಿಜಯಕ್ರಾಂತಿ' ಹೊಸ ನಿರ್ದೇಶಕನ ಪ್ರಥಮ ಚಿತ್ರ ಎಂಬ ಕಾರಣಕ್ಕೆ ಹೆಚ್ಚಿನ ಅಂಕ ಪಡೆದುಕೊಳ್ಳುತ್ತದೆ. ಕೆಳ ಮಧ್ಯಮ ವರ್ಗದ ಸವಾಲುಗಳನ್ನು ಚಿತ್ರಿಸುವ 'ಕುಂಕುಮ ಭಾಗ್ಯ' ಕೇವಲ ಮೆಲೋಡ್ರಾಮಾಕ್ಕಷ್ಟೇ ಸೀಮಿತವಾಗಿದೆ.

ಮಹಾನ್ ತ್ಯಾಗ, ಆದರ್ಶಗಳ ಉತ್ಪ್ರೇಕ್ಷಿತ ಚಿತ್ರಣವಿರುವ 'ಹೂವೊಂದು ಬೇಕು ಬಳ್ಳಿಗೆ' ಚಿತ್ರ ತನ್ನ ಮಿತಿಗಳ ನಡುವೆಯೂ ಒಂದು ಉತ್ತಮ ಪ್ರಯತ್ನ. ನಮ್ಮ ಬದುಕಿನ ಪಾತಳಿಗೆ ತೀರಾ ಹೊಸದಾದ ಬಾಡಿಗೆಯ ತಾಯಿಕಲ್ಪನೆ ಈ ಚಿತ್ರದ ಕಥಾವಸ್ತು. ಬಾಡಿಗೆ ತಾಯಿಯ ಕಲ್ಪನೆ ನಮ್ಮ ಸಮಾಜ ನಂಬಿಕೆಗಳಿಗೆ ತೀರಾ ಹೊಸದಾದ್ದರಿಂದ ಜೊತೆಗೆ ನಿರೂಪಣೆಯ ಯಾವುದೇ ಕೌಶಲ್ಯವಿರದ ಕಾರಣ ಚಿತ್ರದ ಸೋಲು ಅನಿವಾರ್ಯವಾಯಿತು.

ಆದರೆ ೧೯೯೩ರಲ್ಲಿ ತೆರೆಕಂಡ ಚಿತ್ರಗಳ ಪೈಕಿ ಸ್ವಲ್ಪ ಭರವಸೆ ಹುಟ್ಟಿಸಿದ ಚಿತ್ರ ಸುನಿಲ್‌ಕುಮಾರ್ ದೇಸಾಯಿ ಅವರ 'ನಿಷ್ಕರ್ಷ'. ಬ್ಯಾಂಕ್ ದರೋಡೆ, ಒತ್ತೆಯಾಳುಗಳ ಕತೆ ಹೊಸತಲ್ಲವಾದರೂ ಹಾಲಿವುಡ್ ಪ್ರೇರಣೆಯಿಂದ ಅಂಥಾ ಕತೆಯೊಂದನ್ನು ಆಯ್ಕೆ

ಮಾಡಿಕೊಂಡು ಭಿನ್ನವಾದ, ಅಂದರೆ ಫಾರ್ಮುಲಾ ಚಿತ್ರಗಳ ಮರಸುತ್ತುವ ಹಾಡು ಅನವಶ್ಯಕ ಕಾದಾಟವಿಲ್ಲದೆ ರೂಪಿಸಿದ ಚಿತ್ರ ಎಂಬ ಹೆಗ್ಗಳಿಕೆ ನಿಷ್ಕರ್ಷದ್ದು. ಸುಮಾರು ೧೨ ಗಂಟೆಗಳ ಕಾಲ ನಡೆಯುವ ಬ್ಯಾಂಕ್‌ದರೋಡೆ, ಒತ್ತೆಯಾಳುಗಳ ಬಿಡುಗಡೆಯ ಕತೆಯನ್ನಾಧರಿಸಿದ ನಿಷ್ಕರ್ಷ ತನ್ನ ತಾಂತ್ರಿಕ ಪರಿಣತಿ, ಇದರಿಂದ ತೆರೆಯ ಮೇಲೆ ಆಗುವ ಪರಿಣಾಮ, ಭಾವಪ್ರಧಾನ ಅಂಶಗಳ ಸೂಕ್ಷ್ಮ ಹೆಣಿಗೆಯಿಂದ ಪ್ರೇಕ್ಷಕರ ಮನಸ್ಸನ್ನು ತಟ್ಟುವುದರಲ್ಲಿ ಯಶಸ್ವಿಯಾಯಿತೆಂದರೆ ತಪ್ಪಾಗಲಾರದು. ಕ್ಯಾಮರಾ ಮೂಲಕ ಚಿತ್ರದ ಓಟಕ್ಕೆ ಒಂದು ವಿಶಿಷ್ಟ ಆಯಾಮ ನೀಡಿರುವ ಪಿ. ರಾಜನ್ ನೆರವಿನಿಂದ ಬೆಂಗಳೂರು ನಗರವನ್ನು ಮಹಾನಗರದಂತಹ ಕಲ್ಪನೆಗೆ ಎತ್ತರಿಸಿ, ಭಾವುಕ ಪ್ರೇಕ್ಷಕರ ಮನಸ್ಸಿನಲ್ಲಿ ಆತಂಕ, ಕುತೂಹಲ ಉಳಿಯುವಂತೆ ಮಾಡಿ, ಸುಮಾರು ಎರಡೂವರೆ ಗಂಟೆ ಸಾಗುವ ಚಿತ್ರವನ್ನು ನಿರ್ಮಿಸಿದ್ದು ಒಂದು ಸಾಹಸವೇ ಸರಿ. ನಿರ್ದೇಶಕನ ಮಾಧ್ಯಮ ಚಿತ್ರ - ಎಂಬ ಮಾತು ಸುಳ್ಳಾಗುತ್ತಿರುವ ಕನ್ನಡ ಚಿತ್ರರಂಗದ ಇಂದಿನ ಪರಿಸ್ಥಿತಿಯಲ್ಲಿ 'ನಿಷ್ಕರ್ಷ'ವನ್ನು ನಿರ್ದೇಶಕನ ಕೈಕೂಸು ಎಂಬುದನ್ನು ರುಜುವಾತು ಪಡಿಸಿರುವ ದೇಸಾಯಿ ಅವರ ಜಾಣ್ಮೆ ಪ್ರತಿ ಫ್ರೇಂನಲ್ಲೂ ಎದ್ದು ಕಾಣುತ್ತದೆ. ಹಾಲಿವುಡ್ ಶೈಲಿಯ ಈ ಕತೆಯನ್ನು ಕನ್ನಡದ ಪರಿಸರಕ್ಕೆ ಹೊಂದಿಸಲು ಅವರು ಪಟ್ಟಿರುವ ಕಷ್ಟ ಫಲ ನೀಡಿದೆ. ಹೀಗೆಂದ ಮಾತ್ರಕ್ಕೆ 'ನಿಷ್ಕರ್ಷ' ಸಂಪೂರ್ಣ ದೋಷರಹಿತ ಚಿತ್ರವೆನ್ನುವಂತಿಲ್ಲ. ಅನಗತ್ಯದ ರೇಪ್, ಹಾಗೂ ಹೆರಿಗೆಯ ದೃಶ್ಯವನ್ನು, ನಾಯಕನನ್ನು ಸಂಪೂರ್ಣ ನಾಯಕನನ್ನಾಗಿ ಮಾಡಲು ಹೋಗಿ ಬಂಧ ಕೊಂಚ ಸಡಿಲವಾದಂತಿದೆ. ಕೆಲವು ದೃಶ್ಯಗಳನ್ನು ನೇರವಾಗಿ ಹಾಲಿವುಡ್‌ನಿಂದ ಎರವಲು ಪಡೆದುಕೊಂಡಿರುವುದು ದೇಸಾಯಿ ಅವರ ಕ್ರಿಯಾಶೀಲತೆ, ಸೃಜನಶೀಲತೆಯನ್ನು ಪ್ರಶ್ನಿಸುವಂತೆ ಮಾಡುತ್ತದೆ.

ಇಷ್ಟೇ ಅಲ್ಲದಿದ್ದರೂ ತನ್ನ ಹೊಸತನದ ಮೂಲಕ ಪ್ರೇಕ್ಷಕರ ಗಮನ ಸೆಳೆದ ಮತ್ತೊಂದು ಚಿತ್ರ 'ಶ್!' ಇದರ ಕತೆಯ ಎಳೆ 'ಬಾಮೋಷ್'ದಾದರೂ ನಿರೂಪಣೆಯಲ್ಲಿ ನಿರ್ದೇಶಕರ ಜಾಣ್ಮೆ ಎದ್ದು ಕಾಣುತ್ತದೆ.

ಕೆಲವು ಬ್ಲೂಫಿಲಂನಂಥಾ ದೃಶ್ಯಗಳು, ಹಾಗೂ ಸದಾ ಬೈಯುವ ಇನ್‌ಸ್ಪೆಕ್ಟರ್ ಪಾತ್ರ ಕೆಲವು ಪ್ರೇಕ್ಷಕರಿಗೆ ಹಿಡಿಸಿರಬಹುದಾದರೂ ಉತ್ತಮ ಅಭಿರುಚಿಗೆ ಇದೊಂದು ಪೆಟ್ಟೆನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ.

ಆದರೆ ಮನೋಹರ್ ಒಂದೆರಡು ಹಾಡುಗಳ ಮೂಲಕ ತಾವೊಬ್ಬ ಉತ್ತಮ ಸಂಗೀತ ನಿರ್ದೇಶಕ ಎಂಬುದನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ. ಈ ಪ್ರಯತ್ನವನ್ನು 'ಗೆಜ್ಜೆನಾದ'ದಲ್ಲೂ ಕಾಣಬಹುದು.

'ಮೌನ ಸಂಗ್ರಾಮ' ಕುತೂಹಲದ ಚಿತ್ರಕ್ಕೆ ಅಗತ್ಯವಿರುವ ನಿರೂಪಣಾ ಕೌಶಲ್ಯ, ಕತ್ತಲ-ಬೆಳಕಿನಾಟದಲ್ಲಿ ಪ್ರೌಢಿಮೆ ಸಾಧಿಸಿದೆ. 'ಶ್'ಮೂಲಕ ಕುಮಾರ ಗೋವಿಂದ ಮತ್ತು ನಿರ್ದೇಶಕ ಉಪೇಂದ್ರ ಗೆದ್ದು ಬಂದರೆ, ಮೌನ ಸಂಗ್ರಾಮದ ನಿರ್ದೇಶಕ

ಮೋಹನ್ ಮಲ್ಲಪಳ್ಳಿಲ್ ನಮ್ಮ ಗಮನ ಸೆಳೆಯುತ್ತಾರೆ.

ಕೆಲವು ಉತ್ತಮ ಗುಣಗಳಿದ್ದರೂ 'ವಿಷ್ಣು ವಿಜಯ', 'ಅಪೂರ್ವ ಜೋಡಿ' ಚಿತ್ರಗಳು ಸೋತದ್ದು ಅವುಗಳಲ್ಲಿ ಹೊಸತನ ಕಾಣದೆ, ನಿರೂಪಣಾ ಶೈಲಿ ನೀರಸವಾದದ್ದು, ಶಿವರಾಜ್ ಕುಮಾರ್ ಅಭಿನಯದ 'ಆನಂದ ಜ್ಯೋತಿ'ಹೊಸತೇನನ್ನು ಹೇಳದೆ 'ಬೆಸುಗೆ'ಯ ಕತೆಯನ್ನೇ ಹೊತ್ತುವಿಪುಲವಾದರೆ, ' ನಾವಿಬ್ಬರು ನಮಗಿಬ್ಬರು' ಮಧ್ಯಮ ಸ್ಥಿತಿ ಮುಟ್ಟುವುದರಲ್ಲಷ್ಟೇ ತೃಪ್ತಿಪಟ್ಟುಕೊಳ್ಳಬೇಕಾಯಿತು. ' ಬೇವು ಬೆಲ್ಲ' 'ನಂಜುಂಡ'ಕತೆಯನ್ನೇ ಮತ್ತೊಂದು ರೂಪದಲ್ಲಿ ನೀಡಿದ ಕಾರಣ ಸೋತಿತು ಎನ್ನುವುದು ನಿಚ್ಚಳ ಸತ್ಯ. 'ಧರ್ಮಪೀಠ' ತೆಲುಗಿನ 'ಬೊಬ್ಬಲಿ ಬ್ರಹ್ಮನ್ನ'ದ ರೀಮೇಕ್ ಆಗಿ ಸೋತರೆ 'ಜೈಲರ್ ಜಗನ್ನಾಥ್',' ಐ. ಪಿ. ಎಸ್. ಕೆಂಪಯ್ಯ' ಒಂದೇ ಸೂತ್ರದ ಕತೆಗಳಾಗಿ ಸೋತವು.

ರೀಮೇಕ್ ಚಿತ್ರಗಳಾದ 'ಅಣ್ಣಯ್ಯ', 'ರಾಯರು ಬಂದರು ಮಾವನ ಮನೆಗೆ', 'ಮುದ್ದಿನ ಮಾವ', ' ಕುಂಕುಮ ಭಾಗ್ಯ', 'ಗಡಿಬಿಡಿ ಗಂಡ', 'ಅಳಿಮಯ್ಯ' ಚಿತ್ರಗಳ ಯಶಸ್ಸಿಗೆ ಕಾರಣಗಳೇ ಬೇರೆ ಬೇರೆ. ' ಅಣ್ಣಯ್ಯ'ದಲ್ಲಿ ಭಾವನಾತ್ಮಕ ಎಳೆ, ರವಿಚಂದ್ರನ್ ಅದ್ದೂರಿತನ, 'ರಾಯರು ಬಂದರು ಮಾವನ ಮನೆಗೆ ' ಚಿತ್ರದಲ್ಲಿ ವಿಷ್ಣುವರ್ಧನ್‌ರ ಮನೋಜ್ಞ ಅಭಿನಯ, 'ಕುಂಕುಮ ಭಾಗ್ಯ'ದಲ್ಲಿ ಲಕ್ಷ್ಮಿಯ ಪ್ರೌಢ ಅಭಿನಯ, 'ಮುದ್ದಿನ ಮಾವ' ಯಶಸ್ಸಿಗೆ ಎಸ್. ಪಿ. ಬಾಲಸುಬ್ರಹ್ಮಣ್ಯಂ ಅವರ ಅಭಿನಯ ಕಾರಣವಾಯಿತು. 'ರಾಜಕೀಯ', 'ಗೋಲಿಬಾರ್' ನಂತಹ ಚಿತ್ರಗಳ ಅಲ್ಪ ಯಶಸ್ಸಿಗೆ ಅವು ಹಿಂಸಾಪ್ರಧಾನ ರಾಜಕೀಯ ವ್ಯವಸ್ಥೆಗೆ ಹಿಡಿದ ಕನ್ನಡಿಯಷ್ಟೇ ಕಾರಣ.

ಇವಿಷ್ಟು ೧೯೯೩ರಲ್ಲಿ ತೆರೆಕಂಡ ಚಿತ್ರಗಳ ಸೋಲು ಗೆಲುವಿನ ವಿಶ್ಲೇಷಣೆಯಾದರೆ, ಬೆಳವಣಿಗೆಯ ದೃಷ್ಟಿಯಿಂದ ಈ ವರ್ಷ ಕನ್ನಡ ಚಿತ್ರರಂಗವನ್ನು ಗಮನಿಸಿದರೆ ತುಳು ಭಾಷೆಯಲ್ಲಿ ಕೇವಲ ೨೪ ಗಂಟೆಗಳಲ್ಲಿ 'ಸೆಪ್ಟಂಬರ್ ೮' ಎಂಬ ಚಿತ್ರವೊಂದನ್ನು ಮಾಡುವ ಪ್ರಯತ್ನ, ನಿರ್ದೇಶಕರ ಸಂಘ ಎರಡು ವರ್ಷಗಳಿಂದ ಬಾಕಿ ಉಳಿದಿದ್ದ ತನ್ನ ಪ್ರಶಸ್ತಿಗಳನ್ನು ವಿತರಿಸಿದ್ದು, ರೀಮೇಕ್ ಚಿತ್ರಗಳಿಗೆ ತೆರಿಗೆ ವಿನಾಯಿತಿ ಬಗ್ಗೆ ಸರ್ಕಾರದ ಜೊತೆ ಮಾತುಕತೆ, ಚಲನಚಿತ್ರರಂಗದ ನೀತಿ ರೂಪಿಸಲು ನೇಮಕವಾದ ವಿ. ಎನ್. ಸುಬ್ಬರಾವ್ ಸಮಿತಿ ತನ್ನ ವರದಿಯನ್ನು ೧೯೯೩ರಲ್ಲಿ ಸರ್ಕಾರಕ್ಕೆ ಸಲ್ಲಿಸಿದ್ದು - ಈ ಎಲ್ಲಾ ಪ್ರಮುಖ ಸಂಗತಿಗಳು ಕಣ್ಣು ಮುಂದೆ ಹಾದು ಹೋಗುತ್ತವೆ.





# ಕ್ರೀಡಾ ಚಟುವಟಿಕೆ

*ವಿಜು ಪೂಣಚ್ಚ*

### ಕನ್ನಡಿಗರಿಗೆ ಖುಷಿ ನೀಡಿದ ವರುಷ

ಭಾರತ ಕ್ರೀಡಾರಂಗದಲ್ಲಿ ಕರ್ನಾಟಕಕ್ಕೆ ಬಲು ಮಹತ್ವದ ಸ್ಥಾನವಿದೆ. ಅದು ಅಥ್ಲೆಟಿಕ್ಸ್, ಹಾಕಿ, ಕಬಡ್ಡಿ ಇರಲಿ, ಕ್ರಿಕೆಟ್, ಫುಟ್‌ಬಾಲ್, ಟೆನಿಸ್ ಆಗಲಿ; ಅಂತಾರಾಷ್ಟ್ರೀಯ ಕೂಟದಲ್ಲಿ ಪಾಲ್ಗೊಳ್ಳುವ ಭಾರತ ತಂಡದಲ್ಲಿ ಕರ್ನಾಟಕದವರು ಇರುವುದು ಸಾಮಾನ್ಯ. ಇದು ಇಂದು ನಿನ್ನೆಯದಲ್ಲ. ದಶಕಗಳಿಂದಲೂ ನಡೆದು ಬಂದ ಕರ್ನಾಟಕದ ಅಪೂರ್ವ ಕ್ರೀಡಾ ಪರಂಪರೆ ಇದು. ಪ್ರತಿ ವರುಷದಂತೆ ೧೯೯೩ ರಲ್ಲಿ ಕೂಡಾ ಕನ್ನಡಿಗರು ರಾಷ್ಟ್ರೀಯ, ಅಂತಾರ್‍ರಾಷ್ಟ್ರೀಯ ಕ್ರೀಡಾಂಗಣದಲ್ಲಿ ಗಮನಾರ್ಹ ಹೆಜ್ಜೆಗಳನ್ನಿಟ್ಟಿದ್ದಾರೆ.

ಅಥ್ಲೆಟಿಕ್ಸ್‌ನಲ್ಲಿ ಕೆ.ಕೆ. ಗೀತಾ, ಕ್ರಿಕೆಟ್‌ನಲ್ಲಿ ಅನಿಲ್ ಕುಂಬ್ಳೆ, ಜಾವಗಲ್ ಶ್ರೀನಾಥ್, ಈಜಿನಲ್ಲಿ ಅಭಿಜಿತ್, ಟೆನಿಸ್‌ನಲ್ಲಿ ಪಿ. ಶ್ರೀನಾಥ್, ಆರತಿ ಪೊನ್ನಪ್ಪ, ಟೇಬಲ್ ಟೆನಿಸಿನಲ್ಲಿ ಚೇತನ್ ಬಬೂರ್, ಅರ್ಚನಾ ಸೇರಿದಂತೆ ಹಲವರು ಭಾರತದ ಮಟ್ಟಿಗೆ ಈ ವರ್ಷ ಉತ್ತಮ ಸಾಧನೆ ತೋರಿ ಕರ್ನಾಟಕಕ್ಕೆ ಹೆಮ್ಮೆ ತಂದಿದ್ದಾರೆ.

ಬೆಂಗಳೂರಿನ ಕೆಂಗೇರಿ ಬಳಿಯಲ್ಲಿರುವ ಭಾರತ ಕ್ರೀಡಾ ಪ್ರಾಧಿಕಾರ (ದಕ್ಷಿಣ ಕೇಂದ್ರ) ಕರ್ನಾಟಕದ ಕ್ರೀಡಾರಂಗಕ್ಕೆ ಹೊಸ ಚೇತನ ತುಂಬಿದೆ. ಈ ವರುಷದ ಆರಂಭದಲ್ಲಿ ಇಲ್ಲಿಯೇ ನಡೆದ ೩೦ನೇ ಅಖಿಲ ಭಾರತ ಓಪನ್ ಅಥ್ಲೆಟಿಕ್ ಕೂಟದಲ್ಲಿ ಕರ್ನಾಟಕದ ಕೆ.ಕೆ. ಗೀತಾ ಹೆಪ್ಟಥ್ಲಾನ್‌ನಲ್ಲಿ ನೂತನ ಕೂಟ ದಾಖಲೆ ಸ್ಥಾಪಿಸಿ 'ಅಥ್ಲೀಟುಗಳ ರಾಣಿ' ಎನಿಸಿದರು. ಇದಾಗಿ ಒಂದೂವರೆ ತಿಂಗಳ ನಂತರ ದೆಹಲಿಯಲ್ಲಿ ನಡೆದ ಅಂತರ ರಾಜ್ಯ ಅಥ್ಲೆಟಿಕ್ ಕೂಟದ ಹರ್ಡಲ್ಸ್‌ನಲ್ಲಿ ಚಿನ್ನದ ಪದಕ ಪಡೆದರು.

ಧಾರವಾಡದಲ್ಲಿ ಜನವರಿ ತಿಂಗಳು ನಡೆದ ನಾಲ್ಕನೇ ದಕ್ಷಿಣ ವಲಯ ಅಂತರ ವಾರ್ಸಿಟಿ ಅಥ್ಲಿಟಿಕ್ ಕೂಟ ನಡೆಯಿತು. ಇಲ್ಲಿ ಮದರಾಸ್ ಮತ್ತು ಮಹಾತ್ಮಾ ಗಾಂಧಿ ವಾರ್ಸಿಟಿಗಳು ತಂಡ ಪ್ರಶಸ್ತಿ ಗೆದ್ದರೂ, ಕರ್ನಾಟಕ ವಾರ್ಸಿಟಿಯ ದಾಕ್ಷಾಯಿಣಿ ಅಸೂಟಿ ದೂರ ಓಟದ ಸ್ಪರ್ಧೆಗಳಲ್ಲಿ ದಾಖಲೆಯೊಂದಿಗೆ ಚಿನ್ನ ಗೆದ್ದು ಮಿಂಚಿದರು.

ರಾಷ್ಟ್ರೀಯ ಮಟ್ಟದ ಅಥ್ಲೆಟಿಕ್ಸ್‌ನಲ್ಲಿ ಕರ್ನಾಟಕದ ಬಾಲಕಿಯರದು ಸದಾ ಎತ್ತಿದ

ಕೈ. ಫೆಬ್ರವರಿ ತಿಂಗಳಲ್ಲಿ ನಾಗರಕೊಯಿಲ್‌ನಲ್ಲಿ ನಡೆದ ರಾಷ್ಟ್ರೀಯ ಜೂನಿಯರ್ ಅಥ್ಲೆಟಿಕ್ ಕೂಟದಲ್ಲಿ ಕರ್ನಾಟಕದ ಬಾಲಕಿಯರು ತಂಡ ಪ್ರಶಸ್ತಿ ಗೆದ್ದಿತು. ಫಿಲಿಪ್ಪೀನ್ಸ್‌ನ ಮನಿಲಾದಲ್ಲಿ ನಡೆದ ಏಷ್ಯಾ ಟ್ರ್ಯಾಕ್ ಮತ್ತು ಫೀಲ್ಡ್ ಕೂಟ, ಢಾಕಾದಲ್ಲಿ ನಡೆದ ದಕ್ಷಿಣ ಏಷ್ಯಾ ಫೆಡರೇಷನ್ ಕ್ರೀಡಾಕೂಟ ಮತ್ತು ರಾಷ್ಟ್ರೀಯ ಮಟ್ಟದ ಕೆಲವು ಕ್ರೀಡಾಕೂಟಗಳಲ್ಲಿ ಕರ್ನಾಟಕದ ಕೆ.ಕೆ. ಗೀತಾ, ಎಚ್.ಜಿ. ಅಪ್ಸರಾ, ಇ.ಬಿ. ಶೈಲಾ, ಸಿಲ್ವೇನಿಯಾ ಪಯಸ್ ಸುದ್ದಿ ಮಾಡಿದರು.

ಈ ವರ್ಷ ಅಥ್ಲೀಟ್ಸ್‌ಗಿಂತ ಹೆಚ್ಚು ಯಶಸ್ಸು ಪಡೆದ ಕರ್ನಾಟಕದ ಈಜುಪಟುಗಳು ಚಿನ್ನದ ಮಳೆ ಸುರಿಸಿದರು. ಈಜಿನಲ್ಲಿ ಕರ್ನಾಟಕಕ್ಕೆ ಇದು ಚಿನ್ನದ ವರುಷ. ಅದು ಸೀನಿಯರ್ ಇರಬಹುದು, ಜೂನಿಯರ್ ಇರಬಹುದು; ರಾಷ್ಟ್ರ ಮಟ್ಟದ ಎಲ್ಲಾ ಈಜು ಕೂಟಗಳಲ್ಲಿಯೂ ಕರ್ನಾಟಕದ ಈಜುಪಟುಗಳದ್ದೇ ಏಕಸ್ವಾಮ್ಯ.

ಅಭಿಜಿತ್ ಜಯ ತೀರ್ಥರಾವ್, ಸತೀಶ್ ಕುಮಾರ್, ಮೇಘನಾ ನಾರಾಯಣ್, ಸಜಿನಿಶೆಟ್ಟಿ, ಕೋಕಿಲಾ ಶೆಟ್ಟಿ ಸೇರಿದಂತೆ ಹಲವು ಈಜುಪಟುಗಳು ಹಲವು ರಾಷ್ಟ್ರೀಯ ದಾಖಲೆಗಳನ್ನು ಮುಳುಗಿಸಿದರು. ಜುಲೈ ತಿಂಗಳು ಬೆಂಗಳೂರಿನಲ್ಲಿ ನಡೆದ ರಾಷ್ಟ್ರೀಯ ಜೂನಿಯರ್ ಚಾಂಪಿಯನ್‌ಷಿಪ್‌ನಲ್ಲಿ ಅಭಿಜಿತ್ ವೇಗದ ಈಜುಗಾರ ಎನಿಸಿದರೆ, ಕರ್ನಾಟಕದವರು ತಂಡ ಪ್ರಶಸ್ತಿ ಗೆದ್ದರು. ವರುಷದ ಕೊನೆಯಲ್ಲಿ ಢಾಕಾದಲ್ಲಿ ನಡೆದ ದಕ್ಷಿಣ ಏಷ್ಯಾ ಫೆಡರೇಷನ್ ಕ್ರೀಡಾಕೂಟದಲ್ಲಿ ಅಭಿಜಿತ್ ಎರಡು ಚಿನ್ನದ ಪದಕಗಳನ್ನು ತನ್ನಾದಾಗಿಸಿಕೊಂಡನು.

ಕ್ರಿಕೆಟ್‌ನಲ್ಲಿ ಭಾರತಕ್ಕೆ ಹೊಸ ಚೇತನ ತುಂಬಿದವರಲ್ಲಿ ಕರ್ನಾಟಕದವರ ಪಾಲು ಬಲು ದೊಡ್ಡದು. ಜಿ.ಆರ್. ವಿಶ್ವನಾಥ್, ಪ್ರಸನ್ನ, ಬಿ.ಎಸ್. ಚಂದ್ರಶೇಖರ್, ರೋಜರ್ ಬಿನ್ನಿ, ಬ್ರಿಜೇಶ್ ಪಟೇಲ್, ಕೀರ್ಮಾನಿ.... ಹೀಗೆ ಅತಿರಥ ಮಹಾರಥರ ಹೆಸರುಗಳು ಬೆಳೆಯುತ್ತಲೇ ಹೋಗುತ್ತವೆ. ಈಚೆಗೆ ಇವರ ಸಾಲಿಗೆ ಸೇರಿದ ಕನ್ನಡಿಗರು ಅನಿಲ್ ಕುಂಬ್ಳೆ, ಜಾವಗಲ್ ಶ್ರೀನಾಥ್. ಈ ಇಬ್ಬರ ಪಾಲಿಗೆ ಈ ವರ್ಷ ಬಹಳ ಮಹತ್ವಪೂರ್ಣ.

ಸ್ಪಿನ್ ಬೌಲಿಂಗ್‌ನಲ್ಲಿ ಕುಂಬ್ಳೆ ರೋಮಾಂಚಕ ಸಾಧನೆ ತೋರಿದರೆ, ವೇಗದ ಬೌಲಿಂಗ್‌ನಲ್ಲಿ ಶ್ರೀನಾಥ್ ಸುದ್ದಿ ಮಾಡಿದರು. ಇವರ ಎಸೆತದ ಮೋಡಿಗೆ ಇಂಗ್ಲೆಂಡ್, ಶ್ರೀಲಂಕಾ, ದಕ್ಷಿಣ ಆಫ್ರಿಕಾ, ಜಿಂಬಾಬ್ವೆ ಮುಂತಾದ ದೇಶಗಳ ಬ್ಯಾಟ್ಸ್‌ಮನ್‌ಗಳು ತತ್ತರಿಸಿದರು.

ಬೆಂಗಳೂರಿನ ಕ್ರಿಕೆಟ್ ಪ್ರಿಯರಿಗೂ ಈ ವರುಷ ಸಾಕಷ್ಟು ಸಂತಸ ನೀಡಿತು. ಇಲ್ಲಿನ ಚಿನ್ನಸ್ವಾಮಿ ಕ್ರೀಡಾಂಗಣದಲ್ಲಿಯೇ ಮಾರ್ಚ್ ತಿಂಗಳಲ್ಲಿ ಇಂಗ್ಲೆಂಡ್-ಭಾರತ ನಡುವಣ ಒಂದು ದಿನದ ಅಂತಾರಾಷ್ಟ್ರೀಯ ಪಂದ್ಯ ನಡೆದರೆ, ನವೆಂಬರ್‌ನಲ್ಲಿ ದಕ್ಷಿಣ ಆಫ್ರಿಕ-ಜಿಂಬಾಬ್ವೆ ನಡುವೆ ಒಂದು ದಿನದ ಪಂದ್ಯ ನಡೆಯಿತು. ದಕ್ಷಿಣ ವಲಯ ಪೆಪ್ಸಿ ರಣಜಿ ಟ್ರೋಫಿಯ ಕರ್ನಾಟಕ- ಗೋವಾ ನಡುವಣ ಪಂದ್ಯ ಕೂಡಾ ಇಲ್ಲಿಯೇ ನಡೆಯಿತು. ಇದು ಕರ್ನಾಟಕದ ಕೀರ್ಮಾನಿಯವರ ನೂರನೇ ರಣಜಿ ಪಂದ್ಯ.

ವಿಜಯವಾಡದಲ್ಲಿ ನಡೆದ ಆಂಧ್ರ ವಿರುದ್ಧದ ದಕ್ಷಿಣ ವಲಯ ರಣಜಿ ಕ್ರಿಕೆಟ್‌ನಲ್ಲಿ ಪಾಯಿಂಟ್ಸ್ ಹಂಚಿಕೊಂಡ ಕರ್ನಾಟಕ, ಸಿಕಂದರಾಬಾದ್‌ನಲ್ಲಿ ನಡೆದ ಸೇಲ್ ಟ್ರೋಫಿಯಲ್ಲಿ ಹೈದರಾಬಾದ್ ತಂಡವನ್ನು ಸೋಲಿಸಿತು. ಮಧ್ಯಪ್ರದೇಶದ ವಿರುದ್ಧದ ರಣಜಿ ಪ್ರಿಕ್ವಾರ್ಟರ್ ಫೈನಲ್‌ನಲ್ಲಿ ಕರ್ನಾಟಕ ಸೋಲಬೇಕಾಯಿತು. ಬಹಳ ಸುದ್ದಿ ಮಾಡಿದ್ದ ರಾಜ್ಯದ ರಘುರಾಮ್ ಭಟ್ ಈ ಪಂದ್ಯದ ನಂತರ ನಿವೃತ್ತಿ ಘೋಷಿಸಿದರೆ, ಅಕ್ಟೋಬರ್‌ನಲ್ಲಿ ಕಾರ್ಲ್‌ಟನ್ ಸಾಲ್ಡಾನಾ ನೇಪಥ್ಯಕ್ಕೆ ಸರಿದರು.

ತಾವು ಆಡಿದ್ದಲ್ಲೆಲ್ಲಾ ಈ ವರುಷ ಶ್ರೇಷ್ಠ ಸಾಧನೆ ತೋರಿ ಭಾರತ ತಂಡದಲ್ಲಿ ಸ್ಥಾನ ಗಿಟ್ಟಿಸುವ ನಿಟ್ಟಿನಲ್ಲಿ ಭರವಸೆ ಮೂಡಿಸಿದ ಕನ್ನಡಿಗ ಕ್ರಿಕೆಟ್‌ಗರೆಂದರೆ ವೆಂಕಟೇಶ್ ಪ್ರಸಾದ್, ರಾಹುಲ್ ದ್ರಾವಿಡ್, ಅರುಣ್ ಕುಮಾರ್, ಅವಿನಾಶ್ ವೈದ್ಯ, ಸುನಿಲ್ ಜೋಷಿ.

ಮೈಸೂರಿನ ಪಿ. ಶ್ರೀನಾಥ್ ಈ ವರುಷದ ಕೊನೆಯಲ್ಲಿ ಹೈದರಾಬಾದ್‌ನಲ್ಲಿ ನಡೆದ ಕೊಟಕ್ ಮಂದ್ರಾ ರಾಷ್ಟ್ರೀಯ ಓಪನ್ ಟೆನಿಸ್ ಪ್ರಶಸ್ತಿ ಗೆದ್ದರು. ವರುಷದ ಆರಂಭದಲ್ಲಿ ಬೆಂಗಳೂರಿನಲ್ಲಿ ಬ್ರಿಟಾನಿಯಾ ಚಾಲೆಂಜರ್ ಟೆನಿಸ್ ಪಂದ್ಯಗಳು ನಡೆದವು. ಇಲ್ಲಿ ಆರಂಭದ ಸುತ್ತಿನಲ್ಲಿ ಅಮೆರಿಕದ ಪ್ರಮುಖ ಆಟಗಾರ ಸೈಮನ್ ಅವರನ್ನು ಮಣಿಸಿದ ಶ್ರೀನಾಥ್ ಮಿಂಚಿದರು.

ಮಹಿಳಾ ಟೆನಿಸ್‌ನಲ್ಲಿ ರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆದವರು ಬೆಂಗಳೂರಿನ ಆರತಿ ಪೊನ್ನಪ್ಪ. ಹಲವು ರಾಷ್ಟ್ರೀಯ ಟೂರ್ನಿಗಳಲ್ಲಿ ಪ್ರಶಸ್ತಿ ಗೆದ್ದಿರುವ ಇವರು, ಡಿಸೆಂಬರ್‌ನಲ್ಲಿ ನಡೆದ ರಾಷ್ಟ್ರೀಯ ಟೆನಿಸ್ ಚಾಂಪಿಯನ್‌ಷಿಪ್‌ನ ಫೈನಲ್ ತಲುಪಿದ್ದರು.

ಟೇಬಲ್ ಟೆನಿಸ್‌ನಲ್ಲಿ ಕರ್ನಾಟಕದ ಚೇತನ್ ಬಬೂರ್, ಅರ್ಚನಾ ರಾವ್ ಪ್ರಸಕ್ತ ರಾಷ್ಟ್ರೀಯ ಮಟ್ಟದಲ್ಲಿ ಅಗ್ರಮಾನ್ಯ ಆಟಗಾರರು. ಬೆಂಗಳೂರಿನಲ್ಲಿಯೇ ಮಾರ್ಚ್‌ನಲ್ಲಿ ನಡೆದ ಇಂಡಿಯಾ ಕಪ್ ಟೇಬಲ್ ಟೆನಿಸ್ ಕೂಟದಲ್ಲಿ ಚೇತನ್ ಬಬೂರ್ ಪ್ರಶಸ್ತಿ ಗಳಿಸಿದರು. ಇವರಿಬ್ಬರು ಯುರೋಪ್ ಪ್ರವಾಸ ನಡೆಸಿದ ಭಾರತ ತಂಡದಲ್ಲಿಯೂ ಸ್ಥಾನ ಗಿಟ್ಟಿಸಿದ್ದರು.

ಬೆಂಗಳೂರಿನಲ್ಲಿ ಗೋಲ್ಡ್ ಫ್ಲೇರ್ ಗ್ರ್ಯಾನ್ ಸ್ಲ್ಯಾಮ್ ವೃತ್ತಿ ನಿರತ ಅಂತಾರಾಷ್ಟ್ರೀಯ ಬಿಲಿಯರ್ಡ್ಸ್ ಟೂರ್ನಿ ನಡೆದು ವಿಶ್ವ ಬಿಲಿಯರ್ಡ್ಸ್ ಪ್ರಿಯರ ಗಮನ ಸೆಳೆಯಿತು. ಇದಕ್ಕೆ ಮೊದಲು ಇಲ್ಲಿಯೇ ನಡೆದ ರಾಷ್ಟ್ರೀಯ ಸ್ನೂಕರ್ ಚಾಂಪಿಯನ್‌ಷಿಪ್‌ನಲ್ಲಿ ಕರ್ನಾಟಕದ ಬಿ.ವಿ.ಎಸ್.ಮೂರ್ತಿ ಪ್ರಶಸ್ತಿ ಗಳಿಸಿದ್ದರು.

ಕರ್ನಾಟಕ ಇಂತಹ ಪ್ರಮುಖ ಕ್ರೀಡೆಗಳಲ್ಲಿಯೇ ಅಲ್ಲದೆ ಹಾಕಿ, ಹ್ಯಾಂಡ್‌ಬಾಲ್, ಬ್ಯಾಡ್ಮಿಂಟನ್ ಸೇರಿದಂತೆ ಹಲವು ಕ್ರೀಡೆಗಳಲ್ಲಿಯೂ ಉನ್ನತ ಮಟ್ಟದ ಸಾಮರ್ಥ್ಯ ತೋರಿತು.

ಬರೇಲಿಯಲ್ಲಿ ನಡೆದ ೨೭ ನೇ ರಾಷ್ಟ್ರೀಯ ಜೂನಿಯರ್ ಹಾಕಿ ಟೂರ್ನಿಯಲ್ಲಿ ಕರ್ನಾಟಕ ಪ್ರಶಸ್ತಿ ಗೆದ್ದಿತು. ಇಂದಿರಾ ಗಾಂಧಿ ಸ್ವರ್ಣಕಪ್ ಅಂತಾರಾಷ್ಟ್ರೀಯ ಹಾಕಿ ಟೂರ್ನಿಯಲ್ಲಿ ಆಡಿದ ಭಾರತ ತಂಡದಲ್ಲಿ ಕರ್ನಾಟಕದ ಸಾಬು ವರ್ಕಿ , ಬಿ.ಸಿ.ಪೂಣಚ್ಚ, ರಾಜು ಬಗಾಡೆ, ಸುಬ್ಬಯ್ಯ ಸ್ಥಾನ ಪಡೆದಿದ್ದರು. ಪೋಲೆಂಡ್‌ನ ಪೊಜ್ನಾನ್‌ದಲ್ಲಿ ನಡೆದ ಅಂತಾರಾಷ್ಟ್ರೀಯ ಹಾಕಿ ಕೂಟದಲ್ಲಿ ಅತ್ಯುತ್ತಮ ಸಾಧನೆ ಮಾಡಿದ ಭಾರತ ತಂಡಕ್ಕೆ ಬೆಂಗಳೂರಿನ ಜೂಡ್ ಫೆಲಿಕ್ಸ್ ನಾಯಕತ್ವ ವಹಿಸಿದ್ದರು.

ಬೆಂಗಳೂರಿನಲ್ಲಿ ನಡೆದ ಹದಿನೈದನೇ ದಕ್ಷಿಣ ವಲಯಸೀನಿಯರ್ ಹ್ಯಾಂಡ್ ಬಾಲ್ ಟೂರ್ನಿಯ ಪುರುಷರ ವಿಭಾಗದ ಪ್ರಶಸ್ತಿ ಕರ್ನಾಟಕದ್ದಾಯಿತು. ಮದರಾಸಿನಲ್ಲಿ ನಡೆದ ಮೂರನೇ ಸೀನಿಯರ್ ರಾಷ್ಟ್ರೀಯ ಟ್ರಯಥ್ಲಾನ್ ಚಾಂಪಿಯನ್‌ಷಿಪ್‌ನಲ್ಲಿ ಮಹಿಳಾ ವಿಭಾಗದ ತಂಡ ಪ್ರಶಸ್ತಿ ಕರ್ನಾಟಕದ ಬಗಲಿಗೆ ಬಂದಿತು. ತಿಪಟೂರಿನಲ್ಲಿ ನಡೆದ ದಕ್ಷಿಣ ವಲಯ ಕೊಕ್ಕೋ ಕೂಟದ ಬಾಲಕ ಬಾಲಕಿಯರ ವಿಭಾಗಗಳೆರಡರಲ್ಲಿಯೂ ಕರ್ನಾಟಕವೇ ಪ್ರಶಸ್ತಿ ಗೆದ್ದು ಕೊಂಡಿತು.

ಮದರಾಸಿನಲ್ಲಿ ನಡೆದ ರಾಷ್ಟ್ರೀಯಬಾಲ್ ಬ್ಯಾಡ್ಮಿಂಟನ್ ಚಾಂಪಿಯನ್‌ಷಿಪ್‌ನಲ್ಲಿ ಸತತವಾಗಿ ೩೫ನೇ ಸಲ ಪ್ರಶಸ್ತಿ ಗೆದ್ದ ಹೆಮ್ಮೆ ಕರ್ನಾಟಕದ ವನಿತೆಯರದ್ದಾಯಿತು. ರಾಷ್ಟ್ರೀಯ ಮೂರನೇ ಸಬ್ ಜೂನಿಯರ್ ಬೇಸ್ ಬಾಲ್ ಚಾಂಪಿಯನ್‌ಷಿಪ್ ಬೆಂಗಳೂರು ನಗರದಲ್ಲಿಯೇ ನಡೆದು, ಇಪ್ಪತ್ತು ರಾಜ್ಯಗಳಿಂದ ಬಂದಿದ್ದ ಸ್ಪರ್ಧಿಗಳು ಪಾಲ್ಗೊಂಡಿದ್ದರು. ಇದು ಕರ್ನಾಟಕ ಬೇಸ್‌ಬಾಲ್ ಆಟಗಾರರಿಗಂತೂ ಉತ್ತಮ ಅನುಭವ ನೀಡಿತು. ಬೆಂಗಳೂರಿನಲ್ಲಿ ನಡೆದ ೪೩ನೇ ರಾಷ್ಟ್ರೀಯ ಬ್ಯಾಸ್ಕೆಟ್ ಬಾಲ್ ಚಾಂಪಿಯನ್‌ಷಿಪ್‌ನಲ್ಲಿ ಕರ್ನಾಟಕದ ಪುರುಷರ ತಂಡ ನಾಲ್ಕರ ಘಟ್ಟದಲ್ಲಿ ಸರ್ವಿಸಸ್ ಎದುರು ಸೋತರೆ, ವಿಜಾಪುರದಲ್ಲಿ ನಡೆದ ಇಪ್ಪತ್ತನೇ ರಾಷ್ಟ್ರೀಯ ಕಿರಿಯರ ವಾಲಿಬಾಲ್ ಸೆಮಿಫೈನಲ್‌ನಲ್ಲಿ ಕರ್ನಾಟಕದವರು ತಮಿಳುನಾಡಿನ ವಿರುದ್ಧ ಸೋಲ ಬೇಕಾಯಿತು.

ಭಾರತ ಫುಟ್‌ಬಾಲ್ ರಂಗದ 'ನರ್ಸರಿ' ಎಂದೇ ಪ್ರಖ್ಯಾತವಾದ ಬೆಂಗಳೂರಿನಲ್ಲಿ ಇಂದಿಗೂ ಹಲವು ಫುಟ್‌ಬಾಲ್ ಆಟಗಾರರು ಅರಳಿ ಕಲ್ಕತ್ತ, ಮುಂಬೈಗಳಲ್ಲಿ ಹೆಸರು ಮಾಡುತ್ತಿದ್ದಾರೆ. ಪ್ರಸಕ್ತ ಬೆಂಗಳೂರಿನ ಐ. ಟಿ. ಐ. ಕರ್ನಾಟಕದ ಅಗ್ರಮಾನ್ಯ ಫುಟ್‌ಬಾಲ್ ತಂಡವಾಗಿದೆ. ಈ ವರ್ಷ ಪ್ರತಿಷ್ಠಿತ ಸ್ಟಾಫರ್ಡ್ ಕಪ್ ಗೆದ್ದಿರುವ ಐ.ಟಿ.ಐ., ರಂಗ ವಿಲಾಸ್ ಟ್ರೊಫಿ ಗಳಿಸಿದ್ದಲ್ಲದೆ, ಲೀಗ್ ಚಾಂಪಿಯನ್ಸ್ ಕೂಡಾ ಆಗಿದೆ.

ಸಿ. ಎಂ. ಮುತ್ತಯ್ಯ, ಗೇಬ್ರಿಯಲ್, ಬಿ. ಎಸ್. ಚಂದ್ರ ಶೇಖರ್, ಪ್ರಸನ್ನ, ಬಿ. ಪಿ. ಗೋವಿಂದ, ಎಂ. ಪಿ. ಗಣೇಶ್, ನಿರ್ಮಲಾ, ರೀತ್ ಅಬ್ರಹಾಮ್, ಅಶ್ವಿನಿ, ವಂದನಾ ಮತ್ತು ರಾಜನ್ ಸೇರಿದಂತೆ ಅಸಂಖ್ಯ ಅಂತಾರಾಷ್ಟ್ರೀಯ ಮಟ್ಟದ ಕ್ರೀಡಾಪಟುಗಳು ಕರ್ನಾಟಕದಲ್ಲಿ ಅರಳಿದ್ದಾರೆ. ಇದೀಗ ಪ್ರತಿವರುಷವೂ ಹೊಸ ಪ್ರತಿಭೆಗಳು ಹೊಸ ಹೆಜ್ಜೆಗಳನ್ನಿಡತೊಡಗಿವೆ. ೧೯೯೩, - ಈ ನಿಟ್ಟಿನಲ್ಲಿ ಕರ್ನಾಟಕದ ಪಾಲಿಗೆ ಹೆಮ್ಮೆ ತರುವಂತದ್ದೇ ಆಗಿದೆ.

# ಸಾಹಿತ್ಯ ಪ್ರಕಾರ

## ಸಣ್ಣಕತೆ

*ರಹಮತ್ ತರೀಕೆರೆ*

ಈ ವರ್ಷದ ಕಥಾಸಂಕಲನಗಳಲ್ಲಿರುವ ಫಸಲನ್ನು ಪರಿಶೀಲಿಸುವ ಮೂಲಕ ಕನ್ನಡ ಸಾಹಿತ್ಯಕ್ಕೆ ಸಣ್ಣಕತೆಗಳು ಸೇರಿಸಿರುವ ಹೊಸತನಗಳನ್ನು ಕಂಡುಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ. ನಿರ್ದಿಷ್ಟ ವರ್ಷದಲ್ಲಿ ಸಂಕಲನಗಳು ಪ್ರಕಟವಾಗಿವೆ ಎಂದ ಮಾತ್ರಕ್ಕೆ ಅವುಗಳ ಒಳಗಿನ ಕತೆಗಳು ಆ ಹಿಂದಿನ ಒಂದೆರಡು ವರ್ಷಗಳಲ್ಲೇ ಬರೆಯಲಾದವು ಎಂದಲ್ಲವಷ್ಟೆ; ಹಿಂದಿನ ದಶಕಗಳಲ್ಲಿ ಬರೆಯಲಾದವೂ ಆಗಿರುತ್ತವೆ. ಎಂತಲೇ ಐವತ್ತರ ದಶಕಗಳಲ್ಲಿ ಹುಟ್ಟಿಕೊಂಡ 'ಹಳೆಯ' ಕತೆಗಳೂ ಈ ವರ್ಷದೊಳಗೇ ಸೇರಿವೆ. ನವ್ಯವು ವಿರಾಜಮಾನವಾಗಿ ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ, ಅದರ ಶ್ರದ್ಧಾಪ್ರಭಾವದಲ್ಲಿ ಸೃಷ್ಟಿಯಾದ ಕತೆಗಳಿರುವಂತೆ, ಈ ಹೊತ್ತಿನ ದಲಿತ - ಬಂಡಾಯದ ಗಾಢ ಪ್ರಭಾವದಲ್ಲಿ ಬರೆಯಲಾದ ಕತೆಗಳೂ ಇಲ್ಲಿವೆ. ಜತೆಗೆ ಇವೆರಡೂ 'ಮಾರ್ಗ'ಗಳ ಬಗ್ಗೆ ಒಳಸೆಳೆತ ಮತ್ತು ಗುಮಾನಿಗಳನ್ನಿಟ್ಟುಕೊಂಡು ಬರೆದಿರುವ ಕತೆಗಳೂ ಇವೆ. ಬಹುಶಃ ಈ ವರ್ಷದ ಸಂಕಲನಗಳಲ್ಲಿ ಈ ಮೂರನೇ ಬಗೆಯವೇ ಪ್ರಮುಖವಾಗಿವೆ. ಕತೆಗಾರರಲ್ಲಿ ಕಾಣುವ ಸಾಹಿತ್ಯಕ ಮಾರ್ಗಗಳ ಬಗೆಗಿನ ಆಕರ್ಷಣೆ ವಿಕರ್ಷಣೆಗಳು, ಸಣ್ಣಕತೆಯ ಹುಟ್ಟು ಬೆಳೆಯು ಈ ಹೊತ್ತು ನಿರಾತಂಕವಾಗಿ ದಕ್ಕಿಸಿಕೊಂಡ ದಾರಿಯ ನಡಿಗೆಯಾದಂತಿಲ್ಲ. ಬದಲಾಗಿ ತಲ್ಲಣದ, ಹುಡುಕಾಟದ ಹೊಯ್ದಾಟವೂ ಆಗಿದೆ. ಹೀಗಾಗಿಯೇ ಒಂದು ಬಗೆಯ

ಪ್ರಯೋಗಶೀಲತೆಯು ಇಲ್ಲಿ ಎದ್ದು ಕಾಣುತ್ತದೆ. ಇದಕ್ಕಾಗಿ ಕನ್ನಡದ ಸಣ್ಣಕತೆಯ ಆಡುಂಬೊಲವು ಹೊಸಪ್ರತಿಭೆಗಳನ್ನು ತನ್ನೊಳಗೆ ಆಡಲು ಕರೆದುಕೊಳ್ಳುತ್ತಲೇ ಇದೆ.

ಮೇಲಿನ ಪ್ರಸ್ತಾವನೆಯಲ್ಲಿ 'ನವ್ಯ', 'ದಲಿತ -ಬಂಡಾಯ', 'ಸ್ತ್ರೀವಾದಿ' ಎಂಬ ಸಾಹಿತ್ಯಕ ಪರಿಭಾಷೆಗಳು ಬಂದವು. ಇವು ಒಂದು ಹಂತದ ತನಕ ಸಾಹಿತ್ಯ ವಿಮರ್ಶೆಯ ಅನುಕೂಲಕ್ಕಾಗಿ ಒದಗಿಬರುವ ಮಾತುಗಳೇ. ಈ ಪರಿಭಾಷೆಗಳಿಂದ ನಿರ್ದಿಷ್ಟ ಪ್ರಯೋಜನಗಳಿಲ್ಲವೆಂತಲ್ಲ, ಇವೆ; ಆದರೂ ಕೆಲವೊಮ್ಮೆ ಈ ಪರಿಭಾಷೆಗಳು ವಿಮರ್ಶೆಯಲ್ಲಿ ತೊಡಕುಗಳನ್ನೊಡ್ಡಿ ವಿಚಿತ್ರ ಕಷ್ಟಕ್ಕೆ ಈಡುಮಾಡುತ್ತವೆ. ಟಿ. ಜಿ. ರಾಘವ ಅವರ ಕತೆಗಳನ್ನು ಓದುವಾಗ ಈ ಪರಿಭಾಷೆಗಳ ಕಷ್ಟ ಎದುರಾಗುವುದಿಲ್ಲ. (ಅವರೊಬ್ಬ ಪಕ್ಕಾ 'ನವ್ಯ'ಎನ್ನಬಹುದಾದ ಕತೆಗಾರ. ತಮ್ಮ ಕತೆಗಳಲ್ಲಿ ಅಲ್ಲದೆ, ಮುನ್ನುಡಿಯ ಮಾತುಗಳಲ್ಲೂ ನವ್ಯಕ್ಕೆ ತಮ್ಮ ನಿಷ್ಠೆಯನ್ನು ಅವರು ಘೋಷಿಸಿಕೊಂಡಿದ್ದಾರೆ.) ಈ ಪರಿಭಾಷೆಗಳ ಪರಿಮಿತಿಗಳು ಗೊತ್ತಾಗುವುದು ಬಿದರಹಳ್ಳಿಯಂಥವರ ಕತೆಗಳನ್ನು ಕುರಿತು ಬರೆಯುವಾಗ; ಬಾಳಿನ ಅರ್ಥವನ್ನು ಮನುಷ್ಯ ಸ್ವಭಾವಗಳಲ್ಲೊ, ಮನುಷ್ಯ ಸ್ವಭಾವಗಳನ್ನು ನಿಯಂತ್ರಿಸುವ ಸಂದರ್ಭದ ಒತ್ತಡಗಳಲ್ಲೊ ಅಥವಾ ಅಂಥ ಸಂದರ್ಭಗಳಿಗೆ ಹಿನ್ನೆಲೆಯಾದ ಸಾಮಾಜಿಕ ಪರಿಸರದಲ್ಲೊ ಹುಡುಕುವ ಕೆಲಸ ಮಾಡುವ ಸಾಹಿತ್ಯಕೃತಿಗಳು ವಿಮರ್ಶೆಗೆ ಸವಾಲಾಗುವುದೇ ಹೀಗೆ. ಈ ವರ್ಷದ ಸಂಕಲನಗಳಲ್ಲಿ ಅತ್ಯುತ್ತಮವಾದ ಬಿದರಹಳ್ಳಿಯವರ 'ಶಿಶು ಕಂಡ ಕನಸು'ಸಂಗ್ರಹದ ಕತೆಗಳು, ಯಾವುದೇ ಒಂದು ಪಂಥದ ಪ್ರಭಾವಕ್ಕೂ ವಾಲದೆ, ತಮ್ಮದೇ ಆದ ದಾರಿಯನ್ನು ಸಮೆದುಕೊಂಡು ಸೃಷ್ಟಿಯಾಗಿವೆಯೇ ? ಹೆಚ್ಚೂ ಕಡಿಮೆ ಎರಡು ದಶಕಗಳಿಂದ ಬರೆಯಲಾದ ಕತೆಗಳಿವು.

ಈ ಕತೆಗಳೆಂದರೆ, ಅವಸರವಾಗಿ ಓದಿ ಏನನ್ನೂ ಕಳೆದುಕೊಳ್ಳಲು ಮನಸ್ಸಾಗದ ಕವಿತೆಗಳಂತೆ. ತನ್ಮಯವಾಗಿ, ಸಾವಧಾನವಾಗಿ, ತೀವ್ರವಾಗಿ ಕತೆಗಾರನ ವ್ಯಕ್ತಿತ್ವವನ್ನೇ ತೊಡಗಿಸಿಕೊಂಡು ಸೃಷ್ಟಿಯಾದ ಕತೆಗಳಿವು. ಹೀಗಾಗಿ ಅವರ ಕತೆಗಳಲ್ಲಿ ಓದುಗನನ್ನು ಸೆಳೆದುಕೊಳ್ಳಬಲ್ಲ ಫೋರ್ಸ್ ಇದೆ. ವೈಚಾರಿಕತೆಯ ಮೂಳೆಗಟ್ಟಿತನ, ಭಾವನಾತ್ಮಕತೆಯ ಬಿಸಿರಕ್ತ, ಬದುಕಿನ ದಟ್ಟ ಅನುಭವಗಳ ಸ್ನಾಯುಬಲ ತುಂಬಿದ ಇಲ್ಲಿನ ಕತೆಗಳ ಪ್ರಾಣವೆಂದರೆ, ದಾರ್ಶನಿಕತೆ. ನೈತಿಕವಾದ ಈ ದಾರ್ಶನಿಕತೆಯು ವಾಸ್ತವದ ಎಲ್ಲದಕ್ಕೂ ದಿಟ್ಟವಾಗಿ ತೆರೆದುಕೊಂಡು ಹುಟ್ಟಿದ್ದರಿಂದ, ಅದು ಬೀದಿಯ ಮಣ್ಣು ಮೆತ್ತಿಕೊಂಡೇ ಇದೆ. ಕಥೆಗಳಿಗೆ ತಂದು ಸೇರಿಸಿದ ಪ್ರಾಣವಾಯುವಾಗದ, ಕತೆಗಳ ಒಳಗೆ ಹುಟ್ಟಿಕೊಳ್ಳುವಂಥ ಈ ದಾರ್ಶನಿಕತೆಯ ಒಂದು ಎಳೆಯನ್ನು ಹಿಡಿದು. ನಿರೂಪಕನು ಜೀವನ ತತ್ವಗಳನ್ನು ವ್ಯಾಖ್ಯಾನ ಮಾಡುವುದೂ ಇದೆ. ಬಹುಶಃ ಈ ಮಾತುಗಳು ಈ ಸಂಕಲನದ ಹಾಗೂ ಕನ್ನಡದ ಶ್ರೇಷ್ಠ ಕತೆಗಳಲ್ಲಿ ಒಂದಾಗಿರುವ 'ಬಿತ್ತಕ್ಕೆ ಬೇರಿನ ಚಿಂತೆ'ಗೆ ಚೆನ್ನಾಗಿ ಅನ್ವಯಿಸುತ್ತವೆ. ಈ ಕತೆಯು ಹೊಸತಲೆಮಾರುಗಳು ಪರಂಪರೆಯನ್ನು ಶ್ರದ್ಧೆ ಮತ್ತು ವಿಮರ್ಶೆಯಲ್ಲಿ ಕಂಡುಕೊಳ್ಳುವ ಬಗೆಗಿನ ಒಂದು ರೂಪಕವಾಗಿದೆ. ಗತದಿಂದ ಚೈತನ್ಯಶೀಲವಾದುದನ್ನು ಆಯ್ದುಕೊಂಡು ಮುಂಚಲಿಸುವ ವರ್ತಮಾನದ ವಿವೇಕದ

ಸಂಕೇತವಾಗಿದೆ. ಹೊನ್ನಾಳಿ ಭಾಗದ ವಿಶಿಷ್ಟವೂ ಜೀವಂತವೂ ಆದ ಭಾಷೆಯನ್ನು ದುಡಿಸಿಕೊಂಡಿರುವ ಈ ಕತೆಗಳಿಗೆ ತಮ್ಮದೇ ಆದ ಮುಖಚಹರೆಯಲ್ಲಿ ನಿಲ್ಲಬಲ್ಲ ಶಕ್ತಿಯಿದೆ.

ಕನ್ನಡ ಸಾಹಿತ್ಯದಲ್ಲಿ ಅನುಭವದ ದಿವ್ಯಸತ್ಯಕ್ಕಾಗಿ ಭಾಷೆಯನ್ನು ನವ್ಯಲೇಖಕರಂತೆ ಬಳಸಿದವರು ವಿರಳವೆಂದೂ ಅನುಭವದ ಸೂಕ್ಷ್ಮಾತಿಸೂಕ್ಷ್ಮ ಸಂವೇದನೆಗಳನ್ನು ಅಭಿವ್ಯಕ್ತಿಸುವ ನವ್ಯದ ಈ ಶ್ರೇಷ್ಠ ಗುಣವು ಹಿಂಜರಿದಿದ್ದು ವೈಚಾರಿಕ ಬರಹವೇ ಸೃಜನಶೀಲ ಸಾಹಿತ್ಯವೆನ್ನುವ ಬದಲಾದ ಹೊಸದೃಷ್ಟಿಕೋನದಿಂದ ಎಂದೂ ರಾಘವ ಅವರು ಹೇಳುತ್ತಾರೆ. ಬಹುಶಃ ಇದು ಅವರ ದೃಢನಂಬಿಕೆಯೂ ಆಗಿದೆ. ಅವರು ಆಕ್ಷೇಪಿಸುತ್ತಿರುವ ಬದಲಾದ 'ಹೊಸ ದೃಷ್ಟಿಕೋನ'ವು ಯಾವುದು ಎಂಬುದನ್ನು ಒಡೆದು ಹೇಳಬೇಕಿಲ್ಲ. ಇದಕ್ಕೆ ಭಿನ್ನಾಭಿಪ್ರಾಯ ವ್ಯಕ್ತ ಮಾಡಬಹುದಾದರೂ ಚರ್ಚೆಗಿದು ಜಾಗವಲ್ಲ. ಅಭಿವ್ಯಕ್ತಿ ವಿಧಾನದಲ್ಲಿ ನವ್ಯದ ಮಹತ್ವದ ಕತೆಗಾರರಾದ ಲಂಕೇಶ, ಅನಂತಮೂರ್ತಿ, ಚಿತ್ತಾಲ, ಸದಾಶಿವರಂಥವರು ದೊಡ್ಡದನ್ನು ಸಾಧಿಸಿದ್ದಾರೆ. ಆದರೆ ಈ 'ಶ್ರೇಷ್ಠಗುಣ'ವು ನವ್ಯದ ಬರಹಕ್ಕೆಲ್ಲ ಅನ್ವಯಿಸುವುದಿಲ್ಲವಷ್ಟೆ. ರಾಘವ ಅವರ ಕತೆಗಳನ್ನು ತೆಗೆದುಕೊಂಡರೂ ಇದು ಸ್ಪಷ್ಟವಾಗಿದೆ. ವ್ಯಕ್ತಿ ಸಂಬಂಧಗಳಲ್ಲಿ ಇರುವ ವಿಚಿತ್ರಕರ್ಷಣೆ, ದ್ವಂದ್ವಗಳನ್ನು ಹುಡುಕುವಿಕೆ, ಲವಲವಿಕೆಯ ನಿರೂಪಣೆಗಳು ಅವರ ಕತೆಗಳಲ್ಲಿವೆ. ಆದರೆ ಭಾಷೆಯನ್ನು ಬಳಸುವ ವಿಷಯದಲ್ಲಿ ಮತ್ತು ಅನುಭವದ ವಿಷಯದಲ್ಲಿ ದಶಕಗಳ ಕಾಲ ಬರೆದ ಕತೆಗಳಲ್ಲೆಲ್ಲಾ ಏಕತಾನತೆಯೊಂದು ಕಾಣುತ್ತದೆ. ಯಾವ ಉತ್ಕಟತೆಯೂ ತೀವ್ರತೆಯೂ ಇಲ್ಲದ, ಸಣ್ಣಪುಟ್ಟ ಅಲುಗಾಟವೇ ಮಹದಾಕಾರವಾಗಿ ಬಿಡುವ ಮಧ್ಯಮವರ್ಗದ ಲೋಕವನ್ನಷ್ಟೇ ಕತೆಗಳು ನೆಮ್ಮಿದ್ದು ಕಾರಣವಿದ್ದೀತು ಅಥವಾ 'ನವ್ಯ'ದ ಬಗೆಗಿನ ವಿಚಲಿತಗೊಳ್ಳದ ಕತೆಗಾರನ ನಿಷ್ಠೆಯೂ ಕಾರಣವಿದ್ದೀತು.

ಹಾಗೆ ಕಂಡರೆ, ಕನ್ನಡ ಕತೆಗಳ ಲೋಕದಲ್ಲಿ ಅರ್ಥಪೂರ್ಣವಾಗಿ ಸೃಷ್ಟಿಸುವ ಹವಣಿಕೆಯು ನವ್ಯದ ಶಿಲ್ಪಗಳನ್ನು ಬೇಕೆಂದೇ ಒಡೆಯಲೆತ್ನಿಸುತ್ತಿರುವ ಹೊಸತಲೆಮಾರಿನವರಲ್ಲಿ ಇದೆ. ಉದಾ: ಕೆ. ಸತ್ಯನಾರಾಯಣ, ನಟರಾಜ ಹುಳಿಯಾರ್, ಕೃಷ್ಣಮೂರ್ತಿಚಂದರ್ ಅವರು ನವೋದಯ -ನವ್ಯಗಳ ಅಭಿವ್ಯಕ್ತಿಕ್ರಮದ ಒಳಗಿದ್ದೇ ಅದನ್ನು ಮುರಿಯುತ್ತಿರುವ ಕತೆಗಾರರು. ಕೆ. ಸತ್ಯನಾರಾಯಣ ಅವರಲ್ಲಿ ('ನಿಮ್ಮ ಮೊದಲ ಪ್ರೇಮದ ಕತೆ') ಈ ಪ್ರಯತ್ನವು ಪ್ರಜ್ಞಾಪೂರ್ವಕವಾಗಿದೆ. ಎಂತಲೇ ಕತೆಗಳಲ್ಲಿ ಸಹಜತೆಗಿಂತ ಪ್ರಯೋಗಶೀಲತೆಯು ಎದ್ದು ಕಾಣುವಂತಿದೆ. ಮಾಸ್ತಿ ಬಳಸಿದ ಕಥನಾತಂತ್ರವನ್ನು ಮತ್ತೆ ಬಳಸುತ್ತಾ, ಹೊಸ ಸಂವೇದನೆಗಳನ್ನು ತುಂಬುವ ಸತ್ಯನಾರಾಯಣ ಅವರ ಕತೆಗಳು ಕಂಡಿರುವ ಯಶಸ್ಸು ಎಷ್ಟು? ಮಾಸ್ತಿ ಕತೆಗಳಿಗೂ ಸತ್ಯನಾರಾಯಣ ಅವರ ಕತೆಗಳಿಗೂ ಸಂವೇದನೆಯ ಹಂತದಲ್ಲಿ ಭಿನ್ನತೆಯಿರುವುದರಿಂದ ಈ ತಂತ್ರದ ಪರಿಣಾಮಗಳೇನಾಗಿವೆ? ಈ ಬಗ್ಗೆ ಜಿ. ರಾಜಶೇಖರ್ ಅವರು ಸ್ವಾರಸ್ಯಕರ ಚರ್ಚೆಯನ್ನು ಮಾಡಿದ್ದಾರೆ ಕೂಡ. ಕೆ. ಸತ್ಯನಾರಾಯಣ ಅವರ ಕತೆಗಳು ದಟ್ಟ ಅನುಭವ

ಲೋಕವನ್ನೊಡೆದುಕೊಂಡು ಹುಟ್ಟುವ ಬದಲು, ಬೌದ್ಧಿಕ ಚರ್ಚೆಯು ಬಲವಾಗಿ ಮೆಟ್ಟಿಕೊಂಡಂತೆ ಹುಟ್ಟಿಕೊಳ್ಳುತ್ತವೆ. ಲಲಿತಪ್ರಬಂಧಕಾರರೂ ವಿಮರ್ಶಕರೂ ಆಗಿರುವ ಲೇಖಕ ಕತೆ ಬರೆವಾಗ, ಈ ಎರಡು ಪ್ರಕಾರಗಳು ನುಗ್ಗಿ ಹೀಗಾಗಿದೆಯೇ? ಒಮ್ಮೊಮ್ಮೆ ಹರಟೆಯಾಗಲು ಮತ್ತೊಮ್ಮೆ ಚಿಂತನೆಯಾಗಲು ಬಯಸುವ ಕತೆಗಳಲ್ಲಿ ಬದುಕಿನ ನೇರ ವ್ಯಾಖ್ಯಾನಗಳಿವೆ. 'ಮುದುಕಿ ಹೇಳಿದ ಕತೆ' ಯಂಥ ಕತೆಗಳನ್ನು ನೆನಪಿಸಿಕೊಂಡರೆ ಕತೆಗಾರ ಬಯಸಿದ ಅರ್ಥಗಳು ಅದಕೆ ದಕ್ಕಿವೆಯೇ? ಪುರಾಣ ಪ್ರಸಂಗಗಳನ್ನು ವಾಸ್ತವಿಕ ವಿಧಾನದಲ್ಲಿ ಪುನರ್ನಿರ್ಮಿಸುವ ಸತ್ಯನಾರಾಯಣ ಅವರ ಕತೆಯನ್ನು ಮಾಸ್ತಿಯವರ 'ಕೃಷ್ಣನ ಕೊನೆಯ ದಿನಗಳಿಗೆ' ಹೋಲಿಸಬೇಕು. ಆಗ ಮೇಲೆ ಮುಗ್ಧತೆ ತೋರುವ ಮಾಸ್ತಿಯವರ ತಂತ್ರದ ಯಶಸ್ಸು ಗೊತ್ತಾಗುತ್ತದೆ. 'ಕುಸುಮ ಬಾಲೆ', 'ಬಕಾಲ'ದಂಥ ಕೃತಿಗಳಲ್ಲಿ ದಲಿತಲೇಖಕರು ವಾಸ್ತವವನ್ನು ಪುರಾಣೀಕರಿಸುವ ದಾರಿ ಹಿಡಿದಿರುವಾಗ ಸತ್ಯನಾಯಣ ಇಂಥ ಪ್ರಯತ್ನ ಮಾಡಿರುವುದು ಕುತೂಹಲಕರವಾಗಿದೆ.

ಈ ವರ್ಷದ ಸಂಕಲನಗಳಲ್ಲಿ ಹುಳಿಯಾರರ 'ಮತ್ತೊಬ್ಬ ಸರ್ವಾಧಿಕಾರಿ'ಯ ಕತೆಗಳೂ ಕನ್ನಡ ಕತೆಗಳೊಳಗೆ ಕಾಣಿಸಿಕೊಂಡಿರುವ ಹೊರಳಿಕೆಯ ತಲ್ಲಣಗಳಂತಿವೆ. ಗ್ರಾಮೀಣ ಲೋಕದಲ್ಲಿ ನಿಂತು ಮನುಷ್ಯನ ಸಣ್ಣತನ -ಜೀವಂತಿಕೆಗಳನ್ನು ಶೋಧಿಸುತ್ತಾ ಕತೆ ಕಟ್ಟಲಾರಂಭಿಸಿದ ನಟರಾಜ್, ಆಮೇಲೆ ತಟ್ಟನೆ ನಗರಾನುಭವದ ಆಧುನಿಕ ಪ್ರಜ್ಞೆಯ ಲೋಕಕ್ಕೆ ನೆಗೆದುಬಂದಿದ್ದಾರೆ. ಬಹುಶಃ ನವ್ಯದ ಕತೆಗಾರರಿಂದ ಈ ಕತೆಗಾರನು ಪಡೆದುಕೊಂಡಿರುವ ಕಥನಕ್ರಮವೇ, ಮೊದಲಹಂತದ ಕತೆಗಳ ಗ್ರಾಮೀಣಲೋಕವು ತುಂಡರಿಸಿದಂತೆ ಕೈಬಿಟ್ಟುಹೋಗಲು ಕಾರಣವಿರಬೇಕು. ನವ್ಯದ ಅಭಿವ್ಯಕ್ತಿಕ್ರಮದ ಸೆಳೆತದೊಂದಿಗೆ ಬಂಡಾಯದ ವೈಚಾರಿಕತೆಯ ಸೆಳೆತವೂ ಸೇರಿ, ಅವೆರಡು ಅಲ್ಲದ ಆದರೆ ಅವೆರಡೂ ಇರುವ, ಮತ್ತೊಂದು ಹಾದಿಯನ್ನು ತುಳಿಯಲು ಇಲ್ಲಿನ ಕತೆಗಳು ತಡವುತ್ತಿವೆ. ಎಂತಲೇ ವ್ಯಕ್ತಿಯ ಮನಸೊಳಗೆ ಇಳಿದು ಅಲ್ಲಿನ ಹೊಯ್ದಾಟಗಳನ್ನು ಕಾಣಿಸುವಷ್ಟಕ್ಕೇ ನಿಲ್ಲುವ 'ಹುತ್ತಗಟ್ಟಿದೆ'ಯಂಥ ಟಿಪಿಕಲ್ 'ನವ್ಯ' ಕತೆಯೂ ಇಲ್ಲಿದೆ; ತನ್ನ ತೊಳಲಾಟಕ್ಕೆ ಮೂಲವಾದ ಕಾರಣವನ್ನು ಕಂಡುಕೊಂಡು, ತನ್ನ ಅವಸ್ಥೆಗೆ ಕಾರಣವಾಗಿರುವ ಸನ್ನಿವೇಶವನ್ನು ಎದುರಿಸಲು ಸಜ್ಜಾಗುವ 'ನಾನೆಂಬುದೇನಿಲ್ಲ' ದಂಥ ಬಂಡಾಯದ ಕತೆಗಳೂ ಇವೆ. ಬಂಡಾಯದ ಆಶಯಗಳನ್ನೂ ನವ್ಯದ ಅಂತರ್ಮುಖೀ ಪ್ರಜ್ಞೆಯಲ್ಲಿ ಪಳಗಿಸುತ್ತಿರುವ ನಟರಾಜ್, ಎರಡೂ ಬದಿಯ ಲಾಭಗಳನ್ನು ತಮ್ಮ ಕತೆಗಳಿಗೆ ದೊರಕಿಸಿಕೊಡುತ್ತಿದ್ದಾರೆ. ಹಾಗೇ ಇಬ್ಬದಿಯ ಮಿತಿಗಳನ್ನು ಕೂಡ; ಕತೆಗಳನ್ನು ಬರೆಯುವ ಬದಲು 'ಸೃಷ್ಟಿ'ಸ ಬಯಸುವ ತಾಳ್ಮೆಯುಳ್ಳ ನಟರಾಜ್ ''ಎಲ್ಲೋ ಜೋಗಪ್ಪ''ದಂಥ ಯಶಸ್ವೀ ಕತೆಗಳನ್ನು ಇಲ್ಲಿ ಕೊಟ್ಟಿದ್ದಾರೆ.

ಚಂದರ್ ಅವರ 'ಸಂಬಂಧ ಮತ್ತು ಇತರ ಕತೆಗಳು' ತುಂಬ ಹೊಸತನವುಳ್ಳವಾಗಿವೆ. 'ಸಂಬಂಧಗಳು' ಅವರ ತುಂಬಾ ಯಶಸ್ವಿಕತೆ. ಮನುಷ್ಯ ಮನಸ್ಸಿನ ಆಳದಲ್ಲಿ ಕರಗದೆ ಹಿಂಗದೆ ಉಳಿದುಬಿಡುವ ಸಂಬಂಧಗಳ ತುಡಿತಗಳನ್ನು ಅವರ ಕತೆಗಳು ಚಿತ್ರಿಸುತ್ತವೆ. ಹಿಂದಿನ ನೆನಪುಗಳನ್ನು ಕೆದಕಿಕೊಂಡು, ಕನಸಲ್ಲೊ

ತಳಮಂಡಗಳಲ್ಲೂ ಅವುಗಳ ಅರ್ಥಗಳನ್ನು ಕಾಣುವ ಶ್ರದ್ಧರೇ ಅವರ ಕತೆಗಳಲ್ಲಿ ಹೆಚ್ಚಾಗಿದ್ದಾರೆ. ವಾಸ್ತವವಲ್ಲದ ಹುಚ್ಚು, ಭ್ರಮೆ, ಮರೆವು, ಕನಸುಗಳ ನಿಗೂಢತೆಗಳು ಅವರ ಕತೆಗಳಲ್ಲಿ ಪಾತ್ರಗಳ ಅನುಭವವೂ ಕತೆಯನಿರೂಪಣಾ ತಂತ್ರವೂ ಆಗಿವೆ. ಖಚಿತವಾಗಿ ವಿವರಿಸಲಾಗದ, ವಿಶ್ಲೇಷಿಸಲಾಗದ ಅರ್ಥಗಳ ಜಗತ್ತಿದು. ಬಾಳಿನ ಅಸಹಾಯಕವಾದ ಘಟ್ಟದಲ್ಲಿರುವ ವ್ಯಕ್ತಿಗಳ ತಲ್ಲಣಗಳನ್ನು ಕೇಳುವ ಹೇಳುವ ಈ ಕತೆಗಳು ಚಿತ್ತಾಲರನ್ನು ನೆನಪಿಸುತ್ತವೆ.

'ಮನಸು ಮುಗಿಲು'- ಗ್ರಾಮೀಣ ಅನುಭವ ಹಾಗೂ ಪ್ರಾದೇಶಿಕ ವಿಶಿಷ್ಟವಾದ ಭಾಷೆಯೆಂಬ ಎರಡು ಬಲಗಳಿಂದ ಕತೆ ಬರೆಯುವ ಕಾ. ತ. ಚಿಕ್ಕಣ್ಣನವರ ಮೂರನೆಯ ಸಂಕಲನವಿದು ಎನಿಸುತ್ತದೆ. ಉದಾರಮಾನವತಾವಾದ, ಕರುಣೆ, ಆದರ್ಶ - ಪ್ರೀತಿಗಳನ್ನು ತನ್ನ ಗುಣಸ್ವಭಾವವಾಗಿಸಿಕೊಂಡಿರುವ ಈ ಕತೆಗಳು ದುರ್ಬಲರ ಅಸಹಾಯಕ ಸ್ಥಿತಿಗಳತ್ತಲೇ ತಮ್ಮ ಗಮನವನ್ನು ನೆಟ್ಟುಬಿಡುತ್ತವೆ. ಚಿಕ್ಕಣ್ಣನವರ 'ಮುಂಜಾವು' ಕಾದಂಬರಿಗೂ ಇಲ್ಲಿನ ಕತೆಗಳಿಗೂ ಹತ್ತಿರದ ಸಾದೃಶ್ಯಗಳಿವೆ. ಅವರ ಕತೆ - ಕಾದಂಬರಿಗಳ ಜಗತ್ತಿನ ನಾಯಕರು ಪರಿಸ್ಥಿತಿಯ ಇಕ್ಕಟ್ಟುಗಳಲ್ಲಿ ಸಿಕ್ಕು, ತಮ್ಮದಲ್ಲದ ತಪ್ಪಿಗಾಗಿ ಪರಿತಪಿಸುವವರು; ಎಂತಲೇ ಮುದುಕರು, ಬಾಲಕರು, ಜೀತದಾಳುಗಳು ಅವರ ಕಥಾನಾಯಕರು. ಆದರೆ ತಮ್ಮನ್ನು ಆವರಿಸಿಕೊಂಡಿರುವ ಈ ಪರಿಸ್ಥಿತಿಯಿಂದ ಪಾರಾಗಲು ಅವರು ಬಯಸುತ್ತಾರೆ; ನಿಧನಿಧಾನವಾಗಿ ತಮ್ಮ ಮೆಲುದನಿಗಳನ್ನು ಒಂದಿಕ್ಕಿ ಎದುರಿಸುವ ಗಡುಸುತನ, ಚಾಲಾಕಿಗಳನ್ನು ಪಡೆಯುತ್ತಾರೆ. ಇದು ಬಹುಶಃ ಈ ಹೊತ್ತಿನ ಚಳುವಳಿಗಳ ಸಣ್ಣ ಪ್ರಭಾವದ ಬಳುವಳಿಯೂ ಇದ್ದೀತು. ಆದರೂ ಕತೆಗಾರನ ಸೌಮ್ಯವಾದಕ್ಕೂ, ಕತೆಗಳಲ್ಲಿನ ನಾಯಕರು ನೇರ ಸಂಘರ್ಷಗಳನ್ನು ತಪ್ಪಿಸಿಕೊಂಡು ಸುರಕ್ಷಿತವಲಯಗಳಿಗೆ ಸರಿದುಹೋಗುವುದಕ್ಕೂ ಸಂಬಂಧವಿದೆ. ಎಂತಲೇ ಇಲ್ಲಿನ ಕಥಾಜಗತ್ತಿನಲ್ಲಿನ ಗ್ರಾಮ ಬದುಕು, ಮಾರ್ಪಡಿಸಿ ಸೌಮ್ಯಗೊಳಿಸಿದ ಜಗತ್ತಾಗಿದೆ. ಅಲ್ಲಿನ ಸಂಘರ್ಷಗಳನ್ನು ಅರ್ಥಮಾಡಿಕೊಂಡು ಸಂಕೀರ್ಣವಾಗಿಯೇ ಕಾಣಿಸಬಲ್ಲ ಶಕ್ತಿಯನ್ನು ಪಡೆಯಲು ಒಂದು ತಾತ್ವಿಕತೆಯ ಅವಶ್ಯಕತೆಯನ್ನಿದು ಸೂಚಿಸುತ್ತದೆಯೇ ?

ಈ ವರ್ಷ ಕನ್ನಡ ಸಣ್ಣಕತೆಗಳ ಲೋಕಕ್ಕೆ ಜಿಗಿದುಬಂದಿರುವ ಹೊಸಪ್ರತಿಭೆಯಾದ ವೇದಾ ಅವರು, ತಮ್ಮ ಮೊದಲ ಪ್ರಯತ್ನಗಳಲ್ಲೇ ಗಮನ ಸೆಳೆದುಬಿಟ್ಟಿದ್ದಾರೆ. ಸ್ತ್ರೀವಾದದ ವೈಚಾರಿಕ ವರ್ತುಲಕ್ಕೂ ಮಧ್ಯಮವರ್ಗದ ಹೆಂಗಳೆಯರ ಕನಸು -ಯೋಗಸೆಗಳನ್ನೇ ತುಟಿಗೆ ಅಂಟುವ ಬೆಲ್ಲದಂತೆ ಭಾವನಾತ್ಮಕತೆಯಿಂದ ರಮ್ಯವಾಗಿ ಕಾಣಿಸುವ ಕೆಸರಿಗೂ ಸಿಕ್ಕಿಕೊಳ್ಳದೆ, ಪಾರಾಗಿ ಬರೆಯಬಲ್ಲ ತಮ್ಮ ಶಕ್ತಿಯನ್ನು ಅವರು ಪ್ರಕಟಿಸಿ ಬಿಟ್ಟಿದ್ದಾರೆ. ಬಹಳ ಅಪರೂಪಕ್ಕೆ ಗ್ರಾಮೀಣ ಬದುಕಿನೊಳಗೆ ನಿಂತು ಕತೆ ಕಟ್ಟುವ ಬಿಷ್ಟ ಕತೆಗಾರ್ತಿಯು ಕತೆಯ ಮಾಧ್ಯಮವನ್ನು ಗಂಭೀರವಾಗಿ ಪರಿಗಣಿಸಿದಂತಿದೆ. ಇವರ ಮೊದಲ ಕತೆಗಳಲ್ಲಿ ಘಟನೆಯ ಸ್ವಾರಸ್ಯಕರ ಮಂಡನೆಯೇ ಕತೆಯಾಗಬಹುದೆನ್ನುವ ನಂಬಿಕೆ ಇದೆ; ಕಾಯುವ ತಾಳ್ಮೆಯಿಲ್ಲದ ಹಾಗೂ ರೂಪಿಸುವ ಕುಶಲತೆಯಿಲ್ಲದ ಹೊಸತನದ ವರಸೆಗಳೆಲ್ಲ ಇವೆ. ಆದರೆ ಕ್ರಮೇಣ ಜನಪ್ರಿಯ ಪತ್ರಿಕೆಗಳಿಗೂ ಬರೆಯೂ

ಕೂಡ ಪತ್ರಿಕೆಗಳ ಬೇಡಿಕೆಗೆ ತಕ್ಕಂತೆ ತನ್ನನ್ನು ತಿದ್ದಿಕೊಳ್ಳದೆ, ಬದುಕಿನ ಪದರುಗಳನ್ನೆತ್ತಿ ಅರ್ಥಶೋಧಿಸುವ ಗಂಭೀರ ಉದ್ದೇಶಕ್ಕೆ ಕತೆಗಳು ಸರಿದಿವೆ. ಇದು ಸಂಕಲನದ ಎರಡನೇ ಭಾಗದಲ್ಲಿರುವ 'ಪ್ಯಾದೆ ಪಾಪಣ್ಣ', 'ಚೆಲುವೆ ಮುತ್ತಮ್ಮನ ಪರಸಂಗ'ದಂಥ ಕತೆಗಳಲ್ಲಿ ಚೆನ್ನಾಗಿ ವ್ಯಕ್ತವಾಗುತ್ತದೆ. ಗೋಳುಕರೆತ, ವ್ಯಗ್ರತೆಗಳಿಲ್ಲದೆ ಅತ್ಯಂತ ವಾಸ್ತವವಾದಿಯಾದ ಧಾಟಿಯನ್ನು ವೇದಾ ರೂಪಿಸಿಕೊಳ್ಳುತ್ತಿದ್ದಾರೆ.

ಮೂಲತಃ ಕವಿಯಾದ ಕಮಲ ಹೆಮ್ಮಿಗೆಯವರು, ಬಹಳ ದಿನಗಳ ನಂತರ ಮತ್ತೆ ಬರವಣಿಗೆಯಲ್ಲಿ ತೊಡಗಿಕೊಂಡು, ಇಲ್ಲಿನ 'ಹನ್ನೊಂದು ಕತೆಗಳ'ನ್ನು ಬರೆದಿದ್ದಾರೆ. ಪಳಗಿದ ಕೈಬರೆದ ಅಚ್ಚುಕಟ್ಟಾದ ಲವಲವಿಕೆಯ ಕತೆಗಳಿವು. ಒಂದು ಚಿಕ್ಕಪ್ರಸಂಗವನ್ನು ಇಟ್ಟುಕೊಂಡು, ಅದರಲ್ಲಿ ಬರುವ ಜೀವಿಗಳ ಮನಸ್ಸಿನ ಪರಿಯನ್ನು ಸೂಕ್ಷ್ಮವಾಗಿ ಸುಲಿದು ತೋರಿಸುವ ಈ ಕತೆಗಳಲ್ಲಿ, ಈ ಕೆಲಸಕ್ಕೆ ತಕ್ಕ ಭಾಷಾಶಕ್ತಿಯೂ ಇದೆ. ಅಂದರೆ ಈ ಕತೆಗಳದ್ದು ಪುಟ್ಟಅನುಭವ ಜಗತ್ತು. ಈ ಅನುಭವ ಜಗತ್ತಿನಲ್ಲಿ ಅಪ್ಪಳಿಸಿ ಆವರಿಸಿಕೊಳ್ಳುವ ಹೆದ್ದೆರೆಯಂಥ ಚಲನೆಗಳಿಲ್ಲ. ಆದರೆ ಎದುರಾಗುವ ಕಿರುಅಲೆಗಳನ್ನೇ ಅದರೆಲ್ಲ ರೂಪದ ವಕ್ರತೆ —ತೀಕ್ಷ್ಣತೆಗಳ ಕೋನಕೋನವನ್ನು ಹಿಡಿದು, ಕಟ್ಟಿಕೊಡುವ ಶ್ರದ್ಧಾವಂತಿಕೆಯಿದೆ. ಇದು ಈ ಕತೆಗಳ ಮಿತಿ ಮತ್ತು ಶಕ್ತಿ. ಸ್ತ್ರೀವಾದವನ್ನು ಅಬ್ಬರಿಸಿ ಹೇರುವ ಕಸುವಿಲ್ಲದಿದ್ದರೂ ಹೆಣ್ಣಿನ ಬಾಳಿನ ಈ ಕಥನಗಳು ಹೇಗೋ ಸಮಾಜ ಸ್ವಭಾವದ ಪ್ರತಿಬಿಂಬಗಳಾಗಿ ಬಿಡುತ್ತವೆ. ಸಮಾಜದ ವಿಭಿನ್ನ ಒತ್ತಡಗಳಿಗೆ ತನ್ನನ್ನು ಒಡ್ಡಿಕೊಂಡು ಅದನ್ನು ಎದುರಿಸುವ, ಪರಿತಾಪಪಡುವ, ಗೆಲ್ಲುವ ಪರಿಯ ಕಥನವೆಂದರೆ ಇದು ಸಹಜ ತಾನೇ?

೧೯೯೩ರ ಈ ವರ್ಷದ ಮತ್ತೊಂದು ಗಮನಾರ್ಹ ಕಥಾಪ್ರತಿಭೆಯೆಂದರೆ ಶಾಂತರಾಮಸೋಮಯಾಜಿಯವರದು. ಅಮೆರಿಕ ಕನ್ನಡಿಗರಾದ ಈ ಕತೆಗಾರ 'ಪವಾಡ ಮಾವಿನ ಮರ'ದಂಥ ವಿಶಿಷ್ಟ ಯಶಸ್ವೀ ಕತೆಗಳನ್ನು ಕೊಟ್ಟಿದ್ದಾರೆ. ಅವರೆ ತಮ್ಮ ಕತೆಗಳ ಉದ್ದೇಶವನ್ನು ಮುನ್ನುಡಿಯಲ್ಲಿ ವಿವರಿಸುವ ಮುಗ್ಧತೆ ಕೂಡ ಮಾಡುತ್ತಾರೆ. ಸೋಮಣ್ಣ ಹೊಂಗಳ್ಳಿ, ಕಂನಾಡಿಗಾ ನಾರಾಯಣರಂಥ ತರುಣ ಕತೆಗಾರರು ತಮ್ಮಲ್ಲಿ ಹೊಸತನ ಉತ್ಸಾಹ, ಮಿತಿ-ಪ್ರತಿಭೆಗಳೊಂದಿಗೆ ಕತೆಗಳ ಲೋಕಕ್ಕೆ ಕಾಲಿಡಲು ಹವಣಿಸಿದ್ದಾರೆ; ಕೋಚೆಯವರಂಥ ಪ್ರಗತಿಶೀಲ ಕಾಲದ ಹಿರಿಯ ಕತೆಗಾರರು ತಮ್ಮ ಆಯ್ದ ಕತೆಗಳ ಹೊಸ ಆವೃತ್ತಿಯನ್ನು ಪ್ರಕಟಿಸಿದ್ದಾರೆ. (ಇದರಲ್ಲಿ ಬಳ್ಳಾರಿ ಭಾಗದ ಜನಜೀವನ ಚಿತ್ರಣವುಳ್ಳ 'ದಾಸಯ್ಯನ ಪಟ್ಟಿ'ಯಂಥ ಅತ್ಯುತ್ತಮ ಕತೆಗಳು ಇವೆ.) ಹೈದರಾಬಾದ್ ಕರ್ನಾಟಕದಿಂದ ಸೂಗಯ್ಯ ಹಿರೇಮಠ ಅವರ ಕತೆಗಳು ಪ್ರಕಟವಾಗಿವೆ. ವೈಚಾರಿಕತೆಯನ್ನೇ ಮುಖ್ಯಭಿತ್ತಿಯನ್ನಾಗಿ ಮಾಡಿಕೊಂಡು ಬರೆಯಲಾದ ಈ ಕತೆಗಳು ಪ್ರಗತಿಶೀಲರ ಕತೆಗಳನ್ನು ಓದಿದಂತೆ ಭಾಸವಾಗುತ್ತದೆ. 'ಹುಳುಗಳು', 'ದೀಪಾ' ಎಂಬ ಕತೆಗಳನ್ನು ಈ ಮಾತಿಗೆ ಗಮನಿಸಬೇಕು. ಉಳಿದಂತೆ ರಾಶಿರಾಶಿಯಾಗಿ ಹುಟ್ಟಿಬೀಳುತ್ತಿರುವ ಕತೆಗಳ ಗುಂಪಲ್ಲಿ ನಿಂತೂಕೂಡ ತಮ್ಮ ವಿಶಿಷ್ಟತೆಯನ್ನು ದೃಢವಾಗಿ ಸಾಧಿಸಬಲ್ಲ ಮುಖಗಳೇ ಕಡಿಮೆ. ತುಂಬಾ ಮಹತ್ವಾಕಾಂಕ್ಷೆಯಿಂದ ಬರೆಯಲು

ಪ್ರಯುತ್ನಿಸಿರುವ ರಾಧಾಕೃಷ್ಣ ಅವರ ಕತೆಗಳದ್ದೂ ಇದೇ ಸಮಸ್ಯೆಯಾಗಿದೆ.

ಕನ್ನಡ ಸಾಹಿತ್ಯವು ತನ್ನ ತೆಕ್ಕೆಯೊಳಗೆ ಒಳಗೊಳ್ಳಬೇಕಾದ ಸಣ್ಣಕತೆಗಳ ಈ ವರ್ಷದ ಕುಯಿಲು. ತನ್ನ ಎಲ್ಲ ಸಾಮರ್ಥ್ಯ ಹಾಗೂ ದೌರ್ಬಲ್ಯಗಳನ್ನು ಒಟ್ಟಿಗೇ ಬಿಂಬಿಸಬಲ್ಲದು ಎಂಬ ಆಶಯದಿಂದ ಸಂಕಲನಗಳನ್ನು ಈ ಕೆಳಗೆ-ತಾರತಮ್ಯಗಣಿಸದೆ-ಕೊಟ್ಟಿದೆ.

ಕೃಷ್ಣಮೂರ್ತಿ ಚಂದರ್ - ಸಂಬಂಧ ಮತ್ತು ಇತರ ಕತೆಗಳು; ಕಂನಾಡಿಗಾ ನಾರಾಯಣ - ಮಂಡಲ; ಕಮಲಾ ಹಂಪನಾ -ಬಣವೆ; ಕಮಲಹೆಮ್ಮಿಗೆ- ಹನ್ನೊಂದು ಕತೆಗಳು; ಗಂಗಾಧರಾಚಾರ್ - ಬೀದಿಯಲ್ಲಿ ಬಿದ್ದವಳು; ಕಾ.ತ. ಚಿಕ್ಕಣ್ಣ - ಮನಸು ಮುಗಿಲು; ಕೋ ಚೆನ್ನಬಸಪ್ಪ -ಗರ್ಟೀಪಾರು ಮತ್ತು ಇತರ ಕತೆಗಳು; ತುಳಸೀ ವೇಣುಗೋಪಾಲ್ - ಮುಂಜಾವಿಗೆ ಕಾದವಳು; ದೇವಕೀಮೂರ್ತಿ - ಅವನ ನೆರಳು; ನಟರಾಜ ಹುಳಿಯಾರ್ - ಮತ್ತೊಬ್ಬ ಸರ್ವಾಧಿಕಾರಿ; ಜಿ. ಟಿ. ನಾರಾಯಣರಾವ್ - ಕೊಡಗಿನ ಸುಮಗಳು; ಸಿ. ಆರ್. ಪಾರ್ಥಸಾರಥಿ -ಪ್ರಜ್ಞಾವಿಲಾಸ; ಬಿದರಹಳ್ಳಿ ನರಸಿಂಹಮೂರ್ತಿ -ಶಿಶು ಕಂಡ ಕನಸು; ಟಿ. ಜಿ. ರಾಘವ - ಟಿ. ಜಿ. ರಾಘವ ಅವರ ಕತೆಗಳು; ಟಿ. ಆರ್. ರಾಧಾಕೃಷ್ಣ - ಮೋಕ್ಷಪಕ್ಷಿಯ ಆತ್ಮ; ಲಕ್ಷ್ಮೀಪತಿ -ಬೆಳದಿಂಗಳು; ಲೀಲಾಕಲಕೋಟಿ - ನೀ ಸತ್ತಮ್ಯಾಲೆ; ಡಾ. ವಿರೂಪಾಕ್ಷ ಕೆ. ಬಣಕಾರ - ನೀಲಕಂದರ; ವೀಣಾ - ಈ ಬಾಳಿನಿಂದೆರಡು ಪುಟಗಳು; ಎಂ. ಎಸ್. ವೇದಾ -ಪ್ರೀತಿ ಮತ್ತು ಸಾವು; ಶಾಂತರಾಮ ಸೋಮಯಾಜಿ-ಮಣ್ಣಿನ ಬಳಿ; ಶಶಿಭಾಟಿಯಾ - ಕನ್ನಡ ದೇವತೆಯ ಮಗಳು; ಬಿ. ಪಿ. ಶಿವಾನಂದರಾವ್ - ಪ್ರೇಯಸಿ ; ಕೆ. ಸತ್ಯನಾರಾಯಣ - ನಿಮ್ಮ ಮೊದಲ ಪ್ರೇಮದ ಕಥೆ; ಸಮೇತನಹಳ್ಳಿ ರಾಮರಾಯ -ಈಸಬೇಕು; ಸೂಗಯ್ಯ ಹಿರೇಮಠ -ಅಂತರ; ಸೂಗಯ್ಯ ಹಿರೇಮಠ -ಹುಳುಗಳು.



# ಕಾದಂಬರಿ

*ಟಿ. ಪಿ. ಅಶೋಕ*

೧೯೯೨ಕ್ಕೆ ಹೋಲಿಸಿದರೆ ಕಾದಂಬರಿಗಳ ವಿಚಾರದಲ್ಲಿ ೧೯೯೩ ಸಮೃದ್ಧವೆಂದೇ ಹೇಳಬೇಕು. ಹಿರಿಯ ಬರಹಗಾರ ಎಸ್. ಎಲ್. ಭೈರಪ್ಪ, ಶಾಂತಿನಾಥ ದೇಸಾಯಿ ಮತ್ತು ಕುಸುಮಾಕರ ದೇವರಗೆಣ್ಣೂರು ತಲಾ ಒಂದೊಂದು ಹೊಸ ಕಾದಂಬರಿ ಕೊಟ್ಟಿದ್ದಾರೆ. ಉಡುಪಿಯ ಎಂ. ರಾಜಗೋಪಾಲ್ ಅವರ ಕಾದಂಬರಿ ''ಮಂದಾರ ಮರದ ಜೇನ್ನೊಣ'' ನಿಜಕ್ಕೂ ಒಂದು ಕೂತೂಹಲಕಾರಿ ಸೃಜನಶೀಲ ಪ್ರಯೋಗ. ಕುಂ. ವೀರಭದ್ರಪ್ಪ ಅವರ ಕಿರುಕಾದಂಬರಿ 'ಕೊಟ್ರ ಹೈಸ್ಕೂಲಿಗೆ ಸೇರಿದ್ದು' - ಮಯೂರ ಮಾಸ ಪತ್ರಿಕೆಯಲ್ಲಿ ಎರಡು ಕಂತುಗಳಲ್ಲಿ ಧಾರವಾಹಿಯಾಗಿ ಪ್ರಕಟವಾಗಿ ಈ ವರ್ಷ ಪುಸ್ತಕರೂಪದಲ್ಲಿ ಬಂದಿದೆ. ಈಚೆಗೆ ಸಾಹಿತಿಯಾಗಿಯೂ ಪ್ರಸಿದ್ಧಿ ಪಡೆಯುತ್ತಿರುವ ಮುಖ್ಯಮಂತ್ರಿ ವೀರಪ್ಪ ಮೊಯಿಲಿ ಅವರು ತಮ್ಮ ಮಹತ್ವಾಕಾಂಕ್ಷೆಯ ಕಾದಂಬರಿ 'ಕೊಟ್ಟ'ವನ್ನು ಇದೇ ವರ್ಷ ಹೊರತಂದಿದ್ದಾರೆ. ಉಳಿದಂತೆ ಈ ವರ್ಷವೂ ಅನೇಕ ಜನಪ್ರಿಯ ಕಾದಂಬರಿಗಳೂ ಪತ್ತೇದಾರಿ ಕೃತಿಗಳೂ ದೊಡ್ಡ ಪ್ರಮಾಣದಲ್ಲಿ ಅಚ್ಚಾಗಿವೆ. ಅವುಗಳ ಬಗ್ಗೆ ಅಂಥ ವಿಶೇಷ ಆಸಕ್ತಿ ಹುಟ್ಟಲು ಕಾರಣಗಳಿಲ್ಲ. ಹಾಗಾಗಿ ಮೇಲ್ಕಾಣಿಸಿದ ಆರು ಕಾದಂಬರಿಗಳನ್ನೇ ತುಸು ವಿವರವಾಗಿ ಪರಿಶೀಲಿಸಬಹುದು.

ಕಾದಂಬರಿ ಪ್ರಕಾರವನ್ನು ತುಂಬಾ ಗಂಭೀರವಾಗಿ ತೆಗೆದುಕೊಂಡಿರುವ ಕೆಲವೇ ಕೆಲವು ಕನ್ನಡ ಕಾದಂಬರಿಕಾರರಲ್ಲಿ ಎಸ್. ಎಲ್. ಭೈರಪ್ಪನವರೂ ಒಬ್ಬರು. ಇವರ ಕಾದಂಬರಿಗಳ ಬೀಸು ಮತ್ತು ಹರಹು ಸಾಕಷ್ಟು ವಿಶಾಲವಾದದ್ದು. ಇವರಷ್ಟು ಪ್ರಮಾಣದಲ್ಲಿ ಬೃಹತ್ ಕಾದಂಬರಿಗಳನ್ನು ಬರೆದವರು ಕನ್ನಡದಲ್ಲಿ ತುಂಬಾ ವಿರಳ. ಹಾಗೆಯೇ ಜನಪ್ರಿಯತೆಯಲ್ಲೂ ಇವರನ್ನು ಸರಿಗಟ್ಟಬಲ್ಲವರು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲ. ಒಂದು ಪಾತ್ರದ ಅಂತರಂಗದ ಚಿತ್ರಣದಲ್ಲಾಗಲೀ, ಒಂದು ಸನ್ನಿವೇಶವನ್ನು ಪುನರ್‌ನಿರ್ಮಾಣ ಮಾಡುವಲ್ಲಿಯಾಗಲೀ, ಕಥಾಸಂವಿಧಾನದ ಒಡಲಿನಲ್ಲಿ ತಾತ್ತ್ವಿಕ ಜಿಜ್ಞಾಸೆಯೊಂದನ್ನು ಹೆಣೆಯುವಲ್ಲಿಯಾಗಲೀ ಭೈರಪ್ಪನವರ ವಿವರಣೆ, ವರ್ಣನೆಗಳು ಪಡೆದುಕೊಳ್ಳುವ ವಿಸ್ತಾರ ದೊಡ್ಡದು. ಈ ವಿಸ್ತಾರ ಬೇಸರ ತರಿಸದಂತೆ ಸ್ವಾರಸ್ಯಕರವಾಗಿ ಕಥೆ ಹೇಳಿಕೊಂಡು ಹೋಗಬಲ್ಲ ಕೌಶಲ ಶ್ರೀಯುತರ ಜನಪ್ರಿಯತೆಯ ಹಿಂದಿನ ಮುಖ್ಯ ಅಂಶ ಎನಿಸುತ್ತದೆ. '' ತಂತು'' ಒಂಬೈನೂರಕ್ಕೂ ಮಿಕ್ಕಿದ ಪುಟಗಳ ಬೃಹತ್ಕಾದಂಬರಿ. ಸ್ವಾತಂತ್ರ್ಯೋತ್ತರ ಬದುಕಿನ ಹಲವು ವಿನ್ಯಾಸಗಳನ್ನು ಒಟ್ಟಿಗೆ ಹಿಡಿಯಬಯಸುವ

ಮಹತ್ವಾಕಾಂಕ್ಷೆ ಇಲ್ಲಿ ಕಾಣುತ್ತದೆ. ಇಲ್ಲಿ ಗಾಂಧಿವಾದಿಗಳಿದ್ದಾರೆ. ಹೊಸ ಕಾಲ ಸೃಷ್ಟಿಸಿದ ರಾಜಕಾರಣಿಗಳು, ಉದ್ಯಮಿಗಳು, ಆಡಳಿತಗಾರರು ಇದ್ದಾರೆ. ರವೀಂದ್ರ ಎಂಬ ಪತ್ರಕರ್ತನ ವೈಯಕ್ತಿಕ ಬದುಕಿನ ಕಥೆಯ ಸುತ್ತ ಇಡೀ ಇಂಡಿಯಾದ ವಿದ್ಯಮಾನಗಳನ್ನು ಹೆಣೆದು ದೇಶ ಸದ್ಯ ತುಳಿಯುತ್ತಿರುವ ಹಾದಿಯತ್ತ ಬೆಳಕು ಹಾಯಿಸುವುದು ಕಾದಂಬರಿಯ ಪ್ರಧಾನ ಆಶಯವಾಗಿದೆ. ಆದರೆ ಇಂಥದೊಂದು ಸಂಕೀರ್ಣ ವಸ್ತುವಿನ ನಿರ್ವಹಣೆಯಲ್ಲಿ ಭೈರಪ್ಪನವರ ಹಿಂದಿನ ಬಹುತೇಕ ಕಾದಂಬರಿಗಳಲ್ಲಿ ಕಾಣಿಸಿಕೊಂಡಿದ್ದ ಸಮಸ್ಯೆಗಳೇ ಇಲ್ಲಿಯೂ ಪುನರಾವೃತ್ತಿಗೊಂಡಿವೆ. ಭೈರಪ್ಪನವರ ಸಾಂಪ್ರದಾಯಿಕ ಮತ್ತು ಪ್ರತಿಗಾಮಿ ನಿಲುವುಗಳ ಬಗ್ಗೆ ಕನ್ನಡ ವಿಮರ್ಶೆ ಈಗಾಗಲೇ ಸಾಕಷ್ಟು ಚರ್ಚಿಸಿದೆ. ಭೈರಪ್ಪನವರ ಪೂರ್ವಗ್ರಹಗಳು ಅವರ ಕಾದಂಬರಿಯ ಬಂಧದ ಮೇಲೆ ಮಾಡಿರುವ ಪರಿಣಾಮಗಳೂ ಸುಸ್ಪಷ್ಟವಾಗಿದೆ. ''ತಂತು'' ಕಾದಂಬರಿಯಲ್ಲೂ ಪಾತ್ರಗಳು ಸರಳ ಕಪ್ಪು ಬಿಳಪು ಚಿತ್ರಣಕ್ಕೆ ತುತ್ತಾಗಿವೆ. ರವೀಂದ್ರ, ಅಣ್ಣಯ್ಯ ಇಂಥ ಪಾತ್ರಗಳ ಏಕಮುಖಿ ವಕೀಲಿ ಮಾಡುವ ಲೇಖಕರು ಅನೂಪ, ಕಾಂತಿ, ಶೀತಲ್‌ರಂಥ ಪಾತ್ರಗಳ ಬಗ್ಗೆ ಅನುದಾರವಾಗಿ ವರ್ತಿಸುತ್ತಾರೆ. ಯುವಜನಾಂಗದ ಬಗ್ಗೆ, ಆಧುನಿಕ ಸ್ತ್ರೀಯರ ಬಗ್ಗೆ ಲೇಖಕರ ಅಸಹನೆ ತೀವ್ರವಾಗಿದೆ. ಇದರಿಂದಾಗಿ ಹಳೆಯದೆಲ್ಲ ಒಳ್ಳೆಯದು, ಹೊಸದೆಲ್ಲ ಕೆಟ್ಟದು ಎಂಬ ಸರಳ ತತ್ವ ಇಡೀ ಬರವಣಿಗೆಯನ್ನು ನಿಯಂತ್ರಿಸಿದೆ. ಹೊಸಕಾಲದ ಜನರನ್ನು, ಅವರ ಆಶೋತ್ತರಗಳು - ಆತಂಕಗಳು-ಸಮಸ್ಯೆಗಳನ್ನು ಅರ್ಥ ಮಾಡಿ ಕೊಳ್ಳಲು ಲೇಖಕರು ಪ್ರಯತ್ನಿಸುವುದಿಲ್ಲ. ಅದರ ಬದಲಾಗಿ ಅವುಗಳ ಬಗ್ಗೆ ಮೊದಲೇ ಒಂದು ಸುಲಭ ತೀರ್ಮಾನಕ್ಕೆ ಬಂದು ಆ ತೀರ್ಮಾನದ ಬೆಳಕಿನಲ್ಲಿ ಪಾತ್ರಗಳನ್ನೂ ಸನ್ನಿವೇಶಗಳನ್ನೂ ನಿಯೋಜಿಸುತ್ತಾರೆ. ಹಾಗಾಗಿ ಕಾದಂಬರಿ ಪ್ರಕಾರ ಒಂದು ವಾದ ವಿವಾದಗಳ ವೇದಿಕೆಯಾಗಿ ಬಿಟ್ಟು ಸೃಷ್ಟಿಶೀಲ ಶೋಧ ಹಿನ್ನೆಲೆಗೆ ಸರಿಯುತ್ತದೆ. ಲೇಖಕರ ಘೋಷಿತ ನಿಲುವುಗಳನ್ನು ಹಂಚಿಕೊಳ್ಳುವ ಮನಸ್ಸಿಗೆ ಒಂದು ಬೌದ್ಧಿಕ ಅವಲಂಬನ ಸಿಕ್ಕಂತಾಗಿ ಬರವಣಿಗೆ ರೋಚಕವೆನಿಸುತ್ತದೆ. ತಮ್ಮ ವಿಚಾರಗಳ ಮತ್ತು ಉಪದೇಶಗಳ ಮಾಧ್ಯಮವಾಗಿ ಕಾದಂಬರಿ ಪ್ರಕಾರವನ್ನು ಉಪಯೋಗಿಸಿಕೊಳ್ಳುವ ಭೈರಪ್ಪನವರು ಈ ಬಗೆಯ ಕನ್ನಡ ಲೇಖಕರ ತುಲನೆಯಲ್ಲಿ ಹೆಚ್ಚು ಪರಿಣತರೂ ಕುಶಲಿಗಳೂ ಹೌದೆಂಬುದರಲ್ಲಿ ಸಂಶಯವಿಲ್ಲ. ಆದರೆ ಲೇಖಕರ ಕಥನ ಕೌಶಲ ಅಂತಿಮವಾಗಿ ಜೀವ ವಿರೋಧಿ ಮೌಲ್ಯಗಳ ಕೀರ್ತನೆಯಲ್ಲಿ ಕಳೆದು ಹೋಗುವುದರ ಬಗ್ಗೆ ವಿಷಾದವೆನಿಸುತ್ತದೆ. ವಿವರಗಳ ಸಮೃದ್ಧತೆಯಲ್ಲಿ ಗಳಿಸಿಕೊಂಡಿದ್ದನ್ನು ದೃಷ್ಟಿಕೋನದ ಸೀಮಿತತೆಯಲ್ಲಿ ಕಳೆದುಕೊಳ್ಳುವ ಭೈರಪ್ಪನವರು ತಮ್ಮ ಯಾವತ್ತೂ ಫಾರ್ಮುಲಾಗಳಿಂದ ಹೊರಬಂದಿಲ್ಲವೆನ್ನುವುದು ''ತಂತು'' ಕಾದಂಬರಿಯ ದೊಡ್ಡಮಿತಿಯಾಗಿದೆ. ಹೀಗೆ ಮೊದಲನೋಟಕ್ಕೆ ಆಕರ್ಷಕವೆನ್ನಿಸುವ ಶ್ರೀಯುತರ ಬರವಣಿಗೆ ಕ್ರಮೇಣ ತನ್ನ ಪ್ರಭಾವವನ್ನು ಕುಗ್ಗಿಸಿಕೊಳ್ಳುತ್ತ ಹೋಗುತ್ತದೆ.

'ಮುಕ್ತಿ', 'ವಿಕ್ಷೇಪ'ದಂಥ ಕಾದಂಬರಿಗಳು ''ಕ್ಷಿತಿಜ''ದಂಥ ಕಥೆಗಳ ಮೂಲಕ ಶಾಂತಿನಾಥ ದೇಸಾಯಿ ಅವರು ಕನ್ನಡ ಕಥಾಸಾಹಿತ್ಯದಲ್ಲಿ ಪಡೆದುಕೊಂಡ ಸ್ಥಾನ ವಿಶಿಷ್ಟವಾದುದು. ನಮ್ಮ ಆಧುನಿಕ ಕಥನ ಪರಂಪರೆಗೆ ದೇಸಾಯಿ ಅವರು ಜೋಡಿಸಿದ

ಹೊಸ ಆಯಾಮಗಳನ್ನು ಕನ್ನಡ ವಿಮರ್ಶೆ ಈಗಾಗಲೇ ಗಮನಿಸಿದೆ. ಹಾಗೆಯೇ 'ಸಂಬಂಧಗಳು' ಮತ್ತು ಅದಕ್ಕಿಂತ ಹೆಚ್ಚಾಗಿ ''ಬೀಜ'' ಕಾದಂಬರಿಯ ಮೂಲಕ ದೇಸಾಯಿ ಅವರು ಕಾವ್ಯರಚನೆಯಲ್ಲಿ ಬದಲಾಯಿಸಿದ ಒತ್ತುಗಳನ್ನು ಚರ್ಚಿಸಲಾಗಿದೆ. ಸ್ವಾಭಿಮಾನ ಬರವಣಿಗೆ ಸಮಾಜಾಭಿಮುಖವಾಗುತ್ತ, ಒಂದು ಕಡೆ ನವ್ಯದ ಮಿತಿಗಳನ್ನು ಮೀರುತ್ತ ಮತ್ತೊಂದೆಡೆ ಸಾಂಪ್ರದಾಯಕ ವಾಸ್ತವವಾದೀ ಮಾರ್ಗಕ್ಕೂ ಹೊಸ ಹೊಳಪನ್ನು ಧಾರಣ ಮಾಡುತ್ತ ದೇಸಾಯಿ ಅವರ ಬರವಣಿಗೆ ಮುನ್ನೆಡೆದಿದೆ. ''ಅಂತರಾಳ'' ಈ ಬದಲಾದ ಘಟ್ಟದ ಅರ್ಥಪೂರ್ಣ ಮುಂದುವರಿಕೆಯಾಗಿದೆ. ''ಅಂತರಾಳ'' ಒಂದು ದೃಷ್ಟಿಯಿಂದ ವಿಕ್ರಮನ ಅಂತರಂಗದ ಜೀವನದ ಚಿತ್ರಣವೂ ಹೌದು. ಅವನ ಬಹಿರಂಗ ಜೀವನದ ಚಿತ್ರಣವೂ ಹೌದು. ಇನ್ನೊಂದು ನಿಟ್ಟಿನಲ್ಲಿ ಅದು ರಾಣಿ ಮನೆತನದ ಆಶೋತ್ತರಗಳ ಕಥೆಯೂ ಹೌದು. ಕಾದಂಬರಿಯಲ್ಲಿ ಹೊಸ ಇಂಡಿಯಾ ಕೂಡಾ ತನ್ನ ಹೊಸ ಹುಡುಕಾಟಗಳಲ್ಲಿ ಸೂಚ್ಯವಾಗಿ ಬಿಂಬಿತವಾಗುತ್ತದೆ. ದೇಸಾಯಿ ಅವರ ಬರವಣಿಗೆಯ ಮಾದರಿ ವಿವರಗಳನ್ನು ಪೇರಿಸುತ್ತ ಹೋಗುವಂಥದ್ದಲ್ಲ. ಬದಲಾಗಿ ಪ್ರತಿಮೆಗಳಲ್ಲಿ ಸೂಕ್ಷ್ಮವಾಗಿ ಧ್ವನಿಸುವಂಥದ್ದು. ಇಂಥ ಬರವಣಿಗೆ ಕಾವ್ಯಕ್ಕೆ ಹೆಚ್ಚು ಸಮೀಪವಾದದ್ದು ಎಂಬುದನ್ನು ವಿವರಿಸುವ ಅಗತ್ಯವಿಲ್ಲ. ವಿಕ್ರಮನ ಪ್ರೇಮ, ದಾಂಪತ್ಯ, ಔದ್ಯೋಗಿಕ ಹಾಗೂ ಆದರ್ಶಗಳ ಜೀವನದ ಅಂತರಾಳಗಳನ್ನು ಶೋಧಿಸುವಾಗ ದೇಸಾಯಿ ಅವರು ಹಲವು ಮೌಲ್ಯ ಪ್ರಜ್ಞೆಗಳನ್ನು ಸೃಜನಶೀಲವಾಗಿ ಮುಖಾಮುಖಿಯಾಗಿಸಿ ಕಾದಂಬರಿಯ ಬಂಧವನ್ನು ಹೆಣೆದಿದ್ದಾರೆ. ಪರ್ಯಾಯವಾಗಿ 'ಅಂತರಾಳ' ಸ್ವಾತಂತ್ರ್ಯೋತ್ತರ ಭಾರತದಲ್ಲಿ ನವಜನಾಂಗವೊಂದು ತನ್ನ ಅಸ್ತಿತ್ವದ ಅರ್ಥ ಮತ್ತು ಸಾಮಾಜಿಕ ಜೀವನದ ರೂಪುರೇಷೆಗಳನ್ನು ಅನ್ವೇಷಿಸಿಕೊಳ್ಳುವ ಬಗೆಯನ್ನೂ ದಾಖಲು ಮಾಡಿ ಮುಖ್ಯವಾಗುತ್ತದೆ.

ತಮ್ಮ ''ನಾಲ್ಕನೆಯ ಆಯಾಮ'' ಕಾದಂಬರಿಯ ಮೂಲಕ ನವ್ಯದ ಪೂರ್ವಕಾಲದಲ್ಲಿ ಸಾಕಷ್ಟು ಗಮನ ಸೆಳೆದಿದ್ದ ಕುಸುಮಾಕರ ದೇವರಗೆಣ್ಣೂರು ಏಕೋ ಏನೋ ಪಡೆಯಬೇಕಾದಷ್ಟು ವಿಮರ್ಶಕ ಮನ್ನಣೆ, ಜನಪ್ರಿಯತೆಗಳನ್ನು ಪಡೆದುಕೊಳ್ಳಲಿಲ್ಲ. ಈಗ ತಮ್ಮ ಹೊಸ ಕಾದಂಬರಿ ''ನಿರಿಂದ್ರಿಯ''ದ ಮೂಲಕ ಲೇಖಕರು ತಮ್ಮ ಪ್ರತಿಭೆಯನ್ನು ಮತ್ತೊಮ್ಮೆ ಕಾಣಿಸಿಕೊಟ್ಟಿದ್ದಾರೆ. ''ನಾಲ್ಕನೆಯ ಆಯಾಮ ''ದಲ್ಲಿ ಹದಿಹರೆಯದ ಹುಡುಗನೊಬ್ಬನ ಆಂತರಿಕ ತಳಮಳದ ಅತ್ಯಂತ ಸೂಕ್ಷ್ಮ ಚಿತ್ರಣವಿದೆ. ಆತನ ಕೆಳಮಧ್ಯಮ ವರ್ಗದ ಹಿನ್ನೆಲೆ ಮತ್ತು ಆ ಹಿನ್ನೆಲೆಯಲ್ಲಿ ತನ್ನ ಜೀವನ ಸಾಫಲ್ಯಕ್ಕಾಗಿ ಅವನು ನಡೆಸುವ ಹೋರಾಟಗಳು ಮನುಷ್ಯಾವಸ್ಥೆಯ ಒಂದು ಘಟ್ಟವನ್ನೇ ಧ್ವನಿಸಬಲ್ಲ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತವೆ. ಆ ಹುಡುಗನ ಮೇಲುನೋಟಕ್ಕೆ ಹಾಸ್ಯಾಸ್ಪದ ಎನ್ನಿಸಬಹುದಾದ, ನಡವಳಿಕೆಗಳ ಹಿಂದಿನ ಅನಾಥಪ್ರಜ್ಞೆ, ಹತಾಶೆ, ಗುರಿಯಿಲ್ಲದ ಪ್ರಯತ್ನಗಳ ನಿಷ್ಫಲತೆಯ ವಿಷಾದ ಗೀತೆ ಇಡೀ ಕೃತಿಯಲ್ಲಿ ಅನುರಣಿತವಾಗಿದೆ. ಅವನ ಬಿಡುಗಡೆಯ ಸ್ಥಿತಿಯ ವ್ಯಂಗ್ಯವೂ ಅಷ್ಟೇ ಪ್ರಖರವಾಗಿದೆ. '' ನಿರಿಂದ್ರಿಯ'' ಒಂದು ದೃಷ್ಟಿಯಿಂದ ''ನಾಲ್ಕನೆಯ ಆಯಾಮ''ದ ಮುಂದಿನ ಘಟ್ಟವನ್ನೇ ಪ್ರತಿನಿಧಿಸುವಂತಿದೆ. ಇದು ತಾತ್ತ್ವಿಕವಾಗಿಯೂ ಸಾಹಿತ್ಯಕವಾಗಿಯೂ

ಏಕಕಾಲದಲ್ಲಿ ನಿಜ. ಈ ಎರಡು ಕಾದಂಬರಿಗಳ ಪ್ರಕಟಣೆಯ ದೀರ್ಘ ಅವಧಿಯ ನಡುವೆ ಕನ್ನಡ ಕಥಾ ಸಾಹಿತ್ಯ ಅನೇಕ ಸ್ಥಿತ್ಯಂತರಗಳನ್ನು ಕಂಡಿದೆ. ಇವುಗಳನ್ನು ``ನಿರಿಂದ್ರಿಯ'' ಒಂದು ಮಟ್ಟದಲ್ಲಿ ಜೀರ್ಣಿಸಿಕೊಂಡಿದೆ. ಎರಡನೆಯದಾಗಿ ``ನಾಲ್ಕನೆಯ ಆಯಾಮ''ದ ಕೇಂದ್ರದಲ್ಲಿ ಹದಿವಯಸ್ಕನೊಬ್ಬನಿದ್ದರೆ ನಿರಿಂದ್ರಿಯದ ಕೇಂದ್ರ ಪಾತ್ರಗಳು ವೃದ್ಧಾಪ್ಯವನ್ನು ಸಮೀಪಿಸುತ್ತಿರುವ ಮಧ್ಯಮ ವರ್ಗದ ದಂಪತಿಗಳು. 'ನಾಲ್ಕನೆಯ ಆಯಾಮ'ದಲ್ಲಿ ವರ್ತಮಾನದ ಕ್ರಿಯೆಗಳು ಕಥಾಸಂವಿಧಾನವನ್ನು ನಡೆಸಿದರೆ ``ನಿರಿಂದ್ರಿಯ''ದಲ್ಲಿ ರೊಳ್ಳಿ ಮತ್ತು ಆತನ ಪತ್ನಿ ತಮ್ಮ ವರ್ತಮಾನದ ಸ್ವರೂಪ ಮತ್ತು ಜೀವಿತದ ಭೂತದ ನೆನಪುಗಳ ನಡುವೆ ತುಯ್ಯುತ್ತಾ ತಮ್ಮ ಭವಿಷ್ಯವನ್ನು ಹೆಚ್ಚು ಇತ್ಯಾತ್ಮಕವಾಗಿಸಿಕೊಳ್ಳುವ ಕಡೆ ಮುಖ ಮಾಡುತ್ತಾರೆ. ``ನಾಲ್ಕನೆಯ ಆಯಾಮ''ದಲ್ಲಿ ಮನುಷ್ಯಾವಸ್ಥೆಯ ಒಂದು ಘಟ್ಟದ ``ಸ್ಥಿತಿ'' ಬಿಂಬಿತವಾದರೆ ``ನಿರಿಂದ್ರಿಯ''ದಲ್ಲಿ ತಿಳುವಳಿಕೆಯ ಪ್ರಕ್ರಿಯೆಯೊಂದು ಪ್ರಾರಂಭಗೊಂಡ ಸೂಚನೆಯಿದೆ. ಕುಸುಮಾಕರ ದೇವರಗೆಣ್ಣೂರು ಮುಂದೆ ಪ್ರಬುದ್ಧ ವೃದ್ಧಾಪ್ಯವನ್ನು ಕೇಂದ್ರವಾಗುಳ್ಳ ಕಾದಂಬರಿನ್ನೇನಾದರೂ ಬರೆದರೆ ಈ ಎಲ್ಲಾ ಮೂರೂ ಸೇರಿ ತುಂಬಾ ಅರ್ಥಪೂರ್ಣವಾದ ತ್ರಿವಳಿ ನಿರ್ಮಾಣಗೊಳ್ಳಬಹುದೇನೋ. ``ನಿರಿಂದ್ರಿಯ'' ದಲ್ಲಿ ರೊಳ್ಳಿ ದಂಪತಿಗಳ ಸದ್ಯದ ಸ್ಥಿತಿಗೆ ಅವರ ಬಾಲ್ಯ ಜೀವನದ ಒತ್ತಡಗಳು ಕಾರಣವೋ ಅಥವಾ ಅವರದೇ ಸಂಕಲ್ಪರಾಹಿತ್ಯ ಮನೋಭಾವವೇ ಕಾರಣವೋ ಎಂಬ ಜಿಜ್ಞಾಸೆ ತೀರ ಸಂಕೀರ್ಣವಾದದ್ದು. ವ್ಯಕ್ತಿಯ ಆರ್ಥಿಕ ಮತ್ತು ಆಧ್ಯಾತ್ಮಿಕ ಅವಸ್ಥೆಗಳನ್ನು ಏಕಕಾಲದಲ್ಲಿ ಹಿಡಿದು ಲೇಖಕರು ಒಂದು ಜೀವನ ಸಂದರ್ಭದ ಒಳವಿಶ್ವವನ್ನೇ ತೆರೆದು ಬಿಟ್ಟಿದ್ದಾರೆ. ಈ ಸ್ಥಿತಿಯ ಬಿಡುಗಡೆಗೆ ಈ ದಂಪತಿಗಳು ನಡೆಸುವ ಹೋರಾಟಗಳು ಮರ್ಮಸ್ಪರ್ಶಿಯಾಗಿವೆ. ಜೀವನ ಸಾಫಲ್ಯದಂಥ ತಾತ್ತ್ವಿಕ ಪ್ರಶ್ನೆಗಳನ್ನು ``ನಾಲ್ಕನೆಯ ಆಯಾಮ'' ದ ಒಂದು ಮಟ್ಟದಲ್ಲಿ ಎತ್ತಿದ್ದ ಲೇಖಕರು ``ನಿರಿಂದ್ರಿಯ''ದಲ್ಲಿ ಇನ್ನೂ ನಿರ್ದಿಷ್ಟವಾಗಿ, ಪ್ರಬುದ್ಧವಾಗಿ ಎತ್ತುತ್ತಾರೆ. ಹಾಗೆ ಮಾಡುವಾಗ ವ್ಯಕ್ತಿಯ ಸಾಮಾಜಿಕ ಸಂದರ್ಭಗಳನ್ನು ತಮ್ಮ ಶೋಧದ ಕಕ್ಷೆಯಲ್ಲಿ ಒಳಗೊಳ್ಳುವುದರಿಂದ ಬರಹ ಇನ್ನೂ ಹೆಚ್ಚಿನ ಮಹತ್ವಾಕಾಂಕ್ಷೆ ಪಡೆದುಕೊಳ್ಳುತ್ತದೆ. ಕುಸುಮಾಕರ ದೇವರಗೆಣ್ಣೂರರ ಸಾಧನೆಗಳನ್ನು ಕನ್ನಡ ನವ್ಯದ ಅತ್ಯುತ್ತಮ ಸಿದ್ಧಿಗಳೊಡನೆ ಇಟ್ಟು ನೋಡಿದಾಗ ಕೂಡ ಶ್ರೀಯುತರ ಕಾದಂಬರಿಗಳು ಮಹತ್ವದ ಪ್ರಯೋಗಗಳು ಎನಿಸುತ್ತವೆ. ಕುಸುಮಾಕರರು ನಿಸ್ಸಂದೇಹವಾಗಿ ಯಾಸನೀಸ. ಚಿತ್ತಾಲ. ದೇಸಾಯಿ ಇಂಥ ಲೇಖಕರ ಸಾಲಿಗೆ ಸೇರುವಂಥವರು.

೯೩ರ ಪ್ರಕಟಣೆಗಳಲ್ಲಿ ಹೊಚ್ಚಹೊಸದಾಗಿ ಕಾಣುವ ಕಾದಂಬರಿ ಎಂದರೆ ``ಮಂದಾರ ಮರದ ಜೇನ್ನೊಣ''. ಕನ್ನಡದ ಹಲವು ಸಾಹಿತ್ಯ ಚಳುವಳಿಗಳನ್ನು ಜೀರ್ಣಿಸಿಕೊಂಡ ಬರಹ ಇದು. ಕಥೆಯ ದೃಷ್ಟಿಯಿಂದ ಇದು ಒಂದು ಗ್ರಾಮೀಣ ಪರಿಸರದಲ್ಲಿ ಕೌಟುಂಬಿಕ, ಗಂಡು-ಹೆಣ್ಣು, ಒಡೆಯ-ಒಕ್ಕಲು ಸಂಬಂಧಗಳನ್ನು ಶೋಧಿಸುವ ಕಾದಂಬರಿ. ಈ ಶೋಧವೇ ಕಾದಂಬರಿಯಲ್ಲಿ ಸಾಕಷ್ಟು ದಟ್ಟವಾಗಿ, ಸಂಕೀರ್ಣವಾಗಿ ಇದೆ. ಗಮನಿಸಬೇಕಾದ ಅಂಶವೆಂದರೆ ಸರಳ ರೇಖಾತ್ಮಕ

ನಿರೂಪಣೆಯನ್ನೂ ವಾಸ್ತವವಾದೀ ಕ್ರಮದ ಬರವಣಿಗೆಯನ್ನೂ ಲೇಖಕರು ಬಿಟ್ಟುಕೊಟ್ಟಿರುವುದು. ಪ್ರಾದೇಶಿಕ ವಿವರಗಳು, ನುಡಿಗಟ್ಟುಗಳನ್ನು ಬಳಸಿಕೊಂಡಿದ್ದರೂ ''ಮಂದಾರ ಮರದ ಜೇನ್ನೊಣ'' ಕನ್ನಡದ ಟಿಪಿಕಲ್ ಪ್ರಾದೇಶಿಕ ಕಾದಂಬರಿಗಳನ್ನು ಅನುಸರಿಸಿಕೊಂಡು ಹೋಗಿಲ್ಲ. ಅಂದರೆ ಕೇವಲ ಒಂದು ಸಾಮಾಜಿಕ, ಸಾಂಸ್ಕೃತಿಕ ಲೋಕವನ್ನು ಪುನಃ ಸೃಷ್ಟಿಸಲು ಲೇಖಕರಿಗೆ ಅಷ್ಟೊಂದು ಆಸಕ್ತಿ ಇದ್ದಂತಿಲ್ಲ. ಈ ಕಾದಂಬರಿಯ ಒಂದು ಭಾಷಿಕ ಕುತೂಹಲವೆಂದರೆ ಇಡೀ ಕಾದಂಬರಿಯಲ್ಲಿ ಎಲ್ಲೂ ನಿರೂಪಣೆ - ಉತ್ತಮ ಪುರುಷ ಯಾ ಪ್ರಥಮ ಪುರುಷ - ಎನ್ನುವುದಿಲ್ಲ. ಮುಕ್ಕಾಲು ಭಾಗಕ್ಕಿಂತಲೂ ಹೆಚ್ಚಿನ ಬರವಣಿಗೆ ಸಂಭಾಷಣೆಗಳಲ್ಲಿದೆ. ಉಳಿದ ಭಾಗ ಚಿಕ್ಕ ಚಿಕ್ಕ ಸ್ವಗತಗಳಲ್ಲಿದೆ. ಅಂದರೆ ಯಾವ ದೃಷ್ಟಿಕೋನವೂ ನಿರ್ಣಾಯಕವೆನ್ನಿಸದಂಥ, ಹಲವು ದೃಷ್ಟಿಕೋನಗಳ ಮುಖಾಮುಖಿಯಿಂದ ಸೃಷ್ಟಿಯಾಗಬಹುದಾದ ಒಂದು ಸಂಕೀರ್ಣ ನೋಟಕ್ಕಾಗಿ ಲೇಖಕರು ಪ್ರಯತ್ನಿಸಿದ್ದಾರೆ. ಅಷ್ಟೇ ಅಲ್ಲ, ಬೇರೆ ಬೇರೆ ಸ್ವಗತಗಳನ್ನು ಬೇರೆ ಬೇರೆ ಅಧ್ಯಾಯಗಳಲ್ಲಿ ಪ್ರತ್ಯೇಕಿಸುವಂಥ ವಿನ್ಯಾಸವನ್ನು ಲೇಖಕರು ಬಿಟ್ಟುಕೊಟ್ಟಿದ್ದಾರೆ. ಆಂತರಿಕ ಮಾತು ಬಹಿರಂಗ ಸಂಭಾಷಣೆ ಎಂಬಂತೆ ಮುಖಾಮುಖಿಯಾಗುತ್ತದೆ. ಸಂಭಾಷಣೆ, ಅದರಲ್ಲಿ ತೊಡಗಿರುವವರನ್ನೂ ಅವರ ಸುತ್ತಲದನ್ನೂ ಏಕಕಾಲದಲ್ಲಿ ಬಿಚ್ಚುತ್ತ ಹೋಗುತ್ತದೆ. ಪರ್ಯಾಯವಾಗಿ ಒಂದು ಅಜ್ಞಾತ ಒಳಲೋಕ ತನ್ನ ಮಾನವೀಯ ಮತ್ತು ಸಾಮಾಜಿಕ ವಿದ್ಯಮಾನಗಳಲ್ಲಿ ಇಷ್ಟಿಷ್ಟೇ ಅನಾವರಣಗೊಳ್ಳುತ್ತ ಹೋಗುತ್ತದೆ. ಪ್ರತಿಯೊಂದು ಪಾತ್ರವೂ ತನ್ನ ತನ್ನ ಅಸ್ತಿತ್ವದ ಸಂದರ್ಭದಲ್ಲಿ ಈ ಲೋಕವನ್ನು ಗ್ರಹಿಸುತ್ತಾ ಹೋಗುತ್ತದೆ. ಪುಟ್ಟನ ಅದ್ಭುತರಮ್ಯ ಲೋಕ, ಸಣ್ಣಮರಿಯ ಬೌದ್ಧಿಕ ಲೋಕ ಈ ಗ್ರಾಮೀಣ ಲೋಕದೊಂದಿಗೆ ಏರ್ಪಡಿಸಿಕೊಳ್ಳುವ ಸಂಬಂಧದ ಸ್ವರೂಪಲ್ಲಿಯೇ ಬರವಣಿಗೆಯ ಜಗಿತದ ಸ್ವರೂಪವೂ ವೇದ್ಯವಾಗುತ್ತ ಹೋಗುತ್ತದೆ. ಮುಗ್ಧತೆ -ಪ್ರಬುದ್ಧತೆ, ಮೃದುತ್ವ-ಕಾಠಿನ್ಯ, ಕರುಣೆ-ಕ್ರೌರ್ಯಗಳ ಸಹ ಅಸ್ತಿತ್ವದ ಒಂದು ಪುಟ್ಟ ಬ್ರಹ್ಮಾಂಡವೇ ನಮ್ಮೆದುರು ತೆರೆದುಕೊಳ್ಳುತ್ತದೆ. ಸಹಜವಾಗಿಯೇ ನೀತಿ ಮತ್ತು ಮೌಲ್ಯಗಳ ಪ್ರಶ್ನೆಗಳೂ ಸರಳೀಕರಣದ ಅಪಾಯಗಳಿಂದ ತಪ್ಪಿಸಿಕೊಂಡಿವೆ. ಕಾದಂಬರಿಯ ಪ್ರಾರಂಭದಲ್ಲಿ ದೊಡ್ಡಪ್ಪ ಪುಟ್ಟನಿಗೆ ಹೇಳುವ ಕಥೆಯ ಸಂದರ್ಭವನ್ನು ಗಮನಿಸಿದರೂ ಸಾಕು ಲೇಖಕರು ವಾಚ್ಯವನ್ನು ವ್ಯಂಜಿಸುವ ಕ್ರಮ ಹೊಳೆದು ಬಿಡುತ್ತದೆ. ಸ್ವರ್ಗ-ನರಕಗಳ ವಿಭಜನೆಯ ಕಷ್ಟದ ಅರಿವಾಗುತ್ತದೆ. ಮನುಷ್ಯನ 'ಪ್ರಾರಬ್ಧ'ವನ್ನು ಅವನ ಸಾಮಾಜಿಕ ಸಂಬಂಧಗಳ ವಿನ್ಯಾಸಕ್ರಮದಲ್ಲೇ ಶೋಧಿಸಲು ಪ್ರಯತ್ನಿಸುವ ಕಾದಂಬರಿ ಇರವನ್ನೇ ಆಗಲೀ ಅರಿವನ್ನೇ ಆಗಲೀ ಏಕಮುಖವಾಗಿ ವೈಭವೀಕರಿಸದೆ ಅವುಗಳ ಡಯಲೆಕ್ಟಿಕಲ್ ಸಂಬಂಧವನ್ನು ಕಂಡುಕೊಳ್ಳುವ ಮಹತ್ವಾಕಾಂಕ್ಷೆಯನ್ನು ಇಟ್ಟುಕೊಂಡಿರುವ ಹಾಗೆ ಕಾಣುತ್ತದೆ. ಆದ್ದರಿಂದಲೇ ಕಾದಂಬರಿಯ ಕೊನೆಯಲ್ಲಿ ಸಣ್ಣಮರಿಯ ಮನಸಿನ ಮೇಲೆ ಆಗುವ ಆಘಾತವು ಒಂದು ಬಗೆಯ ಅರಿವಿನ ಕ್ರಮದ ಬಿಕ್ಕಟ್ಟನ್ನು ಮಾತ್ರ ವ್ಯಂಜಿಸುತ್ತದೆ. ಇವನೊಬ್ಬನೇ ಹಳ್ಳಿಯಿಂದ ಕೊಂಚ ದೂರ ಇರುವವನು ಎಂಬುದನ್ನು ಗಮನಿಸಬೇಕು. ಉಳಿದವರು ತಮ್ಮ ಪರಿಸ್ಥಿತಿಗೆ ಇರುವಿನಲ್ಲಿ ನೇರವಾಗಿ ಮುಖಾಮುಖಿಯಾದರೆ ಇವನು

ಅರಿವಿನಲ್ಲಿ ಅರ್ಥಮಾಡಿಕೊಳ್ಳುವ, ಪರಿಹಾರ ಕಂಡುಕೊಳ್ಳುವ ಪ್ರಯತ್ನ ಮಾಡುತ್ತಾನೆ. ಆದರೆ ಬದುಕು ತನ್ನನ್ನು ತಪ್ಪಿಸಿಕೊಂಡು ಹೋಗುವವರನ್ನು ಸೆಳೆದು ನಿಲ್ಲಿಸಿಕೊಳ್ಳುತ್ತದೆ. ಸಂಘರ್ಷ ಮಾತ್ರ ನಿಜವಾಗುತ್ತದೆ.

ನವ್ಯೋತ್ತರ ಬರಹಗಾರರಲ್ಲಿ ತಮ್ಮದೇ ಆದ ಛಾಪನ್ನು ರೂಪಿಸಿಕೊಂಡಿರುವ ಕುಂ.ವೀರಭದ್ರಪ್ಪ ಮುಖ್ಯವಾಗಿ ಕೆಳಜಾತಿ ವರ್ಗಗಳ ಬದುಕಿನ ಹೃದಯಸ್ಪರ್ಶಿ ಚಿತ್ರಗಳನ್ನು ಬಿಡಿಸುತ್ತ ಬಂದಿದ್ದಾರೆ. ಆದರೆ ಹಾಗೆ ಮಾಡುವಾಗ ಲೇಖಕರು ಕೇವಲ ಸ್ಥಿತಿಯನ್ನು ವೈಭವೀಕರಿಸದೆ ಸಾಧ್ಯತೆಗಳನ್ನು ಕಾಣಿಸಿರುವುದರಿಂದ ಬರೆಹ ಮಹತ್ವಾಕಾಂಕ್ಷೆಯನ್ನು ಉಳಿಸಿಕೊಂಡಿದೆ. ತಮ್ಮ ಸಮಕಾಲೀನರಾದ ದೇವನೂರ ಮಹಾದೇವ, ಬೊಳುವಾರು ಮಹಮದ್ ಕುಂಞಿಯವರಂತೆ ಕುಂ.ವೀ. ಗಾಢವಾದ ಹಾಸ್ಯಪ್ರಜ್ಞೆಯನ್ನು ಇಟ್ಟುಕೊಂಡವರು. ಆದ್ದರಿಂದಲೇ ಇವರ ಬರಹಗಳು ಗೋಳುಕರೆಯಾಗುವುದಿಲ್ಲ. ವಿನೋದವೆಂಬುದು ಜೋಕುಗಳಲ್ಲಿ ಕಳೆದುಹೋಗದೆ ಬದುಕನ್ನು ನೋಡುವ ಒಂದು ಸೃಜನಶೀಲ ಕ್ರಮವಾಗುತ್ತದೆ. ಎಂಥ ರಿಕ್ತ ಸ್ಥಿತಿಯಲ್ಲೂ ಸುಪ್ತವಾಗಿ ಉಳಿದಿರುವ ಮನುಷ್ಯ ಚೈತನ್ಯವನ್ನು ಸ್ಪರ್ಶಿಸಲು ಸಾಧ್ಯವಾಗುತ್ತದೆ. ಸಮಾಜದ ಅಸಂಬದ್ಧತೆಗಳನ್ನು ಕಂಡು ಭಾವುಕವಾಗದೆ ಅವುಗಳನ್ನು ಅರಗಿಸಿಕೊಂಡು ಗೆಲ್ಲುವ ಉಪಾಯವಾಗುತ್ತದೆ. ಕುಂ. ವೀ. ಅವರ ವೈನೋದಿಕ ಪ್ರಜ್ಞೆ ಅವರು ಚಿತ್ರಿಸುವ ಬದುಕಿನ ಕಠೋರತೆಯನ್ನು ಮೃದುಗೊಳಿಸುವಂಥದ್ದಲ್ಲ. ಬದಲಾಗಿ ಅದು ಅವರ ಸಂವೇದನೆಯನ್ನು ಕೇವಲ ಆರ್ದ್ರಗೊಳಿಸದೆ ಅದನ್ನು ಹರಿತವಾಗಿ, ಎಲ್ಲ ವಿಮರ್ಶಕ ಎಚ್ಚರದಲ್ಲಿ ಕಾಪಿಡುವ ಸಾಧನವಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಅದು ಕುಂ. ವೀ. ಅವರ ಬರವಣಿಗೆಗೆ ಒಂದು ಕಾಂತಿಯನ್ನು, ಲವಲವಿಕೆಯನ್ನು ತಂದುಕೊಟ್ಟಿದೆ. ಬಡತನ, ದಾರಿದ್ರ್ಯಗಳು ದಲಿತರ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳಿಗೆ ಸಂಬಂಧಪಟ್ಟ ವಿಷಯಗಳೇ ಹೊರತು ಅವುಗಳಿಂದಾಗಿ ಅವರ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಚೈತನ್ಯ ನಾಶವಾಗಿದೆ ಎಂದಲ್ಲ. ಬದಲಾವಣೆಯ ಭರವಸೆ ಸಾಧ್ಯವಾಗಿರುವುದೇ ಈ ಚೈತನ್ಯ ಮನುಷ್ಯನ ಮೂಲಗುಣವಾಗುವುದರಿಂದ. ಹೊರಗಿನ ಪ್ರೇರಣೆಗೆ, ಒಳಗಿನ ಸಂಕಲ್ಪಶಕ್ತಿ ಸಂಧಿಸುವ ಕ್ಷಣವೇ ನಿಜವಾದ ಕ್ರಾಂತಿ. ಸ್ವಾತಂತ್ರ್ಯೋತ್ತರ ಭಾರತ ದಲಿತರ ವಿಮೋಚನೆಗೆ ಹಲವು ಯೋಜನೆಗಳನ್ನು ರೂಪಿಸಿದೆ. ದಲಿತರಲ್ಲೂ ಆತ್ಮಜಾಗೃತಿ ತೀವ್ರವಾಗಿ ಬೆಳೆಯುತ್ತಿದೆ. ಅಂದರೆ ವಿಮೋಚನೆಯ ಪ್ರಕ್ರಿಯೆ ಪ್ರಾರಂಭವಾಗಿದೆ. ಇದು ಮೇಲೆ ಕಾಣುವಷ್ಟು ಸರಳವಾಗಿರುವುದಿಲ್ಲ. ಒಬ್ಬೊಬ್ಬ ದಲಿತನ ವಿಮೋಚನೆಯ ಅನುಭವವೂ ಒಂದೊಂದು ಸಂಕೀರ್ಣ, ಯಾತನಾಮಯ, ರೋಚಕ ಕಥೆ. ಇಂಥ ಒಂದು ಕಥೆಯನ್ನು ಕುಂ. ವೀ. ''ಕೊಟ್ರ ಹೈಸ್ಕೂಲಿಗೆ ಸೇರಿದ್ದು'' ನಲ್ಲಿ ಅರ್ಥಪೂರ್ಣವಾಗಿ ಹೇಳಿದ್ದಾರೆ. ಇಂಥ ಹಲವು ಕಥೆಗಳನ್ನು ದಾಖಲಿಸಿರುವುದೇ ದಲಿತ- ಬಂಡಾಯ ಚಳುವಳಿಗಳ ಪ್ರಸ್ತುತೆಯನ್ನು, ಸಾರ್ಥಕ್ಯವನ್ನು ಹೇಳುತ್ತದೆ. ಇದು ಕೇವಲ ಒಂದು ಕಥೆಯನ್ನು ಹೇಳುವ, ಹಾಡನ್ನು ಹಾಡುವ ಪ್ರಶ್ನೆಯಲ್ಲ; ಈ ನಾಡಿನ ಬಹುಸಂಖ್ಯಾತ ಜನವರ್ಗದ ಆಶೋತ್ತರಗಳನ್ನು ಅವು ಸಾಧಿತವಾಗುತ್ತಿರುವ ಕ್ರಮಗಳನ್ನೂ ಆ ದಾರಿಗಳಿಗೆ ಇರುವ ಅಡ್ಡಿ ಆತಂಕಗಳನ್ನೂ ಕುರಿತ ಚಿಂತನೆಯೇ ಆಗಿದೆ ಎಂಬುದನ್ನು ಬಿಡಿಸಿಹೇಳಬೇಕಾಗಿಲ್ಲ. ಒಂದು

ಜನಸಮೂಹದ ಇಚ್ಛಾಶಕ್ತಿ, ಅದನ್ನು ಚೋದಿಸುವ ಪ್ರೇರಕಶಕ್ತಿ ಇವುಗಳ ಬಗ್ಗೆ ಅಮೂರ್ತವಾಗಿ ಚಿಂತಿಸುವುದಕ್ಕೂ ಇವುಗಳನ್ನು ಮನುಷ್ಯ ಕಥನಗಳಾಗಿ ಪರಿವರ್ತಿಸುವುದಕ್ಕೂ ಇರುವ ವ್ಯತ್ಯಾಸ ದೊಡ್ಡದು. ಕುಂ. ವೀ. ಮಾರ್ಗ ಎರಡನೆಯದು. ಮೇಲು ನೋಟಕ್ಕೆ ಸಾಧಾರಣ ಎಂದು ಕಾಣಿಸಬಹುದಾದ ಒಂದು ಮಾನವೀಯ ಸನ್ನಿವೇಶದೊಳಗಣ ಒತ್ತಡಗಳನ್ನೂ ಸಂಘರ್ಷಗಳನ್ನೂ ಕಥೆ ಮಾಡಿ ಹೇಳುವ ಕ್ರಮದಲ್ಲೇ ಲೇಖಕರ ಸಾಮಾಜಿಕ, ರಾಜಕೀಯ ಚಿಂತನೆ - ಕಳಕಳಿಗಳೂ ಅಂತರ್ಗತವಾಗುತ್ತವೆ. ಮೇಲ್ಜಾತಿ -ಮೇಲ್ವರ್ಗಗಳಿಂದ ಬಂದ ಒಬ್ಬ ಹುಡುಗ ಹೈಸ್ಕೂಲಿಗೆ ಸೇರುವ ಪ್ರಸಂಗದಲ್ಲೇ ಅಂಥ ವೈಯಕ್ತಿಕವಾದ ಇಲ್ಲವೆ ಸಾಮಾಜಿಕವಾದ ಗಹನತೆಯಾಗಲೀ, ರೋಚಕತೆಯಾಗಲೀ ಇಲ್ಲ. ಆದರೆ ಕೊಟ್ರ ಹೈಸ್ಕೂಲಿಗೆ ಸೇರುವುದೆಂದರೆ ಅದು ಅವನ, ಅವನ ಕುಟುಂಬದ, ಅವನ ಜಾತಿಯ ಚರಿತ್ರೆಯಲ್ಲೇ ಒಂದು ದೊಡ್ಡ ಘಟನೆ. ಈ ಘಟನೆಯನ್ನು ಲೇಖಕರು ಅಷ್ಟು ಉತ್ಸಾಹದಲ್ಲಿ, ವಿಸ್ತಾರದಲ್ಲಿ, ಗಾಂಭೀರ್ಯದಲ್ಲಿ ನಿರೂಪಿಸಿದ್ದರೆ ಅದಕ್ಕೆ ಕಾರಣ ಕೇವಲ ತಾಂತ್ರಿಕವಲ್ಲ; ಇಂಥದೊಂದು ಕಥೆಯನ್ನು ಬರೆಯುವುದೆಂದರೆ ಸಬಾಲ್ಟ್ರನ್ ಚರಿತ್ರೆಯ ಮಹಾಸಂಪುಟದ ಒಂದು ಅಧ್ಯಾಯನವನ್ನೇ ಬರೆದಂತೆ.

ಲೇಖಕನೊಬ್ಬ ತನ್ನ ಅನುಭವಗಳನ್ನು, ವಿಚಾರಗಳನ್ನು ಹೇಳಿಕೊಳ್ಳುವ ಮಾಧ್ಯಮವಾಗಿ ಕಥೆ- ಕಾದಂಬರಿ ಪ್ರಕಾರಗಳನ್ನು ಆಶ್ರಯಿಸಿರುವ ಉದಾಹರಣೆಗಳು ಸಾಹಿತ್ಯ ಚರಿತ್ರೆಯಲ್ಲಿ ಅಪರಿಚಿತವೇನೂ ಅಲ್ಲ. ಅದರಲ್ಲೂ ಸಾರ್ವಜನಿಕ ಬದುಕಿನಲ್ಲಿ ಸದಾ ತೊಡಗಿಕೊಂಡಿರುವವರು ಒಂದಕ್ಕಿಂತ ಹೆಚ್ಚು ಮಾಧ್ಯಮದ ಬಗ್ಗೆ ಆಕರ್ಷಿತರಾಗಿರುವುದು ಸಹಜವಾಗಿಯೇ ಇದೆ. ಕೆಲವರು ಪ್ರತ್ಯಕ್ಷವಾಗಿ ಆತ್ಮಚರಿತ್ರೆ ಬರೆಯಬಹುದು. ಮತ್ತೆ ಕೆಲವರು ಒಂದು ಕಾಲ್ಪನಿಕ ಕಥೆಯ ಆವರಣದಲ್ಲಿ ತಮ್ಮ ಅನುಭವ, ವಿಚಾರಗಳನ್ನು ಪರೋಕ್ಷವಾಗಿ ಮಂಡಿಸಬಹುದು. ನಮ್ಮಲ್ಲೇ ಕಡಿದಾಳ್ ಮಂಜಪ್ಪನವರು ಅಂಥ ಪ್ರಯತ್ನಗಳನ್ನು ಮಾಡಿದ್ದುಂಟು. ಎಂ. ವೀರಪ್ಪಮೊಯಿಲಿ ಅವರ ''ಕೊಟ್ಟ''ವನ್ನೂ ಈ ಬಗೆಯ ಒಂದು ಪ್ರಯತ್ನವಾಗಿ ನೋಡಬಹುದು. ''ಕೊಟ್ಟ'' ಒಂದು ನಿಟ್ಟಿನಲ್ಲಿ ಆದರ್ಶವಾದೀ ಅರಣ್ಯಾಧಿಕಾರಿಯೊಬ್ಬನ ಕಥೆ. ಇನ್ನೊಂದು ನಿಟ್ಟಿನಲ್ಲಿ ಅದು ಕೊರಗರು ಎನ್ನುವ ಬುಡಕಟ್ಟಿನ ಕಥೆ. ಆದರ್ಶವಾದೀ ಪಾತ್ರಗಳ ಮೂಲಕ ಸಾಮಾಜಿಕ-ರಾಜಕೀಯ ವಿಮರ್ಶೆಯನ್ನು ಮಾಡುವುದು ಹಾಗೂ ಬುಡಕಟ್ಟಿನ ಜೀವನವನ್ನು ವರ್ಣಿಸುವುದರ ಮೂಲಕ ಸಾಂಸ್ಕೃತಿಕ ವಿವರಗಳನ್ನು ದಾಖಲಿಸುವುದು ಈ ಬರವಣಿಗೆಯ ಹಿಂದಿನ ಪ್ರಧಾನ ಆಶಯ. 'ಕೊಟ್ಟ' ದಕ್ಷಿಣ ಕನ್ನಡದ ಆದಿವಾಸಿ ಕೊರಗರ ವಾಸದ ತಾಣ. ಕೊರಗರ ಈ ಕೊಟ್ಟದ ಬದುಕಿನ ಜೊತೆಗೆ ಹೆಗ್ಗಡದೇವನ ಕೋಟೆಯ ಕಾಡು ಕುರುಬರ ಹಾಡಿಯ ಬದುಕೂ ಬೆಸೆದುಕೊಳ್ಳುವ ಮೂಲಕ ಎರಡು ಭಿನ್ನ ಬುಡಕಟ್ಟುಗಳ ಸಾಂಸ್ಕೃತಿಕ ಶೋಧನೆ ಈ ಕಾದಂಬರಿಯಲ್ಲಿ ನಡೆದಿದೆ.

ಕಾಡು 'ಕೊಟ್ಟ' ಕಾದಂಬರಿಯ ಇಡೀ ಜೀವಾಳ. ಕಾಡು ಈ ಕಾದಂಬರಿಯಲ್ಲಿ

ವಿನಾಶದ ಕಡೆ ಚಲಿಸುವ ಮೂಲಕ ಕೊರಗರ ಬದುಕನ್ನು ಸಂಕೇತಿಸುತ್ತದೆ. ಈ ಕಾದಂಬರಿಯಲ್ಲಿ ಮಹತ್ವದ ಕೇಂದ್ರಬಿಂದು ಇದು. ಬುಡಕಟ್ಟು ಜನರನ್ನು ಆಧರಿಸಿದ ಕಾದಂಬರಿ ಇದು ಎಂಬ ಹೆಗ್ಗಳಿಕೆ ಜೊತೆಗೆ, ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಬುಡಕಟ್ಟು ಜನಾಂಗ ಕಂಡುಕೊಳ್ಳಬೇಕಾದ ಸೂಕ್ಷ್ಮತೆ ಹಾಗೂ ಎಚ್ಚರಿಕೆಯನ್ನು ಈ ಕಾದಂಬರಿ ನಿರ್ವಹಿಸುತ್ತದೆ. ಸಾಮಾಜಿಕವಾಗಿ ಜೇನು ಕುರುಬರ ಹಾಡಿಯಲ್ಲಿ ಬೆಳೆದು ಬಂದ ಮಲ್ಲಯ್ಯನಿಗೂ, ಇನ್ನೂ ಕಡುಬಡತನ ಮತ್ತು ಮುಗ್ಧತೆ ಸ್ಥಿತಿಯಲ್ಲಿರುವ ಕೊರಗರ ಕೊಟ್ಟದ ಹೆಣ್ಣುಮಗಳು ಪೀಂಚಲುವಿಗೂ ಆರಂಭದಲ್ಲಿ ಒಲವಿನ ಬೆಸುಗೆ ಏರ್ಪಡುತ್ತದೆ. ಈ ಒಲವು ಎಂದೂ ದೇಹದ ಆಕರ್ಷಣೆಯಾಗಿ ಮಾರ್ಪಾಟು ಆಗುವುದಿಲ್ಲ. ಬದಲಾಗಿ ಪರಸ್ಪರ ಅರಿವಿನ ಹಾಗೂ ' ಮಡಿ' ಮತ್ತು 'ಡೋಲಿ'ನ ಸಾಂಸ್ಕೃತಿಕ ಸಂಗಮವಾಗುವ ಮೂಲಕ ವ್ಯಕ್ತಿಗತ ಬದುಕನ್ನು ಮೀರಿ ನಿಂತು, ಒಂದು ಸಮುದಾಯದ ಬೆಳವಣಿಗೆಗೆ ಈ ಒಲವು ಕೀಲಿಕೈ ಆಗುತ್ತದೆ. ಕಾದಂಬರಿಯ ಉದ್ದಕ್ಕೂ ಬರುವ ಮಲ್ಲಯ್ಯನ ಪಾತ್ರ ಓದುಗರ ಮನಸ್ಸಿನಲ್ಲಿ ನೆಲೆ ನಿಲ್ಲುವಂತದ್ದು. ಕಾಡಿನ ಮಕ್ಕಳಾಗಿ ಜೇನು ಕುರುಬರ ಹಾಡಿಯಲ್ಲಿ ಹುಟ್ಟಿದ ಮಲ್ಲಯ್ಯ ಕಾಡನ್ನು ಕಾಯುವ ಅಧಿಕಾರಕ್ಕೆ ಬರುತ್ತಾನೆ. ಮಾಸ್ತಿಯವರ ' ಕಾಕನಕೋಟೆ' ನಾಟಕದಲ್ಲಿ ಬರುವ ಹಾಗೆ ಕಾಡನ್ನು ಕಾಡಿನ ಮಕ್ಕಳಿಗೇ ಒಪ್ಪಿಸಬೇಕೆಂಬ ಆಶಯ ಕಾದಂಬರಿಯ ಹಿಂದೆ ಪ್ರವೃತ್ತವಾಗಿದೆ. ಆದರೆ ಇದು ಪಟ್ಟಭದ್ರ ಹಿತಾಸಕ್ತಿಗೆ ಬೇಕಿಲ್ಲ. ಎಂ. ಎಲ್. ಎ. ಅಂಬರಪ್ಪನ ಚಿತಾವಣೆಯಿಂದಾಗಿ 'ಕೊಟ್ಟ' ಪರಿಸರ ತಲ್ಲಣಗೊಳ್ಳುತ್ತದೆ. ಈ ಸಂದರ್ಭದಲ್ಲಿ ಮಲ್ಲಯ್ಯ ಹತಾಶಗೊಳ್ಳದೆ ಅತ್ಯಂತ ಸಂಯಮ, ಛಲ ಹಾಗೂ ಸ್ವಾಭಿಮಾನದಿಂದ ವರ್ತಿಸುತ್ತಾನೆ. ತನ್ನ ಅಧಿಕಾರವನ್ನು ತ್ಯಜಿಸಿ ಕಾಡನ್ನು, ಕಾಡಿನ ಮಕ್ಕಳನ್ನು ರಕ್ಷಿಸುವ ವ್ಯಕ್ತಿಯಾಗಿ ಆತ ರೂಪುಗೊಳ್ಳುತ್ತಾನೆ. ಹಾಗೆ ರೂಪುಗೊಳ್ಳುವ ಮೂಲಕ ಮಲ್ಲಯ್ಯ ಮಾಗಿದ ಮನಸ್ಸಿನ ಅಭಿವ್ಯಕ್ತಿಯಾಗಿ, ಧಣಿಯಾಗಿ ನಿಲ್ಲುತ್ತಾನೆ. ನಿರಕ್ಷರಿಯಾಗಿ, ಜಗತ್ತಿನ ಅನುಭವಕ್ಕೆ ಇನ್ನೂ ತೆರೆದುಕೊಳ್ಳದ ಮೂಕಿಯಾದ ಪೀಂಚಲು ಅಕ್ಷರ ಕಲಿಯುತ್ತಾಳೆ. ಅಲ್ಲದೆ ಕೊನೆಗೆ ಆಕೆ ಕೊಟ್ಟದ ಎಚ್ಚೆತ್ತ ಮಹಿಳೆಯಾಗಿ ಕೂಡ ರೂಪುಗೊಳ್ಳುತ್ತಾಳೆ. ಮಲ್ಲಯ್ಯ ಮತ್ತು ಪೀಂಚಲುವಿನಲ್ಲಿರುವ ಆತ್ಮವಿಶ್ವಾಸ ಮತ್ತು ಪಟ್ಟಭದ್ರ ವ್ಯವಸ್ಥೆ ಕೂಡ ಪರ್ಯಾವಸಾನವಾಗುತ್ತದೆ. ಕಾದಂಬರಿಯುದ್ದಕ್ಕೂ ಹತ್ತಾರು ಜಾತಿಯ ಮರಗಿಡಗಳು ಮಾತನಾಡುತ್ತವೆ. ನಾನಾ ವಿಧವಾದ ಪಕ್ಷಿಗಳು ಇಂಚರಗೊಳ್ಳುತ್ತವೆ. ಕೊರಗರ ಸಂಪ್ರದಾಯ, ಆಚರಣೆ, ಆರಾಧನೆಗಳು ಉದ್ದಕ್ಕೂ ಬಿಚ್ಚಿಕೊಳ್ಳುತ್ತವೆ. ಶೋಷಣೆ, ಸಾಮಾಜಿಕ ಸುಧಾರಣೆ, ಸಾಂಸ್ಕೃತಿಕ ಆಚರಣೆ ಇವೆಲ್ಲವುಗಳ ಬಗ್ಗೆ ಕಾದಂಬರಿಕಾರರ ಧೋರಣೆ ಕಾದಂಬರಿಯಲ್ಲಿ ಸ್ಪಷ್ಟವಾಗಿ ಮೈದಾಳಿವೆ.

೧೯೯೩-ನವೋದಯ, ನವ್ಯ, ನವ್ಯೋತ್ತರ ಈ ಮೂರು ಏಕಕಾಲದಲ್ಲಿ ಜೀವಂತವಾಗಿಯೂ ಪ್ರಯೋಗಶೀಲವಾಗಿಯೂ ಇದ್ದ ವರ್ಷ.

# ನಾಟಕ

*ಮಲ್ಲೇಪುರಂ ಜಿ. ವೆಂಕಟೇಶ್*

ಕಳೆದ ವರ್ಷಕ್ಕೆ ಹೋಲಿಸಿದರೆ, ಈ ವರ್ಷದ ನಾಟಕದ ಬೆಳೆ ಹುಲುಸಾಗಿಲ್ಲ. 'ರಂಗ ಪ್ರಯೋಗ'ಗೊಂಡ ಕೃತಿಗಳೆಲ್ಲ ಅಚ್ಚಾಗದಿರುವುದೇ ಇದಕ್ಕೆ ಕಾರಣವಿರಬೇಕು. ಇಷ್ಟು ಮಾತು ಹೇಳುವಾಗಲೂ 'ಸ್ವತಂತ್ರ ನಾಟಕ'ಗಳ ನಿರ್ಮಿತಿ- ಇತರೆ ಪ್ರಕಾರಗಳ ಜತೆಗೆ ಹೋಲಿಸಿಕೊಂಡರೆ- ಕಡಿಮೆಯೆಂದೇ ಹೇಳಬೇಕಾಗಿದೆ. ಈ ಮಾತನ್ನೂ ಇನ್ನಷ್ಟು ವಿವರವಾಗಿ ಚಿಂತಿಸಬಹುದು. ಕಳೆದ ದಶಕದ ಈಚೆಗೆ ಡಾ. ಕಂಬಾರರ ' ಸಿರಿಸಂಪಿಗೆ', ಕಾರ್ನಾಡರ 'ನಾಗಮಂಡಲ' ಬಂದ ಮೇಲೆ ಮಹತ್ವದ ನಾಟಕಗಳೇ ಇಲ್ಲ. ಈಚಿನ ವರ್ಷಗಳಲ್ಲಿ ಬಂದಿರುವ ನಾಟಕಗಳು 'ರಂಗಕೃತಿ'ಯ ಅಭಾವ, ಭಾಷೆಯ ಶೈಥಿಲ್ಯ, ವಸ್ತು ನಿರ್ವಹಣೆಯ ಲೋಪ, ಐಕ್ಯತ್ರಯಗಳ ಸೋಲು, ಹೀಗೆ ಹತ್ತಾರು ಬಗೆಯ ಕೊರತೆಗಳಿಂದ ನರಳುತ್ತಿವೆ.

೧೯೯೩ರಲ್ಲಿ ಸುಮಾರು ಹದಿನೈದು ನಾಟಕಗಳು ಪ್ರಕಟವಾಗಿವೆ. ಇವುಗಳಲ್ಲಿ ಲಂಕೇಶರ 'ಗುಣಮುಖ' ಮತ್ತು ಆರ್ಯರ 'ಪಾತಾಳಗರಡಿ' ಗಮನಾರ್ಹವಾದ ನಾಟಕಗಳಾಗಿವೆ. ಲಂಕೇಶರ 'ಗುಣಮುಖ' ರಂಗಭೂಮಿಯ ಮೇಲೆ ಬಂದು, ರಂಗಭೂಮಿಯ ಸಾಧ್ಯತೆಗಳನ್ನು ಪ್ರಶ್ನಿಸಿದೆ ಮಾತ್ರವಲ್ಲ, ಅದರ ಹಿನ್ನೆಲೆಯನ್ನು ಹುಡುಕುವ ಕೆಲಸವನ್ನು ಮಾಡಿದೆ. ಇದು ಹಾಗಿರಲಿ, ನಾಟಕದ ವಸ್ತು ರಾಜಕಾರಣದ ಎಳೆಗಳನ್ನು ಬಿಡಿಸುವುದು ಮಾತ್ರವಲ್ಲ; ಮನುಷ್ಯನ ಬಹು ಸಾಧ್ಯತೆಗಳ ಬಹುಮುಖೀ ಎಳೆಗಳನ್ನು ಕುರಿತು ನೋಡುವುದು ನಾಟಕದ ತತ್ತ್ವವಾಗಿದೆ. ನಾದಿರಶಾ ಈ ಬಗೆಯ ಕ್ರಿಯೆಗೆ ಕೇಂದ್ರ ಪ್ರತಿಮೆ. ಈ ನಾಟಕ ನಮ್ಮ ಮಧ್ಯಯುಗೀನ ರಾಜಕೀಯ ಮತ್ತು ಸಾಮಾಜಿಕ ಸ್ತರಗಳನ್ನು ಹುಡುಕುವುದರೊಂದಿಗೆ ಪ್ರಸ್ತುತ ರಾಜಕಾರಣದ ಸೂಕ್ಷ್ಮ ಎಳೆಗಳು ಯಾವುದೆಂಬ ಪ್ರಶ್ನೆಯೂ ನಾಟಕದ ಬೆನ್ನಾಗಿದೆ. ಇದಿಷ್ಟೇ ಆಗಿದ್ದರೆ ನಾಟಕ ನಮ್ಮ ಗಮನ ಸೆಳೆಯಬೇಕಾಗಿರಲಿಲ್ಲ. ರಾಜಕಾರಣವು 'ರೋಗಗ್ರಸ್ತ'ವಾದಾಗ ವ್ಯಕ್ತಿ, ಕುಟುಂಬ, ಸಮುದಾಯ, ಸಂಬಂಧಗಳು ಹೇಗೆ- ಕ್ರಮಕ್ರಮೇಣ ರೋಗಗ್ರಸ್ತಗೊಳ್ಳುತ್ತವೆಂಬ ಅಂಶವನ್ನೇ ನಾಟಕ ಎತ್ತಿ ಹಿಡಿಯುತ್ತದೆ. ಲಂಕೇಶರ ಈ ಹಿಂದಿನ ನಾಟಕಗಳಲ್ಲಿ 'ರಾಜಕಾರಣ'ದ ' ಸಾಮಾಜಿಕ ನೆಲೆ' ಪ್ರಧಾನಗೊಂಡಿದ್ದರೆ ಈ ನಾಟಕವು ರಾಜಕಾರಣದ 'ನೈತಿಕನೆಲೆ'ಯನ್ನೂ ಶೋಧಿಸುತ್ತದೆ. ಇದಕ್ಕಾಗಿ ಅರವತ್ತು ವರ್ಷದ

ಮುದುಕ ಹದಿನಾರು ವರ್ಷದ ಕನ್ಯೆಯಿಂದ ಚುಂಬನ ಇರಿಸಿಕೊಳ್ಳುತ್ತಾನೆ. ಅವನ ಜತೆ ಮಲಗುತ್ತಾನೆ. ಇದು ನಾಟಕ ರಚನೆಯ ಆಳದ ಮೇಲೆ ಬಿಟ್ಟಿರುವ 'ಗಾಯ'ದ ಗುರುತು. ಇಲ್ಲಿ ಒಂದು ಮಾತು ಹೇಳಬೇಕು. ಈ ನಾಟಕ 'ಭಾಷೆ'ಯ ಮೇಲೆ, ಅವರ ಸಂಪಾದಕೀಯ ಭಾಷೆಯ ಪ್ರಭಾವ ಬಿದ್ದು, ನಾಟ್ಯಕರ್ಥದ ಸೂಕ್ಷ್ಮ ಎಳೆಗಳು ಕಡಿದು ಹೋಗಿ, ಸೂತ್ರಬದ್ಧ ನುಡಿಗಳು ಪ್ರಧಾನವಾಗುತ್ತವೆ. ಇದನ್ನು ಹೆಚ್ಚು ವಿಸ್ತರಿಸಬೇಕಾಗಿಲ್ಲ. ಆದರೆ, ನಾಟಕ ನಮ್ಮನ್ನು ಸ್ವಲ್ಪಹೊತ್ತು ಹಿಡಿದು ಅಲ್ಲಾಡಿಸುತ್ತದೆ. ಮನುಷ್ಯನ ಸಾಧ್ಯತೆಗಳು ಯಾವುದು ಎಂಬ ಮುಖ್ಯ ಪ್ರಶ್ನೆಯೇ ನಾಟಕದ ಮುಖ್ಯ ತಿರುಳೂ ಕೂಡ ಆಗುತ್ತದೆ. ಇದಕ್ಕೆ ಅಲಾದಿಖಾನ್ ಮತ್ತು ನಾದಿರ್ ಶಾ ಎರಡು ತುದಿಗಳಲ್ಲಿ ಪ್ರತಿಮೆಗಳಾಗಿ ನಿಲ್ಲುತ್ತಾರೆ. ಈ ಅಂಶವನ್ನು ಈಗಾಗಲೇ ಸ್ಥೂಲವಾಗಿ ಶ್ರೀ ಕೆ.ವಿ. ನಾರಾಯಣ ಅವರು ಗುರುತಿಸಿದ್ದಾರೆ. ಈ ವರ್ಷ ಓದಬಹುದಾದ ಹೊಸ ನಾಟಕವೊಂದನ್ನು ಲಂಕೇಶರು ಕೊಟ್ಟಿದ್ದು ವಿಶೇಷ.

ಆರ್ಯರು 'ಯಜ್ಞ'ದಂತಹ ನಾಟಕ ಬರೆದು ''ಪೌರಾಣಿಕ ಕಥಾನಕದ ರಹಸ್ಯಾರ್ಥಗಳನ್ನು ನಾಟಕದ ಮೂಲಕ ಅಭಿವ್ಯಕ್ತಿಸಿದ್ದರು''. ಆದರೆ, 'ಪಾತಾಳ ಗರಡಿ' ನಾಟಕ ಇನ್ನೊಂದು ಬಗೆಯದು. ಇದು ಸಮಕಾಲೀನವಾಗಿದೆ. ಮತ್ತು ಸಮಕಾಲೀನವಾಗಿರುವುದು ಮಾತ್ರವಲ್ಲ; ಅಭಿವ್ಯಕ್ತಿಯ ಕ್ರಮವೂ ಕೂಡ ವಿಶಿಷ್ಟವಾಗಿದೆ. ಇಲ್ಲಿಯ ಅಭಿವ್ಯಕ್ತಿ ಕೂಡ ಕ್ರಿಯೆಯಲ್ಲಿ ಸಫಲವಾಗಿದೆ. ತನಗೆ ತಾನೆ ಬೇರೆಯಾಗುತ್ತದೆ. 'ಪಾತಾಳಗರಡಿ' ಎನ್ನುವ ನಾಟಕದ ಹೆಸರೇ ಕಳೆದು ಹೋದದ್ದನ್ನು ಹುಡುಕುವ ಕ್ರಿಯೆಯ ಸಂಕೇತ ಆಗಿದೆ. ಈ ನಾಟಕದ ಪಾತ್ರಗಳು ಮದನ್ ಮತ್ತು ಮಾಲಾ. ಇವರ ಜತೆಗೆ ಉತ್ಸಾಹಿ, ಆದರೆ ವಕ್ರತೆಯ ಅಜಯ್ ಇದ್ದಾನೆ. ಫಾರೆಸ್ಟ್ ಗೆಸ್ಟ್‌ಹೌಸ್‌ನ ಜಾಕೀದಾರ ಯುವತಿ, ಚೆಲುವೆ, ಭಾವಜೀವಿಯಾದ ಲತಾ (ಮೀನಾ) ಇದ್ದಾರೆ. ವಯಸ್ಸಾದ, ಗಂಭೀರವ್ಯಕ್ತಿ ರಾಮನ್ ನಾಟಕದಲ್ಲಿ ಕಾಣಿಸಿಕೊಳ್ಳುತ್ತಾನೆ. ನಾಟಕದ ತುಂಬಾ 'ಮಾತು' ಪ್ರಧಾನವಾಯಿತು ಎಂದೆನಿಸುತ್ತದೆ. ಆದರೆ, ಮಾತಿನ 'ಪ್ರಕ್ರಿಯೆ' ಒಂದು ಬಗೆಯ 'ಶೋಧನೆ' ಯಾಗಿ ಬರುತ್ತದೆ. ಮಾಲಾಳನ್ನು ಮದನ್ ತಿಳಿಯುವುದು. ಮದನ್‌ನನ್ನು ಮಾಲಾ ತಿಳಿಯುವುದು. ಇವರಿಬ್ಬರೂ ತಮ್ಮ ತಿಳುವಳಿಕೆಯ ಪರಿಪ್ರೇಕ್ಷ್ಯದಲ್ಲಿ ತಮ್ಮ ತಮ್ಮ ಬದುಕಿನ ಜಗತ್ತನ್ನು ಅರಿಯುವುದೂ ಸಮಸ್ಯೆಗಳನ್ನು ಬಿಡಿಸಿಕೊಳ್ಳುವುದೂ ಮುಖ್ಯವಾಗುತ್ತದೆ.

ಆರ್ಯರು. ನಮ್ಮ ಕಾಲದ 'ಸಂಬಂಧ'ದ ಸೂಕ್ಷ್ಮತೆಗಳನ್ನು ಕುರಿತು ಬರೆಯಲು ಹೊರಟಿದ್ದಾರೆ. ಇದರಿಂದಾಗಿಯೇ 'ಕಾಡು', ಒಂದು ಕೇಂದ್ರ ಸಂಕೇತವಾಗಿ ಬರುತ್ತದೆ. ನಾಟಕದಲ್ಲಿ ಬರುವ ಹಲವು ಬಗೆಯ ಪ್ರತಿಮೆಗಳು. ಉದಾ: ಕರಡಿ, ಹಾವು, ಕೋತಿ ಇವುಗಳು ಮದನ್ ಮತ್ತು ಮಾಲಾಳ ಒಳಬದುಕಿನ ಎಳೆಗಳನ್ನು ಸೂಕ್ಷ್ಮವಾಗಿ ಹೇಳುತ್ತವೆ. 'ಅಜ್ಜಿಹಳ್ಳ' ಇವರಿಬ್ಬರ 'ತಿಳಿವಳಿಕೆ'ಯ ಸಂಗಮ ಸ್ಥಳವೂ ಆಗುತ್ತದೆ. ನಾಟಕದ ಒಳಜಗತ್ತು ಮಾಲಾ, ಮದನ್. ಆದರೆ, ನಾಟಕದ ಹೊರಜಗತ್ತು ಸಿಂಗ್ರಾ-.ಚೆನ್ನ, ಲತಾ ಮತ್ತು ರಾಮನ್. ಮದನ್- ನಪುಂಸಕ ಎಂದು ತಿಳಿಯುವುದು; ಸಿಟೀನ್-

ಮಾಲಾಳನ್ನು ಡೈವೋರ್ಸ್ ಮಾಡಿರುವುದು ನಾಟಕದ ಕೊನೆಗೆ ಬಹಿರಂಗಗೊಳ್ಳುವುದು. ಅವರಿಬ್ಬರ ಅರಿಯುವ ' ಪ್ರಕ್ರಿಯೆ'ಯ ಸ್ಫೋಟದ ಸ್ಥಾನವೇ ಆಗುತ್ತದೆ.

ನಾಟಕದಲ್ಲಿ ಮಾತು ತುಸು ಹೆಚ್ಚೆನಿಸಿದರೂ ತುಂಬ ಲವಲವಿಕೆಯಾಗಿದೆ. ಆರ್ಯರು ನಾಟಕವನ್ನು ಒಂದೇ ಉಸಿರಿಗೆ ಓಡಿಸುತ್ತಾರೆ. ಇದು ನಾಟಕದ ಆಶಯಕ್ಕೆ ಹತ್ತಿರವಾಗಿದೆ. 'ಪಾತಾಳ ಗರಡಿ' ಎನ್ನುವ ಹೆಸರಿಗೂ, ನಾಟಕದ ಸನ್ನಿವೇಶಕ್ಕೂ ಮಾತಿನ ಕ್ರಿಯೆಗೂ ಪಾತ್ರಗಳ ಅಂತರಂಗಕ್ಕೂ ಸಂಬಂಧ ಇರುವುದು- ನಾಟಕಕ್ಕೆ ಹೆಚ್ಚಿನ ಅರ್ಥವಂತಿಕೆ ತಂದು ಕೊಟ್ಟಿದೆಯೆಂದು ಹೇಳಬಹುದು. ಇಷ್ಟಾದರೂ ನಾಟಕ ತನ್ನ ಅರ್ಥದ ಕ್ರಿಯೆಯಿಂದ ಮೇಲೇಳುವುದಿಲ್ಲ.

ಬಸವರಾಜ ಸಬರದ ಅವರ ಗೀತನಾಟಕ 'ಬೆಳ್ಳಕ್ಕಿ ಸಾಲು' ಕಳೆದ ವರ್ಷದ 'ನರಬಲಿ'ಗಿಂತ ಭಿನ್ನವಾಗಿದೆ. ನಾಟಕವು ಕಾವ್ಯಾತ್ಮಕವಾಗಿದ್ದು, ಏಕತಾನತೆ ಹೆಚ್ಚಿದೆ. 'ಪ್ರೀತಿ'ಯೇ ನಾಟಕದ ವಸ್ತು. ರಾಜಕುಮಾರಿ ಮತ್ತು ಕವಿ ಇವರಿಬ್ಬರೂ ಪ್ರೀತಿಯ ವಸ್ತುವನ್ನು ಹುಡುಕುತ್ತ ಅಲೆಯುತ್ತಾರೆ. ಈ ಅಲೆದಾಟದಲ್ಲಿ ಎರಡು ಭೂಮಿಕೆಗಳು ಸೃಷ್ಟಿಗೊಳ್ಳುತ್ತವೆ. ಒಂದು ಕಡೆ ದರ್ಪ, ದಬ್ಬಾಳಿಕೆ ಮತ್ತು ವೈಭವ; ಇನ್ನೊಂದೆಡೆ ಮರ, ಗಿಡ, ಬಳ್ಳಿ ಬೆಳ್ಳಕ್ಕಿ ಸಾಲು ಹೊಳೆ, ಕವಿ, ರಾಜಕುಮಾರಿ. ಇಡೀ ನಾಟಕ ' ಕನಸು'ಗಳನ್ನು ಹೆಣೆಯುತ್ತ ಹೋಗುತ್ತದೆ. ಈ ಬಗೆಯ ಹೆಣಿಕೆಗೆ ನಾಟಕದೊಳಗೆ ಹೆಚ್ಚು ಅರ್ಥ ಹುಟ್ಟುವುದಿಲ್ಲ. ಅದು ಪಾರಸ್ಪರಿಕ ಸಂಘರ್ಷವಾಗುವುದಿಲ್ಲ. ಈ ತೊಡಕು ನಾಟಕದ ಹೆಣಿಗೆಗೆ, ಅದರ ಸಾರ್ಥಕತೆಗೆ ದುರ್ಬಲ ಕೊಂಡಿಯೂ ಆಗಿದೆ. ನಾಟಕವೇ ಹಲವು ಅರ್ಥಗಳನ್ನೂ ವಲಯಗಳನ್ನೂ ಕಟ್ಟುತ್ತ ಹೋಗಬೇಕಿತ್ತು. ಆದರೆ, ನಾಟಕಕಾರನೇ ಎರಡು 'ಭಿನ್ನ ವಲಯ'ಗಳನ್ನೂ ಸೃಷ್ಟಿಸಿ - ಅವುಗಳನ್ನೂ ನಡೆಸುತ್ತ ಹೋಗುತ್ತಾನೆ. ಪ್ರೀತಿ ಮತ್ತು ಪ್ರೇಮದ ಆವಿಷ್ಕಾರದ ಮಾತುಗಳು ನಾಟಕದ ತುಂಬಾ ಹರಡಿಕೊಳ್ಳುತ್ತವೆ. ಆದರೆ, ನಾಟಕದೊಳಗೆ ಒಂದು ಬಗೆಯ ಜೀವನಾನುಭವದ ಐಕ್ಯತೆ ಮತ್ತು ಹುಡುಕಾಟಕ್ಕೆ ಬೆಳಕಾಗಿ ಇದು ಕೂಡುವುದಿಲ್ಲ. 'ಭಾಷೆ'ಯಲ್ಲಿ, ಲಯದಲ್ಲಿ ಏಕತಾನತೆ ಮತ್ತೆ ಮತ್ತೆ ಹೊರಳುತ್ತದೆ. 'ಬೆಳ್ಳಕ್ಕಿಸಾಲು' ಅರ್ಥಪೂರ್ಣ ಪ್ರತಿಮೆ. ಆದರೆ, ನಾಟಕ ಇದನ್ನು ಹೆಚ್ಚು ಅರ್ಥಪೂರ್ಣವಾಗಿ ಧ್ವನಿಸುವುದಿಲ್ಲ.

ಪ್ರಕಾಶ್ ಗಖಾಡೆ ಅವರ 'ತೂಕದವರು' ಒಂದು ಬಗೆಯ ಸ್ವಘೋಷಿತ ನಿಲುವಿನ ನಾಟಕ. ನೌಕರಿ ಕೊಡಿಸುವೆನೆಂದು 'ಬಸು' ಎಂಬುವನಿಂದ ಐವತ್ತು ಸಾವಿರ ತೆಗೆದುಕೊಂಡು 'ಗುಳುಂ' ಮಾಡಿದ ಗುರುಸಿದ್ದಪ್ಪನ ಮೇಲೆ ಸೇಡು ತೀರಿಸಿಕೊಳ್ಳುವ ಬಸೂನ ಸಂಕಲ್ಪ ಮತ್ತು ಸಿದ್ಧಿ ನಾಟಕದ ವಸ್ತು. ತೀರ ಸಾಮಾನ್ಯ ನೆಲೆಯ ನಾಟಕ. ಇದೇ ಬಗೆಯ ಡಾ. ಕೇಶವರಾವ್ ಅವರ 'ಎದ್ದಗಳಿಗೆ' ಎಂಬ ಹೆಸರಿನ ' ಪ್ರಹಸನ' ಸಾಮಾನ್ಯ ರಚನೆ. ಒಬ್ಬ ವ್ಯಕ್ತಿ ಎದ್ದ ಗಳಿಗೆಯ ಅಪಶಕುನದ ಪ್ರಭಾವದಿಂದಾಗಿ ಬೆಳಗಿನಿಂದ ಅಂದಿನ ರಾತ್ರಿಯವರೆಗೆ ಪಡಬಾರದ ಪಾಡು ಪಡುವುದೇ ಪ್ರಹಸನದ ವಸ್ತು. ತರ್ಕದ ನೆಲೆಗೆ ಸಿಕ್ಕದೇ ಹೇಗೆಂದರೆ ಹಾಗೆ 'ಪ್ರಹಸನ' ಮಾತಿನ ಸಡಿಲ ಓಟದಲ್ಲಿ ನುಗ್ಗುತ್ತದೆ. ಇನ್ನು ಸುಮುಖಾನಂದ ಜಲವಳ್ಳಿ ಅವರ 'ಭುವನಜ್ಯೋತಿ' ಬೈಬಲ್ಲಿನ

ಹೊಸ ಒಡಂಬಡಿಕೆಯಲ್ಲಿ ಬರುವ ಯೇಸು ಕ್ರಿಸ್ತನ ಜೀವನ ವಿವರಗಳನ್ನು ಆಧರಿಸಿ ಬರೆದಿರುವ 'ದೃಶ್ಯರೂಪಕ'. ಇದು ಸಾಮಾನ್ಯ ರೂಪಕ. ಇದಕ್ಕಿಂತ ಹೆಚ್ಚಿಗೆ ಹೇಳುವುದಕ್ಕೆ ದೃಶ್ಯರೂಪಕ ಬಿಟ್ಟುಕೊಡುವುದಿಲ್ಲ.

ರೇಡಿಯೋದಲ್ಲಿ ಪ್ರಸಾರಿತವಾದ ನಾಟಕಗಳು ಈ ವರ್ಷವೂ ಬಂದಿವೆ. ಕೆಲವರು ಅವುಗಳನ್ನು ಪುಸ್ತಕ ರೂಪದಲ್ಲಿ ಹೊರತಂದಿದ್ದಾರೆ. ಜ.ಡಿ. ನಾಡಿ ಕಣೆನ ಅವರ 'ಅಗ್ನಿವರ್ಣ ಮತ್ತು ಅನ್ಯರೂಪಕಗಳು' ಈ ಬಗೆಯದು. ಇನ್ನೊಂದು ವಿ.ಬಿ. ಹೊಸಮನೆ ಮತ್ತು ಉದಯಶಂಕರ ಇಬ್ಬರೂ ಸೇರಿ ಗುಜರಾಥಿ ಮತ್ತು ಹಿಂದಿಯಿಂದ ಒಂದೊಂದು ರೇಡಿಯೋ ನಾಟಕಗಳನ್ನು ಮತ್ತು ಎಸ್.ವಿ. ಪರಮೇಶ್ವರಭಟ್ಟರ ಸಮಗ್ರ ಕಾಳಿದಾಸ ಸಂಪುಟದಿಂದ 'ಮಹಾಕವಿ ಕಾಳಿದಾಸ' ಎಂಬ ರೂಪಕವನ್ನು ಪುಸ್ತಕ ರೂಪದಲ್ಲಿ ತಂದಿದ್ದಾರೆ. ಇವುಗಳ ಬಗೆಗೆ ಹೆಚ್ಚಿಗೆ ಹೇಳದೆ ಉಲ್ಲೇಖಿಸಿ ಕೈಬಿಡುವುದು ಲೇಸು. ಆಧುನಿಕ ರೀತಿಯ ಕಾರಣಿಕ ನಾಟಕ ಎಂಬ ಉಪಶೀರ್ಷಿಕೆಯಲ್ಲಿ ಸಿ.ಎನ್. ಜಯಲಕ್ಷ್ಮಿದೇವಿ ಅವರ 'ದೇವಯಾನಿ' ಪ್ರಕಟವಾಗಿದೆ. ನಾಟಕದಲ್ಲಿ ಮಾತು ಪ್ರಧಾನವಾಗಿ ಆಂಗಿಕ ವಿನ್ಯಾಸಕ್ಕೆ ಪೆಟ್ಟು ಬಿದ್ದಿದೆ. ಇದು ಸಾಮಾನ್ಯ ನಾಟಕ.

ಸಾಕ್ಷರತೆಯ ನೆರಳಿನಲ್ಲಿ, ಇದರ ಆಶಯವನ್ನೂ ಹೊತ್ತ ಮೂರು ಪುಸ್ತಕಗಳು ಈ ವರ್ಷ ಪ್ರಕಟಗೊಂಡಿವೆ. ರಾಜ್ಯ ಸಂಪನ್ಮೂಲ ಕೇಂದ್ರ ಮೈಸೂರು ಇವರು 'ಸೂರಿಲ್ಲದ ರಂಗದಲ್ಲಿ' ಹನ್ನೆರಡು ನಾಟಕಗಳ ಒಂದು ಸಂಕಲನ ಹೊರತಂದಿದ್ದಾರೆ. ಇದರಲ್ಲಿ ಕೆಲವು ಒಳ್ಳೆಯ ನಾಟಕಗಳಿವೆ. ಕೆ. ರಾಮಯ್ಯ ಅವರ 'ಸ್ಫೋಟ' ನಾಗಣ್ಣ ಅವರ 'ಅಕ್ಕತಮ್ಮ' ಮೊಗಳ್ಳಿ ಗಣೇಶ ಅವರ 'ಒತ್ತಪ್ಪ' ಉತ್ತಮ ನಾಟಕಗಳಾಗಿವೆ. ಉಳಿದವು ಒಳ್ಳೆಯ ಪ್ರಯತ್ನಗಳೇ. ಆದರೆ. ಈ ನಾಟಕಗಳು ಸಾಕ್ಷರತೆಯನ್ನೇ ಕೇಂದ್ರ ವಸ್ತುವಾಗಿ ಹೊಂದಿರುವುದರಿಂದ ವೈವಿಧ್ಯಕ್ಕೆ ಆಸ್ಪದವಿಲ್ಲ. 'ರಾಹು' ಅವರ 'ಅಕ್ಷರ ಒರೆಗಲ್ಲು' ವಿಷ್ಣುನಾಯ್ಕ ಅವರ 'ಒಂದು ಹನಿ ರಕ್ತ ಮತ್ತು ಇತರ ಬೀದಿ ನಾಟಕಗಳು' ಪ್ರಕಟಗೊಂಡಿವೆ. ಇವುಗಳು ಸೀಮಿತ ಉದ್ದೇಶಗಳನ್ನು ಇಟ್ಟುಕೊಂಡು ರಚಿತವಾದ ನಾಟಕಗಳಾಗಿವೆ ಎನ್ನುವುದು ಸೂರ್ಯಸ್ಪಷ್ಟ.



# ಪ್ರವಾಸ ಸಾಹಿತ್ಯ

*ಎ. ವಿ. ನಾವಡ*

---

ಈ ವರ್ಷದಲ್ಲಿ ನಾಲ್ಕು ಪ್ರವಾಸ ಕಥನಗಳು ಪ್ರಕಟವಾಗಿವೆ. ಈ ನಾಲ್ಕೂ ಕೃತಿಗಳ ವಿಷಯ ಜಗತ್ತಿನ ವಿಭಿನ್ನ ಭಾಗಗಳ ಪ್ರವಾಸ ಕಥನ. 'ಯುರೋನಾಡಿನಲ್ಲಿ' ಪುಸ್ತಕ ಯುರೋನಾಡಿನ ಇಟಲಿ. ಇಂಗ್ಲೆಂಡ್, ಫ್ರಾನ್ಸ್, ನೆದರ್‌ಲ್ಯಾಂಡ್‌ಗಳ ಕುರಿತ ಒಂದು ವಿವರಣಾತ್ಮಕ ಪ್ರವಾಸ ಕಥನ. 'ಅಮೆರಿಕ: ವಾಸ ಪ್ರವಾಸ'ಕೃತಿ ಕೆಲವು ತಿಂಗಳ ಕಾಲ ಅಮೆರಿಕದ ಬಂಧುವೊಬ್ಬರ ಮನೆಯಲ್ಲಿ ತಂಗಿ ಅಲ್ಲಿನ ಬದುಕಿನ ಅಸಾಂಗತ್ಯಗಳನ್ನು ಕಂಡು, ಕೇಳಿ, ಮಾಹಿತಿ ಸಂಗ್ರಹಿಸಿ ಬಹುಮಟ್ಟಿಗೆ ಮಾಹಿತಿಕೋಶದ ರೂಪದಲ್ಲಿ ನಿರೂಪಿಸಿದ ಕೃತಿ. ' ಡೊಳ್ಳಿನ ದಿಗ್ವಿಜಯ' ರಶಿಯಾದಲ್ಲಿ ನಡೆದ 'ಭಾರತ ಉತ್ಸವ'ದಲ್ಲಿ ಡೊಳ್ಳಿನ ತಂಡದ ಸದಸ್ಯರೊಂದಿಗೆ ನಡೆಸಿದ ಪ್ರವಾಸದ ಸುಖಸಂಕಥಾವಿನೋದ. 'ಮಧ್ಯಪ್ರದೇಶದ ಮಡಿಲಲ್ಲಿ' ಕೃತಿ ಭಾರತದ ರಾಜ್ಯವೊಂದರಲ್ಲಿ ಲೇಖಕರು ನಡೆಸಿದ ಪ್ರವಾಸಾನುಭವ- ಜನಾಂಗ ದರ್ಶನ.

ಕೃತಿಕಾರರು ಕೆಲವು ದಿನಗಳ ಮಟ್ಟಿಗೆ ಒಂದು ನಾಡನ್ನು ನಿರ್ದಿಷ್ಟ ಉದ್ದೇಶಕ್ಕಾಗಿ ಸುತ್ತಿ, ಸಂಗ್ರಹಿಸಿದ ಮಾಹಿತಿ, ಪಡೆದ ಅನುಭವಗಳನ್ನು ಇಲ್ಲಿ ಕೆಲವರು ವರದಿಯಾಗಿಸಿದರೆ ಇನ್ನು ಕೆಲವರು ತಮ್ಮ ಅನುಭವಕೋಶದ ಜೀವದ್ರವ್ಯವನ್ನು ಭಾಷೆಯಲ್ಲಿ ಪುನರ್‌ಸೃಷ್ಟಿಸುವ ಕೆಲಸ ಮಾಡಿದ್ದಾರೆ. ಪ್ರವಾಸ ಕಥನವು ಸೃಜನಶೀಲ ಪ್ರಕಾರ ಹೌದು, ಅಲ್ಲ ಎನ್ನುವ ಇಬ್ಬಗೆಯ ವಾಗ್ವಾದಕ್ಕೆ ಇಲ್ಲಿನ ಗ್ರಂಥಗಳು ಸಾಕ್ಷಿಯಾಗಬಲ್ಲವು. ಕನ್ನಡದಲ್ಲಿ ವರ್ಷಕ್ಕೆ ಸುಮಾರು ಒಂದೂವರೆ ಸಾವಿರ ಪುಸ್ತಕಗಳು ಪ್ರಕಟವಾಗುತ್ತವೆ ಎನ್ನುವಾಗ ಪ್ರವಾಸ ಕಥನದ ಬೆಳೆ ಇಷ್ಟೇಕೆ ಸೊರಗಿದೆ ಎಂಬುದು ತಿಳಿಯುತ್ತಿಲ್ಲ. ಸಂಚಾರದ ಅನುಭವ ದ್ರವ್ಯವನ್ನು ಅಕ್ಷರ ಮಾಧ್ಯಮದಲ್ಲಿ ಹರಳುಗಟ್ಟಿಸುವ ಬಗ್ಗೆ ಕನ್ನಡದಲ್ಲಿ ಎಚ್ಚರ ಇನ್ನೂ ವ್ಯಾಪಕವಾಗಿ ರೂಪುಗೊಳ್ಳಬೇಕಾಗಿದೆ.

**ಯುರೋನಾಡಿನಲ್ಲಿ:** *ಲತಾಗುತ್ತಿ*

ಯುರೋಪನ್ನು ಕುರಿತಂತೆ ಕನ್ನಡದಲ್ಲಿ ಪ್ರವಾಸ ಕಥನಗಳಿಗೆ ಕೊರತೆಯಿಲ್ಲ. ವಿ.ಕೃ.ಗೋಕಾಕ್, ದೇಜಗೌ, ದಿನಕರದೇಸಾಯಿ, ಕು.ಶಿ., ಜಿ. ಎಸ್. ಎಸ್, ಕಾರಂತ, ಹೊ. ಶ್ರೀನಿವಾಸಯ್ಯ, ಅನುಪಮಾ ನಿರಂಜನ - ಹೀಗೆ ಪಟ್ಟಿ ಬೆಳೆಸಬಹುದು. ಅಂದರೆ

ಪುರುಷವರ್ಗದ ಕೃತಿಗಳೇ ಪ್ರಧಾನವಾಗಿ ಬಂದಿರುವುದು ಕಾಣಿಸುತ್ತಿದೆ. 'ಗಂಡುಕೂತು ಕೆಟ್ಟ, ಹೆಣ್ಣು ತಿರ್‍ಗಿ ಕೆಟ್ಟಳು' ಎನ್ನುವ ನೆಲದಲ್ಲಿ ಬೆಳೆದು ಬಂದ ನಮ್ಮ ಮಹಿಳೆಯರು ಇತ್ತೀಚೆಗೆ ನಾಡುಸುತ್ತಿ ತಮ್ಮ ವಿಶಿಷ್ಟ ಸಂವೇದನೆಯೊಂದಿಗೆ ಪ್ರವಾಸಕಥನ ಸೃಷ್ಟಿಸುತ್ತಿರುವುದು ಆರೋಗ್ಯಕರ ಬೆಳವಣಿಗೆ. ಪ್ರಸ್ತುತ ಗ್ರಂಥವು ಸಾಂಸ್ಕೃತಿಕ ಎಚ್ಚರವುಳ್ಳ ಕನ್ನಡದ ಮಹಿಳೆಯೊಬ್ಬರು ಯುರೋಪಿನ ನಾಡಿನ ಪ್ರವಾಸದಲ್ಲಿ ಪಡೆದ ಅನುಭವಗಳನ್ನು, ಪೂರಕ ಮಾಹಿತಿಗಳನ್ನು ಇಲ್ಲಿ ಹಂಚಿಕೊಂಡಿದ್ದಾರೆ. ಯುರೋಪನ್ನು ಕುರಿತು ಈಗಾಗಲೇ ಹಲವಾರು ಪ್ರವಾಸಕಥನಗಳು ಬಂದಿದ್ದರೂ ಶ್ರೀಮತಿ ಗುತ್ತಿಯವರ ವಸ್ತುನಿರ್ವಹಣೆಯಲ್ಲಿ ಒಂದು ಬಗೆಯ ಅನನ್ಯತೆಯಿದೆ, ಕಂಡದ್ದನ್ನು ಹೇಳುವಲ್ಲಿ ಲವಲವಿಕೆ ಇದೆ.

ಒಂದು ಪ್ರವಾಸಕಥನ ವಸ್ತುವಿವರಗಳ ಸಂಗ್ರಹವಾದಾಗ ಅಥವಾ ಮಾಹಿತಿಗಳ ಭಂಡಾರವಾದಾಗ ಸೋಲುತ್ತದೆ. ಕಂಡ ಮಾಹಿತಿಗಳು, ಪಡೆದ ಅನುಭವಗಳು ಇನ್ನೊಮ್ಮೆ ಅನುಭವಕೋಶದೊಳಗೆ ಪುನರ್‌ಸೃಷ್ಟಿಗೊಂಡು ಭಾಷೆಯಲ್ಲಿ ಎಲ್ಲಾ ಸಂವೇದನೆಗಳೊಂದಿಗೆ ಶರೀರರೂಪಧಾರಣೆ ಮಾಡಿದಾಗ ಒಳ್ಳೆಯ ಪ್ರವಾಸಕಥನವಾಗುತ್ತದೆ. ಶ್ರೀಮತಿ ಲತಾಗುತ್ತಿಯವರ ಪ್ರವಾಸಕಥನವು ತಾನು ಕಂಡ ಪ್ರೇಕ್ಷಣೀಯ ಸ್ಥಳಗಳ ಬಗೆಗೆ ವಿವರಣಾತ್ಮಕ ಧಾಟಿಯಲ್ಲಿದ್ದರೂ ಬರಿಯ ಮಾಹಿತಿ ಕೋಶವಾಗದೆ ವ್ಯಕ್ತಿವಿಶಿಷ್ಟವಾದ ಕೆಲವು ಹೊಳಹುಗಳನ್ನು ನೀಡುತ್ತದೆ. ಯುರೋಪಿನ ಮೂರು ನಾಲ್ಕು ದೇಶಗಳನ್ನು ಶರವೇಗದಲ್ಲಿ ಸುತ್ತಿದ ಸಂದರ್ಭದಲ್ಲಿ ಮನಸ್ಸಿನಲ್ಲಿ ದಾಖಲಾದ ಸಂವೇದನೆಗಳು ಅವರೇ ಹೇಳಿದಂತೆ ಸಿಕ್ಕ ಮಾಹಿತಿಪತ್ರಗಳ ಹಾಗೂ ಇತರ ಪೂರಕ ಮಾಹಿತಿಗಳ ಜೋಡಣೆಯಿಂದ ಈ ಕೃತಿ ರೂಪುಗೊಂಡಿದೆ. ತಾವು ಸುತ್ತಿದ ನಾಡಿನ ವಸ್ತುಸಂಗ್ರಹಾಲಯಗಳು, ಚಿತ್ರಶಾಲೆಗಳು, ಕ್ರೈಸ್ತ ಕೆಥೆಡ್ರಿಲ್‌ಗಳು, ರಂಗಮಂದಿರಗಳು, ಗ್ರಂಥಾಲಯಗಳು, ಸಮಾಧಿಸ್ಥಾನಗಳು, ಅವುಗಳ ಇತಿಹಾಸ, ವಾಸ್ತು ವಿವರ ಇತ್ಯಾದಿಗಳನ್ನು ವಿವರ ವಿವರವಾಗಿ ಕಣ್ಣಿಗೆ ಕಟ್ಟುವಂತೆ ವಿವರಣಾತ್ಮಕ ಕಥನ ಶೈಲಿಯಲ್ಲಿ ಹೇಳುತ್ತಾ ಹೋಗುತ್ತಾರೆ. ಮೆಚ್ಚಿಕೊಳ್ಳತಕ್ಕ ಅಂಶವೆಂದರೆ ನೇರ ಪಾರದರ್ಶಕ ನಿರೂಪಣೆ. ಹೀಗೆ ಹೇಳುವಾಗ ಅವರ ಮನಸ್ಸು ತಮ್ಮ ನಾಡಿನ ಸ್ಥಿತಿಗತಿಯೊಂದಿಗೆ ತಳುಕು ಹಾಕುತ್ತದೆ. ತೌಲನಿಕ ವಿವೇಚನೆ ನಡೆಯುತ್ತದೆ. ನಮ್ಮ ನಾಡಿನ ಜನರ ಬದುಕಿನ 'ಕಪ್ಪು ಬಿಳುಪು'ಗಳನ್ನು ಬೆಳಕಿಗೆ ಒಡ್ಡುತ್ತಾರೆ.

ತಾಂತ್ರಿಕ ಸೌಲಭ್ಯ ಒದಗಿಸಿದ ಸುಖಾಕರ್ಷಣದ ನಡುವೆ ಇದ್ದೂ ವಿದೇಶದ ಜನ ದುಡಿಮೆಗೆ ತಮ್ಮನ್ನು ಅರ್ಪಿಸಿಕೊಳ್ಳುತ್ತಿದ್ದಾರೆ ಎನ್ನುವುದನ್ನು ಬಹಳ ಅರ್ಥವಾಗಿ ಹೀಗೆ ಹೇಳಿದ್ದಾರೆ. ''ಅಲ್ಲಿನ ಜನ ಕೆಲಸವಿಲ್ಲದಾಗ ಟಿ.ವಿ. ನೋಡುತ್ತಾರೆ. ನಮ್ಮವರು ಟಿ.ವಿ. ಇಲ್ಲದಾಗ ಮನಸ್ಸಾದರೆ ಕೆಲಸ ಮಾಡುತ್ತಾರೆ.'' ಯುರೋಪಿನ ಜನರ ಸ್ವಚ್ಛತೆ, ದಕ್ಷತೆ, ಪ್ರಾಮಾಣಿಕತೆಗಳನ್ನು ಮೆಚ್ಚಿನುಡಿಯುತ್ತಾರೆ. ಹಾಗೆಯೇ ಅವರ ಕ್ರೌರ್ಯ, ಲೈಂಗಿಕ ಸ್ವೇಚ್ಛಾಚಾರಗಳನ್ನು ಮುಚ್ಚುಮರೆಯಿಲ್ಲದೆ ಬೆಳಕಿಗೆ ಹಿಡಿಯುತ್ತಾರೆ.

ಲತಾಗುತ್ತಿಯವರ ಸ್ತ್ರೀಪರ ಸಂವೇದನೆ ಈ ಗ್ರಂಥದ ವಿಶಿಷ್ಟ ಅಂಶ. ಪ್ಯಾರಿಸ್‌ನ ಮಹಿಳೆಯರ ಬಿಡುವಿಲ್ಲದ ದುಡಿಮೆ, ವೃತ್ತಿಗೌರವ, ಇನ್ನೊಬ್ಬರ ಮನೆಯಲ್ಲಿ ಆಳಾಗಿ ದುಡಿಯುವಲ್ಲಿ ನಿಸ್ಸಂಕೋಚತನ ಇವುಗಳನ್ನು ಗುರುತಿಸುತ್ತಾರೆ. ಹಾಗೆಯೇ ಸ್ತ್ರೀಸ್ವಾತಂತ್ರ್ಯಕ್ಕೆ ಮಹಿಳಾ ವಿಮೋಚನೆಗೆ ಮನ್ನಣೆ ನೀಡುವ ಪಾಶ್ಚಾತ್ಯದೇಶಗಳಲ್ಲಿ ವೇಶ್ಯಾವೃತ್ತಿಯಲ್ಲಿ ನಿರತರಾದ ಸುಂದರ ಹುಡುಗಿಯರನ್ನು ದಲ್ಲಾಳಿಗಳು ಪೇಟೆಯಲ್ಲಿ ವಸ್ತುಮಾರಿದಂತೆ ಮಾರುವ ಬಗೆಗೆ, ನೆದರ್ಲ್ಯಾಂಡಿನ ಕಾಫಿಹೌಸ್‌ನ ಭಾರತೀಯ ಪರಿಚಾರಿಣಿಯರನ್ನು ಆ ದೇಶದ ಜನ ನಡೆಸಿಕೊಳ್ಳುವ ಬಗೆಗೆ ಆಶ್ಚರ್ಯ ವ್ಯಕ್ತಪಡಿಸುತ್ತಾರೆ. ಭಾರತೀಯ ಮೇಲಾಗಿ ಕರ್ನಾಟಕ ಸಂಸ್ಕೃತಿಯ ಎಚ್ಚರದಿಂದ ಪರ್ಯಾಪ್ತವಾದ ಮನಸ್ಸೊಂದು ಯುರೋಪಿನ ನಾಡನ್ನು ಹೇಗೆ ಗ್ರಹಿಸಿದೆ ಎಂಬುದನ್ನು ಈ ಕೃತಿಯಿಂದ ತಿಳಿಯಬಹುದಾಗಿದೆ. ಗಾಢವಾದ ಇತಿಹಾಸ ಪ್ರಜ್ಞೆ, ರಾಷ್ಟ್ರೀಯತೆಯ ಎಚ್ಚರ ಪ್ರಾಚೀನ ಸಂಸ್ಕೃತಿಯನ್ನು ಕಾಪಿಡುವ ಕಾಳಜಿ, ಇವು ಆ ನಾಡಿನಲ್ಲಿ ಗ್ರಂಥಕಾರರು ವಿಶೇಷವಾಗಿ ಗಮನಿಸಿದ ಗುಣಮೌಲ್ಯಗಳು.

**ಅಮೆರಿಕಾ: ವಾಸಪ್ರವಾಸ-** *ಶ್ರೀಮತಿ ಪದ್ಮಾ ಶೆಣೈ*

ಕನ್ನಡದ ಹಿರಿಯ ಮಹಿಳಾ ಸಾಹಿತಿಗಳಲ್ಲಿ ಒಬ್ಬರಾದ ಶ್ರೀಮತಿ ಪದ್ಮಾ ಶೆಣೈ ಅವರ ಅಮೆರಿಕಾ ಪ್ರವಾಸ ಕಥನ, 'ಅಮೆರಿಕಾ : ವಾಸ-ಪ್ರವಾಸ'. ಇದನ್ನು ಪ್ರವಾಸಕಥನ ಎನ್ನುವ ಬದಲು ಅಮೆರಿಕೆಯ ಸಮಾಜದರ್ಶನ ಎನ್ನಬಹುದು. ವೈದ್ಯರಾದ ಮಗ-ಸೊಸೆಯರ ಜೊತೆ ಕೆಲವು ಕಾಲ ವಾಸಮಾಡಲು ತೆರಳಿದ ಶ್ರೀಮತಿ ಶೆಣೈಯವರು ಕನ್ನಡದಲ್ಲಿ ಈ ತನಕ ಬಂದಿರುವ ಪ್ರವಾಸಕಥನಕ್ಕೆ ಭಿನ್ನವಾದ ಧಾಟಿಯಲ್ಲಿ ಈ ಕೃತಿಯನ್ನು ಬರೆದಿದ್ದಾರೆ. ಯಾವುದೇ ಪ್ರವಾಸಕಥನದಲ್ಲಿ ಕಂಡಬರುವಂತೆ ಹೊರಡುವ ಸಂಭ್ರಮ, ತಲ್ಲಣ, ಪಾಸ್‌ಪೋರ್ಟ್ ವೀಸಾಗಳ ತಕರಾರು-ಇತ್ಯಾದಿಗಳ ವಿವರಗಳು ಇಲ್ಲೂ ಇವೆ. ಇವುಗಳನ್ನು ಅತ್ಯಂತ ನವುರಾದ ತಿಳಿಯಾದ ಭಾಷೆಯಲ್ಲಿ ನಿರೂಪಿಸುತ್ತಾರೆ. ಆದರೆ ಮುಂದೆ ಅಮೆರಿಕೆಯ ಬದುಕನ್ನು ಘಟನೆಗಳ- ಆಖ್ಯಾಯಿಕೆಗಳ ಮೂಲಕವೇ ಹಣಿಕಿ ನೋಡಲು ಪ್ರಯತ್ನಿಸುತ್ತಾರೆ. ಅಂದರೆ ಅಧಿಕೃತ ಸಾಕ್ಷ್ಯಾಧಾರಗಳೊಂದಿಗೆ ಅಮೆರಿಕದ ಬದುಕಿನ ವಿಭಿನ್ನ ಮುಖಗಳನ್ನು ನಮ್ಮ ಮುಂದಿರಿಸುತ್ತಾರೆ. ಇಲ್ಲಿ ಪ್ರವಾಸಕಥನದ ನಿರೂಪಣಾತಂತ್ರ ಗೋಚರಿಸುವುದಿಲ್ಲ. ಪ್ರವಾಸಕಥನವೆನ್ನುವುದು ವ್ಯಕ್ತಿನಿಷ್ಠ ಸಾಹಿತ್ಯ. ಅದು ಸಾಮಾನ್ಯವಾಗಿ ಭಾವಗೀತದಂತೆ, ಲಲಿತ ಪ್ರಬಂಧದಂತೆ ಸಾಗಬೇಕು. ತನ್ನದಲ್ಲದ ಒಂದು ಊರನ್ನು ಕಂಡಾಗ, ಹೊಸ ಜಾಗದಲ್ಲಿ ಆದ ಅನುಭವವನ್ನು ತನ್ನ ಮನಸ್ಸು ಗ್ರಹಿಸಿದ ಬಗೆ ಅಕ್ಷರರೂಪ ತಾಳಬೇಕಾಗಿದೆ. 'ನಾನು' ಎನ್ನುವ ಆತ್ಮವೃತ್ತಾಂತ ನಿರೂಪಣೆ ಪ್ರವಾಸಕಥನದ ಕ್ರಮ. ಇಲ್ಲಿ ವಾಸ್ತವದ ನಿರೂಪಣೆಯ ಜತೆಗೆ ಒಂದಷ್ಟು ಫ್ಯಾಂಟಸಿಗೂ ಅವಕಾಶವಿದೆ. ಸೃಜನಶೀಲ ಮನಸ್ಸೊಂದು ಅಲ್ಲಿನ ಬದುಕಿಗೆ ಸ್ಪಂದಿಸಿ ವ್ಯಕ್ತಿತ್ವದ ಮುದ್ರೆಯೊತ್ತಿ ಆ ಅನುಭವವನ್ನು ಭಾಷೆಯಲ್ಲಿ ಅಭಿವ್ಯಕ್ತಿಸಬೇಕು. ಇಲ್ಲಿ ಒಂದೆರಡು ಅಧ್ಯಾಯಗಳನ್ನು ಬಿಟ್ಟರೆ ಉಳಿದವು ಘಟನೆಗಳ ರೂಪದಲ್ಲಿ ಹೆಣೆದ ವಸ್ತುನಿಷ್ಠ ಮಾಹಿತಿಗಳು. ಶ್ರೀಮತಿ

ಶೆಣೈಯವರು ಅಮೆರಿಕದಲ್ಲಿ ತನ್ನದಲ್ಲದ ವಾಸ್ತವವನ್ನು ಕಂಡಾಗ ಅವುಗಳನ್ನು ಕರಾರುವಾಕ್ಕಾಗಿ ಎಲ್ಲ ಆಕರಗಳಿಂದ ಮೂಲ ಸಾಮಗ್ರಿ ಸಂಗ್ರಹಿಸಿ ನಿರೂಪಿಸಿದರು. ಮಧ್ಯೆ ಮಧ್ಯೆ ಭಾರತೀಯ ಸಂಸ್ಕೃತಿಯಲ್ಲಿ ಮಿದಿದ ಮನಸ್ಸು ಅಲ್ಲಿನ ಕರಾಳ ಬದುಕಿಗೆ ಪ್ರತಿಕ್ರಿಯಿಸುತ್ತದೆ, ನಮ್ಮ ದೇಶದ ಬದುಕಿನೊಂದಿಗೆ ಮುಖಾಮುಖಿಯಾಗುತ್ತದೆ.

ನಿನ್ನೆಯನ್ನರಿಯದ ನಾಳೆಯ ಬಗ್ಗೆ ನಂಬಿಕೆಯಿರದ ನೆಲಸಿದ ವರ್ತಮಾನಕ್ಕಷ್ಟೇ ಅಂಟಿಕೊಂಡಿರುವ ಅಮೆರಿಕನ್ ಭೌತವಾದಿಗಳ ಬದುಕಿನ ಕರಾಳಮುಖವನ್ನು ಇಷ್ಟು ಅಧಿಕೃತವಾಗಿ ದಾಖಲಿಸಿದ ಕೃತಿ ಬಹುಶಃ ಇನ್ನೊಂದಿಲ್ಲ. ಅಮೆರಿಕಾದ ಕುಟುಂಬದ ಸ್ವರೂಪ, ಮಕ್ಕಳ-ಪಾಲಕರ ಸಂಬಂಧ, ವಿವಾಹದ ಕಲ್ಪನೆ, ವಿವಾಹಬಾಹಿರ ಲೈಂಗಿಕ ಸಂಬಂಧ, ಕರಾರು ರೂಪದ ಹೆಣ್ಣು-ಗಂಡು ಸಂಬಂಧ, ವಿವಾಹ ವಿಚ್ಛೇದನ, ಕ್ರೌರ್ಯ, ಹಿಂಸೆ, ಹದಿಹರೆಯರ ಮಾನಸಿಕ ತೊಳಲಾಟದ ಚಿತ್ರಗಳನ್ನು ಓದಿದಾಗ ನಾವು ನಿಬ್ಬೆರಗಾಗುತ್ತೇವೆ. ಒಂದು ಕಡೆಯಿಂದ ನಿರ್ಗತಿಕ ಮಕ್ಕಳನ್ನು ಸಾಕುವ 'ಸಾಕುಮನೆ'ಗಳು, ನಿರ್ಗತಿಕ ಮಕ್ಕಳಿಗೆ ದತ್ತು ಪಾಲಕರನ್ನು ಒದಗಿಸುವ ವ್ಯವಸ್ಥೆ, ನಿರುದ್ಯೋಗಿಗಳಿಗೆ ಸರಕಾರದಿಂದ ಆರ್ಥಿಕ ನೆರವು ನೀಡುವ ವ್ಯವಸ್ಥೆ, ಗಂಡಂದಿರಿಂದ ವಿಚ್ಛೇದನಗೊಂಡ ಉದ್ಯೋಗರಹಿತ ಮಹಿಳೆಯರಿಗೆ ನೆರವು ನೀಡುವ ಅನುಕಂಪಶೀಲ ಸಮಾಜ. ಮಗ್ಗುಲಲ್ಲೇ ಎಳೆಶಿಶುಗಳನ್ನು ಬೀದಿಗೆಸೆವ ಪಾಲಕರು, ತಂದೆಯೇ ಮಗಳನ್ನು ಹಾದರಕ್ಕೆಳೆವ ಪ್ರಸಂಗ, ಅನಾರೋಗ್ಯ ಪೀಡಿತ ಮಗುವನ್ನು ಕತ್ತು ಹಿಸುಕಿ ಕೊಲ್ಲುವ ತಾಯಿ- ಇಂತಹ ವಾತಾವರಣದಲ್ಲಿ ಮಕ್ಕಳು ಬಾಲಾಪರಾಧಿಗಳಾಗದೆ, ಕೊಲೆಗಡುಕರಾಗದೆ ಇನ್ನೇನು ಆಗಲು ಸಾಧ್ಯ? ಈ ಬಗೆಗಿನ ಮಾಹಿತಿಗಳು, ವಿವರಗಳು ಎಲ್ಲ ಅಧಿಕೃತ ಕಾಲ, ದೇಶ, ಅಂಕಿಸಂಖ್ಯೆಗಳಿಂದ ಪುಸ್ತಕದಲ್ಲಿ ತುಂಬಿವೆ. ನಡುನಡುವೆ ಲೇಖಕಿ ಒಬ್ಬಾಕೆ ಸಮಾಜವಿಜ್ಞಾನಿಯಂತೆ, ಮನೋವಿಜ್ಞಾನಿಯಂತೆ ಮಾಹಿತಿಗಳನ್ನು ಸೊಗಸಾಗಿ ವಿಶ್ಲೇಷಿಸುತ್ತಾರೆ. ಅಮೆರಿಕದ ಪ್ರೇಕ್ಷಣೀಯ ಸ್ಥಳಗಳು, ಉನ್ನತ ವಿಶ್ವವಿದ್ಯಾಲಯಗಳು, ಬಾಹ್ಯಾಕಾಶ ತಾಂತ್ರಿಕ ಜ್ಞಾನ ಕೇಂದ್ರಗಳು, ಇಂತಹವುಗಳ ಬಗೆಗೆ ಸಾಕಷ್ಟು ಓದಿದ್ದ ನಮಗೆ ಪದ್ಮಾ ಶೆಣೈಯವರ ಕೃತಿ ಅಮೆರಿಕದ ಬದುಕಿನ ಇನ್ನೊಂದು ಚಿತ್ರವನ್ನು ಕಟ್ಟಿಕೊಡುತ್ತದೆ.

ಅಂಕಿ ಅಂಶ ದಾಖಲೆಗಳಿಗಿಂತ ಮಿಗಿಲಾಗಿ ಸ್ವಾನುಭವಜನ್ಯ, ವ್ಯಕ್ತಿ ವಿಶಿಷ್ಟತೆಯಿಂದ ಕೂಡಿದ ಪ್ರವಾಸಕಥನಗಳು ಓದುಗರಿಗೆ ಹೆಚ್ಚು ಹತ್ತಿರವಾಗುತ್ತವೆ. ಶ್ರೀಮತಿ ಪದ್ಮಾ ಶೆಣೈ ಅವರ 'ಅಮೆರಿಕಾ: ವಾಸ-ಪ್ರವಾಸ' ಶುದ್ಧಾಂಗವಾಗಿ ಪ್ರವಾಸ ಕಥನಕ್ಕಿಂತ ಹೆಚ್ಚಾಗಿ ಅಮೆರಿಕದ ಕರಾಳ ಬದುಕಿಗೆ ಕನ್ನಡಿ ಹಿಡಿವ ಮಾಹಿತಿ ಗ್ರಂಥ ಎನ್ನಬಹುದು.

**ರಶಿಯಾದಲ್ಲಿ ಡೊಳ್ಳಿನ ದಿಗ್ವಿಜಯ:** *ಪು.ತಿ. ಹರಿದಾಸ ಭಟ್ಟ*

'ಡೊಳ್ಳಿನ ದಿಗ್ವಿಜಯ' ರಶಿಯಾದಲ್ಲಿ (೧೯೮೭) ಜರುಗಿದ ಭಾರತ ಉತ್ಸವದಲ್ಲಿ ಕಣ್ಣೂರಿನ ಡೊಳ್ಳಿನ ಕಲಾವಿದರು 'ಕುಣಿದಾಡಿಸಿದ' ಸಂದರ್ಭದ ನೆನಪಿನ ಚಿತ್ರಮಾಲೆ. ಕರ್ನಾಟಕದ ಜನಪದ ಕಲಾತಂಡದ ನೇತಾರರಾಗಿ ಹೋದ ಲೇಖಕರು ತಮ್ಮ

ಮುಮ್ಮಾತಿನಲ್ಲಿ ''ಸೋವಿಯತ್ ರಷ್ಯಾದ ನಗರಗಳಲ್ಲಿ ಬಾರಿಸಿದ ಡೊಳ್ಳು ಎಲ್ಲೆಲ್ಲೂ ಜನಮನ್ನಣೆ ಗಳಿಸಿ ಕರ್ನಾಟಕದ ಒಂದು ಜನಪದ ಕಲೆಯ ಸವಿಯನ್ನು ವಿದೇಶಿಯರಿಗೆ ಬಡಿಸಿದ ರೋಚಕ ಅನುಭವ ನಮಗುಂಟು ಮಾಡಿತು. ಡೊಳ್ಳುಯಾತ್ರೆಯ ನೆನಪುಗಳ ಮೆಲುಕು ಕನ್ನಡ ಓದುಗರಿಗೆ ರುಚಿಸೀತೆಂದು ಅದನ್ನೀಗ ಓದುಗರ ಮುಂದಿರಿಸಿದ್ದೇನೆ.'' ಎಂದು ಬರೆದುಕೊಂಡಿದ್ದಾರೆ. ಲೋಕ ಸಂಚಾರಿ ಪ್ರೊ. ಕು.ಶಿ. ಹರಿದಾಸಭಟ್ಟರು ಕನ್ನಡದ ಹೆಸರಾಂತ ಪ್ರವಾಸಕಥನಕಾರರು. ಅರ್ಥಶಾಸ್ತ್ರಜ್ಞರೂ ಕಲಾವಿಮರ್ಶಕರೂ ಆದ ವ್ಯಕ್ತಿಯೊಬ್ಬ ಸಾಹಿತಿಯೂ ಆದಾಗ ಬಹುಶಿಸ್ತೀಯ ಮಾಂತ್ರಿಕತೆ ಬರವಣಿಗೆಗೆ ಒದಗಿ ಬರುತ್ತದೆ. ಕಂಡದೇಶದ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ದಾಖಲಾತಿಯಷ್ಟೇ ಆಗದೆ ಹೊರಗಿನವನೊಬ್ಬ ಇನ್ನೊಂದು ಸಂಸ್ಕೃತಿಯ ಅನನ್ಯತೆಯನ್ನು ಗ್ರಹಿಸಿದ ಬಗೆಯನ್ನು ಈ ಪ್ರವಾಸ ಕಥನದಲ್ಲಿ ಗುರುತಿಸಬಹುದಾಗಿದೆ. ಲೇಖಕರು ಈ ಕೃತಿಯನ್ನು ಕಲಾಪ್ರಸಾರ ಕಥನವೆಂದು ಸರಿಯಾಗಿಯೇ ಕರೆದಿದ್ದಾರೆ. ೧೯೮೭ರ ಭಾರತ ಉತ್ಸವಕ್ಕೆ ೧೯೯೩ರಲ್ಲಿ ಪ್ರವಾಸಕಥನದ ರೂಪದಲ್ಲಿ ಲೇಖಕರು ಪ್ರತಿಕ್ರಿಯಿಸಿದರು. ಆದರೆ ಈ ನಡುವೆ ರಶಿಯಾದ ರಾಜಕೀಯ ನದಿಯಲ್ಲಿ ಬಹಳಷ್ಟು ನೀರು ಹರಿದು ಹೋಗಿತ್ತು. ಇದರಿಂದ ದೇಶದ ಆರ್ಥಿಕ, ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ಬಹಳ ದೊಡ್ಡ ಮಾರ್ಪಾಟು ಬಂದಿತು. ಬದಲಾದ ಕಾಲದ ಹಿನ್ನೆಲೆಯಲ್ಲಿ ಪ್ರವಾಸದ ಹಳೆಯ ನೆನಪುಗಳು ಟೊಳ್ಳಾಗಿ ಕಂಡೀತೇ ಎಂದು ಅವರು ತಮ್ಮ ಪ್ರಸ್ತಾವನೆಯಲ್ಲಿ ಆತಂಕ ವ್ಯಕ್ತಪಡಿಸಿದ್ದಾರೆ. ಆದರೆ ಇಲ್ಲಿನ ಉದ್ದೇಶ ಭಾರತದ ವಿವಿಧ ಕಲಾತಂಡಗಳಿಗೆ ವಿಶೇಷವಾಗಿ ಕಣ್ಣೂರಿನ ತಾಕಪ್ಪನವರ ಬಳಗದ ಡೊಳ್ಳಿನ ಕುಣಿತಕ್ಕೆ ರಶಿಯಾದ ಜನ ಪ್ರತಿಕ್ರಿಯಿಸಿದ ಬಗೆಯನ್ನು ನಿರೂಪಿಸುವುದೇ ಹೊರತು ಆ ದೇಶದ ರಾಜಕೀಯ ಸ್ಥಿತ್ಯಂತರ ತಂದ ಸಾಮಾಜಿಕ ಪರಿವರ್ತನೆಯ ವಿವರಣೆ ಅಲ್ಲ. ಹೀಗಾಗಿ ಲೇಖಕರ ಆತಂಕಕ್ಕೆ ಅವಕಾಶ ಇಲ್ಲದಾಗಿದೆ.

ರಶಿಯಾಕ್ಕೆ ಹೊರಡುವ ಮೊದಲು ದೆಹಲಿಯಲ್ಲಿ ಆ ಬಳಿಕ ಮಾಸ್ಕೋದಲ್ಲಿ ವಿವಿಧ ತಂಡಗಳು ನಡೆಸಿದ ಕಠಿಣ ರಂಗ ತಾಲೀಮು, ಹೊಸವಾತಾವರಣದಲ್ಲಿ ಕಲಾವಿದರು ಎದುರಿಸಿದ ನಾನಾ ಬಗೆಯ ಕ್ಲೇಷಗಳು, ಅವುಗಳ ನಿವಾರಣೆಯಲ್ಲಿ ರಶಿಯಾದ ಅಧಿಕಾರಿವರ್ಗ ತೋರಿದ ಸೌಜನ್ಯ- ಎಲ್ಲವೂ ಅತ್ಯಂತ ರೋಚಕ ಧಾಟಿಯಲ್ಲಿ ಈ ಕೃತಿಯಲ್ಲಿ ಅವತರಿಸಿವೆ.

ಸೀಮಿತ ಪ್ರದೇಶದೊಳಗೆ ತಮ್ಮ ಜನರ ನಡುವೆ ಮಾತ್ರ ಸಂವಹನಿಸಿಕೊಳ್ಳುತ್ತಿದ್ದ ಜನಪದ ಕಲಾತಂಡಗಳು ವಿದೇಶದ ಅಪರಿಚಿತ ನೆಲ ಹಾಗೂ ಜನರ ನಡುವೆ ತಮ್ಮ ಕಲಾಸಿದ್ಧಿಯನ್ನು ಟಂಕಿಸುವ ಸಂದರ್ಭದಲ್ಲಿ ಎದುರಾಗುವ ನಾನಾ ಅಡಚಣೆಗಳು, ಅವುಗಳನ್ನು ನೀಗಿಸಿಕೊಂಡ ಬಗೆ ಪುಸ್ತಕದಲ್ಲಿ ತುಂಬ ಆಪ್ತವಾಗಿ ಬಂದಿವೆ. ಡೊಳ್ಳಿನ ಕಲಾವಿದರು ನಿಂತಲ್ಲೇ ರಂಗಸ್ಥಳ ನಿರ್ಮಾಣ ಮಾಡಿಕೊಂಡು, ರಶಿಯಾದ ಬೀದಿಬೀದಿಗಳಲ್ಲಿನ ಜನಸಾಮಾನ್ಯರನ್ನು ಆಕರ್ಷಿಸಿದ ಬಗೆ, ಪ್ರೇಕ್ಷಕರಿಗೂ ನಟವರ್ಗದವರಿಗೂ ಏರ್ಪಟ್ಟ ಸಾಮೀಪ್ಯ (ಜನಪದ ರಂಗಭೂಮಿಯ ವೈಶಿಷ್ಟ್ಯವೇ ಇದು) ಕುಶಿಯವರ ಬರವಣಿಗೆಯಲ್ಲಿ ಓದುವುದಕ್ಕೆ ಸೊಗಸಾಗುತ್ತದೆ. ವಿದೇಶದ ಜನ

ತಮ್ಮದಲ್ಲದ ಇನ್ನೊಂದು ದೇಶದ ಕಲೆಯನ್ನು ಸ್ವೀಕರಿಸುವ, ಅರ್ಥೈಸುವ ಬಗೆಯನ್ನು ಕಂಡಾಗ ನಮ್ಮ ದೇಶದ ಜನರಲ್ಲಿ ಈ ಬಗೆಯ ಹೃದಯವಂತಿಕೆ ಇಲ್ಲ ಎನ್ನುವ ವಾಸ್ತವಿಕತೆಯನ್ನು ನಮ್ಮ ಮುಂದಿಡುತ್ತಾರೆ. ನಾವು - ಭಾರತೀಯರು ನಮ್ಮ ಮನಸ್ಸಿನೊಳಗೆ ಕೆಲವೊಂದು ಸಿದ್ಧ ಚೌಕಟ್ಟುಗಳನ್ನು ನಿರ್ಮಿಸಿಕೊಂಡು ನಮ್ಮವುಗಳ ಶ್ರೇಷ್ಠತ್ವವನ್ನು ಸಾರುತ್ತಾ ವೈಭವೀಕರಿಸುವುದರಲ್ಲೇ ತಲ್ಲೀನರಾಗುತ್ತೇವೆ. ಪ್ರವಾಸಕಥನದಲ್ಲಿ ಈ ಬಗೆಯ 'ಜಗಿತ' ತುಂಬ ಉಪಯುಕ್ತ ಹಾಗೂ ಇತ್ಯಾತ್ಮಕ ಅಂಶ.

ಈ ಪ್ರವಾಸಕಥನ ಪ್ರವಾಸಿಯೊಬ್ಬನ ದಿನಚರಿಯಾಗದೆ ರಶಿಯನ್ ಜನಸಮುದಾಯದ ಮಾನವೀಯ ಅಂತಃಕರಣಪೂರಿತ ಮನೋಧರ್ಮದ ಚಿತ್ರಣವಾಗಿರುವುದು ಗಮನಾರ್ಹ ಅಂಶ. ತಮ್ಮ ದೇಶದ ಕವಿ, ಕಲಾವಿದರ ಬಗೆಗಿನ ಪರಮೋಚ್ಚ ಗೌರವ, ಬಹುಭಾಷಾ ಪುಸ್ತಕಗಳ ಪ್ರಕಟಣೆ, ಸಾಮ್ಯವಾದೀ ಆಡಳಿತದ ಬಿಗಿಮುಷ್ಟಿಯಲ್ಲಿ ನವೆಯುತ್ತಿರುವ ಅಸಂತುಷ್ಟ ಸಮಾಜಗರ್ಭದ ತಳಮಳ, ಆರ್ಥಿಕ ವೈಫಲ್ಯದ ಫಲವಾಗಿ ರಶಿಯಾದಲ್ಲಿ ಏರ್ಪಟ್ಟಿರುವ ಅನ್ನಾಭಾವ- ಹೀಗೆ ಕಲಾಪ್ರಸಾರ ಕಥನವನ್ನು ಓದುತ್ತಾ ಹೋದಂತೆ ಆಧುನಿಕ ರಶಿಯಾದ ಬದುಕಿನ ಒಂದು ಅಡ್ಡಚ್ಛೇದದ ಚಿತ್ರವೂ ಸಿಗುತ್ತದೆ. ಮಾಸ್ಕೋದಿಂದ ತೊಡಗಿ ಉತ್ತರ ಧ್ರುವದ ಎಟುಕಿನ ತನಕ ಡೊಳ್ಳಿನ ದಿಗ್ವಿಜಯ ನಡೆಯಿಸಿ ಬಂದ ಕಲಾವಿದರ ಆತ್ಮೀಯ ಒಡನಾಟದಲ್ಲಿ ಲೇಖಕರು ಅನುಭವಿಸಿದ ಸಿಹಿ-ಕಹಿಗಳ ರೋಚಕ ಚಿತ್ರಣ ಇಲ್ಲಿದೆ.

ನವುರು ಹಾಸ್ಯಮಿಶ್ರಿತ ಲವಲವಿಕೆಯ ಬರವಣಿಗೆ ಕು.ಶಿಯವರ ಬರವಣಿಗೆಯ ಗುಣ. ಪಾದರಕ್ಷೆ ಇಲ್ಲದೆ ಕುಣಿದಾಗ ಒದಗಿ ಬಂದ ತೊಂದರೆ, ಧನೂಲ್ ಹುಡುಗರ ಹುಡುಗುತನ, ಧನುಕ ಮತ್ತು ದೇವರನ್ನು ಮಾದಕ ಪದಾರ್ಥವೆಂದು ಬಹಿಷ್ಕರಿಸಿದ ಜನ ಆ ಸ್ಥಾನವನ್ನು ತುಂಬಲು ಇನ್ನೊಂದು ಮಾದಕ ಪದಾರ್ಥ ಕಲೆ, ಸಂಗೀತ, ನಾಟ್ಯ, ಸರ್ಕಸ್‌ಗಳನ್ನು ಶೋಧಿಸಿದ್ದು, ತಂಡದ ನಾಯಕರನ್ನು ಬದಿಗೆ ತಳ್ಳಿ ಮೆರೆಯಲು ಯತ್ನಿಸಿದ ತಿವಾರಿಗೆ 'ಸ್ವಸ್ಥಾನ ಪರಿಜ್ಞಾನ' ಮೂಡಿಸಿದ ಸನ್ನಿವೇಶ- ಒಂದೊಂದೂ ಪ್ರವಾಸ ಕಥನದ ಅಪ್ತನೆಲೆಗಳು. ಪುಸ್ತಕ ಓದಿ ಮುಗಿಸಿದಾಗ ನಮ್ಮ ಮನಸ್ಸನ್ನು ವಿಶೇಷವಾಗಿ ಕಾಡುವ ಎರಡು ಸಂಗತಿಗಳೆಂದರೆ ಕಣ್ಣೂರಿನ ತಾಕಪ್ಪನ ಡೊಳ್ಳಿನ ಬಳಗದ ಕಲಾಪರಿಣತಿ ಹಾಗೂ ಕರ್ನಾಟಕದ ಹಳ್ಳಿಯೊಂದರ ಡೊಳ್ಳಿನ ಕಲಾವಿದರು ವಿಶ್ವವಿಜಯಿಗಳಾದ ಬಗ್ಗೆ ಒಂದು ಆನಂದ. ಸಮುದಾಯವೊಂದರ ವಿದೇಶ ಯಾತ್ರೆಯ ಅನುಭವ ಒಟ್ಟಿನ ಒಳದನಿಯಾಗಿ, ನೆನಪಿನ ಆಕೃತಿಯಾಗಿ ಮೂಡಿಬಂದಿರುವುದು ಪ್ರವಾಸಕಥನ ಇತಿಹಾಸದಲ್ಲಿ ಹೊಸತೊಂದು ಶೋಧ.

**ಮಧ್ಯಪ್ರದೇಶದ ಮಡಿಲಲ್ಲಿ : -** *ಡಾ. ಕೃಷ್ಣಾನಂದ ಕಾಮತ್*

ಕನ್ನಡದ ಪ್ರವಾಸಸಾಹಿತ್ಯ ರಚಕರಲ್ಲಿ ಡಾ. ಕೃಷ್ಣಾನಂದ ಕಾಮತರ ಹೆಸರು ಸುಪರಿಚಿತವಾದುದು. ಕೆಲವರು ಊರು ನೋಡಲು ಪ್ರವಾಸಹೋದರೆ, ಇನ್ನು ಕೆಲವರು ಊರವರನ್ನು ನೋಡಲು ಹೋಗುವುದುಂಟು. ಶ್ರೀ ಕಾಮತರು ಎರಡನೆ ವರ್ಗಕ್ಕೆ ಸೇರುತ್ತಾರೆ. ಅವರ ಪ್ರವಾಸ ಕಥನಗಳನ್ನು ಗಮನಿಸಿದರೆ ಅವರದು ಹೊಡೆಬಡಿಯ

'ಬಿರುಗಾಳಿ' ಪ್ರವಾಸವಲ್ಲ. ಒಂದು ಊರಲ್ಲಿ ಕೆಲವು ದಿನ ತಂಗಿ ಜನಬದುಕಿನೊಳಗೆ ಇಳಿದು ಅವರ ಬದುಕಿನ ಒಳನೋಟಗಳ ಚಿತ್ರ ಕಟ್ಟಿಕೊಡುವಂತಹುದು. ಹಾಗೆ ನೋಡುವಾಗ ಹೇಳುವಾಗ ಬದುಕಿಗೂ ನಿಸರ್ಗಕ್ಕೂ ಇರುವ ನಂಟು, ಆಧುನಿಕತೆಯ ಫಲವಾಗಿ ಅಲ್ಲಿ ಏರ್ಪಡುವ ಬಿರುಕು, ಮುಗ್ಧ ಆದಿವಾಸಿಗಳನ್ನು ಮೇಲೆ ತರುವ ನೆಪದಲ್ಲಿ ಅವರ ಸಾಂಸ್ಕೃತಿಕ ಹಿನ್ನೆಲೆಯನ್ನು ಅರ್ಥಮಾಡದೆ ಬರಿಯ ಆರ್ಥಿಕ ಯೋಜನೆಗಳನ್ನು ಜಾರಿಗೆ ತಂದು ಅವರ ನೆಮ್ಮದಿಯ ಬದುಕನ್ನು ಕೆಡಿಸುವ ಹುನ್ನಾರ ಎಲ್ಲವೂ ಆತ್ಮೀಯ ಧಾಟಿಯಲ್ಲಿ ಭಾವಗೀತದಂತೆ ಮಂಡಿತವಾಗುತ್ತದೆ. ಕೆಲವೆಡೆ ವ್ಯಂಗ್ಯಮಿಶ್ರಿತ ನವುರುಹಾಸ್ಯದ ಧಾಟಿ ಓದುಗನಿಗೆ ಕಚಗುಳಿ ಇಡುತ್ತದೆ. ಮಾಹಿತಿಗಳು ನಿರೂಪಣೆಯಲ್ಲಿ ನಡುಗುಡ್ಡೆಗಳಂತೆ ಉಳಿಯದೆ ಎಲ್ಲ ಅನುಭವವಾಗಿ ಸಾಧಾರಣೀಕರಣಗೊಂಡು ನಮ್ಮ ಸಂವೇದನೆಯನ್ನು ತಲುಪುತ್ತವೆ.

ಈ ಗ್ರಂಥದ ವಸ್ತು ವಿವರ, ಉದ್ದೇಶಗಳನ್ನು ಲೇಖಕರು ಹೀಗೆ ಹೇಳಿಕೊಂಡಿದ್ದಾರೆ: ''ಮಧ್ಯಪ್ರದೇಶ ಒಂದು ಮಾಯಾಲೋಕವಿದ್ದಂತೆ. ಅಲ್ಲಿಯ ವಿಂಧ್ಯಾ, ಸೌತಪುಡಾ ಪರ್ವತಾವಳಿಗಳು, ನರ್ಮದಾ, ತಾಪಿ ನದಿಗಳು, ಗುಡ್ಡಬೆಟ್ಟಗಳು, ಗಿರಿಕಂದರಗಳು, ಕಾಡುಮೇಡುಗಳು, ಗೊಂಡ-ಕೊರ್ಕುಗಳಂತಹ ಆದಿವಾಸಿಗಳು, ಅವರ ನೃತ್ಯಸಂಗೀತ, ಹಬ್ಬ-ಹುಣ್ಣಿಮೆಗಳನ್ನು ನೆನಸಿಕೊಂಡಾಗೊಮ್ಮೆ, ಅಲ್ಲಿಯ ಅನುಭವಗಳು ಸುಂದರಸ್ವಪ್ನದಂತೆ ಭಾಸವಾಗುತ್ತದೆ. ಅಶೋಕ, ವಿಕ್ರಮಾದಿತ್ಯ, ಭೋಜರಾಜ, ಚಂದೇಲ ಅರಸರು ಆ ರಾಜ್ಯವನ್ನು ವೈಭವಶಿಖರಕ್ಕೇರಿಸಿದ ಶಿಖಾಮಣಿಗಳು. ವರಕವಿ ಕಾಳಿದಾಸ ಆ ಭೂಮಿಯನ್ನು ಅಮರವಾಗಿಸಿದ. ಸಂಗೀತ ಸಾಮ್ರಾಟ್ ತಾನ್‌ಸೇನ್ ಗ್ವಾಲೋಟದಲ್ಲಿ ಶಾಶ್ವತವಾದ ಕುರುಹುಬಿಟ್ಟು ಹೋಗಿದ್ದಾನೆ. ಮಾಂಡುವಿನ ಭಾಜ ಬಹಾದುರ ಮತ್ತು ರಾಣಿ ರೂಪಮತಿಯರ ಆದರ್ಶ ಪ್ರೇಮ ಅಜರಾಮರವಾಗಿದೆ. ಖಜುರಾಹೊ ತನ್ನ ಅಪೂರ್ವ ಶಿಲ್ಪಗಳಿಂದ ವಿಶ್ವಖ್ಯಾತಿ ಪಡೆದಿದೆ. ಇವೆಲ್ಲವುಗಳಿಗಿಂತ ಆಕರ್ಷಕವಾಗಿರುವ ಆದರೆ ಭರದಿಂದ ಕಣ್ಮರೆಯಾಗುತ್ತಿರುವ ಮೂಲಬುಡಕಟ್ಟಿನವರ ಅಪರೂಪದ ಸರಳ ಸಭ್ಯಜೀವನ ಇಂದಿಗೂ ಹೊರಜಗತ್ತಿಗೆ ಅಜ್ಞಾತವಾಗಿಯೇ ಉಳಿದಿದೆ. ಅಲ್ಲಿ ಪಡೆದ ವಿಸ್ತಾರವಾದ ಅನುಭವಗಳು ಈ ಒಂದು ಗ್ರಂಥದಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗದಿದ್ದರೂ ಆ ರಾಜ್ಯದ ಇಣುಕುನೋಟ ಕೊಡಲು ಸರ್ವಪ್ರಯತ್ನ ಮಾಡಿದ್ದೇನೆ.'

'ಮಧ್ಯಪ್ರದೇಶದ ಮಡಿಲಲ್ಲಿ' ಗ್ರಂಥದ ಮುಖ್ಯ ಆಶಯ ಮಧ್ಯಪ್ರದೇಶದ ಗೊಂಡ, ಕೊರ್ಕು, ಭಿಲ್ಲ ಮುಂತಾದ ಆದಿವಾಸಿಗಳ ಬದುಕನ್ನು ಅರಿತುಕೊಳ್ಳುವುದು. ಇದು ಒಬ್ಬ ಸಮಾಜ ವಿಜ್ಞಾನಿಯ ಗಂಭೀರ ಅಧ್ಯಯನದ ರೂಪದಲ್ಲಿ ಬಾರದೆ, ಯಾವುದೇ ಪೂರ್ವನಿರ್ಧಾರಿತ ವೈಜ್ಞಾನಿಕ ಚೌಕಟ್ಟಿನ ಹಿನ್ನೆಲೆಯಲ್ಲಿ ಸಾಗದೆ ಆದಿವಾಸಿಗಳ ಬಗೆಗಿನ ಮಾನವೀಯ ಅಂತಃಕರಣಪೂರಿತ ದೃಷ್ಟಿಕೋನದಿಂದ ವಿವರಿಸುವ ಬಗೆ ಕಾಣಿಸುತ್ತದೆ. ಬರಹಗಾರನ ವ್ಯಕ್ತಿತ್ವದ ಗುರುತು ಪಡೆದುಕೊಂಡು ಸರಸ ನಿರೂಪಣ ತಂತ್ರದ ಫಲವಾಗಿ ಮಾನವಕುಲ ವಿವರಣ ಶಾಸ್ತ್ರವಾಗಬಹುದಾಗಿದ್ದ ಕೃತಿ ಪ್ರವಾಸಕಥನವಾಗಿದೆ. ಎಷ್ಟೋಕಡೆ

ನಿರೂಪಣೆ ಗದ್ಯರೂಪದ ಭಾವಗೀತಗಳಾಗುತ್ತವೆ. ನೋಡಿ ಭಿಂದವಾಡದ ಗೊಂಡರಹಳ್ಳಿ ಜಾಮುನ ಜರಿಯ ಒಂದು ವಿವರಣೆ:

''ಹೊಲಗಳನ್ನು ದಾಟಿ, ಅಂಕುಡೊಂಕಾದ ರಸ್ತೆ ತುಳಿದ ನಂತರ, ದೂರದಲ್ಲಿ ಸಾಲಾಗಿ ನಿಂತ ಮನೆಗಳ ಹಳ್ಳಿಯನ್ನು ಪ್ರವೇಶಿಸುತ್ತಿದ್ದಂತೆ, ಒಂದೆಡೆ ಮಾಟ, ಮಂತ್ರವಿದ್ಯೆ ಮಾಡಿರುವ ಕುರುಹುಗಳು ಗೋಚರಿಸುವವು. ಎರಡು ಸಾಲುಗಳಲ್ಲಿ, ಸುಮಾರು ಒಂದಂಗುಲ ವ್ಯಾಸವುಳ್ಳ ಆರುವರ್ತುಲಗಳನ್ನು ಬೂದಿಯಿಂದ ನಿರ್ಮಿಸಿ, ಮಧ್ಯದಲ್ಲಿ ಸೆಗಣಿ ಉಂಡೆಯಲ್ಲಿ ಒಂದೊಂದು ಕುಂಬ ಹೂಗಳನ್ನು ನೆಟ್ಟಿದ್ದರು. ಸುತ್ತಲೂ ಅಕ್ಕಿಕಾಳು, ಅರಿಶಿಣ, ಕುಂಕುಮಗಳನ್ನು ಹರವಲು ಮರೆತಿರಲಿಲ್ಲ. ಅನತಿ ದೂರದಲ್ಲಿ ಯಮಧರ್ಮರಾಯನಿಗೆ ಆಹುತಿಯಾಗದ ಎಮ್ಮೆಯೊಂದು ನಾಯಿಗಳಿಗೆ ಮೃಷ್ಟಾನ್ನ ಭೋಜನವಾಗಿ ಬಿದ್ದುಕೊಂಡಿತ್ತು. ಅದು ಮೋಡಿಯಿಂದ ಸತ್ತದ್ದೇ ಅಥವಾ ಅದು ಸತ್ತದ್ದಕ್ಕೇ ಮೋಡಿಯೇ, ಎಂಬುದು ಅರ್ಥವಾಗಲಿಲ್ಲ. ಈ ಹಳ್ಳಿ, ದೊಡ್ಡ ಬೆಟ್ಟದ ಇಳಿಜಾರಿನಲ್ಲಿ ಇದ್ದುದ್ದರಿಂದ ಇಲ್ಲಿ ಕರಿಮಣ್ಣಿನ ಬದಲಾಗಿ ಗೋಜ್ಜಿನ ಕೆಮ್ಮಣ್ಣು ಇತ್ತು. ಜೋಡಿ ಮನೆಯ ಎದುರಿನಲ್ಲಿದ್ದ ಹೊಲದಲ್ಲಿ ಜೋಡಿ ಹುಡಿಗೆಯರು ಐದಾರು ಆಡುಗಳನ್ನು ಮೇಯಿಸುವದರಲ್ಲಿ ಮೈ ಮರೆತಿದ್ದರು. ದೂರದಲ್ಲಿ ಗುಡ್ಡಗಳ ಸಾಲು, ಅಲ್ಲೊಂದು, ಇಲ್ಲೊಂದು ಎತ್ತರವಾಗಿ ಬೆಳೆದ ಮರಗಳು. ಅವುಗಳ ಹಿನ್ನೆಲೆಯಲ್ಲಿ ಈ ಮಣ್ಣಿನ ಮಕ್ಕಳು ಪ್ರಕೃತಿಯ ಹಾಸುಹೊಕ್ಕಾಗಿದ್ದಂತೆ ಕಂಡದ್ದರಿಂದ ಛಾಯಾಚಿತ್ರಕ್ಕೆ ಸಿದ್ಧತೆ ಮಾಡಿಕೊಳ್ಳುವದರಲ್ಲಿ ಅವರು ಮರಿ ಆಡುಗಳನ್ನು ಎತ್ತಿಕೊಂಡು ಮುಂದೆ ಮುಂದೆ ಹೋಗಹತ್ತಿದರು. ಆಡುಗಳು ಓಡುವಾಗ, ಕೊರಳಿನಲ್ಲಿ ತೂಗುಬಿಟ್ಟ ಚಪ್ಪಟೆ ಕೊರಡು ಗಂಟೆಗಳು ಟನಕ್ ಟನಕ್ ಎಂದು ಮಂದನಾದ ಹೊರಡಿಸಿದಾಗ ಆಕರ್ಷಣೆ ಇನ್ನೂ ಹೆಚ್ಚಿತು. ಅಂತೆಯೇ ಈ ಹಳ್ಳಿಯ ಹೆಸರೇನು? ಇನ್ನೂ ಮುಂದೆ ಹಳ್ಳಿಗಳು ಇವೆಯೇ? ಬಾಯಾರಿಕೆ ನೀಗಿಸಲು ಹತ್ತಿರದಲ್ಲಿ ನೀರಿದೆಯೇ? ಮೊದಲಾದ ಪ್ರಶ್ನೆಗಳ ಸುರಿಮಳೆಯೇ ಆದ್ದರಿಂದ ಕಿಶೋರಿಯರು ತಮಗೆ ಅರಿತಷ್ಟು ವಿವರಿಸಿದರು. ಕಣ್ಣು-ಕೈ-ಕ್ಯಾಮರಾಗಳು ಕಾರ್ಯೋನ್ಮುಖಿಯಾಗಿವೆ ಎಂಬ ಅನುಮಾನ ಬಂದಾಗ ಕ್ಷಣದಲ್ಲಿ ನಾಗಾಲೋಟ ಹಾಕಿ ಮಾಯವಾದರು.''

ಆದಿವಾಸಿ ಸಮಾಜದ ಪುನರುತ್ಥಾನದ ಧ್ಯೇಯವನ್ನಿರಿಸಿಕೊಂಡ ನಮ್ಮ ಸರಕಾರಿ ಅಧಿಕಾರಿಗಳು ಅವರನ್ನು ಆಧುನಿಕರನ್ನಾಗಿಸುವುದಕ್ಕೆ ಬೇಕಾದ ಎಲ್ಲ ಯೋಜನೆಗಳನ್ನು ಹಾಕುತ್ತಿದ್ದಾರೆ. ಬರಿಯ ಆರ್ಥಿಕ ಯೋಜನೆಗಳನ್ನು ಹಾಕಿಕೊಂಡು ಅವರನ್ನು ನಾಗರಿಕರನ್ನಾಗಿಸುವುದಕ್ಕೆ ಸಾಧ್ಯವೇ? ಅವರ ದೈನಂದಿನ ಬದುಕಿನ ಲಯವನ್ನು ತಪ್ಪಿಸುವುದರಿಂದ ಅವರನ್ನು ಇನ್ನಷ್ಟು ಗೊಂದಲದಲ್ಲಿ ಬೀಳಿಸಿದಂತಾಗುವುದಿಲ್ಲವೇ? ಈ ಬಗ್ಗೆ ಸಮಾಜವಿಜ್ಞಾನಿಗಳು, ಆರ್ಥಿಕ ತಜ್ಞರು ಮಾತ್ರ ಸೇರಿ ಯೋಜನೆ ರೂಪಿಸುವ ಬದಲು ಆ ಜನರ ನಿಲುಮೆಯನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕು. ಇಂತಹ ಒಳ್ಳೆಯ ಪ್ರಯತ್ನವನ್ನು ಶ್ರೀ ಕಾಮತರು ಈ ಪುಸ್ತಕದಲ್ಲಿ ಅಲ್ಲಲ್ಲಿ ಮಾಡಿದ್ದಾರೆ. ಪರಾಸಿಯಾ, ಚಂದಾಮೇಟಾ ಊರುಗಳ ನದೀ ಪರಿಸರದಲ್ಲಿ ಕಲ್ಲಿದ್ದಲ ಶೋಧವಾದ ಬಳಿಕ ಅಲ್ಲಿ

ಎದ್ದ ಕಾರ್ಖಾನೆಯ ಫಲವಾಗಿ ಆದಿವಾಸಿಗಳ ಬದುಕೇ ಕದಡಿತು. ಆ ಊರ ಚಾದಂಗಡಿಯ ಮಾಲಿಕ ಈ ಕೈಗಾರಿಕೀಕರಣಕ್ಕೆ ಪ್ರತಿಕ್ರಿಯಿಸಿದ ಬಗೆ ಹೀಗಿದೆ:

‘‘ಈ ಖಣಿಗಳನ್ನು ಪ್ರಾರಂಭಿಸಬೇಕಾದರೆ ಯಾವ ಸ್ಥಳೀಯ ಮುಖಂಡರ ಅಥವಾ ಆದಿವಾಸಿ ಮುಖ್ಯಸ್ಥರ ಅಭಿಪ್ರಾಯ ವಿಚಾರಿಸಿಕೊಳ್ಳಲಿಲ್ಲ. ಬಂಗಾಲ - ಬಿಹಾರಗಳಿಂದ ತಜ್ಞರನ್ನು ಆಮಂತ್ರಿಸಿದರು. ಹಣದ ಹೊಳೆ ಹರಿಯಿಸಿ, ಯಂತ್ರೋಪಕರಣಗಳನ್ನು ಹೊರಗಿನಿಂದಲೇ ತರಿಸಿದರು. ಬೇಟೆಯಾಡಿ, ಕೃಷಿಮಾಡಿ ಜೀವಿಸುತ್ತಿದ್ದ ಆದಿವಾಸಿಗಳಿಗೆ ಖಣಿಗಳಲ್ಲಿ ಕೆಲಸವೇ ಬೇಕಿರಲಿಲ್ಲ. ಶತಕಗಳಿಂದ ಒಂದೇ ಬಗೆಯ ಜೀವನಕ್ಕೆ ಹೊಂದಿಕೊಂಡ ಜನ, ಈ ಕೂಲಿ-ಹಮಾಲಿ ಕೆಲಸಕ್ಕೆ ಸೇರಲು ಒಪ್ಪಲಿಲ್ಲ. ಹೀಗಾಗಿ ಸುತ್ತಮುತ್ತಲ ಜಿಲ್ಲೆ-ರಾಜ್ಯಗಳಿಂದ ಖಣಿ ಕಾರ್ಮಿಕರನ್ನು ತಂದು ಆದಿವಾಸಿಗಳ ಪರಿಸರದಲ್ಲಿ ನೆಲೆಸುವಂತೆ ನೋಡಿಕೊಂಡರು. ಇಲ್ಲಿಯ ಜೀವನ ಕ್ರಮದಲ್ಲಿ ಅಲ್ಲೋಲ ಕಲ್ಲೋಲವುಂಟಾಯಿತು. ಸ್ಥಾನೀಯ ಆದಿವಾಸಿಗಳು ಮಾಡಬಹುದಾದ ಸರಕುಗಳಿಗೆ ಬೇಡಿಕೆ ಹೆಚ್ಚಾದರೂ ಅವುಗಳ ಬೆಲೆಯಲ್ಲಿ ಹೆಚ್ಚಳ ಆಗಲೇ ಇಲ್ಲ. ಈ ಕಡು ಬಡವರು, ನಿತ್ಯ ಬಳಸುವ ಉಪ್ಪು, ಎಣ್ಣೆ, ಕಾಳು ಕಡ್ಡಿಗಳ ಬೆಲೆ ಗಗನಕ್ಕೆ ಏರಿದ್ದರಿಂದ ಬಾಳುವೆ ನಡೆಸುವದೇ ಕಷ್ಟಕ್ಕಿಟ್ಟುಕೊಂಡಿತು. ಸಾಲದ್ದಕ್ಕೆ ಶತಕಗಳಿಂದ ಅವರು ಸಾಗುವಳಿ ಮಾಡುತ್ತಿದ್ದ ಭೂಮಿ, ಬೇಟೆ ಇತರ ಸಾಮಗ್ರಿ ಪಡೆಯುತ್ತಿದ್ದ ಅರಣ್ಯ ಪ್ರದೇಶಗಳು ಖಣಿ ಕಂಪನಿಗೆ ಸೇರಿದ್ದರಿಂದ ನಿರುದ್ಯೋಗಿಯಾದರು. ಹೊಟ್ಟೆಪಾಡಿಗೆ ಹಲವಾರು ಆದಿವಾಸಿಗಳು, ಖಣಿಗಳಲ್ಲಿ ಚಿಕ್ಕಪುಟ್ಟ ಕೆಲಸಗಳಿಗೆ ಸೇರಿಕೊಂಡು, ಗಿರಿ ಕಾಡುಗಳಿಂದ ಬಂದು ಕಾರ್ಮಿಕರು ‘ಗೂಡು’ ಗಳಲ್ಲಿ ಸೇರಿಕೊಳ್ಳುವಂತಾಯಿತು. ತಮ್ಮ ಹುಟ್ಟು ಸಂಸ್ಕೃತಿ ಮರೆತು ಕಾರ್ಮಿಕರಾಗಿ ಪರಿವರ್ತನೆ ಹೊಂದುವದು ಸುಲಭವಾಗಿರಲಿಲ್ಲ. ಜಾತಿಪದ್ಧತಿ ಅರಿಯದವರನ್ನು ಇತರ ಕಾರ್ಮಿಕರು ಅಸ್ಪೃಶ್ಯರಂತೆ ನಡೆಸಿಕೊಳ್ಳಲಾರಂಭಿಸಿದರು. ಅಲ್ಲದೆ ಬೇರಾರೂ ಮಾಡದ ಕೆಲಸವನ್ನು ಒಪ್ಪಿಕೊಂಡದ್ದರಿಂದ ತಮ್ಮ ಕುಲದವರಿಂದಲೇ ತಿರಸ್ಕಾರಕ್ಕೆ ಒಳಪಡಬೇಕಾಯಿತು. ಇಬ್ಬಗೆಯ ಜಾತೀಯತೆ ಇದು! ಇನ್ನಿತರರ ಸರಿಸಮಾನರೆನಿಸಿಕೊಳ್ಳಲು ಅವರ ಆಹಾರ, ರೀತಿ-ನೀತಿ, ಭಾಷೆ, ಬಟ್ಟೆ- ಬರೆಗಳ ಅನುಕರಣೆ. ಜೊತೆಗೆ ಕಳ್ಳಸೆರೆ, ಜೂಜಾಟಗಳೂ ರೂಢಿಯಾದವು. ಹಣಕ್ಕಾಗಿ ದೇಹ ವಿಕ್ರಯವೆಂಬ ವಿಚಾರವನ್ನೇ ಅರಿಯದ ಮುಗ್ಧರು, ತಮ್ಮ ಹಳ್ಳಿಗಳಿಂದ ದೂರವಿರುವವರು, ವೇಶ್ಯಾವಾಟಿಕೆಗಳಿಗೆ ಹೋಗಲಾರಂಭಿಸಿದರು. ಅವರ ಗ್ರಾಮಜೀವನ ಇದರಿಂದ ಬುಡಮೇಲಾಯಿತು. ಗಳಿಕೆ ಸಾಕಾಗದಿದ್ದ ಕಾರ್ಮಿಕ, ಹೆಂಡತಿಯನ್ನು ಅಧಿಕಾರಿಗಳ ಮನೆಗೆಲಸಕ್ಕೂ ಕಳಿಸಲಾರಂಭಿಸಿದ. ಅಲ್ಲಿ ಒಡತಿಗಿಂತ ಒಡೆಯನ ಶೋಷಣೆ ಹೆಚ್ಚಾಯ್ತು. ಇಂಥ ಕಾಮುಕ ಶೋಷಣೆಗೆ ಒಳಗಾದ ಮುಗ್ಧೆಯರಿಗೆ ಅವರ ಜನಾಂಗದವರೂ ತಿರಸ್ಕರಿಸಿಬಿಡುವದರಿಂದ, ವೇಶ್ಯಾವಾಟಿಕೆಗಳು ಒಳ್ಳೆಯ ಲಾಭಮಾಡಿಕೊಳ್ಳುತ್ತಿವೆ.’’

ಚಾಂದಾಮೇಲಾದ ಆದಿವಾಸಿಗಳ ಜೀವನ ವಿಧಾನ ಕಲ್ಲಿದ್ದಲಗಣಿಯಿಂದಾಗಿ ಕುರೂಪಗೊಳ್ಳುತ್ತಿರುವುದಕ್ಕೆ ಹಳಹಳಿಸುವ ಲೇಖಕರು ಉತ್ತರ ಅಮೆರಿಕೆಯ

ರೆಡ್‌ಇಂಡಿಯನ್‌ರು ಅಮೆರಿಕೆಯ ನವನಾಗರಿಕತೆಯ ಆಗಮನಕ್ಕೆ ಪ್ರತಿಕ್ರಿಯಿಸಿದ ಬಗೆಯನ್ನು ವಿವರಿಸುತ್ತಾರೆ. ರೆಡ್‌ಇಂಡಿಯನ್‌ರ ಭೂಮಿಯನ್ನು ವಲಸೆ ಬಂದ ಐರೋಪ್ಯಸಮುದಾಯ ಕಸಿದುಕೊಂಡಾಗ ಸರಕಾರ ಅವರ ರಕ್ಷಣೆಗೆ ಬಂದು ಪರಿಹಾರ ಧನ ನೀಡಿತು. ಚಾಂದಾಮೇಟಾದ ಪರಾಸಿಯದಲ್ಲಿ ಸಿಕ್ಕ ಕಲ್ಲಿದ್ದಲ ಪ್ರಮಾಣಕ್ಕೆ ಆದಿವಾಸಿಗಳಿಗೆ ಪರಿಹಾರಧನ ಕೊಡಮಾಡಿದ್ದರೆ ಪ್ರತಿಯೊಬ್ಬರೂ ಲಕ್ಷಾಧೀಶನಾಗುವುದರಲ್ಲಿ ಸಂದೇಹವಿಲ್ಲ ಎನ್ನುತ್ತಾರೆ. ಮಧ್ಯಪ್ರದೇಶದ ಇನ್ನೊಂದು ಬುಡಕಟ್ಟು ಜನಾಂಗ ಮಾವಾಶಿಯಾ ಎಲ್ಲರ 'ಕಾಲ್ಚೆಂಡು ತುಳಿತ' ಕ್ಕೊಳಗಾಗುತ್ತಿರುವ ಬಗೆಯನ್ನು ವಿವರಿಸಿರುವುದು ಹೀಗೆ:

''ಮಾವಾಶಿಯರು ತಮ್ಮಷ್ಟಕ್ಕೆ ತಾವು ಬದುಕಲು ಯತ್ನಿಸಿದರೂ ಸುಶಿಕ್ಷಿತರು, ಸುಧಾರಕರು, ಸರಕಾರಿ ಅಧಿಕಾರಿಗಳು ಅವರನ್ನು ಸದಾಕಾಲ ಕಾಡುತ್ತಲೇ ಇರುತ್ತಾರೆ. ಮಕ್ಕಳಿಗೆ ಅಕ್ಷರಾಭ್ಯಾಸ ಮಾಡಿಸಬೇಕೆಂದು ಶಿಕ್ಷಣಾಧಿಕಾರಿಗಳು, ಕಾಡಿಗೆ ಹೋಗಲೇಕೂಡದೆಂದು ಅರಣ್ಯಾಧಿಕಾರಿಗಳು, ಅವರು ಬಳಸುವ ಭೂಮಿಗೆ ತೆರಿಗೆ ಕೊಡಬೇಕು ಎಂದು ಕಂದಾಯ ಅಧಿಕಾರಿಗಳು, ಬಹುಪತ್ನಿತ್ವ ಕಾನೂನುಬಾಹಿರವೆಂದು ಪೊಲೀಸ ಅಧಿಕಾರಿಗಳು, ಅವರನ್ನು ಹಿಂಸಿಸುತ್ತಲೇ ಇರುತ್ತಾರೆ. ಭೂಮಿಗಾಗಿ ಹಪಹಪಿಸುವವರು ಅವರ ಹೊಲಗಳನ್ನು ಕಸಿದುಕೊಂಡರೆ, ಹೆಣ್ಣಿನ ವ್ಯಾಮೋಹವಿದ್ದವರು, ಅವರ ಅಮಾಯಕ ಹೆಂಗಳೆಯರ ಮೇಲೆ ಬಲಾತ್ಕಾರ ಮಾಡುತ್ತಾರೆ. ಕಾಳು-ಕಡ್ಡಿ ಸೆರೆಗಳನ್ನು ಮಾರುವ ವ್ಯಾಪಾರಿಗಳು, ಬಡ್ಡಿಗೆ ಚಕ್ರಬಡ್ಡಿ ಸೇರಿಸಿ, ಬಡಪಾಯಿಗಳು ಜೀವಮಾನವಿಡೀ ಸಾಲದ ಮಡುವಿನಲ್ಲಿ ಕೊಳೆಯುವಂತೆ ಮಾಡುತ್ತಾರೆ. ಸರಕಾರವು ಮೊಸಳೆ ಕಣ್ಣೀರು ಸುರಿಸಿ, ಅವರ ಅಭ್ಯುದಯಕ್ಕಾಗಿ ಕೋಟಿಗಟ್ಲೆ ಹಣವನ್ನು ವ್ಯಯಮಾಡಿದರೂ, ಅದರ ಕಾಲಂಶ ಕೂಡ ಅರ್ಹರಾದ ಆದಿವಾಸಿಗಳಿಗೆ ಎಟುಕದಿರುವದು ತೀರ ಶೋಚನೀಯ. ತಮ್ಮ ಬಗ್ಗೆ ನಿಜವಾದ ಕಳಕಳಿ, ಪ್ರೀತಿ, ಆಸಕ್ತಿ ಇರುವವರು ಯಾರು? ಎಂದು ಅರಿಯಲಾಗದೇ ಅವರು ಕಂಗೆಟ್ಟಿದ್ದಾರೆ. ಇದರ ಲಾಭ ಪಡೆದುಕೊಂಡು ಮತಾಂತರ ಮಾಡುವವರು ಅವರ ರಕ್ಷಕರೆಂದು ಸೋಗು ಹಾಕುತ್ತಿದ್ದಾರೆ.'' (ಪುಟ ೧೨೯)

ನಿಸರ್ಗದ ಮಕ್ಕಳಾದ ಆದಿವಾಸಿಗಳ ಜೀವನದ ಮೌಲ್ಯಗಳು ನಮಗಿಂತ ಭಿನ್ನವಾಗಿ ಕೆಲವು ಸಲ ವಿರೋಧವಾಗಿರುವಾಗ ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗದೆ ನಮ್ಮ ಪ್ರತಿಬಿಂಬವನ್ನು ಅವರಲ್ಲಿ ಮೂಡಿಸಲು ಹೊರಟಿರುವ ಬಗ್ಗೆ ಲೇಖಕರು ಸುಧಾರಕರನ್ನು ಎಚ್ಚರಿಸುತ್ತಾರೆ. ಆದಿವಾಸಿಗಳಲ್ಲಿ ಪ್ರಚಲಿತವಾಗಿರುವ ಹಚ್ಚೆಕಲೆ ಲೇಖಕರು ಹೇಳುವಂತೆ ಅದು ಆಧುನಿಕರು ಆಕರ್ಷಕ ಬಟ್ಟೆ ತೊಡುವಂತೆ ಆದಿವಾಸಿಗಳು ಶರೀರವನ್ನು ಅಲಂಕರಿಸಿಕೊಳ್ಳುವ ಬಗೆ. ಇಷ್ಟೊಂದು ಕಲೆಯಿಂದ ತುಂಬಿ ತುಳುಕುವ ಮೈಯನ್ನು ಬಟ್ಟೆಯಿಂದ ಮುಚ್ಚಿ ಬಿಡುವ ಸುಧಾರಕರ ಮನೋಧರ್ಮವನ್ನು ಪ್ರಶ್ನಿಸುತ್ತಾರೆ. ಅವರ ಮನೆಗಳ ಸ್ವಚ್ಛತೆ, ಗೋಡೆಗಳಲ್ಲಿ ರೇಖಿಸಿದ ಚಿತ್ತಾರ, ಫೋಟೊ ತೆಗೆಯಿಸಿಕೊಳ್ಳಲು ನಿರಾಕರಿಸುವ ಅವರ ಸಂಕೋಚ ಪ್ರವೃತ್ತಿ, ಮಾವಾಶಿಗಳ

ಸ್ವಚ್ಛಂದ-ಸಹಜ ಲೈಂಗಿಕ ಪ್ರವೃತ್ತಿ, ಆದರೆ ವ್ಯಭಿಚಾರವನ್ನು ಗಂಭೀರವಾಗಿ ಪರಿಗಣಿಸುವ ಕಟ್ಟುನಿಟ್ಟುತನ, ಕೊರ್ತು ಆದಿವಾಸಿಗಳ ಬೇಟೆಯ ವೈವಿಧ್ಯ- ಹೀಗೆ ನಾಗರಿಕ ಬದುಕಿಗೆ ಅಪರಿಚಿತವಾದ ಸಂಗತಿಗಳು ಈ ಕೃತಿಯಲ್ಲಿ ಅನಾವರಣಗೊಳ್ಳುತ್ತದೆ. ಕೈಗೆತ್ತಿಕೊಂಡರೆ ಪೂರ್ಣವಾಗಿ ನಮ್ಮನ್ನು ಒಳಗೆಳೆದುಕೊಂಡು ಓದಿಸಿಕೊಂಡು ಹೋಗುವ ಕೃತಿ 'ಮಧ್ಯಪ್ರದೇಶದ ಮಡಿಲಲ್ಲಿ'. ಪ್ರವಾಸಕಥನವೊಂದು ಸೃಜನಕೃತಿಯೂ ಆಗುವುದು ಸಾಧ್ಯ ಎನ್ನುವುದಕ್ಕೆ ನಿದರ್ಶನ ಈ ಕೃತಿ.

೧೯೯೩ ಕನ್ನಡದ ಪ್ರವಾಸಕಥನ ಬೆಳೆಯ ಬೀಳುಗಾಲ. ಊರು ನೋಡುವುದರಲ್ಲಿ ಎಲ್ಲರೂ ಆಸಕ್ತರು, ಆದರೆ ಅನುಭವವನ್ನು ಸಾಹಿತ್ಯದ್ರವ್ಯವಾಗಿ ಮಾರ್ಪಟಿಸುವುದು ನಿಜಕ್ಕೂ ಶ್ರಮದ ಕೆಲಸ. ಈ ಅಗ್ನಿದಿವ್ಯವನ್ನು ಪಾರಾಗಿ ಬರುವವರು ವಿರಳ. ಈ ವರ್ಷದ ನೆನಪಿನಭಿತ್ತಿಯಲ್ಲಿ 'ಡೊಳ್ಳಿನ ದಿಗ್ವಿಜಯ' ಹಾಗೂ 'ಮಧ್ಯಪ್ರದೇಶದ ಮಡಿಲಲ್ಲಿ' ಕೃತಿಗಳು ಉಳಿಯುತ್ತವೆ.



# ಮಕ್ಕಳ ಸಾಹಿತ್ಯ

*ಅಮರೇಶ ನುಗಡೋಣಿ*

ಆಧುನಿಕ ಸಾಹಿತ್ಯದ ಪ್ರಾರಂಭದೊಂದಿಗೆ ಮಕ್ಕಳ ಸಾಹಿತ್ಯವೂ ರಚನೆಯಾಗತೊಡಗಿತು. ಮಧುರ ಚೆನ್ನ, ಗೋವಿಂದ ಪೈ, ರಾಜರತ್ನಂ, ಪಂಜೆ ಮಂಗೇಶರಾಯರು, ದ.ರಾ.ಬೇಂದ್ರೆ, ಕುವೆಂಪು, ಶಿವರಾಮ ಕಾರಂತ, ಸಿದ್ಧಯ್ಯ ಪುರಾಣಿಕ, ನಾ. ಕಸ್ತೂರಿ ಮುಂತಾದ ಲೇಖಕರು ಮಕ್ಕಳಿಗಾಗಿ ಗಂಭೀರವಾಗಿಯೇ ಬರೆದು ಮಕ್ಕಳ ಸಾಹಿತ್ಯ ಪರಂಪರೆಯನ್ನು ಹುಟ್ಟುಹಾಕಿ ಬೆಳೆಸುತ್ತ ಬಂದಿದ್ದಾರೆ. ನವೋದಯ ಕಾಲದ ಇವರೆಲ್ಲ, ಮಕ್ಕಳ ಮನೋಭಾವವನ್ನು ಅವರ ಆಸೆ ಆಕಾಂಕ್ಷೆಗಳನ್ನು ಅರಿತುಕೊಂಡು ಪ್ರೀತಿಯಿಂದ ಕವಿತೆ, ಕಥೆ, ನಾಟಕ ಮುಂತಾದ ಪ್ರಕಾರಗಳಲ್ಲಿ ರಚಿಸಿದರು. ಬಂಗಾಳದಲ್ಲಿ ಒಬ್ಬ ಸಾಹಿತಿ ಹಿರಿಯರಿಗಾಗಿ ಎಷ್ಟೇ ಶ್ರೇಷ್ಠ ಸಾಹಿತ್ಯ ರಚಿಸಿದ್ದರೂ ಆತನಿಗೆ ಹೆಚ್ಚಿನ ಗೌರವ ಸಿಗಬೇಕಾಗಿದ್ದರೆ ಸ್ವಲ್ಪವಾದರೂ ಮಕ್ಕಳಿಗಾಗಿ ಸಾಹಿತ್ಯ ರಚನೆ ಮಾಡಿರಲೇಬೇಕು ಎಂದು ಹೇಳಲಾಗುತ್ತದೆ. ರವೀಂದ್ರನಾಥ ಠಾಕೂರರು ಮಕ್ಕಳಿಗಾಗಿ ಮೌಲಿಕ ಸಾಹಿತ್ಯವನ್ನು ಬರೆದರು. ಸತ್ಯಜಿತ್ ರಾಯ್ ಮಕ್ಕಳಿಗಾಗಿ ಸಾಹಿತ್ಯ, ಚಿತ್ರಕಲೆ, ಸಿನೇಮಾ ಕ್ಷೇತ್ರಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಕೆಲಸ ಮಾಡಿದರು. ನಮ್ಮ ಸಾಹಿತಿಗಳು ಮಕ್ಕಳಿಗಾಗಿ ಸಾಹಿತ್ಯ ರಚಿಸುವ ಕಡೆ ಯಾಕೋ ಒಲವು ತೋರಿಸಲಿಲ್ಲ. ನಮ್ಮ ಆಧುನಿಕ ಲೇಖಕರು ಮಕ್ಕಳಿಗಾಗಿ ಬರೆದ ಕವಿತೆಗಳನ್ನು ಬೋಳವಾರು ಸಂಕಲಿಸಿ ಪ್ರಕಟಿಸಿರುವ 'ತಟ್ಟು ಮಗು ಪುಟ್ಟ ಚಪ್ಪಾಳೆ' ಈ ಕ್ಷೇತ್ರದ ಪ್ರಾತಿನಿಧಿಕ ಕೃತಿ. ಈಚೆಗೆ ಎಚ್. ಎಸ್. ವೆಂಕಟೇಶಮೂರ್ತಿ, ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ವೈದೇಹಿ, ನಾ. ಡಿಸೋಜಾ ಮುಂತಾದವರು ಮಕ್ಕಳಿಗಾಗಿ ಬರೆಯುತ್ತಿದ್ದಾರೆ. ಈ ಪ್ರಾಂತ್ಯದ ಸಂದರ್ಭದಲ್ಲಿ ಶಂ. ಗು. ಬಿರಾದಾರ, 'ಶಿಸು' ಸಂಗಮೇಶ, ಟಿ.ಎಸ್. ನಾಗರಾಜಶೆಟ್ಟಿ, ಗುರುರಾಜ ಬೆಣಕಲ್, ಈಶ್ವರ ಕಮ್ಮಾರ, ಚಂದ್ರೇಗೌಡ ಕುಲಕರ್ಣಿ, ಬಿ. ಬೋರೇಗೌಡ ಮುಂತಾದವರು ಈ ಸಾಹಿತ್ಯವನ್ನು ಬರೆಯುತ್ತಿದ್ದಾರೆ. ಮಕ್ಕಳ ಸಾಹಿತ್ಯ ಕನ್ನಡದಲ್ಲಿ ಅತ್ಯಂತ ನಿರ್ಲಕ್ಷಿತ ಕ್ಷೇತ್ರ. ಮಕ್ಕಳ ಸಾಹಿತಿಗಳಿಗೆ ಸರಿಯಾದ ಪ್ರೋತ್ಸಾಹವಿಲ್ಲ, ಮನ್ನಣೆಯಿಲ್ಲ ಎಂಬ ಅಸಮಾಧಾನ ಕೆಲವರಲ್ಲಿದೆ.

ಕಳೆದ ಎರಡೂವರೆ ದಶಕಗಳಿಂದ ಮಕ್ಕಳಿಗಾಗಿಯೇ ಸಾಕಷ್ಟು ಪುಸ್ತಕಗಳು

ಪ್ರಕಟವಾಗಿವೆ. ಬರಹಗಾರರಿಂದ, ಸಂಘ-ಸಂಸ್ಥೆಗಳಿಂದ ಮಕ್ಕಳ ಪುಸ್ತಕ ಪ್ರಕಟಣೆಗಾಗಿ ಅನೇಕ ಯೋಜನೆಗಳು ರೂಪಗೊಂಡಿವೆ. ಮಕ್ಕಳಲ್ಲಿ ಓದುವ ಒಲವನ್ನು ಹೆಚ್ಚಿಸಿ, ಆ ಮೂಲಕ ಅವರಲ್ಲಿ ಆಸಕ್ತಿ ಅಭಿರುಚಿಯನ್ನು ವಿಸ್ತರಿಸುವ ನಿಟ್ಟಿನಲ್ಲಿ ಶ್ರಮಿಸಲಾಗಿದೆ. ಸಾಹಿತ್ಯ ಪರಿಷತ್ತು, ರಾಷ್ಟ್ರೋತ್ಥಾನ, ಐ.ಬಿ.ಎಚ್., ಸಮಾಜ ಪುಸ್ತಕಾಲಯ, ಕಾವ್ಯಾಲಯ, ನವಕರ್ನಾಟಕ ಮುಂತಾದ ಇನ್ನೂ ಅನೇಕ ಪ್ರಕಾಶನ ಸಂಸ್ಥೆಗಳು ಸಾವಿರಾರು ಪುಸ್ತಕಗಳನ್ನು ಮಕ್ಕಳಿಗಾಗಿ ಪ್ರಕಟಿಸಿವೆ. ಎನ್.ಸಿ.ಇ.ಆರ್.ಟಿ. ಎಂಬ ಕೇಂದ್ರ ಸರಕಾರದ ಸಂಸ್ಥೆಯು ಪ್ರತಿವರ್ಷವೂ ಭಾರತೀಯ ಭಾಷೆಗಳಲ್ಲಿ ಮಕ್ಕಳ ಸಾಹಿತ್ಯ ರಚನೆಗಳಿಗೆ ಸ್ಪರ್ಧೆಯನ್ನು ಏರ್ಪಡಿಸಿ ಬಹುಮಾನ ನೀಡುವ ಮೂಲಕ ಮಕ್ಕಳ ಸಾಹಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಡುತ್ತಿದೆ. ಪ್ರತಿವರ್ಷವೂ ಕನ್ನಡದಲ್ಲಿ ಮಕ್ಕಳಿಗಾಗಿ ಸಾಕಷ್ಟು ಪುಸ್ತಕಗಳು ಪ್ರಕಟವಾದರೂ ಉತ್ತಮ ರಚನೆಗಳ ಕೊರತೆಯಂತೂ ಎದ್ದು ಕಾಣುತ್ತದೆ. ಇದಕ್ಕೆ ಅನೇಕ ಕಾರಣಗಳಿವೆ. ಪ್ರಾರಂಭದಲ್ಲಿ ಮಕ್ಕಳಿಗಾಗಿ ಶಾಲಾ ಪಠ್ಯಪುಸ್ತಕಗಳನ್ನು ರಚಿಸಲಾಯಿತು. ಆಗ ಸಾಹಿತ್ಯ ಬಲ್ಲ ವಿದ್ವಾಂಸರು ಮಕ್ಕಳ ಒಲವು ನಿಲುವುಗಳನ್ನು ಅರಿತುಕೊಂಡು ಸಮರ್ಥ ರೀತಿಯಲ್ಲಿ ಈ ಕಾರ್ಯವನ್ನು ಆರಂಭಿಸಿದರು. ಚ. ವಾಸುದೇವಯ್ಯ, ಶ್ರೀನಿವಾಸರಾವ್, ಎಂ.ಎಸ್. ಪುಟ್ಟಣ್ಣ, ಎಸ್.ಜಿ. ನರಸಿಂಹಾಚಾರ್ಯ, ವೆಂಕಟರಂಗೋ ಕಟ್ಟಿ, ಡೆಪ್ಯುಟಿ ಚೆನ್ನಬಸಪ್ಪ, ಎಂ.ಎನ್. ಕಾಮತ್ ಮುಂತಾದವರು ಈ ಕಾರ್ಯವನ್ನು ಮಾಡಿದ ಮೊದಲಿಗರು.

ಈಗ ಶಾಲಾಮಕ್ಕಳಿಗಾಗಿ ತಯಾರಿಸುವ ಪಠ್ಯಪುಸ್ತಕಗಳನ್ನು ಗಮನಿಸಿದರೆ ಸೃಜನಾತ್ಮಕವಾಗಿರುವುದೇ ಅಪರೂಪವಾಗಿದೆ. ಮಕ್ಕಳಲ್ಲಿ ಓದುವ ಆಸಕ್ತಿ, ಅಭಿರುಚಿ ಹೆಚ್ಚಿಸುವ ರಚನೆಗಳು ಕಂಡುಬರುವುದಿಲ್ಲ. ಮೇಲಾಗಿ ಈಗಿನ ಶಾಲಾಪಠ್ಯಪುಸ್ತಕಗಳನ್ನು ರಚಿಸುವವರು ಮೂಲತಃ ಸೃಜನಶೀಲರಾಗಿರುವುದೇ ಕಡಿಮೆ. ನಿಯಮಿತ ಪಠ್ಯಪುಸ್ತಕಗಳ ರಚನೆಗಳು ಸಾಹಿತ್ಯಕ ಗುಣವಿಲ್ಲದೆ ಬರೀ ವರದಿಗಳಾಗಿರುತ್ತವೆ. ಕನ್ನಡ ಸಾಹಿತ್ಯದಲ್ಲಿಯೇ ಅನೇಕ ಸೃಜನಶೀಲ ಕೃತಿಗಳಲ್ಲಿ ಬರುವ ಗುಡ್ಡ, ಬೆಟ್ಟ, ನದಿ, ಸಮುದ್ರ, ಹಕ್ಕಿ-ಪಕ್ಷಿಗಳ ವರ್ಣನಾ ಭಾಗಗಳನ್ನು ತೆಗೆದು ಪಠ್ಯಪುಸ್ತಕಗಳಲ್ಲಿ ಸೇರಿಸುವುದು ಎಷ್ಟೋ ಮೇಲು ಎನಿಸುತ್ತದೆ.

ಈಚಿನ ದಿನಗಳಲ್ಲಿ ಮಕ್ಕಳೇ ರಚಿಸಿದ ಕವಿತೆಗಳು ಚೆನ್ನಾಗಿವೆ. ಉದಾ: ವಿಕ್ರಮ ವಿಸಾಜಿ, ಮಿತಾ ದೇವನೂರು. ಸೃಜನಶೀಲ ಸಾಹಿತಿಗಳು ಮಕ್ಕಳ ಸಾಹಿತ್ಯವನ್ನು ರಚಿಸುವತ್ತ ಗಮನ ಹರಿಸಬೇಕಾಗಿದೆ. ೧೯೯೩ರಲ್ಲಿ ಪ್ರಕಟವಾದ ಮಕ್ಕಳ ಸಾಹಿತ್ಯ ಕೃತಿಗಳನ್ನು ಪರಿಶೀಲಿಸುವ ಈ ಸಂದರ್ಭದಲ್ಲಿ ಹೀಗೆ ಕೆಲವು ಮಾತುಗಳನ್ನು ಬರೆಯಬೇಕಾಯಿತು.

**ಕಾವ್ಯ**

'ಹಾಡು ಕುಣಿ ನಲಿ' ಕೃತಿಯಲ್ಲಿ ಮೂರು ಬಗೆಯ ಗೀತೆಗಳಿವೆ. ಈಗಲೂ ಹಳ್ಳಿಗಳಲ್ಲಿ ಮೌಖಿಕವಾಗಿ ಜೀವಂತವಾಗಿರುವ ಮಕ್ಕಳ ಜನಪದ ಗೀತೆಗಳು, ಅಭಿನಯ ಗೀತೆಗಳು ಹಾಗೂ ಆಧುನಿಕ ಕವಿಗಳಾದ ಪಂಜೆ ಮಂಗೇಶರಾಯರು, ಶಿವರಾಮ ಕಾರಂತ, ಸಿದ್ಧಯ್ಯ

ಪುರಾಣಿಕ, ಚೆನ್ನವೀರ ಕಣವಿ, ರಾಜರತ್ನಂ ಮುಂತಾದವರು ಬರೆದ ಕವಿತೆಗಳಿವೆ. ಜನಪದ ಗೀತೆಗಳು, ಅಭಿನಯ ಗೀತೆಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿ ಕಂಡರೂ ಎಲ್ಲಾ ಕಡೆ ಇರುತ್ತವೆ. ಆಡುವ ಮಕ್ಕಳ ಬಾಯಲ್ಲಿ ಇರುವಂಥ ಗೀತೆಗಳಾದ ' ಆನೆ ಬಂತೊಂದಾನೆ', 'ರತ್ನೋ ರಾಯನ ಮಗಳೆ' ಇವು ಈ ಸಂಕಲನದಲ್ಲಿರುವುದು ವಿಶೇಷ. ಟಿ.ವಿ.ಯಲ್ಲಿ ಬರುವ ಬಿಸ್ಕಿಟ್, ಹಾರ್ಲಿಕ್ಸ್, ಚಾಕಲೇಟ್ ಜಾಹೀರಾತಿನ ಹಾಡುಗಳೇ ಮಕ್ಕಳ ಬಾಯಲ್ಲಿ ನಲಿಯುವ ಈ ದಿನಗಳಲ್ಲಿ ಮಕ್ಕಳಿಗೆ ಮರೆತೇ ಹೋಗುವ ಸಾಧ್ಯತೆ ಹೆಚ್ಚಾಗಿರುವಾಗ ಪುನಃ ಈ ಜನಪದ ಗೀತೆಗಳನ್ನು ನೆನಪಿಸುವಂಥ ಈ ಸಂಕಲನ ವಿಶೇಷವಾಗಿ ಕಾಣುತ್ತದೆ.

'ಹೂವಿನ ಬುಟ್ಟಿ'ಕೃತಿಯಲ್ಲಿ ಈ ಶತಮಾನದ ಪ್ರಾರಂಭದಲ್ಲಿ ಮಕ್ಕಳಿಗಾಗಿಯೇ ಬರೆದ ಬಿ. ಎಂ. ಶ್ರೀ, ಪಂಜೆ ಮಂಗೇಶರಾಯರು, ಶಿವರಾಮ ಕಾರಂತ, ಕಯ್ಯಾರ ಕಿಞ್ಞಣ್ಣರೈ, ದಿನಕರ ದೇಸಾಯಿ, ರಾಜರತ್ನಂ ಮುಂತಾದ ಹಿರಿಯ ತಲೆಮಾರಿನವರ ಜೊತೆಗೆ ಮಕ್ಕಳ ಸಾಹಿತಿಗಳೆಂದು ಹೆಸರಾದ 'ಸಿಸು' ಸಂಗಮೇಶ, ಎ.ಕೆ. ರಾಮೇಶ್ವರ, ಶಂ. ಗು. ಬಿರಾದಾರ ಮುಂತಾದವರ ಹಾಗೂ ಪುರಂದರ ದಾಸರ 'ಡೊಂಕುಬಾಲದ ನಾಯಕರೆ' ಎಂಬ ಒಂದು ಹಾಡು ಸೇರಿ ೩೩ ಕವಿತೆಗಳು ಈ ಸಂಕಲನದಲ್ಲಿವೆ. ಕನ್ನಡ ಸಾಹಿತ್ಯ ಪರಂಪರೆಯನ್ನು ಗಟ್ಟಿಗೊಳಿಸಿದ ಹಿರಿಯ ಸಾಹಿತಿಗಳೂ ಮಕ್ಕಳ ಸಾಹಿತ್ಯವನ್ನು ಬರೆದು ಅದಕ್ಕೊಂದು ಗೌರವದ ಸ್ಥಾನವನ್ನು ಕಲ್ಪಿಸಿದ್ದಾರೆ. ಈ ಸಂಕಲನದಲ್ಲಿರುವ 'ಮಂಗನ ಉಪವಾಸ' (ಮಟ್ಟಿಮಲೆ ಶಂಕರನಾರಯಣ), 'ಗಡಿಯಾರ' (ದಿನಕರ ದೇಸಾಯಿ), 'ವಸಂತ' (ಶ್ರೀ), 'ಉದಯರಾಗ' (ಪಂಜೆ ಮಂಗೇಶರಾಯರು), 'ನೀ ನನಗಿದ್ದರೆ' (ಕಯ್ಯಾರ ಕಿಞ್ಞಣ್ಣರೈ) ಈ ಕವಿತೆಗಳು ಇಂದಿಗೂ ಉಳಿದುಕೊಂಡಿವೆ. ಈ ಬಗೆಯ ಗೀತೆಗಳನ್ನು ಸಿದ್ಧಯ್ಯ ಪುರಾಣಿಕ (ನನ್ನ ಕುದುರೆ) ರಾಜರತ್ನಂ ( ತುತ್ತೂರಿ) ಪಂಜೆ ಮಂಗೇಶರಾಯರು (ಹಾವಿನ ಹಾಡು) ರೋಹಿಣಿ (ಮಧುರ ಚೆನ್ನ) ಕರಡಿಯ ಕುಣಿತ ( ದ.ರಾ. ಬೇಂದ್ರೆ) ಅರ್ಧಚಂದ್ರ (ಕುವೆಂಪು) ಚಂದಿರನೇತಕೆ ಓಡುವನಮ್ಮ (ನೀ.ರೇ. ಹಿರೇಮಠ) ಮುಂತಾದವರು ಬರೆದಿದ್ದಾರೆ. ಈ ಮಟ್ಟದ ರಚನೆಗಳು ಈ ಹೊತ್ತಿನ ಮಕ್ಕಳ ಸಾಹಿತ್ಯದಲ್ಲಿ ಕಂಡುಬರುತ್ತಿಲ್ಲ. ಈ ಕೃತಿಯಲ್ಲಿರುವ 'ಗೇರ್ ಗೇರ್ ಮಂಗಣ್ಣ' (ಲಕ್ಷ್ಮೀ ನಾರಾಯಣ ಭಟ್ಟ), ' ಬಯಕೆ' (ವೆಂಕಟೇಶ ಮೂರ್ತಿ) ಈ ಕವಿತೆಗಳು ಅಷ್ಟು ಖುಷಿಕೊಡುವುದಿಲ್ಲ. ಹಳೆ ತಲೆಮಾರಿನಿಂದ ಹಿಡಿದು ಈ ಹೊತ್ತಿನ ಸಂದರ್ಭದಲ್ಲಿ ಬರೆಯುವವರ ರಚನೆಗಳು ಈ ಸಂಕಲನದಲ್ಲಿರುವುದು ಗಮನಾರ್ಹ ವಿಷಯವಾಗಿದೆ. ಈ ಎರಡೂ ಸಂಕಲನಗಳು ಸುಂದರವಾಗಿ ಚಿತ್ರಗಳೊಂದಿಗೆ ಪ್ರಕಟವಾಗಿವೆ.

'ತೋಟದ ಆಟ' ಕಂಬ್ಳಾಣ ಶರಣಪ್ಪನವರ ೩೩ ಕವಿತೆಗಳಿರುವ ಸಂಕಲನ. ಪ್ರಾಥಮಿಕ ಶಾಲೆಯ ಮಕ್ಕಳಿಗೆ ಖುಷಿಕೊಡಬಲ್ಲ ಕವಿತೆಗಳು ಇವರಲ್ಲಿವೆ. ಪರಿಸರವನ್ನು ರಕ್ಷಿಸುವ, ಎಲ್ಲರನ್ನು ಮಮತೆಯಿಂದ ಕಾಣುವ, ಆರೋಗ್ಯ ಕಾಪಾಡಿಕೊಳ್ಳುವ ಮುಂತಾದ ಅಂಶಗಳನ್ನು ತಿಳಿಯಪಡಿಸುವ ಕವಿತೆಗಳು ಮುದ ನೀಡುವಂತೆ

ರಚನೆಯಾಗಿವೆ. ಮಕ್ಕಳ ಪಾಲಿಗೆ ಕುತೂಹಲವಾಗಿ ಕಾಣುವ 'ಅಜ್ಜನ ಊಟ', 'ಅಜ್ಜನ ಗಡಿಯಾರ', ಅಜ್ಜನ ಮನೆ, 'ನೀರ ಗುಳ್ಳೆ', 'ಮುದ್ದುಮರಿ' ರಚನೆಗಳು ಸುಲಭವಾಗಿ ಮನ ಸೇರುವಂತಿವೆ. ಮುಕ್ತ ಛಂದಸ್ಸಿನ ಈ ಕವಿತೆಗಳಲ್ಲಿ ಲಯವಿದೆ. ಕಂಚ್ಯಾಣ ಶರಣಪ್ಪನವರಿಂದ ಮಕ್ಕಳ ಸಾಹಿತ್ಯಕ್ಕೆ ಹೆಚ್ಚಿನ ಕೊಡುಗೆಯನ್ನು ನಿರೀಕ್ಷಿಸಬಹುದು.

'ಚುಟುಕು-ಗುಟುಕು' 'ಸಿಸು' ಸಂಗಮೇಶರ ೨೬ ಹನಿಗವನಗಳಿರುವ ಸಂಕಲನ. ಕನ್ನಡದಲ್ಲಿ ಚುಟುಕು ಸಾಹಿತ್ಯಕ್ಕೆ ವಿಶಿಷ್ಟಸ್ಥಾನವಿದೆ. ಹಿರಿಯ ಸಾಹಿತಿಗಳೂ ಚುಟುಕು ಕವನಗಳನ್ನು ಬರೆದಿದ್ದಾರೆ. ಮಕ್ಕಳಿಗಾಗಿ ಬರೆದ ಈ ಚುಟುಕು ಕವನಗಳು ಚುರುಕಾಗಿವೆ. ಸಣ್ಣ ಭಾವವೊಂದನ್ನು ಚಮತ್ಕಾರವಾಗಿ ಹೇಳುವುದೆ ಇಲ್ಲಿ ಮುಖ್ಯವಾಗುತ್ತದೆ.

''ನಂದಿನಿ ಹಾಲನು ಬಟ್ಟಲು ತುಂಬಾ
ಸುರಿಯುತ್ತಿದ್ದರು ಟೀವಿಯಲಿ
ಬೆಕ್ಕದು ನೋಡಿತು ಗಕ್ಕನೆ ಜಿಗಿಯಿತು.
ಹಾಲನು ಕುಡಿಯಲು ಠೀವಿಯಲಿ!'' (ಟೀವಿ-ಠೀವಿ)

ಈ ಕೃತಿಯಲ್ಲಿ ಪುಟಕೊಂದು ಕವನ. ಅದಕ್ಕೆ ಸಂಬಂಧಿಸಿದ ಚಿತ್ರಗಳಿವೆ. ಮಕ್ಕಳಿಗೆ ಇಷ್ಟವಾಗುವ ಚುಟುಕುಗಳಿವು.

'ಅನ್ನ-ಜೇನು' ಗುರುರಾಜ ಬೆಣಕಲ್‌ರ ಕೃತಿಯಲ್ಲಿ ೩೩ ಕವಿತೆಗಳಿವೆ. ಮಕ್ಕಳ ಸಾಹಿತ್ಯವನ್ನು ಪ್ರೀತಿಯಿಂದ ಬರೆಯುವವರಲ್ಲಿ ಇವರೂ ಒಬ್ಬರು. ಇವರ ಕಥನಾಂಶದ ಕವಿತೆಗಳಲ್ಲಿ ಲಯವಿದ್ದು ಮಕ್ಕಳ ಮನಸ್ಸಿನಲ್ಲಿ ಉಳಿಯುತ್ತವೆ. ನವಿರು ಹಾಸ್ಯವಿರುವ ರಚನೆಗಳು ಛಂದಸ್ಸಿನ ವೈವಿಧ್ಯದಿಂದ ನಾಟಕೀಯ ಗುಣ ಪಡೆದಿವೆ. ನೀತಿಯನ್ನು ಸಾರುವ ಗುಣದಿಂದ ಈ ರಚನೆಗಳು ಮುಕ್ತವಾಗಿಲ್ಲ. 'ಕಪಟ ನಾಟಕ' ಕವಿತೆಯ ವಸ್ತು ನೆನಪಿನಲ್ಲಿ ಉಳಿಯುತ್ತದೆ.

'ಕಾಮನ ಬಿಲ್ಲಿನ ಸೈನಿಕರು' ಸಂಜೀವ ಕುದ್ವಾಜೆಯವರ ಈ ಕೃತಿ ಗಮನಾರ್ಹವಾದುದ್ದು. ಸುರೇಶ್ ಹೆಬ್ಳಿಕರ್‌ರ ಮುನ್ನುಡಿ, ಖ್ಯಾತ ಕಲಾವಿದ ಜಾನ್ ದೇವರಾಜು ಅವರು ರಚಿಸಿದ ಮುಖಪುಟವೂ ಸೇರಿದಂತೆ ೧೪ ಕಲಾಕೃತಿಗಳು ಈ ಪುಸ್ತಕದಲ್ಲಿವೆ. ''ನಾನು ನನ್ನ ಚಿತ್ರಕೃತಿಗಳ ಮೂಲಕ ನಾಳೆಯ ಬಗ್ಗೆ ಅಪಾರ ನಿರೀಕ್ಷೆ ಹಾಗೂ ಆಶಾವಾದಗಳ ಸಂಕೇತಗಳನ್ನು ಸೃಷ್ಟಿಸಬಯಸುತ್ತೇನೆ. ನಿಮ್ಮೊಳಗಿರುವ 'ಮಾನವತಾವಾದ'ಕ್ಕೆ ನಾನು ಅರಿಕೆ ಮಾಡಬಯಸುವುದು ಮಾನವೀಯತೆಯ ಅತ್ಯುತ್ತಮ ಕಾರಣವಾಗಿರುವ ವೃಕ್ಷ ರಕ್ಷಣೆಯನ್ನು ಎತ್ತಿ ಹಿಡಿದು ಬೆಂಬಲಿಸಬೇಕು.'' ಎಂದಿದ್ದಾರೆ. ಪ್ರಕೃತಿ ನಾನಾ ಕಾರಣಗಳಿಂದ ನಾಶವಾಗುತ್ತಿದೆ. ಮನುಷ್ಯನಾದಿಯಾಗಿ ಪಶುಪಕ್ಷಿ ಕ್ರಿಮಿಕಡೆಯಾಗಿ ಅವನತಿಯ ಅಂಚಿನಲ್ಲಿದೆ ಎಂಬ ಭೀಕರ ಆತಂಕ ಸುರುವಾಗಿದೆ. ಈ ದಿಸೆಯಲ್ಲಿ ಸಂಜೀವ ಕುದ್ವಾಜೆಯವರ ಕಾಳಜಿ ಮತ್ತು ಅವರ ಆತಂಕ ಹೀಗಿದೆ:

'ಕೊಳೆಯಾದ ಅಂಗಿ ಒಗೆಯುವವರಿಲ್ಲದೆ ಎಸೆಯಲು ಆಗದೆ
ಇದ್ದಿದ್ದರೆ ಏನುಗತಿ?
ಭೂಮಿಗೆ ಆಗಿದೆ ಅದೇ ಸ್ಥಿತಿ? (ಕಾಮನ ಬಿಲ್ಲಿನ ಸೈನಿಕರು)

ಹೋಯ್ತು ಹೋಯ್ತು ಎಲ್ಲಾ
ಹೋಯ್ತು
ಪ್ರಾಣಿ ಪಕ್ಷಿ ಸಂಕುಲವೆಲ್ಲ
ಕೊನೆಗೆ
ಉಳಿಯಿತು
ನೀರು ನಾತ! ಗಾಳಿ ನಾತ!
ನಾತ! ನಾತ! ನಾತ!

ನಾಶವಾದ ಪ್ರಕೃತಿಯ ಪ್ರತಿಯೊಂದು ಅವಸ್ಥೆಯನ್ನೂ ಕುರಿತ ಆತಂಕವೇ ಇಲ್ಲಿಯ ರಚನೆಗಳಿಗೆ ವಸ್ತುವಾಗಿದೆ. ಪ್ರಕೃತಿಯನ್ನು ಉಳಿಸುವ ಕಾಳಜಿಯನ್ನು ಮಕ್ಕಳಲ್ಲಿ ಹೆಚ್ಚಿಸುವ ಅರಿವನ್ನು ಈ ಸಂಕಲನ ನೀಡುತ್ತದೆ.

'ಮಕ್ಕಳ ಯುಗಾದಿ' ಟಿ.ಎಸ್. ನಾಗರಾಜ ಶೆಟ್ಟಿಯವರ ಗದ್ಯಪದ್ಯ ಮಿಶ್ರಿತ ಮೂರು ಬಾನುಲಿ ರೂಪಕಗಳ ಕೃತಿ. ಹೊಸ ವರುಷದ ಪ್ರಾರಂಭದ ದಿನವನ್ನು ಭಾರತೀಯ ಸಂಪ್ರದಾಯದ ಪ್ರಕಾರ ' ಯುಗಾದಿ' ಎಂದು ಯಾಕೆ ಕರೆಯುತ್ತಾರೆ? ಈ ಯುಗಾದಿಯ ದಿನದಿಂದ ಸುರುವಾಗುವ ಒಂದು ವರ್ಷಕ್ಕೆ 'ಸಂವತ್ಸರ' ಎಂದು ಯಾಕೆ ಅನ್ನುತ್ತಾರೆ? ಯುಗಾದಿಯ ದಿನದಂದು 'ಬೇವು-ಬೆಲ್ಲ' ಹಂಚಿಕೊಂಡು ಯಾಕೆ ತಿನ್ನುತ್ತಾರೆ? ಎಂಬ ಪ್ರಶ್ನೆಗಳಿಗೆ 'ಮಕ್ಕಳ ಯುಗಾದಿ' ರೂಪಕದಲ್ಲಿ, ಇವುಗಳಿಗೆ ಸಂಬಂಧಿಸಿದ ಪುರಾಣ ಪ್ರಸಂಗಗಳನ್ನು ತಿಳಿಸುತ್ತಾರೆ. ಮಕ್ಕಳಿಗೆ ಈ ಬಗ್ಗೆ ಸಾಮಾನ್ಯ ಜ್ಞಾನ ದೊರೆಯುತ್ತದೆ. 'ಪ್ರಾಣಿಗಳ ಜಾತಿ' ರೂಪಕದಲ್ಲಿ ಸಾಮಾನ್ಯವಾಗಿ ಈಗಿನ ಮನುಷ್ಯರ ಜಾತ್ರೆಗಳಲ್ಲಿ ನಡೆಯುವ ರಾದ್ಧಾಂತಗಳನ್ನು ಪ್ರತಿನಿಧಿಸುವಂತೆ ಚಿತ್ರಿಸಿದ್ದಾರೆ. 'ಪ್ರಾಣಿಗಳ ಪ್ರವಾಸ' ಕೂಡ ಕುತೂಹಲಕಾರಿಯಾಗಿದೆ. ಮಕ್ಕಳು ತರುವಂತೆ ಪ್ರಾಣಿಗಳು ತಮ್ಮತಮ್ಮ ಆಹಾರವನ್ನೇ ಪ್ರವಾಸಕ್ಕೆ ತಂದಿರುವ ಸಂಗತಿಯನ್ನು ಹೆಣೆದಿದ್ದಾರೆ. ಮಕ್ಕಳಿಗೆ ಮುದನೀಡುವಂತೆ ಇವೆ ಈ ರೂಪಕಗಳು.

'ವಿಜ್ಞಾನದ ೧೦೧ ಒಗಟುಗಳು' ವೆಂಕಟೇಶ ಹುಣಶೀಕಟ್ಟಿಯವರ ಕುತೂಹಲಕಾರಿಯಾದ ಕೃತಿ. ಒಗಟುಗಳಿಗೆ ಜನಪದದಲ್ಲಿ ವಿಶಿಷ್ಟಸ್ಥಾನವಿದೆ. ಮಕ್ಕಳಿಗಾಗಿಯೇ ಜನಪದದಲ್ಲಿ ಸ್ವಾರಸ್ಯಕರವಾದ ಒಗಟುಗಳಿವೆ. ಹಿರಿಯರು ಕಿರಿಯರೆಲ್ಲರಿಗೂ ರಂಜನೆಯಾಗುತ್ತಲೇ ಬೌದ್ಧಿಕ ಬೆಳವಣಿಗೆಗೆ ಸಹಾಯಕವಾಗಿವೆ. ಹೊತ್ತು ಕಳೆಯಲೋ, ಜಾಣ್ಮೆಯನ್ನು ಮೆರೆಯಲೋ ಈ ಒಗಟುಗಳು ಸಹಾಯಕವಾಗಿವೆ. ಆದರೆ ಈ ಕೃತಿಯಲ್ಲಿರುವವು ಆಧುನಿಕ ಒಗಟುಗಳು ಎಂದೇ ಹೇಳಬೇಕಾಗುತ್ತದೆ. ಕಾಲಿಂಗ್ ಬೆಲ್, ಟೆಲಿಸ್ಕೋಪ್, ಕ್ಯಾಮರಾ, ರೆಫ್ರಿಜರೇಟರ್,

ಪ್ರೆಶರ್‌ಕುಕ್ಕರ್ ಮುಂತಾದ ಆಧುನಿಕ ವಸ್ತುಗಳನ್ನು ಕುರಿತು ಹುಣಶೀಕಟ್ಟಿಯವರು ಒಗಟುಗಳನ್ನು ಕವಿತೆಯ ರೂಪದಲ್ಲಿ ರಚಿಸಿದ್ದಾರೆ. ೧೧೧ ಒಗಟುಗಳಿರುವ ಈ ಕೃತಿಯ ಕೊನೆ ಪುಟದಲ್ಲಿ ಉತ್ತರಗಳಿವೆ.

ಬೆಳಕು ಬೀರಬಲ್ಲೆ; ಬ್ಯಾಟರಿಯಲ್ಲ
ಸುಡಬಲ್ಲೆ; ಬೆಂಕಿಯಲ್ಲ
ಸಸ್ಯಗಳಿಗೆ ಬೇಕಾದವನಾದರೂ
ಗೊಬ್ಬರ ನಾನಲ್ಲ.
ನನ್ನ ಹತ್ತಿರಕ್ಕೆ ಬರಲು ಹೆದರುವರೆಲ್ಲ
ರಾಕ್ಷಸ ನಾನೇನಲ್ಲ
ಹಗಲಲ್ಲಿರುವ ನಾನು, ಇರುಳಲಿಲ್ಲ
ನಿಮಗಿದೆಯೆ ನನ್ನ ಪರಿಚಯ? (ಉತ್ತರ: ಸೂರ್ಯ ಕಿರಣ)

ಒಗಟುಗಳ ರಚನೆಯಲ್ಲಿ ಇನ್ನಷ್ಟು ಸೂಕ್ಷ್ಮತೆ, ನಿಗೂಢ ತರಲು ಸಾಧ್ಯವಿದೆ ಎಂಬುದು ಇದೇ ಒಗಟುಗಳಿಂದ ತಿಳಿದು ಬರುತ್ತದೆ. ಸುಮ್ಮನೆ ಒಂದು ಉದಾಹರಣೆಗೆ ೪೬ನೆಯ ಒಗಟಿನಲ್ಲಿ 'ಗಂಡಸರ ಮುಖದ ಅಂದ ಹೆಚ್ಚಿಸುವೆ' ಎಂಬ ಸಾಲು ಉತ್ತರ ಹೊಳೆಯಲು ದಾರಿಯಾಗುತ್ತದೆ. ಉತ್ತರ ಹೊಳೆಯದೇ ಹೋದರೆ ಮಕ್ಕಳಿಗೆ ಬೇಸರ ಬರಬಹುದೇನೋ.

**ಕಾದಂಬರಿ**

'ಗೋಪಿಯ ಗೊಂಬೆ' ಮತ್ತು 'ಕಾಡಾನೆಯ ಕೊಲೆ' ಈ ಎರಡು ಕಾದಂಬರಿಗಳನ್ನು ನಾ. ಡಿಸೋಜಾ ಆಕರ್ಷಕವಾಗಿ ಬರೆದಿದ್ದಾರೆ. 'ಗೋಪಿಯ ಗೊಂಬೆ' ಕಾದಂಬರಿಯಲ್ಲಿ ಗೊಂಬೆಯ ಸ್ವಗತ ಮಕ್ಕಳಲ್ಲಿ ಮರುಕವನ್ನು ಹುಟ್ಟಿಸುತ್ತದೆ. ನಂತರ ಗೋಪಿಗೆ ಆ ಗೊಂಬೆ ಸಿಕ್ಕ ಮೇಲೆ ಅವನ ಅದರ ಜತೆಗಿನ ಸಂಬಂಧವನ್ನು ಮನಮುಟ್ಟುವಂತೆ ಹೆಣೆದಿದ್ದಾರೆ. ಮಕ್ಕಳು ತಾವಾಡುವ ಆಟಿಗೆ ಸಾಮಾನುಗಳ ಜತೆ ಹೊಂದಿರಬಹುದಾದ ಸಂಬಂಧವನ್ನು ಕಾದಂಬರಿಕಾರರು ನೈಜವಾಗಿ ಚಿತ್ರಿಸಿದ್ದಾರೆ. ''ತಾನು ಇಷ್ಟು ಚೆನ್ನಾಗಿದ್ದೇನೆ. ಇಲ್ಲಿ ಇರುವ ಬೇರೆ ಯಾರೂ ತನ್ನ ಹಾಗಿಲ್ಲ. ತಾನೇ ಚಂದ. ಆದರೂ ತನ್ನ ಜೊತೆಗೇನೆ ಬಂದ ಹಾರುವ ಕಪ್ಪೆಹೋಯಿತು. ಕತ್ತು ಕುಣಿಸುವ ಜಿಂಕೆ ಹೋಯಿತು. ಮರ ಏರುವ ಕೋತಿ ಹೋಯಿತು. ತಾನು?........'' ಕಾದಂಬರಿಯ ನಿರೂಪಣೆಯಲ್ಲಿ 'ತಾನು' ಎಂಬ ಸರ್ವನಾಮ ಬಳಸುವುದು ಸಂವಹನದ ದೃಷ್ಟಿಯಿಂದ ಮಕ್ಕಳಿಗೆ ತೊಂದರೆಯಾಗಬಹುದು.

'ಕಾಡಾನೆಯ ಕೊಲೆ' ಮೂಲತಃ ಮಕ್ಕಳು ಪರಿಸರ ಪ್ರೇಮಿಗಳಾಗಿರುತ್ತಾರೆ. ವನ್ಯ ಮೃಗಗಳ ಬಗೆಗೆ ಅಪಾರ ಪ್ರೀತಿಹೊಂದಿರುತ್ತಾರೆ. ಗಿಡ ಮರಗಳನ್ನು ಕಂಡರೆ, ಪಶುಪಕ್ಷಿಗಳನ್ನು ಕಂಡರೆ ಮಕ್ಕಳ ಮನಸ್ಸು ಅರಳುತ್ತದೆ ಎಂಬುನ್ನು ಈ ಕಾದಂಬರಿಯಲ್ಲಿ ಮಂಜ, ಗೋಪಿ, ನಾಗ, ರಂಗ ಇವರಲ್ಲಿ ನೋಡಬಹುದು. ಇದರಿಂದಲೇ ಈ ಮಕ್ಕಳು

ಕಾಡಾನೆ ಕೊಲ್ಲುವವರನ್ನು ಪೊಲೀಸರಿಗೆ ತಿಳಿಸಿ ತಮ್ಮ ಪ್ರಕೃತಿ ಪ್ರೇಮವನ್ನು ವ್ಯಕ್ತಪಡಿಸುತ್ತಾರೆ. ಸಿನೆಮಾ ಮಾದರಿಯಂತೆ ಕತೆ ಸಾಗುತ್ತದೆ. ಈ ಎರಡು ಕಾದಂಬರಿಗಳು ಪ್ರೌಢಶಾಲಾ ಮಕ್ಕಳ ಓದಿಗೆ ನಿಲುಕುತ್ತವೆ.

**ಕಥೆ**

'ಜಾಣ ಪುಟಾಣಿಗಳು' ಬೇಬಿ ಎಮ್. ಮಾಣಿಯವರ ೯ ಕಥೆಗಳಿರುವ ಕೃತಿ. ನೀತಿಯನ್ನು ಬೋಧಿಸುವ ಕತೆಗಳಾದರೂ ಕುತೂಹಲಕಾರಿಯಾಗಿವೆ. ಮಕ್ಕಳ ಪ್ರಾಮಾಣಿಕತೆಯನ್ನು ಎತ್ತಿ ಹಿಡಿಯುವ (ಜಾಣಪುಟಾಣಿಗಳು), ಬುದ್ಧಿವಂತಿಕೆಯಿಂದ ಹೇಗಾದರೂ ಬದುಕಬಹುದೆಂಬ (ಇಲಿ ತಂದ ಆಸ್ತಿ) ಹೆಂಡತಿ ಮಾಡುವ ಕೆಲಸ, ಸುಲಭವಾದುದೆಂದು ಅದನ್ನು ಮಾಡಲು ನಿಂತು ಗಂಡ ಪಡುವ ಪಾಡಿನ ಬಗ್ಗೆ (ಶ್ರಮದ ಕೆಲಸ) ಇವು ಆಕರ್ಷಕವಾಗಿವೆ. ಎಲ್ಲ ಕಥೆಗಳು ಕೊನೆಯಲ್ಲಿ ನೀತಿಯನ್ನು ಬಿಚ್ಚಿಡುವುದರಿಂದ ಏಕತಾನತೆ ಬಂದಿದೆ. 'ಅಜ್ಜಿಯ ಮಾತು ಮೀರಿದ ಫಲ' ಎಂಬ ಇಂಡೋನೇಷ್ಯಾದ ಜನಪದ ಕತೆಯೊಂದಿದೆ.

'ಪಟಾಕಿಯ ಸಂಭ್ರಮ' ನೀಲಾಂಬರಿಯವರ ನಾಲ್ಕು ಕಥೆಗಳಿರುವ ಕೃತಿ. ಪರಸ್ಪರ ಸಹಕಾರದಿಂದ ಮಾತ್ರ ಬಾಳಲು ಸಾಧ್ಯವೆಂಬುದನ್ನು ನಿರೂಪಿಸುವ (ಹುಲಿಗೆವ್ವನ ಸ್ವಭಾವ ಬದಲಾದದು), ಸಂತಸ ಪಡುವುದಕ್ಕೆ ಬೇರೆ ಬೇರೆ ನೆಲೆಗಳಿವೆ ಎಂದು ಕಾಣುವ (ಪಟಾಕಿಯ ಸಂಭ್ರಮ), ಅಕ್ಷರ ಕಲಿತರೂ ತಾರತಮ್ಯ ಮನೋಭಾವದಿಂದ ನಡೆದುಕೊಂಡದ್ದರಿಂದ ಆಗುವ ಅಪಾಯವನ್ನು (ಪಡ್ಡೆ ಹುಡುಗರ ಪ್ರವಾಸ), ರಾಣಿಯ ಬಸಿರ ಬಯಕೆಯನ್ನು ನೆರವೇರಿಸದ ಫಲವಾಗಿ ಉಂಟಾದ ಅನಾಹುತವನ್ನು (ವಿಚಿತ್ರ ಬಯಕೆ) ಈ ಕತೆಗಳಲ್ಲಿ ಕಾಣುತ್ತೇವೆ. ನೀಳ್ಗತೆಗಳಂತಿರುವ ಈ ಕತೆಗಳಲ್ಲಿ ಮಕ್ಕಳಿಗೆ ಪ್ರಿಯವಾಗುವ ನಿರೂಪಣೆಯಿದೆ.

'ಭಲೇ ಪಿಂಕಿ' ರಾಜಶೇಖರ ಭೂಸನೂರು ಮಠರ ೧೦ ಕಥೆಗಳಿರುವ ಕೃತಿ. ವೈಜ್ಞಾನಿಕ ವಿಷಯಗಳನ್ನು ತುಂಬ ಸರಳವಾಗಿ ಹೇಳುವ ಕಲೆಗಾರಿಕೆಯನ್ನು ಪಡೆದುಕೊಂಡಿರುವ ಇವರು ಈಗಾಗಲೇ ಅನೇಕ ಕೃತಿಗಳನ್ನು ಮಕ್ಕಳಿಗಾಗಿ ಬರೆದು ಜನಪ್ರಿಯರಾಗಿದ್ದಾರೆ. ಈ ಕೃತಿಯಲ್ಲಿರುವ ಎಲ್ಲ ಕಥೆಗಳಲ್ಲಿ ವಿಜ್ಞಾನಕ್ಕೆ ಸಂಬಂಧಿಸಿದ ವಿಷಯಗಳನ್ನು ಪ್ರಸಂಗಗಳಂತೆ ಹೇಳಿ ಬಿಡುತ್ತಾರೆ. ಈ ಪ್ರಸಂಗಗಳ ನಾಯಕಿ ಪಿಂಕಿ. ಪಿಂಕಿಯ ಚಟುವಟಿಕೆಗಳೆಲ್ಲ ಕುತೂಹಲಕಾರಿಯಾಗಿರುತ್ತವೆ. ಆಕೆ ಕೇಳುವ ಪ್ರಶ್ನೆಗಳು, ಕಾಣುವ ನೋಟಗಳು, ಮಾಡುವ ಕೆಲಸಗಳು ಇವೆಲ್ಲವುಗಳಿಗೆ ಆಕೆ ಕಂಡುಕೊಳ್ಳುವುದು ಈ ಹೊತ್ತಿನ ಮುಂದುವರಿದ ವಿಜ್ಞಾನದ ಅಚ್ಚರಿಯ ವಿಷಯಗಳಾಗಿರುತ್ತವೆ. ಮಕ್ಕಳಿಗೆ ಬೆರಗನ್ನು ನೀಡುವ ಕಥೆಗಳಿವು.

'ಬೀರಬಲ್ಲನ ಬುದ್ಧಿವಂತಿಕೆಯ ಕಥೆಗಳು' ದು. ನಿಂ. ಬೆಳಗಲಿಯವರ ೧೪ ಕಥೆಗಳಿರುವ ಕೃತಿ. ಮಕ್ಕಳಿಗೆ ಪಂಚತಂತ್ರದ ಕಥೆಗಳು, ತೆನಾಲಿರಾಮನ ಕಥೆಗಳು ಇಷ್ಟವಾಗುವಂತೆ ಬೀರಬಲ್ಲನ ಕಥೆಗಳೂ ತುಂಬ ಇಷ್ಟವಾಗುತ್ತವೆ. ಎಂಥ

ಸಮಯದಲ್ಲೂ ಬೀರಬಲ್ಲನು ತನ್ನ ಜಾಣ್ಮೆಯಿಂದ ಪಾರಾಗಬಲ್ಲ. ಅಕ್ಬರ್ ತಂದೊಡ್ಡುವ ಎಲ್ಲ ತೊಡಕುಗಳಿಗೆ ಬೀರಬಲ್ಲನು ಸುಲಭವಾಗಿ ಬುದ್ಧಿವಂತಿಕೆಯಿಂದ ಪರಿಹಾರವನ್ನು ತೋರಿಸಬಲ್ಲ. ಈ ಕತೆಗಳೆಲ್ಲವೂ ಒಂದೇ ಬಗೆಯಲ್ಲಿ ಕೊನೆಗೊಳ್ಳುತ್ತವೆ. ಬೆಳಗಲಿಯವರು ಚುರುಕಾದ ಭಾಷೆಯಲ್ಲಿ ಬರೆದಿದ್ದಾರೆ. ಕೆಲವು ಕಡೆ ವಾಕ್ಯಗಳು ಯಾಕೋ ಸರಿಯಾಗಿಲ್ಲ. ಉದಾಹರಣೆಗೆ: ' ಬೀರಬಲ್ಲನ ಮೇಲೆ ಬಾದಶಹ ಸಿಟ್ಟು ಬೆಂಕಿಯಾಗಿದ್ದ' (ಪುಟ-೫)

'ಚಿಟ್ಟೆಯ ಬಣ್ಣ' ಟಿ.ಎಸ್. ನಾಗರಾಜಶೆಟ್ಟಿಯವರ ಐದು ಕಥೆಗಳಿರುವ ಕೃತಿ. ಮಕ್ಕಳಿಗೆ ಕುತೂಹಲಕಾರಿಯಾಗಿ ಕಾಣುವ ಅನೇಕ ವಸ್ತು-ವಿಷಯಗಳ ಬಗ್ಗೆ ಇವರು ಬರೆಯುವಾಗ ವೈಜ್ಞಾನಿಕ ಅಂಶಗಳನ್ನು ಸಮೀಕರಿಸಿಯೇ ಬರೆಯುವುದು ಇವರ ವೈಶಿಷ್ಟ್ಯ. ಕಥೆಯನ್ನು ಹೇಳುತ್ತಲೇ ವಾಸ್ತವಾಂಶವನ್ನು ನಿರೂಪಿಸಲು ಮರೆಯುವುದಿಲ್ಲ. ಹೀಗಾಗಿ ಇವರ ಮಕ್ಕಳ ರಚನೆಗಳು ಖುಷಿಕೊಡುತ್ತವೆ. ಚಿಟ್ಟೆಗೆ ಬಣ್ಣ ಹೇಗೆ ಬಂತು ಎಂಬ ಪ್ರಶ್ನೆಗೆ ರಂಜಕವಾಗಿ ಕಥೆ ಕಟ್ಟಿಹೇಳುವ ರೀತಿ. ( ಚಿಟ್ಟೆಯ ಬಣ್ಣ) ಓತಿಗೆ ಬೇಲಿ ಸಾಕ್ಷಿ- ಎಂಬ ಗಾದೆಯ ಮಾತನ್ನು ಎತ್ತಿಕೊಂಡು ಅದಕ್ಕೆ ಸಮಂಜಸವಾದ ವಿವರಗಳನ್ನು ಕಟ್ಟುವ ಬಗೆ, (ಓತಿ ಮತ್ತು ಬೇಲಿ) ಮಿಂಚುವುದನ್ನು ಹೇಗೆ ಪಡೆದುಕೊಂಡಿತು ಎಂಬುದನ್ನು (ಮಿಂಚುಹುಳ) ಸ್ವಾರಸ್ಯಕರವಾಗಿ ಕಥೆಯನ್ನು ಕಟ್ಟುತ್ತಾರೆ.

**ನಾಟಕ**

'ಜಿಪುಣ ಮೈದಾಸ' ಸುರೇಶ ಹೆಗಡೆಯವರ ಈ ನಾಟಕದ ವಸ್ತು ಹಳೆಯದು. ದುರಾಸೆಯಿಂದಾಗುವ ಪರಿಣಾಮವನ್ನು ತಿಳಿಸುವ ಈ ಕತೆ ತುಂಬ ಜನಪ್ರಿಯವಾದದ್ದು. ಹಣದ ಬಗ್ಗೆ ಮಹಾ ವ್ಯಾಮೋಹಿಯಾದ ಮೈದಾಸನು ಕೊನೆಗೆ ತಾನು ಮುಟ್ಟಿದ್ದೆಲ್ಲ ಚಿನ್ನವಾಗಲೆಂದು ವರ ಪಡೆದುದರಿಂದ, ಕುಡಿಯುವ ನೀರು ಚಿನ್ನವಾಗಿ, ಪ್ರಾಣಕ್ಕೆ ಕುತ್ತು ತಂದುಕೊಳ್ಳುತ್ತಾನೆ. ಐದು ದೃಶ್ಯಗಳುಳ್ಳ ಈ ನಾಟಕದಲ್ಲಿ ಕತೆಯು ದೃಶ್ಯದಿಂದ ದೃಶ್ಯಕ್ಕೆ ಬೆಳೆಯುತ್ತ ಹೋಗುವ ಕ್ರಮದಿಂದಾಗಿ ಮಕ್ಕಳಲ್ಲಿ ಆಸಕ್ತಿಯನ್ನುಂಟು ಮಾಡುತ್ತದೆ.

'ಗಂಟು ಮೂಟೆ ಗೂನುಬೆನ್ನು' ತುಮಕೂರು ಶಿವಕುಮಾರರ ಈ ನಾಟಕ ರಂಗ ತಂತ್ರಗಳನ್ನು ಮೈತುಂಬಿಕೊಂಡು ನಿಂತಿದೆ. ಇಂದಿನ ಶಿಕ್ಷಣ ಕ್ರಮವನ್ನು ವಿಡಂಬಿಸುವ ವಸ್ತು ಇಲ್ಲಿದೆ. ಇಂದಿನ ಶಿಕ್ಷಣ ವ್ಯವಸ್ಥೆಯನ್ನು ಸಂಪೂರ್ಣ ತಿರಸ್ಕರಿಸಿ ಬೇರೊಂದು ವ್ಯವಸ್ಥೆಯನ್ನು ಅಣಿಗೊಳಿಸುವಂಥ ಗಟ್ಟಿ ನಿಲುವು ಇನ್ನು ರೂಪುಗೊಂಡು ಇಂತಹ ಗೊಂದಲದ ಪ್ರಕೃತಿಯಿಂದ ಕಲಿಯುವುದೇ ನಿಜವಾದ ಶಿಕ್ಷಣ; ಮಕ್ಕಳ ಆಸಕ್ತಿ, ಅಭಿರುಚಿಗಳಿಗನುಗುಣವಾಗಿ ರೂಪಿಸುವುದೇ ನಿಜವಾದ ಶಿಕ್ಷಣ ಎಂಬ ನಿಲುವನ್ನು ಈ ನಾಟಕ ಪ್ರತಿಪಾದಿಸುತ್ತದೆ. ಇದು ರಂಗಪ್ರದರ್ಶನದ ದೃಷ್ಟಿಯಿಂದಲೂ ಉತ್ತಮ ಗುಣವನ್ನು ಪಡೆದಿದೆ.

'ಪುಷ್ಪರಾಣಿ' ಚಂದ್ರಶೇಖರ ಕಂಬಾರರ ನಾಟಕ. ಇದು ಪರಿಸರ ರಕ್ಷಣೆಯ ಆವಶ್ಯಕತೆಯನ್ನು ಎತ್ತಿ ಹಿಡಿಯುವ ವಸ್ತುವುಳ್ಳದ್ದು. ಕಾಡು-ನಾಡುಗಳ ಸಂಬಂಧ

ಅನನ್ಯವಾದದ್ದು. 'ತಾಯಿ ಮಕ್ಕಳಿದ್ದ ಹಾಗೆ'. ಪ್ರಕೃತಿ ಮತ್ತು ಮನುಷ್ಯ ಸಮಾಜಕ್ಕಿರುವ ನಿಕಟ ಬಾಂಧವ್ಯವು ಜನಪದ ಕಥೆಯೊಂದನ್ನು ಆಧರಿಸಿ ನಿರೂಪಿತವಾಗಿದೆ. ಗಿಣೆ-ಗಿಡುಗ ಆಟದಂಥ ಸಂಕೇತವನ್ನು ಬಳಸಿಕೊಂಡದ್ದು ಸಮರ್ಥನೀಯ. ಮನುಷ್ಯ ತನ್ನ ರಂಜನೆಗೋ. ವೈಭವಕ್ಕೋ ಪರಿಸರವನ್ನು ಹಾಳು ಮಾಡುವ ಮೂಲಕ ತನ್ನ ನಾಶಕ್ಕೆ ತಾನೇ ಕಾರಣವಾಗುವ ಪರಿಸ್ಥಿತಿಯನ್ನು ತಂದುಕೊಂಡಿರುವ ಈ ಹೊತ್ತಿನ ಸಂದರ್ಭವನ್ನು ನಾಟಕವು ಧ್ವನಿಪೂರ್ಣವಾಗಿ ಹೇಳುತ್ತದೆ. ಮೇಳದವರು ಹಾಡುವ ಹಾಡುಗಳು ಸನ್ನಿವೇಶಕ್ಕೆ ತಕ್ಕಂತೆ ಗಂಭೀರ ಪರಿಣಾಮವನ್ನುಂಟುಮಾಡುತ್ತವೆ. ರಂಗತಂತ್ರಗಳನ್ನು ಅಳವಡಿಸಿಕೊಂಡ ಈ ನಾಟಕ ಪ್ರಯೋಗದ ದೃಷ್ಟಿಯಿಂದಲೂ ಉತ್ತಮ ನಾಟಕವಾಗಿದೆ.



## ಧಾರ್ಮಿಕ ಗ್ರಂಥಗಳು

*ಮಾಧವ ಪೆರಾಜೆ*

ಈ ವರ್ಷ ಪ್ರಕಟಗೊಂಡು ಗಮನಕ್ಕೆ ಬಂದ ಲಭ್ಯಗ್ರಂಥಗಳ ಸಮೀಕ್ಷೆಯನ್ನು ಪ್ರಸ್ತುತ ಕೃತಿಯಲ್ಲಿ ಮಾಡಲಾಗಿದೆ. ಹೀಗೆ ಸಮೀಕ್ಷಿಸುವಾಗ ಕೆಲವೊಂದು ಗ್ರಂಥಗಳನ್ನು ಪರಿಚಯಿಸುವುದರೊಂದಿಗೆ ಗಮನಾರ್ಹವೆಂದು ಪರಿಗಣಿಸಲಾದ ಇತರ ಕೃತಿಗಳ ಬಗೆಗೆ ವಿಶೇಷವಾಗಿ ಪ್ರಸ್ತಾಪಿಸಲಾಗಿದೆ.

**ಅವತಾರ ತ್ರಯ ಸುವ್ವಾಲಿ :** *(ಸಂ) ಡಾ. ಎಚ್.ಜಿ. ಲೋಕೂರ*

ಪ್ರಸ್ತುತ ಕೃತಿಯಲ್ಲಿ ವಾದಿರಾಜರ 'ಅವತಾರ ತ್ರಯ ಸುವ್ವಾಲಿ' ಕೃತಿಯ ಸಂಪಾದನೆ ಲಭ್ಯವಿರುವ ಎಲ್ಲ ಪ್ರತಿಗಳನ್ನು (ಮುದ್ರಿತ ಪ್ರತಿ, ಉಡುಪಿ ಪ್ರತಿ, ಬೆಂಗಳೂರು ಪ್ರತಿ) ಬಳಸಿಕೊಂಡು ಮೂಲ ಪಾಠಕ್ಕೆ ಹತ್ತಿರವಾದ ಪ್ರತಿಯೊಂದನ್ನು ಸಂಪಾದಿಸಲಾಗಿದೆ ಎಂದು ಸಂಪಾದಕರು ಹೇಳಿಕೊಂಡಿದ್ದಾರೆ. ವಾದಿರಾಜರ ಹನುಮ ಸುವ್ವಾಲಿ, ಭೀಮ ಸುವ್ವಾಲಿ, ಮಧ್ವ ಸುವ್ವಾಲಿ ಹೀಗೆ ಒಟ್ಟು ೩೩೨ ದ್ವಿಪದಿಗಳ ರಚನೆಗಳಿವು. ಗ್ರಂಥದ ಕೊನೆಯಲ್ಲಿ ಪಾಂಡಿತ್ಯಪೂರ್ಣವಾದ ಲಘು ಟಿಪ್ಪಣಿ ಮತ್ತು ಪ್ರತಿಯೊಂದು 'ಪ್ರತಿ'ಗಳಲ್ಲಿರುವ 'ನುಡಿ'ಗಳ ಮೊತ್ತವನ್ನು ನಮೂದಿಸಲಾಗಿದೆ. ಪ್ರಹ್ಲಾದ ಕುಮಾರ ಭಾಗೋಜಿಯವರ ಗಮನಾರ್ಹವಾದ ಮುನ್ನುಡಿ ಈ ಗ್ರಂಥಕ್ಕಿದೆ.

**ಅಕ್ಕಗಳ ವಚನಗಳು:** *(ಸಂ) ಡಾ. ಸಾ. ಶಿ. ಮರುಳಯ್ಯ*

ಹೆಸರೇ ಹೇಳುವಂತೆ ಈ ಕೃತಿ ಅಕ್ಕಗಳ ವಚನಗಳ ಸಂಗ್ರಹ. ವಚನಗಳನ್ನು ಸಂಗ್ರಹಿಸುವಾಗ ಡಾ. ಆರ್.ಸಿ. ಹಿರೇಮಠರ ಸಂಪಾದನೆಯನ್ನು (೧೯೬೮) ಅನುಲಕ್ಷಿಸಲಾಗಿದೆ. ಹಾಗಾದುದರಿಂದ ಅಲ್ಲಿಯ ವಚನಗಳ ಸಂಖ್ಯೆಯನ್ನು 'ಕಂಸ'ದಲ್ಲಿ ನೀಡಲಾಗಿದೆ. ೧೨ ಹೆಚ್ಚುವರಿ ವಚನಗಳನ್ನು ಸಂಕಲಿಸಲಾಗಿದೆಯಲ್ಲದೆ ಅಕ್ಕಳ ಕುರಿತಾಗಿ ಇತರರ (೧೮) ವಚನಗಳನ್ನು ಸಂಗ್ರಹಿಸಲಾಗಿದೆ. ಕೃತಿಯ ಪ್ರಾರಂಭದಲ್ಲಿ ಸಂಪಾದಕರ ವಿಸ್ತಾರವಾದ 'ಪ್ರಸ್ತಾವನೆ'ಯಿದೆ.

**ಅಪ್ಪ-ಅಮ್ಮ:** *(ಸಂ) ಪ್ರೊ. ವಿ.ಜಿ. ಮೂರೀಹಾಳ*

ಇದು ಅವ್ವ ಮತ್ತು ಅಪ್ಪರಿಗೆ ಸಂಬಂಧಿಸಿದಂತೆ ದೇಶೀಯ ವಿದೇಶೀಯ, ಪ್ರಾಚೀನ ಅರ್ವಾಚೀನ ವಿದ್ವಾಂಸರ ಅಭಿಪ್ರಾಯಗಳ ಸಂಗ್ರಹ. ಶಾಸ್ತ್ರ, ಕಾವ್ಯ, ಪುರಾಣ

ಜಾನಪದಗಳಿಂದ ಈ 'ನುಡಿ'ಗಳನ್ನು ಸಂಗ್ರಹಿಸಲಾಗಿದೆ. ಇದರೊಂದಿಗೆ ಸಿನಿಮಾ, ಪತ್ರಿಕಾವರದಿ, ಹಾಗೂ ಆಧುನಿಕರ ಕೆಲವೊಂದು ವೈಯಕ್ತಿಕ ಅಭಿಪ್ರಾಯಗಳೂ ಇವೆ. ಇಲ್ಲಿ ತಾಯಿಯ ಕುರಿತಾಗಿ ಈ ಹಿಂದೆಯೇ ಬರೆಯಲಾದ ದಿ. ಗುಂಡ್ಮಿ ಚಂದ್ರಶೇಖರ ಐತಾಳರ 'ಮಾತೃ ಸಂಹಿತೆ' ವಚನಗಳನ್ನು ಪರಿಗಣಿಸಬಹುದಾಗಿತ್ತು.

**ಶಿರ್ಡಿ ಸಾಯಿಬಾಬಾ ಕಥಾಮೃತ:** *ಮಾಧವ ಹ.ರಾಯಚೂರ*

ಶಿರ್ಡಿ ಸಾಯಿಬಾಬಾನ ಜೀವನ ಚರಿತ್ರೆಯಿದು. ಜೀವನ ಚರಿತ್ರೆಯೊಂದಿಗೆ ಉಪದೇಶವು ಪ್ರಸ್ತುತ ಕೃತಿಯಲ್ಲಿದೆ. ಮುಖ್ಯವಾಗಿ ಸಾಯಿಬಾಬಾನ ಆಗಮನ (ಶಿರ್ಡಿಗೆ), ಪವಾಡ, ಉಪದೇಶಗಳು ಈ ಗ್ರಂಥದ ವೈಶಿಷ್ಟ್ಯಗಳು. ಪರಿಶಿಷ್ಟ ೧, ೨, ೩ರಲ್ಲಿ ಕ್ರಮವಾಗಿ ಶ್ರೀ ಸಾಯಿಬಾಬಾ ಬ್ರಾಹ್ಮಣ ಕುಲಜಾತರು, ಶ್ರೀ ಬಾಬಾರ ಬಾಲ್ಯ ಮತ್ತು ಸದ್ಗುರುಗಳು ಮತ್ತು ಆರತಿ ಪದ್ಯ ಇವುಗಳ (ಮರಾಠಿ ಮತ್ತು ಕನ್ನಡ) ಅನುವಾದಗಳಿವೆ.

**ಜ್ಞಾನ ಸಂಗಮ :** *ಅಬುಪರ್ವತ*

ಈಗಾಗಲೇ ಪ್ರಸಿದ್ಧವಾಗಿರುವ ಅಧ್ಯಾತ್ಮವಾದಿ ಸಂಸ್ಥೆಯಾದ ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರೀ ವಿಶ್ವವಿದ್ಯಾಲಯದವರ ಕನ್ನಡ ಪ್ರಕಟಣೆಯಿದು. 'ಗೀತಾಚಾರ್ಯನೇ ಭಗವಂತ', 'ಅಹಿಂಸೆಯ ಸ್ವಾತಂತ್ರ್ಯ', 'ಜೀವನ್ಮುಕ್ತಿ', 'ದ್ವಾಪರದಲ್ಲಿ ಧರ್ಮ ಸಾಮ್ರಾಜ್ಯವೇ',' ಅಗೋಚರ ಶಕ್ತಿಗಳು','ಆತ್ಮಾನುಭಾವದಿಂದ ಸುಖೀವಿಶ್ವ', 'ದ್ವಾಪರದಲ್ಲಿ ಕೃಷ್ಣಾವತಾರಗಳು', 'ದೇಹಧರ್ಮಗಳು ', ' ರಥಿಕರು, ಜೀವಾತ್ಮರ ಮನೆಗಳು ದುರಾಕ್ರಮಣವೇ ಸರ್ವಾಂತರ್ಗತ ಭಯಾನಕ ಬಾಂಬ್‌ಗಳು, ಬ್ರಹ್ಮ-ಕೃಷ್ಣ-ವಿಷ್ಣು- ನಾರಾಯಣ ನಾಮ, ಕಾಲಚಕ್ರ, ಗಾಡ್‌ಫಾದರ್' ಮುಂತಾದವು ಇಲ್ಲಿ ಚರ್ಚಿತ ವಿಷಯಗಳು.

**ಸಹೃದಯಿ ಕರುಣಾಮಯ ಮಹದೇಶ್ವರ:** *ಜಿ. ಮಹಾದೇವ ಪ್ರಸಾದ್*

ಮಲೆಯ ಮಹದೇಶ್ವರನ ಕುರಿತಾಗಿ ಪ್ರವಾಸಿಗರಿಗೆ ವಿವರ ನೀಡುವ ಪುಸ್ತಕವಿದು. ಭಾಗ ೧ರಲ್ಲಿ 'ಕ್ಷೇತ್ರ ಮಹಾತ್ಮೆ'ಯೂ ಭಾಗ ೨ ರಲ್ಲಿ ಮಹದೇಶ್ವರನ ಜೀವನ ಚರಿತ್ರೆಯೂ ಲಭ್ಯವಿದೆ. ಭಾಗ ೩ ರಲ್ಲಿ ಮಹದೇಶ್ವರನ ಬಗೆಗಿನ ೧೩ ಭಕ್ತಿಗೀತೆಗಳಿವೆ.

**ಶಿಶುನಾಳ ಅನುಭಾವ ಗೀತ ಮಂಜರಿ:** *(ಸಂ) ಆರ್.ಎಸ್. ಪುಂಕರ*

ಶರೀಫರ ಜನಪ್ರಿಯ ಅನುಭಾವ ಗೀತೆಗಳ ಸಂಕಲನವಿದು. ದೇವತಾಸ್ತುತಿ, ಗುರುಭಕ್ತಿ, ನೀತಿಬೋಧೆ, ಭಕ್ತಿಭಾವ, ಬೆಡಗಿನ ಪದಗಳು, ಲಾವಣಿ ಪದಗಳು, ಸಂಕೀರ್ಣ ಹೀಗೆ ವಿಸ್ತಾರವಾದ ಸಂಗ್ರಹವಿದೆ. ಕೃತಿಯ ಪ್ರಾರಂಭದಲ್ಲಿ 'ಜೀವನ ಹಾಗೂ ಕೃತಿ ಪರಿಚಯ'ದ ವಿಸ್ತೃತ ಲೇಖನವಿದೆ. 'ಪದಕೋಶ' ಅಕಾರದಿಗಳಿರುವ ವೈಜ್ಞಾನಿಕ ಸಂಗ್ರಹವಿದು.

**ಧರ್ಮಾವಲೋಕನ :** *ಹೊ.ಶ್ರೀ. ಮದನಕೇಸರಿ*

ಇದು ಜೈನಧರ್ಮದ ಮಹತ್ತ್ವವನ್ನು ಸಾರುವ ವಿಸ್ತಾರವಾದ ಕೃತಿ. 'ಧರ್ಮ', 'ದೇವರು', ಗುರು', ' ಶಾಸ್ತ್ರ', 'ಆತ್ಮ', 'ಸುಖ-ದುಃಖ', 'ಪುಣ್ಯ ಪುರುಷ ಪ್ರಯತ್ನ', 'ತ್ರಯ', 'ಣಮೋಕಾರ ಮಂತ್ರ' ಹಾಗೂ ಪದದ ವಿಶ್ಲೇಷಣೆ, ಮಂಗಲ, ಹಿಂದೂ ಧರ್ಮವಾಣಿ ಮೊದಲಾದ ಅಧ್ಯಾಯಗಳಿವೆ. ಪ್ರಸ್ತುತ ಗ್ರಂಥದ 'ಹಿಂದೂ ಪದದ ವಿಶ್ಲೇಷಣೆ' ಲೇಖನ ಕುತೂಹಲಕರವಾಗಿದೆ.

**ಭಗವಾನ್ ಶ್ರೀಕೃಷ್ಣ : (ಅನು)** *ಕೃತಿಪ್ರಿಯ*

ಆರ್ಯಾ ಸಮಾಜದ ತತ್ತ್ವಾದರ್ಶಗಳ ಹಿನ್ನೆಲೆಯಿರುವ ಕೃತಿಯಿದು. ಮುಖ್ಯವಾಗಿ 'ವ್ಯಾಸ ಪ್ರಣೀತ ಶ್ರೀಕೃಷ್ಣನ ವ್ಯಕ್ತಿಚಿತ್ರ'ವಿರುವ ಈ ಕೃತಿಯಲ್ಲಿ ಅಭ್ಯುದಯ ಕಾಲ, ವಿದ್ಯಾರ್ಥಿ ದೆಸೆ ಮತ್ತು ಲೋಕನಾಯಕತ್ವ, 'ಸಂಘರಾಜ್ಯದ ಸಮರ್ಥಕ ','ಕೃಷ್ಣನ ಶೌರ್ಯ', 'ಅರ್ಘ್ಯ ದಾನಕ್ಕೆ ಪಾತ್ರನಾದ ಪುರುಷ', 'ದೌತ್ಯಕರ್ಮ', 'ಶಾಂತಿಯ ಉಪಾಸನೆ', 'ನೈತಿಕತೆ', 'ಸಂಯಮ ಹಾಗೂ ಬ್ರಹ್ಮಚರ್ಯ', 'ಜ್ಞಾನಿ ಹಾಗೂ ಕರ್ಮಕ್ಷೇತ್ರ', 'ಯುಗದ ಸಾಧನೆ', 'ಕೂಟನೀತಿಜ್ಞ', 'ಮನೋವಿಜ್ಞಾನಿ', 'ಶೀಲ ಹಾಗೂ ನಮ್ರತೆ', 'ನಿಸ್ಪೃಹತೆ', 'ಕೃಷ್ಣನು ಭಗವಾನ್ ಹೇಗೆ', 'ಕೃಷ್ಣನ ಆರ್ಯೋಚಿತ ಧರ್ಮ' ಮೊದಲಾಗಿ ಆಧುನಿಕ ವ್ಯಕ್ತಿಚಿತ್ರದ ಮಾದರಿಯಲ್ಲಿ ಶ್ರೀಕೃಷ್ಣನನ್ನು ಚಿತ್ರಿಸಲಾಗಿದೆ. ಆ ಮೂಲಕ ಆರ್ಯ ಸಮಾಜದ ವೈಶಿಷ್ಟ್ಯವನ್ನು ಹೇಳಲಾಗಿದೆ. ಕೃತಿಗೆ ಪ್ರಭುಮುನಿ ವಾನಪ್ರಸ್ಥರವರ ಮುನ್ನುಡಿಯಿದೆ.

**ಧರ್ಮ ಕಾರ್ಯಕರ್ತರ ಕೈಪಿಡಿ : (ಸಂ.)** *ಆ.ಸಿ. ಹಿರೇಮಠ*

ಇದು ವೀರಶೈವ ಮತಾಚರಣೆಗೆ ಸಂಬಂಧಿಸಿದ ಗ್ರಂಥ. ಶಿವಪೂಜಾ ವಿಧಾನ, ಭಸ್ಮಧಾರಣೆ, ಪಂಚಾಮೃತ ಅಭಿಷೇಕ, ಗಂಧ, ಅಕ್ಷತೆ, ಬಿಲ್ವಪತ್ರೆ, ಪುಷ್ಪ, ಧೂಪ, ಘಂಟಾನಾದ, ನೈವೇದ್ಯ, ತಾಂಬೂಲ, ದಕ್ಷಿಣೆ, ಪ್ರದಕ್ಷಿಣೆ, ಪಾದೋದಕ ಸ್ವೀಕಾರ, ವಿವಾಹ ಮೊದಲಾದ ವಿವಿಧ ವಿಧಿ-ವಿಧಾನಗಳ ವಿವರಣೆಯಿದೆ. ಇದರ ಜತೆಗೆ ಸ್ತುತಿ ಹಾಗೂ ಮಂಗಲ ಗೀತೆಗಳು, ದ್ವಾದಶ ಜ್ಯೋತಿರ್ಲಿಂಗ ಸ್ತೋತ್ರಂ, ಅಂತ್ಯ ಸಂಸ್ಕಾರ, ಸಮಾಧಿ ರಚನಾ ಕ್ರಮ ಇತ್ಯಾದಿ ವಿವರಗಳೂ ಇವೆ. ಕೊನೆಯಲ್ಲಿ ವೀರಶೈವರ 'ಧರ್ಮದರ್ಶನದ ಕೋಷ್ಟಕ'ವಿದೆ.

**ತತ್ತ್ವಪದಗಳು:** *ನಾ. ಲೋಕೇಶ್ ಒಡೆಯರ್*

ಪ್ರಸ್ತುತ ಕೃತಿಯಲ್ಲಿ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಹಾವಿನಹಾರ ಕಲ್ಲಯ್ಯ, ಅಂಬಿಗರ ಚೌಡಯ್ಯ, ಜೇಡರ ದಾಸಿಮಯ್ಯ, ಚೆನ್ನಬಸವಣ್ಣ, ಸಿದ್ಧರಾಮ, ಪುರಂದರದಾಸ, ಕನಕದಾಸ, ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಶಿಶುನಾಳ ಶರೀಫ, ಕೆಳದಿ ವೆಂಕಣ್ಣಕವಿ, ಕಡಕೋಳ ಮಡಿವಾಳೇಶ್ವರ, ಶ್ರೀ ಶಿವಕುಮಾರ ಮಹಾಸ್ವಾಮಿ ಮೊದಲಾದವರ ಅನುಭಾವ ಗೀತೆಗಳಿವೆ. ಮತ ಬೇಧವಿಲ್ಲದೆ ಪ್ರಮುಖ ಅನುಭಾವಿಗಳ ಗೀತೆಗಳನ್ನು ಸಂಕಲಿಸಿರುವುದು ಇಲ್ಲಿಯ ವಿಶೇಷ.

**ಶ್ರೀ ಸೌಭಾಗ್ಯ ಸಪ್ತ ತ್ರಿಶಂತಿ ಹಾಗೂ ಶ್ರೀ ರಾಜರಾಜೇಶ್ವರ ಸ್ತೋತ್ರ:** *ಶ್ರೀ ಪ್ರಸನ್ನ ಶ್ರೀನಿವಾಸಾಚಾರ್ಯ*

ಮಾಧ್ವಮತಾಚಾರ್ಯ ಸಂಬಂಧಿ ಕೃತಿಯಿದು. ಸೌಭಾಗ್ಯ, ಸಪ್ತ ತ್ರಿಂಶತಿ, ಶ್ರೀ ರಾಜೇಶ್ವರ ಸ್ತೋತ್ರ, ಪ್ರಸನ್ನ ಶ್ರೀನಿವಾಸ ಕಲ್ಯಾಣ, ಪ್ರಸನ್ನ ರಾಮಾಯಣ ಸುಂದರಕಾಂಡ, ಶ್ರೀಗಂಗಾದೇವಿ ಸ್ತುತಿ ಸ್ತೋತ್ರ, ಸರ್ವ ವಿಷಪರಿಹಾರಕ ಗರುಡ ಸ್ತೋತ್ರ, ಮೊದಲಾದ ರಚನೆಗಳಿವೆ. ಶ್ರೀಪಾದರಾಜರ 'ದಶಾವತಾರ ಸ್ತುತಿ' ಶ್ರೀ ಕೃಷ್ಣಾಚಾರ್ಯ ವಾಯಿಕರ್ ಅವರ ಮುನ್ನುಡಿಗಳು ಇಲ್ಲಿ ಲಭ್ಯ.

**ಹೊನ್ನಾಳಿ ಹಿರಿಯ ಕಲ್ಮಠದ ಗುರುಪರಂಪರೆ:** *ಶ್ರೀ ಬಿ. ಶಾಂತವೀರಯ್ಯ*

ಶ್ರೀ ಜಗದ್ಗುರು ಜಡೆಯ ಶಂಕರ ಗುರುಗಳು, 'ಶ್ರೀ ಚೆನ್ನಮಲ್ಲಿಕಾರ್ಜುನ ಶಿವಾಚಾರ್ಯರು', 'ಭವ್ಯ ಬೃಹಚ್ಚಿಲಾಮಠ', 'ಅಹಿಂಸೆಯೇ ಶ್ರೇಷ್ಠಧರ್ಮ', 'ಮೈಸೂರೊಡೆಯರು', 'ಮಹೋನ್ನತ ಗುರುಪರಂಪರೆ ಕೆಳದಿಯ ಬಳುವಳಿ ', 'ಗುರುಪರಂಪರೆಯ ಹರಿಕಾರರು', 'ಚೆನ್ನಚೇತನ', 'ಹಿರಿಯ ಕಲ್ಮಠದ ಹಿರಿಮೆ' ಮೊದಲಾದ ಹತ್ತು 'ಪ್ರಕರಣ'ಗಳಲ್ಲಿ ಹೊನ್ನಾಳಿಯ ಗುರುಪರಂಪರೆಯ ಕಥೆಯನ್ನು ವಿವರಿಸಲಾಗಿದೆ. ಕೃತಿಯ ಅನುಬಂಧದಲ್ಲಿ 'ನಿರಂತರ ಪರಂಪರೆಯ ಪಕ್ಷಿನೋಟ'ವಿದೆ.

**ಮಂತ್ರ-ತಂತ್ರ-ಯಂತ್ರ :** *ಗಂಡಸಿ ವಿಶ್ವೇಶ್ವರ*

ಇದು ವೇದ, ಉಪನಿಷತ್ತು ವಿಜ್ಞಾನ ಆಧಾರಿತ ಕೃತಿಯೆಂದು ಲೇಖಕರು ಹೇಳಿದರೂ ಹೆಸರೇ ಹೇಳುವಂತೆ 'ಮಂತ್ರ ತಂತ್ರ' ಜಗತ್ತಿಗೆ ಸಂಬಂಧಿಸಿದ ಕೃತಿ. 'ಸತ್ತವನು ವೈದ್ಯನಾಗಿ ಬಂದಾಗ,' 'ಇಲ್ಲಿ ಸಾವಿಲ್ಲದ ಮನೆಯಿದೆ, ಸಾಸುವೆಯೂ ಸಿಗುತ್ತದೆ, 'ನಿಮ್ಮ ಮನೆಗೆ ಪ್ರೇತಗಳ ಆಗಮನ,' 'ಪ್ರೇತಾತ್ಮಗಳ ಜತೆ ಸಂದರ್ಶಕರು', 'ಈ ಸಿದ್ಧ ತಾಂತ್ರಿಕರನ್ನು ಭೇಟಿ ಮಾಡಿರಿ' ಇತ್ಯಾದಿಗಳು ಇಲ್ಲಿಯ ಆಕರ್ಷಕ ಶೀರ್ಷಿಕೆಗಳು ಮಂತ್ರ ತಂತ್ರದ ವೈಜ್ಞಾನಿಕತೆಯನ್ನು ಸಾರುವುದಕ್ಕಾಗಿ ಲೇಖಕರು ವೇದೋಪನಿಷತ್ತುಗಳನ್ನು ಮೊರೆಹೋಗುವುದೊಂದು ವಿಶೇಷ.

**ಉಪನಿಷತ್ ತ್ರಿಕಾಣಿಕೆ :** *ಶ್ರೀ ಶಿವಾನಂದ ಸುಬ್ರಹ್ಮಣ್ಯ, ಶ್ರೀಮತಿ ಹನುಮಮ್ಮನವರು*

ಈ ಗ್ರಂಥವು ಮರುಮುದ್ರಣವಾಗಿದೆ. ಸುಮಾರು ೨೭ ಉಪನಿಷತ್‌ಗಳಲ್ಲಿರುವ ಮುಖ್ಯವಾದ ಶ್ಲೋಕಗಳನ್ನು ಇಲ್ಲಿ ಕ್ರೋಢೀಕರಿಸಲಾಗಿದೆ. ಆತ್ಮ, ಬ್ರಹ್ಮ, ಉಪನಿಷತ್, ವೇದಾಂತ, ಜ್ಞಾನಾಜ್ಞಾನ, ಶರೀರ ಲಕ್ಷಣ, ಶರೀರತ್ರಯ, ಜೀವಕೋಶ, ಓಂಕಾರ ಬಂಧಮುಕ್ತರು, ಬ್ರಾಹ್ಮಣ ಲಕ್ಷಣ, ಪರಿತ್ಯಾಗ ಬೋಧೆ, ಸ್ವಾನುಭವಾನಂದ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಉಪನಿಷತ್ತುಗಳ ದೃಷ್ಟಿಕೋನವನ್ನು ಇಲ್ಲಿ ನಿರೂಪಿಸಲಾಗಿದೆ.

**ಶ್ರೀ ಹವ್ಯಕ ಗುರುಪೀಠಂ:** *ವಿದ್ವಾನ್. ಎಲ್. ಆರ್. ದತ್ತಾತ್ರೇಯ*

ಇದು ಸಂಸ್ಕೃತ ಧಾರ್ಮಿಕ ಕಾವ್ಯ. ಪ್ರಸ್ತುತ ಕಾವ್ಯದಲ್ಲಿ ೧೨೨೫ ಶ್ಲೋಕಗಳಿವೆ. ಮೂಲ ಸಂಸ್ಕೃತ ಶ್ಲೋಕಗಳು ಮತ್ತು ಕನ್ನಡಾನುವಾದವೂ ಇದೆ. ಹವ್ಯಕ ಬ್ರಾಹ್ಮಣರ ಮೂಲಕ,

ಮಠ, ಗುರುಪರಂಪರೆ ಇತ್ಯಾದಿಗಳನ್ನು ಇಲ್ಲಿ ನಿರೂಪಿಸಲಾಗಿದೆ. ಇದು ಕಾವ್ಯವಂತೂ ಆಗಿಲ್ಲ. ಈ ಅರ್ಥದಲ್ಲಿ ಧರ್ಮ ಗ್ರಂಥವೇ.

**ಕ್ರಿಸ್ತದರ್ಶನ** : *ಬಳ್ಳೇಕೆರೆ ಹನುಮಂತಪ್ಪ*

ಕ್ರೈಸ್ತ ಮತಕ್ಕೆ ಸಂಬಂಧಿಸಿದ ಪುಸ್ತಕವನ್ನು ಹಿಂದೂಮತಸ್ಥರೊಬ್ಬರು ಬರೆದ ವಿಶೇಷತೆ ಈ ಗ್ರಂಥಕ್ಕಿದೆ. 'ಜವಹರ್‌ಲಾಲ್ ನೆಹರೂ ಕಂಡ ಕ್ರಿಸ್ತ', 'ಜನಸೇವೆಯ ಸಾರ್ಥಕ ಶತಮಾನ ', 'ಮೂರು ಧರ್ಮಗಳ ಮಹಾಸಂಗಮ: ಜೆರೊಸಲೇಮ್', 'ಲೈಂಗಿಕ ವಿಚಾರ: ಬೈಬಲ್ ಏನು ಹೇಳುತ್ತದೆ'?, 'ಗಾಧಿಕ್‌ನಲ್ಲಿ ಕ್ರಿಸ್ತಾರಾಧನೆ', 'ಪರ್ವತ ಬೋಧನೆ (ದಿ ಸರ್ಮನ್ ಆನ್‌ದಿ ಮೌಂಟ್) ಕ್ರೈಸ್ತರಿಗೆ ಪವಿತ್ರ ಶುಭ ಶುಕ್ರವಾರ' ಮತ್ತು 'ಜಾನಪದದಲ್ಲಿ ಯೇಸು ಮೇರಿ ಮತ್ತು ಅಂತೋನಿ' ಇವು ಇಲ್ಲಿಯ ಲೇಖನಗಳು.

ಆಕರ್ಷಕ ನಿರೂಪಣೆ, ಸರಳವಾದ ಆದರೆ ಸಾಹಿತ್ಯಕ ಶೈಲಿ, ದೇಸಿ ಗುಣಗಳಿಂದ ಈ ಪುಟ್ಟ ಕೃತಿ ಒಮ್ಮೆಲೇ ನಮ್ಮನ್ನು ಕ್ರೈಸ್ತಲೋಕಕೊಯ್ಯುತ್ತದೆ. ಅನೇಕ ಅನುವಾದಿತ ಬೃಹತ್ ಗ್ರಂಥಗಳು ಹೇಳಿರುವ ಆಪ್ತವಾಗದ ವಿಷಯಗಳು ಇಲ್ಲಿ ಆಪ್ತವಾಗುತ್ತವೆ. ಕೃತಿಯ 'ಧಾರ್ಮಿಕ ವಿಚಾರ'ವನ್ನು ಒಪ್ಪುವುದು ಬಿಡುವುದು ವೈಯಕ್ತಿಕವಾದರೂ ಈ ವರ್ಷದ ಪ್ರಮುಖ ಧಾರ್ಮಿಕ ಗ್ರಂಥಗಳಲ್ಲಿ ಇದೂ ಒಂದು.

**ತಪ್ಪು ಕಲ್ಪನೆಗಳು :** *ಇಬ್ರಾಹಿಂ ಸಹೀದ್*

ಇಸ್ಲಾಂ ಧರ್ಮ ಸಂವಾದಿಯಾದ ಕೃತಿಯಿದು. ಏಕದೇವ ವಿಶ್ವಾಸ, ಇಸ್ಲಾಮೇತರ ಆಚಾರ ಸಂಪ್ರದಾಯಗಳು, ಪ್ರವಾದಿ ಮಹಮ್ಮದ್, ಪ್ರವಾದಿ ಮಹಮ್ಮದ್(ಸ)ರ ವಿವಾಹಗಳು ಪರಲೋಕ ವಿಶ್ವಾಸ, ಆರಾಧನ ಕರ್ಮಗಳು, ಝುಕಾತ್: ಧನಿಕರ ಸೊತ್ತಿನಲ್ಲಿರುವ ಬಡವರ ಹಕ್ಕು, ಹಜ್: ವಿಶ್ವ ಭ್ರಾತೃತ್ವ ಸಮ್ಮೇಳನ, ಜೆಹಾದ್ : ಧರ್ಮ ಸಂಸ್ಥಾಪನೆಗಾಗಿ ಹೋರಾಟ, ಪವಿತ್ರ ಕುರ್‌ಅನ್ ಮಹಮ್ಮದ್ ಪೈಗಂಬರರ ಕೃತಿಯೇ? ಆಚಾರ ಸಂಪ್ರದಾಯಗಳು : ಪರ್ದಾ, ಸ್ತ್ರೀ ಶಿಕ್ಷಣ ಮತ್ತು ಇತರ ಹಕ್ಕುಗಳು ತಲಾಕ್‌ನ ಸರಿಯಾದ ಕ್ರಮ, ಮಹಿಳೆಯರು : ಮಸೀದಿ, ಹಜ್, ಧರ್ಮಾಯುದ್ಧ ಇತ್ಯಾದಿ, ಇಸ್ಲಾಮ್ ಬಡ್ಡಿಯನ್ನು ನಿಷೇಧಿಸಿರುವುದೇಕೆ?: ಇಸ್ಲಾಮ್ ಮತ್ತು ಪರಧರ್ಮ ಸಹಿಷ್ಣುತೆ, ಇಸ್ಲಾಮಿನ ಶಿಕ್ಷಣ ಪದ್ಧತಿ ಇವು ಇಲ್ಲಿಯ ಅಧ್ಯಾಯಗಳು.

ಈಗಾಗಲೇ 'ಕ್ರಿಸ್ತ ದರ್ಶನ' ಕೃತಿಯ ಸಂದರ್ಭದಲ್ಲಿ ಹೇಳಲಾದ ಎಲ್ಲಾ ಮಾತುಗಳೂ ಈ ಕೃತಿಗೆ ಅನ್ವಯವಾಗುತ್ತವೆ. ಗಟ್ಟಿಯಾದ ವೈಚಾರಿಕ ತರ್ಕ, ಪ್ರೌಢಭಾಷೆ, ತಲಸ್ಪರ್ಶಿಯಾದ ಪಾಂಡಿತ್ಯದಿಂದ ಲೀಲಾಜಾಲವಾಗಿ ಮೂಲೆ ಮುಡುಕುಗಳನ್ನು ತಡಕಾಡುತ್ತ ಸಾಗುವ ಈ ಕೃತಿ ಇಸ್ಲಾಂ ಧರ್ಮದ ಬಗೆಗಿನ ನಮ್ಮ ಅರಿವಿನ ದಿಗಂತವನ್ನು ವಿಸ್ತರಿಸುತ್ತದೆ. ಕೃತಿಯು ಮಂಡಿಸುವ ವಿಚಾರಗಳಿಗೆ ಸಂಬಂಧಿಸಿದ ಮಾತು ಖಂಡಿತವಾಗಿಯೂ ಇದಲ್ಲ —ವಿಚಾರ ಮಂಡನಾ ಕ್ರಮದ ದೃಷ್ಟಿಯಿಂದ ಇದೊಂದು ಪ್ರಮುಖ ಕೃತಿ.

**ಜೀವನವೆಲ್ಲ ಪ್ರಾರ್ಥಿಸುವುದು : (ಅನು)** *ರೆವರೆಂಡ್ ಜಯವಂತ ಎಮ್. ಜೋಗರ್ಮಿ*

ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ ಕೃತಿಯಿದು. 'ಸಮಸ್ಯೆಗಳೂ ತೊಂದರೆಗಳೂ ಉದ್ಭವಿಸುವಾಗ', ' ಶ್ರಮೆಯ ಅಂಧಕಾರದ ದಿನಗಳು' 'ನನ್ನ ಪ್ರಾರ್ಥನೆಗಳಿಗೆ ಯಾವಾಗ ಉತ್ತರ ದೊರೆಯುವುದಿಲ್ಲ', 'ಬರಗಾಲದ ದಿನಗಳು', 'ಕಠೋರವಾದ ಶೋಧನೆಗಳು,' 'ಪಾಪಕ್ಕೆ ವಿರುದ್ಧವಾದ ಹೋರಾಟ', ' ಕೊರತೆಯ ಸಮಯಗಳಿಗಾಗಿ', 'ಪ್ರಾರ್ಥನೆಯು ಚಿಂತೆಗಳನ್ನೂ ಯೋಚನೆಗಳನ್ನೂ ಸೋಲಿಸುತ್ತದೆ', ' ನಿರುತ್ಸಾಹ', 'ಭಯ', 'ಇತರರಿಗಾಗಿ ಪ್ರಾರ್ಥಿಸುವುದು', 'ದೇವರೊಂದಿಗೆ ಅನುದಿನ ಸಂಭಾಷಣೆ' ಇವು ಇಲ್ಲಿಯ ಅಧ್ಯಾಯಗಳು. ಇದರ ಮೂಲ ಲೇಖಕರು ಮಾತೆ ಎಮ್. ಬಸಿಲೆಯಾ ಶ್ಲಿಂಕ.

**ಶ್ರೀ ಭಗವದ್ರಾಮಾನುಜ ಪ್ರಣೀತವಾದ 'ಶ್ರೀಮದ್ಗೀತಾಭಾಷ್ಯ' (ಮೊದಲನೆಯ ಸಂಪುಟ) ( ಅನು)** *ಡಾ. ಎನ್.ಎಸ್. ಅನಂತರಂಗಚಾರ್ಯ*

ಪ್ರಸ್ತುತ ಕೃತಿಯು ರಾಮಾನುಜಾಚಾರ್ಯರ ಸಂಸ್ಕೃತ ಕೃತಿಯ ಅನುವಾದ. ಮೊದಲ ಬಾರಿಗೆ- ಶ್ರೀರಾಮಾನುಜಾಚಾರ್ಯರ ಮೂಲ ಕೃತಿಯನ್ನು ಮೂಲಶ್ಲೋಕಗಳು, ಕನ್ನಡದಲ್ಲಿ ಪ್ರತಿ ಪದಾರ್ಥ, ರಾಮಾನುಜಾಚಾರ್ಯರ ಗೀತಾಭಾಷ್ಯದ ಮೂಲಪಾಠ, ಆ ಬಾಷ್ಯಕ್ಕೆ ಕನ್ನಡಾನುವಾದ ಮತ್ತು ' ತಾತ್ಪರ್ಯ ಚಂದ್ರಿಕೆ'ಯ ಆಧಾರದಿಂದ ಸಂಗ್ರಹವಾದ ವಿವರಣೆ —ಇದಿಷ್ಟನ್ನು ಕೊಡಲಾಗಿದೆ. ರಾಮಾನುಜಾಚಾರ್ಯರ ಕೃತಿಯನ್ನು ಮೂರು ಸಂಪುಟಗಳಲ್ಲಿ ತರುವ ಯೋಜನೆ ಇಲ್ಲಿಯದು.

**ಮುಕ್ತಿದಾತ :** *ಎಸ್.ಸಿ. ಚೆಮ್ಮಾಂತರ*

ಇದು ಡಾ. (ಫಾ) ಸಿ. ಬುಲ್ಕೆ ಎಸ್.ಜೆ. ಅವರ The Saviour ಗ್ರಂಥದ ಅನುವಾದ. ಮೂಲ ಗ್ರಂಥವು ' ಹೊಸ ಒಡಂಬಡಿಕೆ'ಯನ್ನು ಅವಲಂಬಿಸಿ, ಸಾಮಾನ್ಯ ಓದುಗನನ್ನು ಗಮನದಲ್ಲಿರಿಸಿಕೊಂಡು ಬರೆಯಲಾದ ಗ್ರಂಥ. ಪ್ರಸ್ತುತ ಅನುವಾದವು ಈ ಗ್ರಂಥದ ಕೇವಲ ಅನುವಾದವಾಗಿರದೆ ಕನ್ನಡದಲ್ಲಿ ಅದರ 'ಪುನರ್ನಿಮತಿ'ಯೂ ಆಗಿದೆ ಎಂಬುದನ್ನು ಒಪ್ಪಿಕೊಳ್ಳಬಹುದು. 'ಯೇಸು ಕ್ರಿಸ್ತರ ಅಪ್ರತ್ಯಕ್ಷ ಜೀವನ ಮತ್ತು ಪ್ರತ್ಯಕ್ಷ ಜೀವನ ಪ್ರಾರಂಭ.', 'ಗೇಲಿತೀಯದಲ್ಲಿ ಉಪದೇಶ ಆರಂಭ (ಮೇ) ', 'ಜುದೇಯ ಮತ್ತು ಪೆರೇಯ ನಾಡುಗಳಲ್ಲಿ ಬೋಧನೆ' 'ಸಂಕಷ್ಟ- ಮನೋವೇದನೆಯ ಅನುಭವ ಮತ್ತು ಪುನರುತ್ಥಾನ' ಇವು ಪ್ರಮುಖ ನಾಲ್ಕು ಭಾಗಗಳು. ಪ್ರಸ್ತುತ ಗ್ರಂಥವು ಅನುವಾದವನ್ನು ಗಮನದಲ್ಲಿರಿಸಿ ಹೇಳುವುದಾದರೆ, ಒಂದು ಉತ್ತಮ ಗ್ರಂಥ.

**ಮಹಾಭಾರತದಲ್ಲಿ ಧರ್ಮ :** *ಲೀಷನವರತ್ನ*

ಮಹಾಭಾರತದಲ್ಲಿ ಧರ್ಮದ ಪರಿಕಲ್ಪನೆ, ಮಹಾಭಾರತದ ಧಾರ್ಮಿಕ ಮೌಲ್ಯಗಳು, ಮಹಾಭಾರತದಲ್ಲಿ ಪಾಪಪ್ರಜ್ಞೆ ಹಾಗೂ ಉದ್ಧಾರ ತತ್ತ್ವ, 'ಮಹಾಭಾರತದಲ್ಲಿ ಕರ್ಮ ಹಾಗೂ ಕಾಲತತ್ತ್ವ ಮೀಮಾಂಸೆ', 'ಮಹಾಭಾರತದಲ್ಲಿ ವಿಶ್ವಧರ್ಮ ಹಾಗೂ ಪರಬ್ರಹ್ಮತತ್ತ್ವ'- ಇವು ಈ ಪುಸ್ತಕದ ಅಧ್ಯಾಯಗಳು. ಮಹಾಭಾರತವು ಒಂದು

ಧಾರ್ಮಿಕ ಕೃತಿ, ಧರ್ಮವೇ ಅದರ ಕೇಂದ್ರ ಪ್ರಜ್ಞೆ ಎಂಬುದನ್ನು ಸಾರುವ ಕೃತಿಯಿದು.

**ಮಹಾಮನೆಯ ಮಹಾತಾಯಿ :** *ಡಾ. ಗಂಗಮ್ಮ ಸತ್ಯಂಪೇಟೆ*

ಬಸವಣ್ಣನ ಪತ್ನಿಯರಾದ ಗಂಗಾಂಬಿಕೆ ಮತ್ತು ನೀಲಲೋಚನೆಯರ ಬದುಕಿಗೆ ಸಂಬಂಧಿಸಿದ ಕೃತಿಯಿದು. ಪತ್ನಿಯರು, ಮುಖ್ಯವಾಗಿ ನೀಲಲೋಚನೆ, ಕಂಡ ಪತಿಯ ಚಿತ್ರವೊಂದೆಡೆಯಾದರೆ ಶರಣ ಪ್ರಪಂಚದಲ್ಲಿ ಬಹುಮಟ್ಟಿಗೆ ಅಜ್ಞಾತವಾಗಿರುವ ನೀಲಲೋಚನೆಯನ್ನೇ ಕೇಂದ್ರವಾಗಿಸಿರುವ ಬರಹವಿದು.

ಈ ಕೃತಿಯನ್ನು ಈಗಾಗಲೇ ಇಲ್ಲಿ ವಿವೇಚಿಸಲಾಗಿರುವ ಅನೇಕ ಕೃತಿಗಳಂತೆ ಧಾರ್ಮಿಕ ಕೃತಿಯೆಂದು ತಕ್ಷಣಕ್ಕೆ ವರ್ಗೀಕರಿಸುವಂತಿಲ್ಲ. ಸಾಹಿತ್ಯ, ವಿಚಾರ, ತತ್ತ್ವ ಪುರಿಪುಷ್ಟಗೊಂಡ ಬರಹವಿದು. ಹಾಗಿದ್ದರೂ ಶರಣ ಧರ್ಮದ ಹಿನ್ನೆಲೆಯನ್ನು ಗಮನವಿರಿಸಿಕೊಂಡಿರುವ ಈ ಕೃತಿಯನ್ನು ಧಾರ್ಮಿಕ ಕೃತಿಗಳ ಹಿನ್ನೆಲೆಯಲ್ಲಿ ವಿವೇಚಿಸುವುದು ಅಸಹಜವಲ್ಲ.

ನೀಲಲೋಚನೆಯನ್ನು ಕೇಂದ್ರೀಕರಿಸಿಕೊಂಡು ಹೊರಟ ಈ ಕೃತಿಯ ಗತಿಯಲ್ಲಿ ಕಲ್ಯಾಣದ ಕ್ರಾಂತಿ, ಶಿವಶರಣರು, ಬಸವಣ್ಣ ಅಂದಿನ ಧಾರ್ಮಿಕ ಸ್ಥಿತಿ, ಮುಖ್ಯವಾಗಿ ಶರಣ ಚಳುವಳಿ ಇವೆಲ್ಲ ಬಂದು ಹೋಗುತ್ತವೆ. ಧರ್ಮವನ್ನು ಮಾನವೀಯ ಸಂಬಂಧದ ಹಿನ್ನೆಲೆಯಲ್ಲಿ ಅರ್ಥೈಸುವ ಈ ಕೃತಿ ಆ ಕಾರಣದಿಂದಲೇ ವರ್ಷದ ಉತ್ತಮ ಧಾರ್ಮಿಕ ಕೃತಿಗಳಲ್ಲೊಂದಾಗುತ್ತದೆ.

**ಪ್ರಸನ್ನ ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರ ಭಾಷ್ಯ** *(ಸ್ತೋತ್ರ ರೂಪ)*

ಶ್ರೀ ಪ್ರಸನ್ನ ಶ್ರೀನಿವಾಸಚಾರ್ಯರ ಈ ಕೃತಿಯಲ್ಲಿ ಸಂಸ್ಕೃತದ ಮೂಲ ಶ್ಲೋಕಗಳು ಮತ್ತು ಪದ್ಯ ರೂಪದಲ್ಲಿ ಅವುಗಳ ಕನ್ನಡ ಭಾಷ್ಯವೂ ಇದೆ. ಪ್ರೊ. ಕೆ.ಟಿ. ಪಾಂಡುರಂಗರವರ ಮುನ್ನುಡಿ ಮತ್ತು ಜಿ. ತಿರುಮಲರವರ ವಿಸ್ತಾರವಾದ ಪ್ರವೇಶಿಕೆಯಲ್ಲಿ ಲಭ್ಯ.

**ಭಕ್ತರ ಕೈವಾರಿ :** *ಶ್ರೀ ಪದ್ಮಾವತೀ ದೇವಿ*

ಶ್ರೀ ಸುಖದೇವರ ಕೃತಿಯಲ್ಲಿ ಜೈನ ಮಾತೆ ಉಗಾರ ಪದ್ಮಾವತಿಯ ಕುರಿತ ಕಥೆಯಿದೆ. ಇದರ ಹಿಂದಿ ಅನುವಾದವೂ ಈ ಕೃತಿಯಲ್ಲಿಯೇ ಲಭ್ಯ.

ಒಟ್ಟಿನಲ್ಲಿ ಈ ವರ್ಷದ ಧಾರ್ಮಿಕ ಕೃತಿಗಳು ವೈಶಿಷ್ಟ್ಯಪೂರ್ಣವಾಗಿವೆ. ಕ್ರೈಸ್ತ, ಇಸ್ಲಾಂ, ಜೈನ, ವೀರಶೈವ, ಧರ್ಮಗಳವರೆಗೆ ಈ ಹರಹು ವಿಸ್ತರಿಸುತ್ತದೆ. ಹಾಗಿದ್ದರೂ ಹೆಚ್ಚಿನ ಕೃತಿಗಳ ಜೀವನಾಡಿ ಹಿಂದೂ ಧರ್ಮ. ಧರ್ಮವನ್ನು ಅದಷ್ಟು 'ಜೀವನ'ದ ಹತ್ತಿರಕ್ಕೆ ತಂದು ನಿಲ್ಲಿಸುವ 'ಏಕೀಕೃತ ಮನಸ್ಸೊಂ'ದರ ಪ್ರಯತ್ನ ಇಲ್ಲಿಯದು. ಆದರೆ 'ಮಂತ್ರ ತಂತ್ರ ಯಂತ್ರ' ದಂತಹ ಕೃತಿಯೊಂದು ಇದಕ್ಕೆ ಅಪವಾದವಾಗಿದ್ದು ಅದು ಧರ್ಮವನ್ನು 'ನಿಗೂಢ'ಗೊಳಿಸುವತ್ತ ಆಸಕ್ತಿ ವಹಿಸಿದೆ. ಉಳಿದಂತೆ ಇತರೆಲ್ಲ ಕೃತಿಗಳು ಧರ್ಮವನ್ನು ಅಪ್ಯಾಯಮಾನಗೊಳಿಸುವ ಪ್ರಯತ್ನಕ್ಕೊಡ್ಡಿಕೊಂಡಿವೆ. ಇದು ನಮ್ಮ ರಾಜಕೀಯ, ಸಾಮಾಜಿಕ ಧಾರ್ಮಿಕ ವ್ಯವಸ್ಥೆಯ ನೇರ ಪರಿಣಾಮ.

## ವೈಚಾರಿಕ ಸಾಹಿತ್ಯ

*ವಿಠಲ್‌ರಾವ್. ಟಿ. ಗಾಯಕ್ವಾಡ್*

---

ಇತ್ತೀಚಿನ ವರ್ಷಗಳಲ್ಲಿ ಬದುಕಿನಲ್ಲಿ ದಿನೇದಿನೇ ಏರುಪೇರುಗಳಾಗಿವೆ. ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ವೈಜ್ಞಾನಿಕ ವಿಚಾರಗಳು ನಿತ್ಯ ಬದುಕಿನಲ್ಲಿ ಅನೇಕ ಪಲ್ಲಟಗಳನ್ನು ಉಂಟುಮಾಡಿವೆ. ಅದರಿಂದ ಉಂಟಾದ ಪರಿಣಾಮದ ಗಂಭೀರತೆ ಸಾಂಸ್ಕೃತಿಕ ತಲ್ಲಣಕ್ಕೆ ಕಾರಣವಾಗಿದೆ. ಅದನ್ನು ವೈಚಾರಿಕವಾಗಿ ಪರಿಶೀಲಿಸಿ ವಿನಾಶಮನಸ್ಕಮತಿಗಳ ಪ್ರಚೋದನೆಗೆ ಬಲಿಯಾಗುತ್ತಿರುವ ಜನಾಂಗಕ್ಕೆ ಸತ್ಯಾಂಶಗಳ ಮೂಲಕ ಅರಿವನ್ನು ತಂದುಕೊಡುವ ವೈಚಾರಿಕ ಕೃತಿಗಳು ಈ ವರ್ಷದಲ್ಲಿ ಬಹಳಷ್ಟು ಬಂದಿವೆ. ಅವುಗಳ ಒಟ್ಟು ಧೋರಣೆ ಸಮಕಾಲೀನ ಸಮಸ್ಯೆಗಳ ಮೂಲನೆಲೆಯನ್ನು ಗುರುತಿಸಿ ನಿರಂತರವಾಗಿ ಬೆಳೆಯುತ್ತಿರುವ ಹಿಂಸೆಯನ್ನು ಸಾಧಾರ ಸಮೇತ ವಿರೋಧಿಸುವುದಾಗಿದೆ.

ವೈಚಾರಿಕ ಚರ್ಚೆಯೆಂಬುದು ಹೊಸತೇನಲ್ಲ; ಕಾಲಕಾಲದ ಸಂವೇದನೆಗಳನ್ನು ಅರಗಿಸಿಕೊಂಡು ಅದು ನಿರಂತರವಾಗಿ ಬೆಳೆಯುತ್ತಲೇ ಇದೆ. ಈ ವರ್ಷದಲ್ಲಿ ರಾಷ್ಟ್ರೀಯ ಅಂತಾರಾಷ್ಟ್ರೀಯ ವಿಚಾರಗಳು ಬದುಕನ್ನು ಬಲವಾಗಿ ಅಪ್ಪಳಿಸಿವೆ. ಮಂದಿರ-ಮಸೀದಿ ನಿರ್ಮಾಣ, ಹಿಂದೂ-ಮುಸ್ಲಿಂ ಕೋಮುವಾದ, ಡಂಕಲ್ ವಿವಾದಗಳು ಸಾಮಾನ್ಯ ಜನಜೀವನದಲ್ಲಿ ಉಂಟು ಮಾಡಿದ ಪರಿಣಾಮ ಗಂಭೀರವಾದುದು. ಈ ವಿಚಾರವನ್ನು ಕುರಿತಂತೆ 'ರಾಷ್ಟ್ರೀಯತೆ'ಯ ಹಿನ್ನೆಲೆಯಲ್ಲಿ ಅನೇಕ ಕೃತಿಗಳು ಪ್ರಕಟವಾಗಿವೆ. ಅಲ್ಲದೆ ವಿಜ್ಞಾನ ಮತ್ತು ಧರ್ಮದ ದ್ವಂದ್ವಗಳು, ಮಾನವತಾವಾದದ ನವೀನ ಸ್ವರೂಪ — ಇವೇ ಮುಂತಾದ ವಿಷಯಗಳನ್ನು ಕುರಿತಂತೆಯೂ ಕೃತಿಗಳು ಬಂದಿವೆ. ಈ ಕೃತಿಗಳು ತಮ್ಮ ಹಿಂದಿನ ವೈಚಾರಿಕ ಚಿಂತನೆಯನ್ನು ಆಧರಿಸಿರುವಂತೆಯೇ ಅವುಗಳನ್ನು ಮರು ಪರಿಶೀಲನೆಗೂ ಒಳಗು ಮಾಡಿದೆ.

ಈ ಸಾಲಿನಲ್ಲಿ ಗೌರೀಶ ಕಾಯ್ಕಿಣಿಯವರ ಎರಡು ಕೃತಿಗಳು ಪ್ರಕಟವಾಗಿವೆ. 'ನವಮಾನವತಾವಾದ' ಹಾಗೂ 'ಆರ್ಕೆಸ್ಟ್ರಾ ಮತ್ತು ತಂಬೂರಿ' (ಕಾಯ್ಕಿಣಿಯವರ ವಿಚಾರ ಸಾಹಿತ್ಯ -೧. ಪ್ರಕಟವಾಗಿದೆಯಾದರೂ ಅದು ಹಿಂದಿನ ಕೃತಿಗಳ ಸಮಗ್ರ ಸಂಕಲನ.) ನವಮಾನವತಾವಾದ ಕೃತಿಗೂ ಮೊದಲೇ 'ವಿಚಾರವಾದ', 'ನಾಸ್ತಿಕನೂ ಮತ್ತು ದೇವರು' ಮುಂತಾದ ವೈಚಾರಿಕ ಕೃತಿಗಳಲ್ಲಿ ಮಾನವ ಸಂಬಂಧದ ಅರ್ಥಪೂರ್ಣ

ವಿಚಾರಗಳನ್ನು ಅಭಿವ್ಯಕ್ತಿಸಿದ್ದಾರೆ. ಅವರ ವೈಚಾರಿಕ ಚಿಂತನೆಗಳು ತಾತ್ತ್ವಿಕವಾದರೂ ಆಧ್ಯಾತ್ಮಿಕವಲ್ಲ; ಐತಿಹಾಸಿಕ ಅಂಶಗಳನ್ನು ಆಧರಿಸಿದಂತಹವು. ಅವರು ಹೇಳುತ್ತಿರುವ ಅನೇಕ ವಿಚಾರಗಳು ಶಿಕ್ಷಣ ವ್ಯವಸ್ಥೆಯಿಂದ ರೂಪುಗೊಂಡಿರುವ ಬುದ್ಧಿಮತ್ತೆಗೆ ಸವಾಲೆಸೆಯುತ್ತದೆ. ಭಾರತದಲ್ಲಿ ಅರವಿಂದ, ಗಾಂಧೀಜಿ, ಅಂಬೇಡ್ಕರ್, ಲೋಹಿಯಾ ಮತ್ತು ಮಾರ್ಕ್ಸ್‌ವಾದಗಳಷ್ಟೇ ಗಂಭೀರವಾದವು ರಾಯ್ ಚಿಂತನೆಗಳು. ಮೊದಲು ಮಾರ್ಕ್ಸ್‌ನ ವಿಚಾರಗಳ ಪ್ರತಿಪಾದಕರಾಗಿದ್ದ ರಾಯ್, ಯುದ್ಧ ಮತ್ತು ಸ್ಟ್ಯಾಲಿನ್ ಧೋರಣೆಗಳಿಂದ ಭ್ರಮನಿರಸನಗೊಂಡು ಮಾನವೀಯತೆಯೇ ಆಧುನಿಕ ಯುಗದ ಜೀವಾಳವೆಂದು ಪ್ರತಿಪಾದಿಸಿದರು. 'ಮಾನವ ಸಮಾಜಕ್ಕೆ ಮಾನವನೇ ಸಿದ್ಧಗೊಳ್ಳಬೇಕು' ಎಂದು ಅವರು ಹೇಳಿ ಮನಸ್ಸು -ದೇಹ, ಆತ್ಮ- ಭೌತಿಕತೆಯ ನಡುವೆ ಉಂಟಾದ ಕಂದಕವನ್ನು ತೊಡೆಯಬೇಕೆನ್ನುತ್ತಾರೆ. ವಿಚಾರ ಮತ್ತು ಆಚಾರಗಳ ಸಾಂಗತ್ಯ, ಸಾಮಂಜಸ್ಯವನ್ನು ನವಮಾನವತಾವಾದದ ಮೂಲಕ ಸಾಧಿಸಬೇಕಾಗಿದೆ ಎಂಬುದನ್ನು ನಿಖರವಾಗಿ ಗುರುತಿಸುತ್ತಾರೆ.

''ಮಾನವೀಯ ಅನುಕಂಪೆ, ಸಹಾನುಭೂತಿ, ಜಾತಿ ಮತ ಪಂಥ, ಉಚ್ಚ ನೀಚಗಳೆಂಬ ಭೇದಗಳನ್ನು ಮೀರಿದ ಮನುಷ್ಯತ್ವದ ಸಾಮಯಿಕ ಭಾವನೆ ಎಂಬ ಅರ್ಥದ ಮಾನವೀಯತೆಯನ್ನು ಮೀರಿದ ತಾತ್ವಿಕವಾದ ತಾತ್ಪರ್ಯದ ಪರಿಕಲ್ಪನೆ ಇದು - ಈ ಮಾನವತಾವಾದ ಎಲ್ಲಾ ಇತಿಹಾಸ, ಸಂಸ್ಕೃತಿ, ನಾಗರೀಕತೆಗಳ ಭೂತ, ಭವಿಷ್ಯತ್‌ಗಳಿಗೆ ಮಾನವನೇ ಮೂಲ - ಎಂಬ ದೃಷ್ಟಿಯಿಂದ ಕಾಣುವ ಈ ಮಾನವತಾ ವಿಚಾರ 'ನವ' ವಿದ್ದಂತೆಯೇ 'ಮೂಲಗಾಮಿ'- 'New Humanism'ಇದ್ದಂತೆಯೇ ' Radical Humanism'' (ಪುಟ -೧೭). ಈ ವಿಚಾರಗಳು ಪ್ರತಿಯೊಂದು ಧರ್ಮದಲ್ಲೂ ಇವೆಯಾದರೂ ರಾಯ್ ಅದನ್ನು ಮಾರ್ಕ್ಸ್‌ವಾದದ ಉದಾತ್ತ ತತ್ತ್ವಗಳೊಂದಿಗೆ ಗುರುತಿಸಿರುವುದು ವಿಶೇಷವೆನಿಸುತ್ತದೆ. ಮಾರ್ಕ್ಸ್ 'ಧರ್ಮ ಒಂದು ಅಫೀಮು' ಎಂದು ಹೇಳಿದ್ದಾನೆ. ಅಂದರೆ ಧರ್ಮದ ಅಂಧತ್ವ ನೈಜತತ್ವಗಳನ್ನು ಮರೆ ಮಾಚುವುದು. ಅದನ್ನು ತಪ್ಪಾಗಿ ಗ್ರಹಿಸಿದ ಸ್ಟ್ಯಾಲಿನ್ ಮುಂತಾದವರು ರಕ್ತಪಾತ, ಹಿಂಸೆಯಿಂದಲೇ ಸರ್ವಾಧಿಕಾರಿಗಳಾಗಿ ಮೆರೆದರು. ಮಾರ್ಕ್ಸ್‌ವಾದದ ಒಂದು ಮಿತಿಯೆಂದರೆ ಒಂದು ವರ್ಗಕ್ಕೂ ದಕ್ಕುವ ಅಧಿಕಾರ ಕೇಂದ್ರೀಕರಣ. ರಾಯ್ ಈ ಅಂಶಗಳನ್ನು ಗುರುತಿಸಿ ಅದನ್ನು ಮೀರಿಹೋಗಬೇಕಾದ ಅಗತ್ಯವಿದೆಯೆಂಬುದನ್ನು ಪ್ರತಿಪಾದಿಸುತ್ತಾರೆ. ಕಾಯ್ಕಿಣಿಯವರು ಈ ವಿಚಾರಗಳನ್ನು ಇಟ್ಟುಕೊಂಡು ಧರ್ಮ, ಸ್ವಾತಂತ್ರ್ಯ, ಪುನರುಜ್ಜೀವನ, ಜಾಗೃತಿಯ ಪರಿಣಾಮಗಳು, ಪ್ರಸ್ತುತ ಬದುಕಿನ ಪತನದ ಕಾರಣಗಳು, ವಿಜ್ಞಾನದಿಂದ ಆತ್ಮಜಾನ ಸ್ಫುಟಗೊಳ್ಳಬೇಕಾದ ಬಗೆ, ನೀತಿಯ ನೆಲೆ, ರಾಜಕಾರಣದ ಸ್ವರೂಪ ಮತ್ತು ಸ್ಥಿತಿಗತಿ, ಕ್ರಾಂತಿ - ಚಳುವಳಿಗಳ ವೈಫಲ್ಯಕ್ಕೆ ಕಾರಣವಾದ ಅಂಶಗಳನ್ನು ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ರಾಯ್ ವಾದ ಗಾಂಧೀವಾದಕ್ಕಿಂತ ಹೇಗೆ ಭಿನ್ನ ಮತ್ತು ಈ ಇಬ್ಬರ ಚಿಂತನೆಗಳ ವಸ್ತುಸ್ಥಿತಿಯ ಪ್ರಸ್ತುತತೆಯನ್ನು ಪ್ರಸ್ತಾಪಿಸುತ್ತಾರೆ. ಗಾಂಧೀಜಿಯವರ ಗ್ರಾಮಸ್ವರಾಜ್ಯದ ಚಿಂತನೆಗಳನ್ನು ಒಪ್ಪದ ರಾಯ್ ಗ್ರಾಮೋದ್ಯೋಗ-ಕೈಗಾರಿಕೆಗಳ ಮೇಲೆ ನೆಲೆಗೊಂಡ ಆರ್ಥಿಕ ವ್ಯವಸ್ಥೆಗೆ

ಭವಿಷ್ಯವಿಲ್ಲವೆನ್ನುತ್ತಾರೆ. ಆದರೆ ನೆಹರು ಅವರಿಬ್ಬರ ಚಿಂತನೆಯ ಮುಖ್ಯ ತುಡಿತಗಳನ್ನು ಗ್ರಹಿಸದೆ ಕೈಗಾರಿಕಾ ಭಾರತ ನಿರ್ಮಿಸಲು ಹೋದರು. ರಾಯ್ ಭಾರತೀಯ ಬದುಕಿಗೆ ಅಗತ್ಯವಾದ ಇಪ್ಪತ್ತೆರಡು ಮೂಲತತ್ವಗಳನ್ನು ಹೇಳಿ, ವಿಶ್ವದ ನಿಯಮಬದ್ಧ ನಿಯಂತ್ರಣ, ಬುದ್ಧಿಪ್ರಾಮುಖ್ಯದ ವೈಚಾರಿಕತೆಯ ಸ್ವರೂಪ, ಮಾನವ ಪ್ರಗತಿಗೆ ಕಾರಣಗಳಾದ ಸ್ವಾತಂತ್ರ್ಯ ಮತ್ತು ಸತ್ಯಜ್ಞಾನ ಈ ಮೊದಲಾದ ಹನ್ನೊಂದು ತತ್ತ್ವಗಳು ಅತ್ಯಗತ್ಯವಾದುವೆಂದು ಹೇಳುತ್ತಾರೆ. ರಾಯ್ 'ಮಾನವನ ಸ್ವಭಾವವೇ ಆಧ್ಯಾತ್ಮ' ಎಂದು ಹೇಳಿ ವಿಜ್ಞಾನಕ್ಕೆ ವಿರುದ್ಧವಾದುದಲ್ಲಿ ಆಧ್ಯಾತ್ಮ ಎಂಬುದನ್ನು ಗುರುತಿಸಿದ್ದಾರೆ. 'ತನ್ನತನದ ಅರಿವೇ' ಮಾನವನ ಅನನ್ಯತೆ. ಹಾಗಾಗಿ 'ಮಾನವತಾವಾದ'ವೂ ನಿಸರ್ಗ ಸಹಜವಾದುದೇ ಆಗಿದೆ. ಈ ಕೃತಿಯಲ್ಲಿ ಮಂಡಿತವಾಗಿರುವ ವಿಚಾರಗಳು ಪ್ರಚೋದನೆ ಹಾಗೂ ಚಿಂತನೆಗೆ ಪ್ರೇರಕವಾಗಿರುವುದರಿಂದ ಗಮನಾರ್ಹ.

'ಆರ್ಕೆಸ್ಟ್ರಾ ಮತ್ತು ತಂಬೂರಿ ' ಕೃತಿಯಲ್ಲಿ ಕಾಯ್ಕಿಣಿಯವರು ಸಂಗೀತ ಮತ್ತು ರಂಗಭೂಮಿಯನ್ನು ಕುರಿತು ೧೪ ವೈಚಾರಿಕ ಲೇಖನಗಳನ್ನು ಬರೆದಿದ್ದಾರೆ. ಭಾರತೀಯ ಸಂಗೀತ ಮತ್ತು ರಂಗಭೂಮಿಯನ್ನು ಸಾಧಾರವಾಗಿ ನಿರೂಪಿಸುತ್ತಲೇ ಬ್ರಿಟಿಷರು ತಮ್ಮ ಪ್ರಭಾವವನ್ನು ಭಾರತೀಯ ಸಂಗೀತದ ಮೇಲೆ ಬೀರಲಾಗದಿದ್ದುದನ್ನು ಸ್ಪಷ್ಟವಾಗಿ ಗುರುತಿಸುತ್ತಾರೆ. ಅರಬ್, ಪಾರ್ಶಿ ಸಂಗೀತಗಳು ಮಾತ್ರ ಭಾರತೀಯ ಸಂಗೀತದ ಮೇಲೆ ಪ್ರಭಾವಿಸಿದವು ಎಂದು ಹೇಳುತ್ತಾರೆ. ಸಂಗೀತದೊಂದಿಗೆ ಆರ್ಕೆಸ್ಟ್ರಾ ಬಂದುದರಿಂದ ವ್ಯಕ್ತಿ ಪ್ರಧಾನತೆ ಹಾಗೂ ರಾಗ ಪ್ರಧಾನತೆ ನಾಶವಾಗಿ ವೃಂದ ಪ್ರಧಾನತೆಗೆ ಒತ್ತುಕೊಟ್ಟುದರಿಂದ ಅದು ಕರ್ಕಶಮಯವಾಯಿತೆಂದು ಸಾಧಾರವಾಗಿ ನಿರೂಪಿಸಿದ್ದಾರೆ. ಭಾವಪ್ರಧಾನವಾದ ಸಂಗೀತ ಮತ್ತು ರಂಗಭೂಮಿಯನ್ನು ಕೂಡ ವೈಚಾರಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿರುವುದೇ ಈ ಕೃತಿಯ ವೈಶಿಷ್ಟ್ಯವಾಗಿದೆ. ಲಲಿತಕಲೆಗಳನ್ನು ಪಂಡಿತ ಬುದ್ಧಿಯಿಂದ ನೋಡುವುದಕ್ಕೂ ವೈಚಾರಿಕವಾಗಿ ನೋಡುವುದಕ್ಕೂ ವ್ಯತ್ಯಾಸವಿದೆ. ಯಾವುದೇ ಮುಲಾಜಿಗೆ ಒಳಗಾಗದ ಅವರು ಅಪ್ರಿಯ ನಿಲುವುಗಳನ್ನು ಕೂಡ ಹಿಂಜರಿಯದೆ ನಿರೂಪಿಸುವುದರಿಂದಾಗಿ ಈ ಕೃತಿ ಮುಖ್ಯವಾಗುತ್ತದೆ. ಯಕ್ಷಗಾನ, ಮರಾಠಿ ರಂಗಭೂಮಿ, ಬಯಲಾಟಗಳ ಬಗ್ಗೆ ಹೊಸಹೊಸ ಹೊಳಹುಗಳನ್ನು ಕೊಡುತ್ತದೆ. ಇಂಗ್ಲೀಷ್, ಸಂಸ್ಕೃತ, ಮರಾಠಿ, ಕೊಂಕಣಿ, ಕನ್ನಡ- ಈ ಮುಂತಾದ ಆಕರಗಳಿಂದ ವಿಷಯವನ್ನು ಸಂಗ್ರಹಿಸಿ ಬರೆದ ಕಿರುಲೇಖನಗಳಾದರೂ ಅಧ್ಯಯನ ಯೋಗ್ಯವಾಗಿದೆ.

**ರಾಷ್ಟ್ರೀಯತೆ ಮತ್ತು ಮುಸ್ಲಿಮರು :** *ಫಕೀರ್ ಮಹಮ್ಮದ್ ಕಟ್ಪಾಡಿ*

ಬ್ರಿಟಿಷರು ಭಾರತವನ್ನು ಸಮಗ್ರವಾಗಿ ಆಳಲು ತೊಡಗಿದ ಮೇಲೆ ಭಾರತದಲ್ಲಿ ರಾಷ್ಟ್ರೀಯತೆ ಜಾಗೃತವಾಯಿತು. ಆವರೆವಿಗೂ ರಾಜ ಪ್ರಭುತ್ವದಲ್ಲಿದ್ದ ಭಾರತದ ವ್ಯವಸ್ಥೆಯು ಧಾರ್ಮಿಕ ಬದ್ಧವಾಗಿದ್ದರೂ ಅದು ಕೋಮು ಸಮಸ್ಯೆಯನ್ನು ಹೊಂದಿರಲಿಲ್ಲ. ಬ್ರಿಟಿಷರು ಭಾರತವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡ ಮೇಲೆ ಜಾತೀಯತೆ ಮತ್ತು ಕೋಮುಭಾವನೆಗಳನ್ನು ಪ್ರಚೋದಿಸುವ ಮೂಲಕ ಅನೈಕ್ಯ

ಪರಿಸ್ಥಿತಿಯನ್ನು ನಿರ್ಮಿಸಿದರು. ಮೊದಲು ಸ್ವಾತಂತ್ರ್ಯ ಸಂಗ್ರಾಮದ ವೈಫಲ್ಯವೇ ಇದಕ್ಕೆ ಸ್ಪಷ್ಟ ನಿದರ್ಶನ. ಅನಂತರ ಬ್ರಿಟಿಷರು ಆ ನೀತಿಯನ್ನೇ ಮುಂದುವರೆಸಿದರಾದರೂ ಭಾರತದ ಆಡಳಿತದಿಂದ ನಿರ್ಗಮಿಸುವುದು ಅನಿವಾರ್ಯವಾಯಿತು. ಈ ವಿಚಾರವನ್ನು ಕಟ್ಪಾಡಿಯವರು ತಮ್ಮ ಕೃತಿಯಲ್ಲಿ ಗಂಭೀರವಾಗಿ ಚರ್ಚಿಸಿದ್ದಾರೆ. ಪ್ರಜಾಪ್ರಭುತ್ವದ ಮೌಲ್ಯಗಳನ್ನು ತನ್ನ ಆಡಳಿತ ನೀತಿಯನ್ನಾಗಿಸಿಕೊಂಡ ಭಾರತದ ಪರಿಸ್ಥಿತಿ ಕೋಮುಬಾಧೆಗೆ ಒಳಗಾಯಿತು. ಇದಕ್ಕೆ ಕಾರಣವಾದ ಅಂಶಗಳನ್ನು ಹಿಂದೂ -ಮುಸ್ಲಿಂ ಎರಡೂ ಕಡೆಯಿಂದಲೂ ಉದ್ಭವವಾದುವು. ಅಲ್ಪಸಂಖ್ಯಾತ ವರ್ಗದ ಮೇಲಿನ ಸಂಶಯ ಮತ್ತು ಬಹುಸಂಖ್ಯಾತವರ್ಗದ ಮೇಲಿನ ಭಯ ಪರಸ್ಪರರಲ್ಲಿ ಕೋಮುಸಂಸ್ಥೆಗಳು ಹುಟ್ಟಿಕೊಳ್ಳಲು ಕಾರಣವಾದುದನ್ನು ಗುರುತಿಸಿ ರಾಷ್ಟ್ರೀಯತೆಯ ಮೂಲಕ ಅದು ನಿರ್ಮೂಲನಗೊಳ್ಳುತ್ತದೆಂಬುದು ಕಟ್ಪಾಡಿಯವರ ಆಶಯವಾಗಿದೆ.

‘‘ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಧರ್ಮವನ್ನು ರಾಜಕೀಯದೊಂದಿಗೆ ಬೆಳೆಸುವ ಬಾಲಗಂಗಾಧರತಿಲಕ್, ಅರವಿಂದ ಘೋಷ್, ಲಾಲ ಲಜಪತರಾಯ್, ಬಿಪಿನ್ ಚಂದ್ರಪಾಲ್ ಮುಂತಾದವರ ತಪ್ಪು ಹೆಜ್ಜೆಯಿಂದಾಗಿ ರಾಷ್ಟ್ರೀಯ ಐಕ್ಯತೆಗೆ ಧಕ್ಕೆಯುಂಟಾಯಿತು. ಗಣೇಶೋತ್ಸವ, ದುರ್ಗಾಪೂಜೆಯನ್ನು ಬಳಸಿದ ರಾಷ್ಟ್ರೀಯ ಚಳವಳಿ ಇತರ ಧರ್ಮಿಯರನ್ನು ಅನುಮಾನ, ಸಂಶಯದಲ್ಲಿ ಕೆಡವುವಂತಾಯಿತು. ಭಾರತದ ಭೂಪಟದ ನಡುವೆ ದುರ್ಗೆಯನ್ನು ನಿಲ್ಲಿಸಿ ಕೈಗೆ ರಾಷ್ಟ್ರೀಯ ಧ್ವಜವನ್ನು ಕೊಡುವಲ್ಲಿ, ರಾಷ್ಟ್ರೀಯತೆ ಎನ್ನುವುದು ಹಿಂದೂ ಪುನರುತ್ಥಾನವಾದಿಗಳ ಸ್ವತ್ತಾಗಿ ಬಿಟ್ಟಿತೆ ಎನ್ನುವ ಭಯ ಅಲ್ಪಸಂಖ್ಯಾತರಲ್ಲಿ ಮೂಡತೊಡಗಿತ್ತು’’(ಪುಟ ೩,೪) ಸರ್ವಧರ್ಮಿಯರನ್ನು ಒಳಗೊಳ್ಳದ ಸ್ವಾತಂತ್ರ್ಯ ಚಳವಳಿ ಮತ್ತು ಅದರ ರೀತಿನೀತಿಗಳು ರಾಷ್ಟ್ರೀಯತೆಯಲ್ಲಿ ಬಿರುಕುಂಟಾಗಲು ಕಾರಣವಾದುದು ಗಮನಾರ್ಹ ಅಂಶ. ಕಟ್ಪಾಡಿಯವರ ಈ ವಿಚಾರಗಳು ಕೋಮುಸಂಸ್ಥೆಗಳ ಹುಟ್ಟು, ಪರಸ್ಪರ ಪ್ರತ್ಯೇಕತೆಗಾಗಿ ಹೋರಾಟಗಳಿಗೆ ಮೂಲ ಕಾರಣಗಳು ಏನೆಂಬುದನ್ನು ಸ್ಪಷ್ಟಪಡಿಸುತ್ತವೆ. ನಮ್ಮ ಪ್ರಜಾಪ್ರಭುತ್ವ ನೀತಿಯೂ ಈ ಸಮಸ್ಯೆಯಿಂದ ಮುಕ್ತವಾಗಿಲ್ಲ. ಆದ್ದರಿಂದ ಶಿಕ್ಷಣ, ಸರ್ಕಾರಿ ಕಾರ್ಯಕ್ರಮಗಳೆಲ್ಲ ಅವಶ್ಯ ಬದಲಾಗಬೇಕೆಂದು ಒತ್ತಿ ಹೇಳುತ್ತಾರೆ. ಭಾರತದಲ್ಲಿ ಸಮಗ್ರತೆಗೆ ಭಂಗ ತಂದು ಸವಾಲಾಗಿರುವ ‘ರಾಮ ಜನ್ಮಭೂಮಿ - ಬಾಬ್ರಿ ಮಸೀದಿ ವಿವಾದ’ವನ್ನು ಕುರಿತು ಕಟ್ಪಾಡಿ ಅವರು ಐತಿಹಾಸಿಕವಾಗಿ ವಿವೇಚನೆ ಮಾಡಿದ್ದಾರೆ. ೧೮೫೩ರಲ್ಲಿ ಹುಟ್ಟಿಕೊಂಡ ಈ ಸಣ್ಣಪ್ರಮಾಣದ ವಿವಾದ ಡಿಸೆಂಬರ್ ೬, ೧೯೯೨ರಲ್ಲಿ ಮಸೀದಿ ಧ್ವಂಸವಾಗುವವರೆಗೂ ಭೂತಾಕಾರವಾಗಿ ಬೆಳೆದ ಈ ಘಟನೆಯನ್ನು ಅವರು ವೈಚಾರಿಕವಾಗಿ ಚಿಂತಿಸಿದ್ದಾರೆ.

ಕೋಮು ಸಮಸ್ಯೆಯನ್ನು ಕುರಿತಂತೆ ಇನ್ನೂ ಅನೇಕ ಕೃತಿಗಳು ಪ್ರಕಟವಾಗಿವೆ. ‘ಭಾರತದಲ್ಲಿ ಕೋಮುವಾದ - ಈ ವಿಷಚಕ್ರದಿಂದ ಬಿಡುಗಡೆ ಹೇಗೆ?’, ‘ದಕ್ಷಿಣ ಕನ್ನಡದಲ್ಲಿ ಅಯೋಧ್ಯಾ ಕೋಮುಗಲಭೆಗಳು: ಒಂದು ಸಮೀಕ್ಷೆ’, ‘ಕೋಮುವಾದ ಮತ್ತು ಜನಸಂಸ್ಕೃತಿ’, ‘ಹಿಂದೂ ರಾಷ್ಟ್ರವೋ ? ಹಿಟ್ಲರ್ ರಾಷ್ಟ್ರವೋ?’-ಇವೇ

ಮೊದಲಾದುವು. ೧೯೯೨ರ ಡಿಸೆಂಬರ್ ಆರರಂದು ಬಾಬರಿ ಮಸೀದಿಯನ್ನು ನಾಶ ಮಾಡಿದ ಮೇಲೆ ಭಾರತದಲ್ಲಿ ಉಂಟಾದ ಗಲಭೆಗಳು, ಅವುಗಳಿಂದ ಜನಸಾಮಾನ್ಯರ ಮೇಲೆ ಉಂಟಾದ ದುಷ್ಪರಿಣಾಮಗಳ ಬಗ್ಗೆ ಈ ಕೃತಿಗಳು ಹೆಚ್ಚು ಒತ್ತುಕೊಡುತ್ತವೆ. ಈ ಎಲ್ಲಾ ಕೃತಿಗಳು ಧಾರ್ಮಿಕ ಪ್ರಚೋದನೆಯಿಂದ ಕೋಮುಜ್ವಾಲೆಯನ್ನು ಉಂಟು ಮಾಡಿದ ಕೋಮುವಾದಿಗಳ ಕೃತ್ಯವನ್ನು ವಿಚಾರಬದ್ಧವಾಗಿ ಖಂಡಿಸುತ್ತವೆ.

'ಭಾರತದಲ್ಲಿ ಕೋಮುವಾದ ಒಂದು ವಿಷಚಕ್ರ'ವೆಂದು ಪರಿಗಣಿಸಿರುವ ಕೆ. ಎನ್. ಪಣಿಕ್ಕರ್ ಭಾರತದಲ್ಲಿ ಅದರ ಸಾಮಾಜಿಕ ಮತ್ತು ರಾಜಕೀಯ ಮುಖಗಳು ಹೇಗಿವೆ ಎಂಬುದನ್ನು ವಿವರಿಸುತ್ತಾರೆ. ''ಕೋಮುವಾದದೊಡನೆ ಸಂಬಂಧಿಸಿದ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯಾನಂತರದ ರಾಜಕೀಯ ಪಕ್ಷಗಳನ್ನು ಎರಡು ಭಾಗವಾಗಿ ಕಾಣಬಹುದು. ಸ್ವಾತಂತ್ರ್ಯಪೂರ್ವದ ಹಿಂದೂ ಮಹಾಸಭಾ, ಮುಸ್ಲಿಂ ಲೀಗ್, ಸ್ವಾತಂತ್ರ್ಯಾನಂತರದ ಜನಸಂಘ, ಭಾಜಪ, ಅಕಾಲಿದಳ - ಇವು ಮೊದಲನೆಯ ಭಾಗ......... ಎರಡನೇ ಬಗೆಯ ಪಕ್ಷಗಳಿಗೆ ಕಾಂಗ್ರೆಸ್ ಸಂಸ್ಥೆ'' (ಪುಟ ೩,೪).

ಕೋಮುವಾದ ಆಧರಿಸಿದ ಮುಖ್ಯ ಅಂಶವೆಂದರೆ ಇತಿಹಾಸದ ಆಕ್ರಮಣಗಳನ್ನು ವಿರೋಧಿಸಿ ತಪ್ಪುಗಳನ್ನು ತಿದ್ದುವುದು ಅವಶ್ಯಕ ಎಂಬ ವಿಚಾರಗಳನ್ನು ಲೇಖಕರು ಅಮೆರಿಕಾದಂಥ ದೇಶದಲ್ಲೂ ಈ ಘಟನೆ ಜರುಗಿರುವುದನ್ನು ದಾಖಲಿಸುತ್ತಾರೆ. ಹಿಂದೂ ತತ್ವವನ್ನೇ ತನ್ನ ರಾಜಕೀಯ ಅಸ್ತ್ರವನ್ನಾಗಿ ಮಾಡಿಕೊಂಡಿರುವ ಭಾಜಪದ ರೀತಿಯು ಹಿಟ್ಲರನ ನಾಜಿತತ್ತ್ವ, ಇಟಲಿಯ ಫ್ಯಾಸಿಸ್ಟ್‌ರನ್ನು ಹೋಲುತ್ತದೆ ಎಂದಿದ್ದಾರೆ. ಮತೀಯವಾದದ ವಿರುದ್ಧ ಹೋರಾಡುವುದೆಂದರೆ ಜನರ ಮನಸ್ಸಿನಲ್ಲಿ ಹುದುಗಿರುವ ಮೂಲಭೂತವಾದವು ನಿರಾಧಾರ, ಸತ್ಯಕ್ಕೆ ದೂರವಾದುದು ಎಂಬುದನ್ನು ನಿರೂಪಿಸಿ ಅವರ ಮನಸ್ಸನ್ನು ಸತ್ಯದ ಕಡೆಗೆ ತಿರುಗಿಸುವುದಾಗಿದೆ ಎಂಬುದನ್ನು ಪಣಿಕ್ಕರ್ ಗುರುತಿಸುತ್ತಾರೆ.

ಬಿಳಿಮಲೆಯವರು ತಮ್ಮ 'ಕೋಮುವಾದ ಮತ್ತು ಜನಸಂಸ್ಕೃತಿ'ಯಲ್ಲಿ ಭಾರತದಲ್ಲಿ ಕೋಮುವಾದ ಮತಗಳಿಕೆಯ ಅಸ್ತ್ರವಾಗುತ್ತಿರುವುದನ್ನು ಆಧಾರ ಸಮೇತ ನಿರೂಪಿಸಿದ್ದಾರೆ. ಕೋಮುವಾದಕ್ಕೆ ವಿಷಬೀಜ ಬಿತ್ತಿದ ಬ್ರಿಟಿಷ್ ಆಡಳಿತಾಧಿಕಾರಿಗಳು ಅದನ್ನು ತಮ್ಮ ಆಡಳಿತಭದ್ರತೆಯ ಅಸ್ತ್ರವನ್ನಾಗಿಸಿಕೊಂಡರು. ಬಾಬ್ರಿ ಮಸೀದಿ -ರಾಮಜನ್ಮಭೂಮಿ ಆರಂಭದಲ್ಲಿ ನೆಲದಿಂದ ಕಟ್ಟೆಗೆ, ಕಟ್ಟೆಯಿಂದ ಮಸೀದಿಗೆ ವ್ಯಾಪಿಸಿದ ವಿಚಾರವನ್ನು ಹೇಳುತ್ತಾರೆ. ಶಾ ಬಾನು ಪ್ರಕರಣ ಮತ್ತು ಬಾಬ್ರಿಮಸೀದಿಯ ಬಾಗಿಲು ತೆರೆದು ಪೂಜೆಗೆ ಅವಕಾಶ ಮಾಡಿಕೊಟ್ಟಿದ್ದರಿಂದಾಗಿ ಹಿಂದೂ - ಮುಸ್ಲಿಂಮರಲ್ಲಿ ಕೋಮುವಾದ ಕೆಳವರ್ಗದವರೆಗೂ ವ್ಯಾಪಿಸಿತು. ಈ ರಾಜಕೀಯ ತಂತ್ರ ಜನಸಾಮಾನ್ಯರ ನಿತ್ಯ ಬದುಕಿಗೇ ಕಿಚ್ಚಿಟ್ಟಿತು. ಮಸೀದಿ ಉರುಳಿದ ನಂತರ ಅದಕ್ಕೆ ಬಲಿಯಾದವರೆಲ್ಲ ಮುಗ್ಧರೇ ವಿನಾ ಕೋಮುವಾದಿಗಳಲ್ಲ. ಅಲ್ಲದೆ ಕೋಮುವಾದವನ್ನು ಸರ್ಕಾರಗಳು ಬಡತನ, ನಿರುದ್ಯೋಗ, ಬೆಲೆಯೇರಿಕೆ, ಅನಕ್ಷರತೆಗಳಂಥ ಗಂಭೀರ ಸಮಸ್ಯೆಗಳನ್ನು ಮುಚ್ಚಿಹಾಕುವುದಕ್ಕೂ ಬಳಸಿಕೊಳ್ಳುತ್ತಿವೆ. ಅದು ಹಾಗಾಗದಂತೆ ಎಚ್ಚರವಹಿಸಬೇಕಾದ

ಅಗತ್ಯತೆಯನ್ನು ಬಿಳಿಮಲೆಯವರು ಸ್ಪಷ್ಟಪಡಿಸಿದ್ದಾರೆ.

ಹಿಂದೂ ರಾಷ್ಟ್ರದ ಧೋರಣೆಗಳಲ್ಲಿ ಹೇಗೆ ಫ್ಯಾಸಿಸ್ಟ್ ಗದ್ದುಗೆಗೆ ಏಣಿಯಾಗಿವೆ ಎಂಬ ವಿಚಾರವನ್ನು ' ಹಿಂದೂ ರಾಷ್ಟ್ರವೋ? ಹಿಟ್ಲರ್ ರಾಷ್ಟ್ರವೋ?' ಎಂಬ ಕೃತಿಯಲ್ಲಿ ವಿವರಿಸಲಾಗಿದೆ. ಕೈಗಾರಿಕೆಗಳ ಕುಸಿತದಿಂದ ಉಂಟಾದ ನಿರುದ್ಯೋಗಿ ಯುವಕರು ಈ ಕೋಮುವಾದದ ಭದ್ರಬೇರುಗಳಾಗಿರುವ ಬಗ್ಗೆ ಸಾಧಾರಪೂರ್ವಕವಾಗಿ ದಾಖಲಿಸುತ್ತದೆ. ಆಳುವ ಪಕ್ಷಗಳಿಗೆ ಇದು ಮುಂದುವರಿಕೆಗೆ ಜೀವದಾನವಾದರೆ, ವಿರೋಧಪಕ್ಷಗಳಿಗೆ ಚೇತರಿಕೆಯ ಗ್ರಾಸವಾಗಿದೆ. ರಾಜಕೀಯ ಪಕ್ಷಗಳ ಹುನ್ನಾರವನ್ನು ಇದು ಕಟ್ಟಿಕೊಡುತ್ತದೆ. 'ಫ್ಯಾಸ್ಟಿಸ್' ಧೋರಣೆಗಳಿಂದ ಭಾರತ ರಕ್ತದ ಮಡುವಿನಲ್ಲಿ ಮುಳುಗುವುದು ಅನಿವಾರ್ಯವಾದೀತು. ಅದನ್ನು ಬೆಳೆಯಗೊಡದಂತೆ ತಡೆಗಟ್ಟಲು ಸಂಘಟಿತ ರಾಗುವುದು ಅನಿವಾರ್ಯವೆಂದು ಈ ಕೃತಿಯಲ್ಲಿ ಎಚ್ಚರಿಸಲಾಗಿದೆ.

'ದಕ್ಷಿಣ ಕನ್ನಡದಲ್ಲಿ ಅಯೋಧ್ಯಾ ಕೋಮುಗಲಭೆಗಳು : ಒಂದು ಸಮೀಕ್ಷೆ' ಕೃತಿಯು ಕೋಮುಗಲಭೆಯ ವಸ್ತು ಚಿತ್ರವನ್ನು ಸುಸ್ಪಷ್ಟವಾಗಿ ದಾಖಲಿಸುತ್ತದೆ. ಮಸೀದಿ ನಾಶದಿಂದ ಉಂಟಾದ ಕೋಮುಗಲಭೆ ಜನಸಾಮಾನ್ಯರ ಬದುಕಿನಲ್ಲಿದ್ದ ಸಾಮರಸ್ಯವನ್ನು ನಾಶಮಾಡಿತು. ಮನೆಮಠ, ಆಸ್ತಿ ಪಾಸ್ತಿಯ ನಾಶದೊಂದಿಗೆ ಸಾವಿರಾರು ಮುಗ್ಧರು ಸಾವಿಗೀಡಾದರು. ಅಂಕಿಅಂಶಗಳ ಪ್ರಕಾರ ಆ ಒಂದು ಜಿಲ್ಲೆಯಲ್ಲಿಯೇ ಸುಮಾರು ಹನ್ನೊಂದು ಕೋಟಿ ರೂಪಾಯಿಗಳಿಗಿಂತಲೂ ಅಧಿಕ ಆಸ್ತಿ-ಪಾಸ್ತಿಗಳು ನಷ್ಟವಾದವು. ಯಾವುದೇ ಗಲಭೆಯಲ್ಲೂ ತೊಡಗದ ನಿರಪರಾಧಿಗಳಾದ ಜನರು ಬಲಿಯಾದರು. ದಕ್ಷಿಣ ಕನ್ನಡ ಜಿಲ್ಲೆಯ ಈ ವಿವರದ ಅಂದಾಜಿನ ಮೇಲೆ ಅದನ್ನು ಇಡೀ ರಾಜ್ಯಕ್ಕೆ ಅನ್ವಯಿಸಿದರೆ ಸುಮಾರು ಇನ್ನೂರೈವತ್ತುಕೋಟಿ ರೂಪಾಯಿಗಳಿಗಿಂತಲೂ ಅಧಿಕ ಆಸ್ತಿಪಾಸ್ತಿ ನಷ್ಟವಾಯಿತು. ಆಧುನಿಕ ಯುಗ ಕಂಡ ಅತ್ಯಂತ ಬರ್ಬರ ಕೃತ್ಯವೆಂದರೆ ಕೋಮುಗಲಭೆ. ಅದನ್ನು ಬುಡಮಟ್ಟ ನಾಶಮಾಡಲು ಮನುಷ್ಯ ವಿಚಾರವಂತನಾಗಬೇಕು. ಹಿಂದೂ-ಮುಸ್ಲಿಮರು ತಾವು ಭಾರತೀಯರಾದರೆ ಪರದೇಶಿ ಐಎಸ್‌ಐನಂಥ ಸಂಸ್ಥೆಗಳ ಹಸ್ತಕ್ಷೇಪಕ್ಕೂ ಅವಕಾಶವಿರುವುದಿಲ್ಲ. ಈ ಬಗ್ಗೆ ಮನುಷ್ಯ ಮೊದಲು ಅರಿಯಬೇಕೆಂಬುದನ್ನು ಈ ಎಲ್ಲ ಕೃತಿಗಳು ಸ್ಪಷ್ಟವಾಗಿ ವಿವರಿಸುತ್ತವೆ.

**ಭಾರತದಲ್ಲಿ ರಾಷ್ಟ್ರೀಯತೆಗಳ ಸಮಸ್ಯೆ :** *ಕರ್ನಾಟಕ ವಿಮೋಚನಾ ರಂಗ ರಾಜ್ಯ ಸಮಿತಿ*

ಒಂದೆಡೆ ಕೋಮುವಾದದ ಕರಾಳ ಬಾಹುಗಳು ಎಲ್ಲೆಂದರಲ್ಲಿ ಪಸರಿಸಿ ಸಾವಿರಾರು ಮುಗ್ಧಜೀವಿಗಳನ್ನು ಬಲಿತೆಗೆದುಕೊಳ್ಳುತ್ತಿದೆ. ಅಂತೆಯೇ ಮತ್ತೊಂದೆಡೆ ಸರ್ಕಾರವು ರಾಷ್ಟ್ರೀಯತೆ, ಏಕತೆಯ ಹೆಸರಿನಲ್ಲಿ ರಾಜ್ಯಗಳ ಸ್ವಾಯತ್ತತೆಯನ್ನು ನಿರಾಕರಿಸುತ್ತಿವೆ. ಪರಿಣಾಮವಾಗಿ ಅನೇಕ ರಾಜ್ಯಗಳಲ್ಲಿ ವಿದ್ಯಾವಂತ ಯುವಕರು ಹೋರಾಟಕ್ಕಿಳಿದು ನ್ಯಾಯ ಕೇಳುತ್ತಿದ್ದಾರೆ. ಸರ್ಕಾರ ಅವರನ್ನು ಭಯೋತ್ಪಾದಕರು, ಉಗ್ರಗಾಮಿಗಳು, ದೇಶದ್ರೋಹಿಗಳು ಎಂದು ಮುಂತಾಗಿ ವ್ಯಾಖ್ಯಾನಿಸಿ ಅವರನ್ನು ದಮನ ಮಾಡಲು ಪ್ರಯತ್ನಿಸುತ್ತಿದೆ. '' ರಾಷ್ಟ್ರೀಯತೆ ಎಂಬುದು ಒಂದೇ ಅಲ್ಲ; ಹಾಗೇ ಭಾವಿಸಿರುವುದೇ ಒಂದು ಸಮಸ್ಯೆಯಾಗಿದೆ. ಏಕೆಂದರೆ ಭಾರತ ವಿಭಿನ್ನ ಸಂಸ್ಕೃತಿ, ಜನಾಂಗ, ಭಾಷೆ,

ಧರ್ಮಗಳಿಂದ ಕೂಡಿರುವುದರಿಂದಾಗಿ ಇಲ್ಲಿ ರಾಷ್ಟ್ರೀಯತೆಗಳು ಇವೆಯೇ ವಿನಾ ರಾಷ್ಟ್ರೀಯತೆಯಲ್ಲ'' ಎಂಬ ವಿಚಾರವನ್ನು ಕೃತಿಯಲ್ಲಿ ವಿವರಿಸಲಾಗಿದೆ. ಪ್ರಸ್ತಾವನೆಯಲ್ಲಿ ''ಭಾರತದಲ್ಲಿ ಒಂದು ಹೊಸರಾಜ್ಯ ನಿರ್ಮಾಣವಾಗಬೇಕೆಂದು ಜಾರ್ಖಂಡ್ ಜನ ಕೇಳುತ್ತಿದ್ದಾರೆ. ಬಿಹಾರ್‌ನ ಒಂದು ವರ್ಗದ ಜನ ಇದನ್ನು ಸಹ ವಿರೋಧಿಸುತ್ತಿದ್ದಾರೆ. ರಾಜ್ಯದ ಭವಿಷ್ಯ, ಅದರ ಆರ್ಥಿಕ ಚೈತನ್ಯ ಇವರಿಂದ ಕುಂಠಿತವಾಗುತ್ತದೆ ಎಂದು ಅವರು ವಾದಿಸುತ್ತಿದ್ದಾರೆ. ಹಾಗೆಯೇ ಅಸ್ಸಾಂನಲ್ಲಿ ಅಲ್ಲಿ ಬೋಡೋಗಳು ಒಂದು ಪ್ರತ್ಯೇಕ ರಾಜ್ಯವಾಗಬೇಕೆಂದು ಬೇಡಿಕೆಯಿಟ್ಟರೆ ಅಸ್ಸಾಂನ ಒಂದು ವರ್ಗ ತೀವ್ರವಾಗಿ ವಿರೋಧಿಸುತ್ತದೆ. ಅಸ್ಸಾಂನ ಬೆಳವಣಿಗೆಗೆ ಇದರಿಂದ ಪೆಟ್ಟು ಎಂಬುದು ಅವರ ಭಾವನೆ. ಅದೇ ರೀತಿ ಕಾಶ್ಮೀರಿ ಜನ, ಪಂಜಾಬಿನ ಜನ ಪ್ರತ್ಯೇಕ ರಾಷ್ಟ್ರ ರಚಿಸಿಕೊಳ್ಳುತ್ತೇವೆ ಎಂದರೆ ಭಾರತದ ಅಸ್ತಿತ್ವಕ್ಕೆ ಗಂಡಾಂತರ ಎಂದು ಒಂದು ಜನ ವಿಭಾಗ ಈ ಮಾತುಗಳನ್ನೇ ನಿರಾಕರಿಸುತ್ತದೆ'' (ಪುಟ. ೧೦-೧೧) ಎಂಬ ಈ ವಿಚಾರ ಇಂದು ಇನ್ನೂ ತೀವ್ರವಾಗಿದೆ. ಗುರ್ಖಾ, ಪೂರ್ವಾಚಲ, ಛತ್ತೀಸ್‌ಗಢ, ವಿದರ್ಭ, ತೆಲಂಗಣ ಎಂದು ಮುಂತಾಗಿ ಪ್ರತ್ಯೇಕ ರಾಜ್ಯಗಳ ಬೇಡಿಕೆಗಳಿವೆ. ಅತಿ ದೊಡ್ಡ ರಾಜ್ಯಗಳು ಅನೇಕ ಪ್ರಾಂತ್ಯ, ಜಿಲ್ಲೆಗಳ ಅಭಿವೃದ್ಧಿಗೆ ಗಮನಹರಿಸಲು ಸಾಧ್ಯವಾಗಿಲ್ಲ. ಹಾಗಾಗಿ ಚಿಕ್ಕಚಿಕ್ಕ ರಾಜ್ಯಗಳ ಸ್ಥಾಪನೆಯ ಮೂಲಕ ಸ್ವಯಂಪೂರ್ಣ ಅಭಿವೃದ್ಧಿ ಸಾಧಿಸುವ ಆಶಯವೇ ಇವುಗಳ ಮುಖ್ಯ ಧೋರಣೆಯಾಗಿವೆ. ಅಲ್ಲದೆ ಕೇಂದ್ರ ಸರ್ಕಾರದ ನೇರ ಹಸ್ತಕ್ಷೇಪ, ಧಾರ್ಮಿಕ ಧೋರಣೆಗಳೂ ಇಂಥ ಬೇಡಿಕೆಗೆ ಕಾರಣವಾಗುವುದನ್ನು ಸಾಧಾರವಾಗಿ ನಿರೂಪಿಸಲಾಗಿದೆ. ರಾಷ್ಟ್ರ ಭಾಷೆಯೆಂಬ ಹೆಸರಿನಲ್ಲಿ ಕೇಂದ್ರವು ಹಿಂದಿ ಭಾಷೆಯನ್ನು ಕಡ್ಡಾಯಗೊಳಿಸಿ ರಾಜ್ಯ ಭಾಷೆಯನ್ನು ತುಳಿಯುತ್ತಿರುವುದು ಈ ವಿರೋಧಕ್ಕೆ ಕಾರಣವಾಗಿದೆ.

ಈ ಕೃತಿಯಲ್ಲಿರುವ ಹತ್ತು ಲೇಖನಗಳೂ ರಾಷ್ಟ್ರೀಯತೆಯನ್ನು ಏಕತೆಯ ಹೆಸರಿನಲ್ಲಿ ದಮನ ಮಾಡುತ್ತಿರುವ ಪ್ರಕ್ರಿಯೆಯನ್ನು ಖಂಡಿಸಿವೆ. ಸರ್ಕಾರದ ಪತ್ರಿಕಾ ಹೇಳಿಕೆ ಮತ್ತು ವಸ್ತು ಸ್ಥಿತಿ ಪರಸ್ಪರ ಭಿನ್ನವಾಗಿರುವುದನ್ನು ಸ್ಪಷ್ಟವಾಗಿ ವಿವರಿಸುತ್ತವೆ. ಕಾಶ್ಮೀರ, ಖಲಿಸ್ಥಾನ, ಈಶಾನ್ಯ ಪ್ರಾಂತ್ಯಗಳು, ಜಾರ್ಖಂಡ್, ಛತ್ತೀಸ್‌ಗಢ - ಹೋರಾಟಗಳು ಬದಲಾವಣೆಯನ್ನು ಬಯಸುತ್ತಿವೆ. ಈ ಪ್ರಕ್ರಿಯೆ ಹೀಗೇ ಮುಂದುವರೆದರೆ ವಿಮೋಚನಾ ಚಳುವಳಿಗಳು ತೀವ್ರವಾಗುವುದು ಮಾತ್ರವಲ್ಲ ಅನಿವಾರ್ಯವೂ ಆಗುತ್ತವೆಂಬುದನ್ನು ಈ ಲೇಖನಗಳಲ್ಲಿ ಪ್ರತಿಪಾದಿಸಲಾಗಿದೆ.

**ಕೃಷಿಕ್ಷೇತ್ರದ ವಿಷಕಳೆ ಡಂಕಲ್ ಪ್ರಸ್ತಾವ :** *ಡಾ. ಶರಣಬಸವೇಶ್ವರ ಅಂಗಡಿ, ಸುನಂದಾಶರಣ*

ಭಾರತದ ಮಾರುಕಟ್ಟೆಯನ್ನು ಆಕ್ರಮಿಸಿರುವ ಡಂಕಲ್ ಪ್ರಸ್ತಾವಗಳ ಮುಖ್ಯ ಉದ್ದೇಶವೇನೆಂಬುದನ್ನು ಈ ಕೃತಿ ಚರ್ಚಿಸುತ್ತದೆ. ಗ್ಯಾಟ್ ಸಂಸ್ಥೆಯ ಮೂಲಕ ಅರ್ಥರ್ ಡಂಕೆಲ್ ಪ್ರಪಂಚದಾದ್ಯಂತ ವ್ಯಾಪಾರ ನೀತಿ -ನಿಯಮಗಳನ್ನು ರೂಪಿಸಿದನು. ಈ ಪ್ರಸ್ತಾವ ಬಂಡವಾಳಶಾಹಿ ರಾಷ್ಟ್ರಗಳಾದ ಅಮೆರಿಕಾ ಮತ್ತು ಯುರೋಪ್‌ಗಳಲ್ಲಿ

ಅಂತಾರಾಷ್ಟ್ರೀಯ ಮಾರುಕಟ್ಟೆಗಾಗಿ ಹುಟ್ಟಿಕೊಂಡ ತೀರ್ವಸ್ಪರ್ಧೆಯಿಂದ ರಚಿತವಾಯಿತು. ಜಪಾನಿನ ಅಂತಾರಾಷ್ಟ್ರೀಯ ತೀವ್ರ ಪೈಪೋಟಿ, ಅಭಿವೃದ್ಧಿಶೀಲ ರಾಷ್ಟ್ರಗಳು ಸಾಧಿಸಿದ ಆಹಾರದ ಸ್ವಾವಲಂಬಿತನದಿಂದಾಗಿ ಅಮೆರಿಕಾ ಮತ್ತು ಐರೋಪ್ಯ ಸಮುದಾಯಕ್ಕೆ ಆಘಾತವುಂಟಾಯಿತು. ಇದರ ಪರಿಣಾಮವಾಗಿ ೧೯೯೧ರಲ್ಲಿ ಔಷಧಿಗಳ ಆಮದು, ತಯಾರಿಕೆ, ಜವಳಿನೀತಿ, ಕಂಪ್ಯೂಟರ್ ತಂತ್ರಜ್ಞಾನ, ಮಾರುಕಟ್ಟೆ ನೀತಿ, ಕೃಷಿನೀತಿಯೇ ಮೊದಲಾದ ಹದಿನಾಲ್ಕು ವಿಷಯಗಳಲ್ಲಿ ಬದಲಾವಣೆ ಸೂಚಿಸಿ ಗ್ಯಾಟ್ ಸಭೆ ಒಂದು ಸಂಪುಟವನ್ನು ಸಿದ್ಧಪಡಿಸಿತು. ಈ ಎಲ್ಲ ನೀತಿಗಳು ಭಾರತದಂಥ ರಾಷ್ಟ್ರಗಳಿಗೆ ವಿರೋಧವಾದುವೇ ಆಗಿರುವುದನ್ನು ಸಾಧಾರವಾಗಿ ನಿರೂಪಿಸಲಾಗಿದೆ. ಕೃಷಿಗೆ ಸಹಾಯಧನ ರದ್ದುಗೊಳಿಸುವ ವಿಚಾರ ಕುರಿತಂತೆ ಕೃತಿಯಲ್ಲಿ ದಾಖಲಿತವಾಗಿರುವ ವಿಚಾರಗಳು ಕೃತಿಯ ಮಹತ್ವವನ್ನು ಸಾರುತ್ತವೆ.

ಆಸ್ಟ್ರೇಲಿಯಾ, ಚೀನಾ, ಐರೋಪ್ಯ ರಾಷ್ಟ್ರಗಳಲ್ಲಿನ ರೈತರಿಗೆ ಶೇಕಡ ೨೦ ರಿಂದ ೩೭ ರಷ್ಟು ಸಹಾಯಧನ ದೊರೆಯುತ್ತಿದೆ. ಭಾರತೀಯ ರೈತನಿಗೆ ದೊರೆಯುವ ಕೇವಲ ಶೇ ೨ ರಷ್ಟು ಸಬ್ಸಿಡಿಯನ್ನು ನಿಲ್ಲಿಸುವ ಸಂಚು ಡಂಕಲ್‌ರದು''( ಪುಟ.೧೧). ಹೀಗೆಯೇ ಸಾರ್ವಜನಿಕ ಆಹಾರ ವಿತರಣೆ, ಆಮದು ಕಟ್ಟುಪಾಡುಗಳ ಮೇಲೆ ನಿರ್ಬಂಧ, ವಿದೇಶಿ ಬಹುರಾಷ್ಟ್ರೀಯ ಕಂಪನಿಗಳು ಭಾರತೀಯ ಕೃಷಿಕೇತ್ರ ಪ್ರವೇಶಿಸಲು ಅನುಮತಿ, ಭಾರತೀಯ ಪೇಟೆಂಟ್ ಕಾಯ್ದೆಯನ್ನು ಕಿತ್ತು ಹಾಕಿ ಬೌದ್ಧಿಕ ಆಸ್ತಿ ಹಕ್ಕುಗಳನ್ನು ಒಪ್ಪಿಕೊಳ್ಳುವುದು - ಇವೆಲ್ಲ ಸ್ವಾವಲಂಬಿ ರಾಷ್ಟ್ರದ ಹಿಂತಚಿಂತನೆಗೆ ಧಕ್ಕೆ ತರುವಂತಹವು ಎಂಬುದನ್ನು ಅಂಕಿಅಂಶಗಳ ಆಧಾರದ ಮೂಲಕ ವಿವರಿಸಲಾಗಿದೆ. ಅಮೆರಿಕಾದಂಥ ಬಂಡವಾಳಶಾಹಿ ರಾಷ್ಟ್ರಗಳು ಅಭಿವೃದ್ಧಿಶೀಲ ರಾಷ್ಟ್ರಗಳ ಮಾರುಕಟ್ಟೆಯನ್ನು ತನ್ನ ಹಸ್ತಗತ ಮಾಡಿಕೊಳ್ಳುವುದೇ ಡಂಕಲ್ ಪ್ರಸ್ತಾವದ ಮುಖ್ಯ ಉದ್ದೇಶವೆಂಬುದನ್ನು ಈ ಕೃತಿಯ ವಿಚಾರಗಳು ಸ್ಪಷ್ಟಪಡಿಸುತ್ತವೆ.

**ಸತ್ಯದ ನವದರ್ಶನ** *: ಫ್ರಿಜೋ ಕಾಪ್ರಾ*

ಆಧುನಿಕ ಜಗತ್ತಿನಲ್ಲಿ ಅಸಂಗತವೂ ದ್ವಂದ್ವವೂ ಆಗಿರುವ ವಿಜ್ಞಾನ ಮತ್ತು ಆಧ್ಯಾತ್ಮದ ವಿಚಾರಗಳ ಸೂಕ್ಷ್ಮ ವಿಶ್ಲೇಷಣೆಯುಳ್ಳ ಕೃತಿ. ಪ್ರತಿಯೊಂದು ವಿಚಾರವನ್ನು ವೈಜ್ಞಾನಿಕ ಐಡಿಯಾಲಜಿಯ ಹಿನ್ನೆಲೆಯಲ್ಲಿ ಪರಿಶೀಲಿಸಿ ಒಪ್ಪಿಕೊಳ್ಳುವ ನಮಗೆ ಆಧ್ಯಾತ್ಮದ ವಿಚಾರಗಳೂ ವೈಜ್ಞಾನಿಕವೇ ಆಗಿವೆ ಎಂಬುದು ಆಶ್ಚರ್ಯವನ್ನುಂಟುಮಾಡುತ್ತದೆ. 'ಸತ್ಯದ ನವದರ್ಶನ' ಕಾಪ್ರಾ ಈ ಎರಡೂ ಅಂಶಗಳು ವಾಸ್ತವ ಸತ್ಯವಾದುವು ಎಂಬ ತತ್ತ್ವವನ್ನಾಧರಿಸಿ ರಚಿಸಿದ ಕೃತಿ. ಸ್ವತಃ ವಿಜ್ಞಾನಿಯಾದ ಕಾಪ್ರಾನಿಗೆ ತರ್ಕಾತೀತವಾದ ಆಧ್ಯಾತ್ಮಿಕ ಸಂಗತಿಯೂ ವಿಶಿಷ್ಟವಾಗಿ ಕಾಡಿದೆ. ಡೇರಾರ್ಟೆ ಮತ್ತು ನ್ಯೂಟನ್‌ರು ಪ್ರತಿಪಾದಿಸಿದ ಯಾಂತ್ರಿಕ ದೃಷ್ಟಿಕೋನಕ್ಕೆ ವಿರುದ್ಧವಾಗಿ ಕ್ವಾಂಟಂ 'ಪ್ರೋಟ್ರಾನ್, ನ್ಯೂಟ್ರಾನ್, ಇಲೆಕ್ಟ್ರಾನ್‌ಗಳು ಘನವಸ್ತುಗಳಲ್ಲ; ಅಮೂರ್ತ ಪದಾರ್ಥಗಳು' ಎಂದು ಗುರುತಿಸಿದನು. ಅವನ ಸಿದ್ಧಾಂತ ವಿಜ್ಞಾನ ಜಗತ್ತಿಗೆ ಹೊಸ ಆಯಾಮವನ್ನು ತಂದುಕೊಟ್ಟಿತು. ನಮ್ಮ ದೃಷ್ಟಿಗನುಗುಣವಾಗಿ ಪ್ರೋಟಾನ್,

ನ್ಯೂಟ್ರಾನ್, ಇಲೆಕ್ಟ್ರಾನ್‌ಗಳು ಒಮ್ಮೆ ಘನ ಪದಾರ್ಥದಂತೆಯೂ ಇನ್ನೊಮ್ಮೆ ಅಲೆಗಳಂತೆಯೂ ಗೋಚರಿಸುತ್ತವೆ ಎಂಬುದಾಗಿ ಅವುಗಳ ದ್ವಂದ್ವ ಸ್ವಭಾವವನ್ನು ಗುರುತಿಸಿದ್ದು ದಿಗ್ಭ್ರಮೆಗೊಳಿಸಿತು. ''ಪರಮಾಣು ವಿಜ್ಞಾನದ ಪ್ರಕಾರ ವಿಶ್ವವು ಮೂಲಭೂತವಾಗಿ ಒಂದೇ. ನಾವು ಭೌತವಸ್ತುವಿನ ಅಂತಃಪ್ರಪಂಚವನ್ನು ಭೇದಿಸಿಕೊಂಡು ಹೋದಂತೆ ಪ್ರತ್ಯೇಕ ಪ್ರತ್ಯೇಕವಾದ ಮೂಲ ಘಟಕಗಳನ್ನು ಪ್ರಕೃತಿಯು ತೋರಿಸುವುದಿಲ್ಲ; ಅದರ ಬದಲು ಸಂಯುಕ್ತ ಅಖಂಡತೆಯ ವಿಭಿನ್ನ ಭಾಗಗಳ ಮಧ್ಯೆ ಇರುವ ಸಂಬಂಧಗಳ ಒಂದು ಸಂಕೀರ್ಣ ಜಾಲದಂತೆ ತನಗೆ ತಾನೇ ಕಾಣಿಸಿಕೊಳ್ಳುತ್ತದೆ'' (ಪುಟ. ೯). ಹೀಗೆ ಭೌತ ಪ್ರಪಂಚವನ್ನು ಚಲನಶೀಲವಾದುದು ಎಂದು ಹೇಳಿದ ಕ್ವಾಂಟಂ ಸಿದ್ಧಾಂತ ಎಲ್ಲದರಲ್ಲೂ ಜೀವಂತಿಕೆಯನ್ನು ಗುರುತಿಸಿತು. ಈ ವಿಚಾರವೂ ಅನುಭಾವಿ ಚಿಂತನೆಗಳಿಗೆ ಸಮಾನವಾದುದಾಗಿದೆ. ಹಾಗಾಗಿ ವಿಜ್ಞಾನ ಮತ್ತು ಆಧ್ಯಾತ್ಮ ಚಿಂತನೆಗಳು ಪ್ರತಿಪಾದಿಸುತ್ತಿರುವುದು ವಿಶ್ವದ ಅಖಂಡತೆಯನ್ನೇ. ಈ 'ನವದರ್ಶನ'ದ ಸತ್ಯದ ವಿಚಾರಗಳು ಆಧುನಿಕ ಸಂಶೋಧನೆಗೆ ಹೆಚ್ಚು ಗ್ರಾಸವನ್ನು ಒದಗಿಸಬಲ್ಲವು.

ಈ ಕೃತಿಯ ಮತ್ತೊಂದು ವೈಶಿಷ್ಟ್ಯವೆಂದರೆ ಫ್ರಿಜೋಕಾಪ್ರಾನ ಈ ವಿಚಾರಗಳ ಬಗ್ಗೆ ಜಿ. ರಾಜಶೇಖರ, ಡಿ. ಆರ್. ನಾಗರಾಜ್ ಮತ್ತು ಕೆ. ವಿ. ಸುಬ್ಬಣ್ಣನವರು ನಡೆಸಿರುವ ಸಂವಾದ. ಪಾಶ್ಚಾತ್ಯ ಅಧ್ಯಯನ ಕ್ರಮ ನಮ್ಮಲ್ಲಿ ಶಿಸ್ತನ್ನು ಬೆಳೆಸುವುದರ ಮೂಲಕ ಸಹಜ ಚಿಂತನಕ್ರಮವನ್ನು ನಾಶಮಾಡಿದ ಬಗ್ಗೆ ಚರ್ಚಿಸುತ್ತಾರೆ. ವಿಜ್ಞಾನ ಮತ್ತು ಆಧ್ಯಾತ್ಮದ ವಿಚಾರಗಳು ವಿಶ್ವದ ಅಖಂಡತೆಯ ಮೂಲಕ ಮನುಷ್ಯನಿಗೆ ಶಾಂತಿ-ನೆಮ್ಮದಿಗಳ ನೆಲೆಯನ್ನು ಒದಗಿಸುವುದು ಸಾಧ್ಯ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ಶ್ರೀ ಪಂಡಿತಾರಾಧ್ಯ ಶಿವಾಚಾರ್ಯಸ್ವಾಮಿಗಳ 'ಮರುಭೂಮಿ' ಮಠ, ದೇವಾಲಯಗಳು ಸಂಸ್ಥೆಗಳು, ಮೂಢನಂಬಿಕೆ, ಅಂಧತ್ವಗಳನ್ನು ಬೆಳೆಸುವ ಸಂಸ್ಥೆಗಳು ಎಂಬ ನಿಖರ ನಂಬಿಕೆಯನ್ನು ಮರುಚಿಂತನೆಗೊಳಪಡಿಸುತ್ತದೆ. ಈ ಕೃತಿಯಲ್ಲಿ ಸ್ವಾಮಿಗಳು ಹೇಳುವ ಮಠಗಳು ಜಾತ್ಯತೀತ ಕೇಂದ್ರಗಳಾಗಿ ಬೆಳೆಯಬೇಕು. ಮಠಾಧೀಶರು ಜಾತ್ಯತೀತರಾಗಿ ಚಿಂತಿಸಿ ಜನರನ್ನು ಧರ್ಮಾಂಧತೆಯಿಂದ ಆತ್ಮೋನ್ನತಿ ಮತ್ತು ಸಮಾಜ ಕಲ್ಯಾಣದ ಸಾಧನೆಯೆಡೆಗೆ ಪ್ರಚೋದಿಸಬೇಕು. ಸ್ವಾಮಿತ್ವವೆಂಬುದು ಕೇವಲ ಮಂತ್ರ, ಪೂಜೆ, ಪ್ರಸಾದ, ಆಶೀರ್ವಚನದ ಪ್ರತೀಕವಲ್ಲ; ಮಠಾಧೀಶರು ಮಠಗಳನ್ನು ಸಮಷ್ಟಿ ಹಿತ ಚಿಂತನೆಯ ವೈಚಾರಿಕ ಕೇಂದ್ರಗಳನ್ನಾಗಿಸಬೇಕು. ಜನಸೇವೆಯೇ ಜನಾರ್ಧನ ಸೇವೆ ಎಂಬುದು ಅವರ ನಿತ್ಯ ಮಂತ್ರವಾಗಬೇಕು '- ಎಂಬ ಮಾತುಗಳು ಗಂಭೀರವಾದುವು. ವೈಚಾರಿಕತೆ ಧರ್ಮರಾಹಿತ್ಯವಲ್ಲ; ಮತಧರ್ಮದ ಸೀಮಿತ ವ್ಯಾಪ್ತಿಗೆ ಹೊರತು ಎಂಬುದು ಸ್ವಾಮೀಜಿಯವರ ಮಾತಿನಲ್ಲಿ ವ್ಯಕ್ತವಾಗುತ್ತದೆ. ಧರ್ಮ ಅಖಂಡ ಮಹೋನ್ನತಿಗಾಗಿ ಶ್ರಮಿಸಬೇಕು. ಮಾನವೋನ್ನತಿಗಾಗಿ ಬೆಳೆಯಬೇಕು ಇಲ್ಲದಿದ್ದರೆ ಮನುಷ್ಯ ಬದುಕು 'ಮರುಭೂಮಿ'ಯಾಗುತ್ತದೆ ಎಂಬುದನ್ನು ಈ ಕೃತಿಯು ಧ್ವನಿಸುತ್ತದೆ.

ಪ್ರೊ. ಎಂ. ಡಿ. ನಂಜುಂಡಸ್ವಾಮಿ ಅವರ 'ನಮ್ಮ ನಾಡು' ಪತ್ರಿಕಾ ಸಂಪಾದಕೀಯಗಳ ಸಂಕಲನ. ಇಲ್ಲಿ ೧೯೮೪ ರಿಂದ ೧೯೮೯ರವರೆಗೂ ಬರೆಯಲಾದ ಐವತ್ತೇಳು ಲೇಖನಗಳಿವೆ. ಲೇಖಕರು ರಾಜಕೀಯ ಯೋಜನೆಗಳು ಜನಸಾಮಾನ್ಯರ ಬದುಕಿಗೆ ಹೇಗೆ ಮಾರಕವಾಗಿವೆ ಎಂಬುದನ್ನು ಖಚಿತವಾದ ಆಧಾರಗಳಿಂದ ನಿರೂಪಿಸಿದ್ದಾರೆ. ಒಬ್ಬ ರಾಜಕಾರಿಣಿಯು ತನ್ನದೇ ಆದ ಯೋಚನೆಗಳಿಂದ ಕ್ರಮೇಣ ಸರ್ವಾಧಿಕಾರಿಯಾಗಿ ಬೆಳೆಯುತ್ತಾನೆ; ಜೊತೆಜೊತೆಗೆ ತನಗೆ ಗೊತ್ತಿಲ್ಲದಂತೆಯೇ ಅನಿವಾರ್ಯವಾದ ದುರಂತವನ್ನು ತಾನೇ ಸೃಷ್ಟಿಸಿಕೊಂಡಿರುತ್ತಾನೆ ಎಂಬ ಅಂಶವನ್ನು ಗಂಭೀರವಾಗಿ ವಿವರಿಸಿದ್ದಾರೆ.

ದೇಶದ ಉತ್ಪಾದಕರಾದ ರೈತರ ಶೋಚನೀಯ ಸ್ಥಿತಿಗತಿ, ರಾಜಕೀಯದ ಮೂಲಕ ಅವರನ್ನು ಶೋಷಣೆ ಮಾಡುತ್ತಿರುವುದನ್ನು ಸಾಧಾರವಾಗಿ ವಿವರಿಸಲಾಗಿದೆ. ರೈತರ ಸಾಲವನ್ನು ಮನ್ನಾ ಮಾಡಿ, ಅವರ ಉತ್ಪಾದನೆಗೆ ಸೂಕ್ತ ಬೆಲೆಯನ್ನು ನಿಗದಿಪಡಿಸಿ ಅವರ ಚೇತರಿಕೆಗೆ ಅನುವು ಮಾಡಿಕೊಡುವುದು ಸರ್ಕಾರದ ಜವಾಬ್ದಾರಿ ಎಂಬುದು ಲೇಖಕರ ಮುಖಧ್ವನಿಯಾಗಿದೆ. ದುಡಿಯುವ ವ್ಯಕ್ತಿಗಳು ಅದನ್ನು ಅನುಭೋಗಿಸಲಾಗದೆ ರಾಜಕಾರಣಿಗಳು ಮತ್ತು ಬಂಡವಾಳಶಾಹಿಗಳ ಪಾಲಾಗಿರುವ ವಿಪರ್ಯಾಸವನ್ನು ವಿವರಿಸಿ ಸೂಕ್ತ ಕ್ರಮದ ಬಗ್ಗೆ ಎಚ್ಚರಿಸುತ್ತಾರೆ.

ಶ್ರೀ ಜಿ. ಟಿ. ನಾರಾಯಣರಾವ್ ಅವರ ''ಸವಾಲನ್ನು ಎದುರಿಸುವ ಛಲ'' ಮನುಷ್ಯ ಬದುಕಿನ ಮುಖ್ಯ ಅಂಶದೆಡೆಗೆ ಒತ್ತು ಕೊಡುತ್ತದೆ. ಈ ಕೃತಿಯ ನಾಲ್ಕು ಲೇಖನಗಳೂ ಮುಖ್ಯವಾಗಿ ಯುವಪೀಳಿಗೆಯನ್ನು ಕುರಿತು ವೈಜ್ಞಾನಿಕ ಅಂಶಗಳೊಂದಿಗೆ ರಚಿಸಿದುವುಗಳಾಗಿವೆ. ''ಸವಾಲು ಎಂಬುದು ಭೌತ ವಸ್ತುವಾಗಿರಬಹುದು; ವಿಜ್ಞಾನದ ವಿಸ್ಮಯವಾಗಿರಬಹುದು; ಬೌದ್ಧಿಕ ಆಧ್ಯಾತ್ಮಿಕ ಸಮಸ್ಯೆಯಾಗಿರಬಹುದು.... ಕೊನೆಗೆ ಅದೊಂದು ದೈನಂದಿನ ಜೀವನದ ಜಟಿಲ ಪ್ರಶ್ನೆಯೂ ಆಗಿರಬಹುದು'' ಎಂಬ ಮಾತುಗಳು ಗಮನಾರ್ಹ. ಛಲ ಎಂಬುದು ಜೀವನ ಧರ್ಮದ ಯೋಗವಾಗಬೇಕು. ಆ ಬಗೆಯ ಮನಃಸ್ಥಿತಿಯನ್ನು ರೂಢಿಸಿಕೊಳ್ಳುವುದಕ್ಕೆ ಯುವಕರು ಮೊದಲು ವಿನಯವಂತರಾಗಬೇಕೆಂಬುದನ್ನ ಲೇಖಕರು ಹೇಳಿದ್ದಾರೆ. ಅಧಿಕಾರ, ಕುಲ ಮದ, ದರ್ಪ, ದುರಭಿಮಾನಗಳು ಯುವ ಮನಸ್ಸಿನಲ್ಲಿ ಬೇರೂರಿದರೆ ಛಲ ಯೋಗವಾಗುವುದಿಲ್ಲ; ಸವಾಲು ಅಸಾಧ್ಯ ಶತ್ರುವಾಗುತ್ತದೆ. ಈ ಗುಣಗಳು ವೈಯಕ್ತಿಕವಾಗಿ ಬೆಳೆಯುವಷ್ಟೇ ಅಗತ್ಯವಾಗಿ ಸಾಮುದಾಯಿಕವಾಗಿಯೂ ರೂಢಿಗತವಾಗಬೇಕು ಎಂಬುದು ನಾರಾಯಣರಾಯರ ಮುಖ್ಯ ಧ್ವನಿಯಾಗಿದೆ. ಛಲ ಜೀವಂತ ಚೈತನ್ಯವಾಗಬೇಕಾದರೆ ಮಾನವ ವಿನಯ, ಶ್ರದ್ಧೆ, ಶಿಸ್ತು, ಆಸಕ್ತಿ ಮತ್ತು ಭರವಸೆಗಳನ್ನು ಬೆಳೆಸಿಕೊಳ್ಳಬೇಕು. ಛಲವು ಕೇವಲ ಕಾರ್ಯಸಾಧನೆಯ ಭೌತರೂಪವಲ್ಲ;ಆತ್ಮಶೋಧನೆಯ ಅಭೌತ ರೂಪವೂ ಹೌದು. ಆತ್ಮವಿಶ್ಲೇಷಣೆಯಿಂದ ಕೂಡಿದ ಛಲ ಸಮಗ್ರ ಹಿತಸಾಧನೆಯತ್ತ ಸೆಳೆಯುತ್ತದೆ. ಮನುಷ್ಯನು ಸಹಕಾರದ ಸಾಕಾರ ಮೂರ್ತಿಯಾಗುತ್ತಾನೆ ಎಂಬ ಅಂಶಗಳನ್ನು ಕೃತಿಯಲ್ಲಿ ಮುಖ್ಯ ಧ್ವನಿಯಾಗಿ ಅಭಿವ್ಯಕ್ತಿಸಲಾಗಿದೆ.

ಪ್ರೊ. ಕು. ಶಿ. ಹರಿದಾಸಭಟ್ಟರ 'ಲೋಕಾಭಿರಾಮ' (ಸಂಪುಟ -೪)ಕೃತಿಯಲ್ಲಿ ಎಪ್ಪತ್ತು ಲೇಖನಗಳಿವೆ. ವ್ಯಕ್ತಿ ಚಿತ್ರಗಳು, ಸಾಮಾಜಿಕ ಚಳುವಳಿಗಳು, ಭಾಷೆ, ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ರಾಜಕೀಯ ಮತ್ತು ಆರ್ಥಿಕ ವಿಚಾರಗಳನ್ನು ಕುರಿತು ಬರೆದುವುಗಳಾಗಿವೆ. ಯಾವ ಗಾಂಧಿ, ನೊಬೆಲ್ ಪಡೆದ ತಾಯಿ, ಪುಸ್ತಕ ಮತ್ತು ಶಿಕ್ಷಣ, ಭಾಷೆ ಮತ್ತು ಸಮಾಜ, ಸತ್ಯದ ಕಹಿ, ಸಂವಿಧಾನದ ಚೌಕಟ್ಟು, ಮಾದರಿ ಶಾಲೆಗಳು ಮುಂತಾದವು ಗಮನಾರ್ಹವಾದುವು. ಲೇಖಕರದು ಸೂಕ್ಷ್ಮ ದೃಷ್ಟಿಕೋನವಾಗಿರುವುದರಿಂದ ಪ್ರತಿಯೊಂದು ವಿಚಾರವನ್ನು ತಲಸ್ಪರ್ಶಿಯಾಗಿ ವಿವರಿಸಿದ್ದಾರೆ. ಆರ್ಥಿಕ ಚಿಂತನೆಗಳು ಕೇವಲ ಆರ್ಥಿಕಾಭಿವೃದ್ಧಿಗೆ ಸೀಮಿತವಾಗಬಾರದು. 'ಅರ್ಥ ಪ್ರಗತಿಯ ಬೇರು ಅರ್ಥಮಂಡಲಕ್ಕೂ ಹೊರಗಿನ ಶಿಕ್ಷಣ, ಸಂಘಟನೆ, ಶಿಸ್ತು, ರಾಜಕೀಯ ಸ್ವಾತಂತ್ರ್ಯ, ಸ್ವಾವಲಂಬನ ಬುದ್ಧಿ ಮುಂತಾದ ಸಾಮಾಜಿಕ ಶಕ್ತಿಗಳ ನಡುವೆ ಅಡಗಿಕೊಂಡಿದೆ' ಎಂಬ ವಿಚಾರ ಗಮನಾರ್ಹವಾದುದು. ಜನಸಾಮಾನ್ಯರ ಪರವಾಗಿ ಸರ್ಕಾರ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು ಎಂದು ಒತ್ತಾಯಿಸುವ ಅವರು ನಮ್ಮ ಆರ್ಥಿಕ ಧೋರಣೆಗಳು ಖಂಡಿತವಾಗಿಯೂ ಬದಲಾಗಬೇಕೆಂಬ ಕಡೆಗೆ ಒತ್ತುಕೊಟ್ಟಿದ್ದಾರೆ. ರಷ್ಯಾ, ಚೀನಾಗಳ ಆರ್ಥಿಕ ಧೋರಣೆ ಆಯಾ ಜನರ ಜೀವನ ಮಟ್ಟದಿಂದ ರೂಪುಗೊಂಡವಾಗಿದ್ದರೆ, ಭಾರತದ ಧೋರಣೆಗಳು ಅಂತಾರಾಷ್ಟ್ರೀಯ ಸಮ್ಮೇಳನಗಳಿಂದ ರೂಪುಗೊಳ್ಳುತ್ತಿವೆ. ಆ ಕಾರಣ ಅಭಿವೃದ್ಧಿಯ ಮಟ್ಟ ಕುಂಠಿತವಾಗಿದೆ. 'ಅರ್ಥಶಾಸ್ತ್ರಜ್ಞರು ಸಂಪೂರ್ಣ ನಾಗರಿಕರಾಗಬೇಕು' ಎಂಬುದು ಅವರ ಮುಖ್ಯ ಒತ್ತಾಯವಾಗಿದೆ. ಪ್ರತಿಯೊಂದು ಲೇಖನವೂ ಸಮಗ್ರ ವಿಚಾರದಿಂದ ಕೂಡಿದ್ದು, ಶಿಕ್ಷಣದ ಅಗತ್ಯತೆಯನ್ನು ಮತ್ತೆ ಮತ್ತೆ ಪ್ರತಿಪಾದಿಸುತ್ತದೆ. ಯಾವ ತೊಂದರೆಯನ್ನೂ ಲೆಕ್ಕಿಸದೆ ಶಿಕ್ಷಣ ಸಂಸ್ಥೆಗಳನ್ನು ತೆರೆದು ಸರ್ವಾಭ್ಯುದಯಕ್ಕೆ ಶ್ರಮಿಸಿದ ಮದರ್‌ಥೆರಸಾ ಮುಂತಾದ ವ್ಯಕ್ತಿಗಳನ್ನು ಕುರಿತ ಗಂಭೀರ ಲೇಖನಗಳಿವೆ.

'ಅಂತರಂಗ-ಬಹಿರಂಗ' (ಸಂಪುಟ -೨) ಈ ಲೇಖನಗಳು ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯಕ ಚಿಂತನೆಗಳು. ಭಾರತೀಯರ ಚಿನ್ನದ ಅತಿ ವ್ಯಾಮೋಹದ ಹುಚ್ಚುತನದಿಂದ ಅಕ್ರಮವಾಗಿ ಚಿನ್ನದ ಕಳ್ಳ ಸಾಗಣೆಗೆ ಕಾರಣವಾಯಿತು. ಸರಕಾರವು ಆ ಬಗ್ಗೆ ಕಟ್ಟುನಿಟ್ಟಿನ ಕಾರ್ಯಕ್ರಮ ಕೈಗೊಂಡುದರ ಪರಿಣಾಮವಾಗಿ ಪ್ರಪಂಚದಲ್ಲೆಲ್ಲೂ ಇರದ ಬೆಲೆ ಭಾರತದಲ್ಲಿ ಚಿನ್ನಕ್ಕೆ ಇದೆ ಎಂಬ ವಿಚಾರವನ್ನು ಅಂಕಿ ಅಂಶಗಳ ಮೂಲಕ ಲೇಖಕರು ವಿವರಿಸಿದ್ದಾರೆ. ಭಾರತದ ಆಡಳಿತ ನೀತಿ ಸುದೃಢವಾಗಿಲ್ಲದ ಕಾರಣ ಭ್ರಷ್ಟಾಚಾರ ಎಲ್ಲೆಲ್ಲೂ ತಾಂಡವವಾಡುವುದಕ್ಕೆ ಅವಕಾಶವಾಗಿದೆ ಎನ್ನುತ್ತಾರೆ. ರಾಜಕೀಯ ನೀತಿಯಿಂದಾಗಿ ಕಾಶ್ಮೀರದ ಪರಿಸ್ಥಿತಿ ದಿನೇದಿನೇ ಉಲ್ಬಣಗೊಳ್ಳುತ್ತಲೇ ಇದೆ. ಭಾರತದಲ್ಲಿ ಹಿಂದೂ -ಮುಸ್ಲಿಮರ ಮನಸ್ತಾಪಕ್ಕೆ ಕಾರಣವಾಗುತ್ತಿರುವ ಸಮಸ್ಯೆಗಳನ್ನು ವಿವರಿಸುತ್ತಾರೆ. ಇಲ್ಲಿನ ಬಹಳಷ್ಟು ಲೇಖನಗಳು ರಾಷ್ಟ್ರೀಯ ಭದ್ರತೆ ಮತ್ತು ಭಾವೈಕ್ಯತೆಯನ್ನು ಒತ್ತಿ ಹೇಳುತ್ತಿರುವುದು ಗಮನಾರ್ಹ ಇವು ಪತ್ರಿಕೆಯೊಂದಕ್ಕೆ ಬರೆದ ಸಂಪಾದಕೀಯ ಬರಹಗಳು.

ದೇ. ಜವರೇಗೌಡ ಅವರ 'ವಿಚಾರಕ್ರಾಂತಿಗೆ ಕುವೆಂಪು ಕರೆ' ಎಂಬ ಕೃತಿ ಕುವೆಂಪು ಅವರ ಎಲ್ಲ ಕೃತಿಗಳ ಮುಖ್ಯವಾದ ವೈಚಾರಿಕ ಅಂಶಗಳನ್ನು ಆಧರಿಸಿ ರಚಿಸಿದ್ದು. ವೈಚಾರಿಕತೆ ಮತ್ತು ವೈಜ್ಞಾನಿಕತೆಯ ಅಂಶಗಳನ್ನು ಕುವೆಂಪು ಮತ್ತೆ ಮತ್ತೇ ಪ್ರತಿಪಾದಿಸುವ ಮೂಲಕ ಈ ಶತಮಾನದ ಅನನ್ಯ ಲೇಖಕರಾಗಿದ್ದಾರೆ. ಅವರ 'ಜಲಗಾರ', 'ಆತ್ಮಶ್ರೀ ನಿರಂಕುಶಮತಿಗಳಾಗಿ', 'ನೆನಪಿನ ದೋಣಿಯಲ್ಲಿ', 'ಕೃತ್ತಿಕೆ', 'ಪಾಂಚಜನ್ಯ', 'ಕೋಗಿಲೆ ಮತ್ತು ಸೋವಿಯಟ್ ರಷ್ಯಾ', 'ಪ್ರೇತಕ್ಯೂ', 'ಷಷ್ಟಿನಮನ' ಮೊದಲಾದ ಕೃತಿಗಳಲ್ಲಿನ ವಿಚಾರಗಳ ಮೂಲಕ ಗುರುತಿಸಿದ್ದಾರೆ. ಮೂಲತಃ ಮಾನವತಾವಾದಿಯಾದ ಕುವೆಂಪು ತಮ್ಮ ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ, ಮನುಜಮತ, ವಿಶ್ವ ಪಥ ಎಂಬ ವಿಚಾರಗಳು, ವಿಶ್ವಮಾನವ ಸಪ್ತಸೂತ್ರಗಳಿಂದ ವೈಚಾರಿಕ ಕ್ರಾಂತಿಯನ್ನು ಬಯಸುತ್ತಾರೆ. ಇಂದು ಹೋರಾಟದ ರೂಪುರೇಷೆಗಳು ಬದಲಾಗಿದ್ದರೂ ಕುವೆಂಪು ಅವರ ಧೋರಣೆಗಳ ಮೂಲ ಆಶಯ ಇಂದಿಗೂ ಪ್ರಸ್ತುತವಾಗಿರುವುದನ್ನು ಲೇಖಕರು ಚರ್ಚಿಸಿದ್ದಾರೆ. ಮತೀಯ ದಾಷ್ಟ್ಯ ಮತ್ತು ಸಾಮಾಜಿಕ ಪಿಡುಗುಗಳನ್ನು ಯಾವುದೇ ರಾಜಿ ಮನೋಭಾವವಾಗಲಿ, ಅಂಜಿಕೆಯಾಗಲಿ ಇಟ್ಟುಕೊಳ್ಳದೆ ವಿರೋಧಿಸುವಂತೆ ಕರೆಕೊಡುವ ಕುವೆಂಪು ಚಿಂತನೆಗಳು ಜಾಗತಿಕ ನೆಲೆಯಿಂದ ರೂಪುಗೊಂಡುವಾಗಿವೆ. ಆತ್ಮಶ್ರೀ ಮತ್ತು ನಿರಂಕುಶ ಮತಿತ್ವವನ್ನು ಬೆಳೆಸಿಕೊಳ್ಳುವುದರ ಮೂಲಕ ಇಂಥ ವೈಚಾರಿಕ ಕ್ರಾಂತಿ ಮಾಡಬೇಕೆಂದು ಕುವೆಂಪು ಕರೆಕೊಟ್ಟಿದ್ದಾರೆ. ದೇಜಗೌ ಅವರು ಕುವೆಂಪು ಅವರ ಈ ಎಲ್ಲ ವಿಚಾರಗಳ ಹಿನ್ನೆಲೆಯಿಂದ ''ಈ ಶತಮಾನದ ತೀವ್ರ ಸಾಂಸ್ಕೃತಿಕ ಕಾಳಜಿಯುಳ್ಳ ಲೇಖಕರೆಂದರೆ ಕುವೆಂಪು ಮಾತ್ರ'' ಎಂದಿರುವುದು ಅತಿಶಯೋಕ್ತಿಯೆನಿಸುವುದಿಲ್ಲ.

ಈ ವರ್ಷ ರಾಷ್ಟ್ರೀಯ ಸಮಸ್ಯೆಗಳನ್ನು ಕುರಿತಂತೆ ವಿಚಾರಪೂರ್ಣ ಕೃತಿಗಳು ಹೆಚ್ಚಾಗಿ ಪ್ರಕಟವಾಗಿವೆ. ರಾಷ್ಟ್ರೀಯ ಸಮಸ್ಯೆಗಳು ಪ್ರತಿಯೊಬ್ಬರ ಮೇಲೂ ಗಂಭೀರ ಪರಿಣಾಮ ಬೀರಿವೆ. ಅದಕ್ಕೆ ತಕ್ಕಂತೆ ಜನತೆ ಪ್ರತಿಕ್ರಿಯೆಯೂ ವ್ಯಕ್ತಪಡಿಸಿದೆ. ಈ ಎಲ್ಲಾ ವೈಚಾರಿಕ ಕೃತಿಗಳು ಅನಾವರಣಗೊಳಿಸಿರುವ ವಸ್ತುಸ್ಥಿತಿಯ ವಿವರಗಳು ರಾಷ್ಟ್ರೀಯ ಭದ್ರತೆಯ ಬಗ್ಗೆ ಹೊಸ ಚಿಂತನೆಗಳನ್ನು ಮೂಡಿಸುತ್ತವೆ. ವಿದ್ಯಾವಂತ ಯುವಕರು ಹೆಚ್ಚಾಗಿ ಈ ಚಿಂತನೆಗಳ ಮೂಲಕ ಹೋರಾಟ ನಡೆಸುತ್ತಿದ್ದಾರೆ. ಸರ್ಕಾರದ ಪ್ರತಿಯೊಂದು ಕಾರ್ಯಕ್ರಮವೂ ವಿಫಲಗೊಳ್ಳುವುದರ ಮೂಲ ಕಾರಣವನ್ನು ಗುರುತಿಸಿ, ಎಂಥ ಕಾರ್ಯಕ್ರಮಗಳ ಮೂಲಕ ಜನಜೀವನದ ಅಭಿವೃದ್ಧಿ ಸಾಧ್ಯ ಎಂಬುದರತ್ತ ಬೆಳಕು ಚೆಲ್ಲುತ್ತವೆ. ಸಮಸ್ಯೆಗಳಲ್ಲಿ ಸಿಕ್ಕಿರುವ ಭಾರತ ಸ್ವಸಾಮರ್ಥ್ಯದ ಮೂಲಕ ಮಾತ್ರ ಈ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಲ್ಲುದೆಂದು ಕರೆಕೊಡುತ್ತವೆ. ವೈಚಾರಿಕ ಕೃತಿಗಳು ಮುಖ್ಯವಾಗಿ ಪೂರ್ವಾಗ್ರಹಪೀಡಿತ ಅಂಶಗಳ ಅಸ್ತಿತ್ವವನ್ನು ನಿರಾಕರಿಸುತ್ತವೆ. ಪ್ರತಿಯೊಬ್ಬ ಪ್ರಜೆಯೂ ವಾಸ್ತವ ದೃಷ್ಟಿಕೋನದಿಂದ ಈ ಸಮಸ್ಯೆಗಳ ಪರಿಹಾರದತ್ತ ಚಲಿಸಬೇಕೆಂಬುದೇ ಈ ಎಲ್ಲ ಕೃತಿಗಳ ಒಟ್ಟು ಧ್ವನಿಯಾಗಿದೆ.

# ಅಭಿನಂದನ -ಸ್ಮರಣ ಗ್ರಂಥಗಳು

*ಎಫ್.ಟಿ. ಹಳ್ಳಿಕೇರಿ*

ಸಾಹಿತ್ಯ, ಕಲೆ, ಧರ್ಮ, ಭಾಷೆ, ಸಮಾಜ, ಪತ್ರಿಕೋದ್ಯಮ ಮುಂತಾದ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಪೂರ್ವವಾದ ಸಾಧನೆಗೈದ ಮಹನೀಯರನ್ನು ಗೌರವಿಸುವ, ಅಭಿನಂದಿಸುವ, ಸ್ಮರಿಸುವ ಸಂಪ್ರದಾಯ ನಮ್ಮಲ್ಲಿ ಬೆಳೆದುಬಂದಿದೆ. ಈ ಸಂದರ್ಭದಲ್ಲಿ ಅಭಿನಂದನ, ನೆನಪಿನ, ಸ್ಮರಣ ಸಂಪುಟಗಳನ್ನು ಪ್ರಕಟಿಸಲಾಗುತ್ತಿದೆ. ಸಾಮಾನ್ಯವಾಗಿ ಇಂಥ ಸಂಪುಟ ಗ್ರಂಥಗಳಲ್ಲಿ ಗೌರವ ಅಭಿನಂದನೆಗೆ ಪಾತ್ರರಾದ ಮಹನೀಯರ ವ್ಯಕ್ತಿತ್ವ, ಸಾಧನೆಗಳನ್ನು ದಾಖಲಿಸುವುದು. ಜೊತೆಗೆ ನಾಡಿನ ವಿದ್ವಾಂಸರಿಂದ ಆಯಾ ಕ್ಷೇತ್ರಕ್ಕೆ ಸಂಬಂಧಿಸಿದ ಲೇಖನಗಳನ್ನು ಬರೆಯಿಸಿ ಪ್ರಕಟಿಸುವುದು. ಕಳೆದ ವರ್ಷಕ್ಕೆ (೧೯೯೨) ಹೋಲಿಸಿದರೆ ಈ ವರ್ಷ (೧೯೯೩) ದಲ್ಲಿ ಇಂಥ ಮಾದರಿಯ ಗ್ರಂಥಗಳ ಪ್ರಕಟನೆ ಸಂಖ್ಯೆಯಲ್ಲಿ ಗಮನಾರ್ಹ ಬೆಳವಣಿಗೆ ಕಂಡು ಬಂದಿದೆ.

'ಭಾಷೋಪಾಸಕ' ಕನ್ನಡ ಭಾಷಾ ವಿಜ್ಞಾನದಲ್ಲಿ ವಿಶೇಷ ವಿದ್ವತ್ತನ್ನು ಸಂಪಾದಿಸಿರುವ ಪ್ರಾಧ್ಯಾಪಕ ಡಾ. ಕೆ.ಜಿ. ಶಾಸ್ತ್ರಿಯವರಿಗೆ ಎಪ್ಪತ್ತು ವರ್ಷಗಳು ತುಂಬಿದ ಸಂದರ್ಭದಲ್ಲಿ ಅರ್ಪಿಸಿದ ಅಭಿನಂದನ ಗ್ರಂಥ. ಇದರಲ್ಲಿ ನಾಲ್ಕು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ೮ ಲೇಖನಗಳಿದ್ದು, ಅವು ಶಾಸ್ತ್ರಿಯವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಪರಿಚಯಿಸುತ್ತವೆ. ಸ್ನೇಹಿತರು, ಸಹೋದ್ಯೋಗಿಗಳು, ಶಿಷ್ಯರು, ವಿದ್ಯಾರ್ಥಿಗಳು ಶಾಸ್ತ್ರಿಯವರ ಸ್ನೇಹಶೀಲತೆ, ಪ್ರತಿಭೆ-ಪಾಂಡಿತ್ಯ, ಅಧ್ಯಯನಕ್ರಮ, ಶ್ರದ್ಧೆ- ಶ್ರಮಗಳನ್ನು ಇಲ್ಲಿ ಎತ್ತಿ ಹೇಳಿದ್ದಾರೆ. ಇವರನ್ನು 'ರಸಿಕ ವಿದ್ವಾಂಸ'ರೆಂದು ಸು.ರಂ. ಎಕ್ಕುಂಡಿಯವರು ಬಣ್ಣಿಸಿದರೆ, ಮಜ್ಜಿಗಿಯವರು 'ಮೃದು ಮಧುರಭಾವ'ದವರೆಂದು ವಿವರಿಸಿದ್ದಾರೆ. ಶಾಸ್ತ್ರಿಯವರ ಮಾರ್ಗದರ್ಶನದಲ್ಲಿ ಸಂಶೋಧನ (ಪಿಎಚ್.ಡಿ) ಅಧ್ಯಯನ ಪೂರೈಸಿದ ಡಾ. ಮಂದಾಕಿನಿಯವರು ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ ಡಾ. ಜಿ. ಎಂ. ಹೆಗಡೆಯವರು ಶಾಸ್ತ್ರಿಯವರ ಬದುಕು-ಬರಹಗಳನ್ನು ಸ್ಥೂಲವಾಗಿ ಪರಿಚಯಿಸಿದ್ದಾರೆ. ಪ್ರಾಚೀನ ಕವಿ-ಕಾವ್ಯ-ಭಾಷೆ, ಜಾನಪದ, ವ್ಯಾಕರಣ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಶಾಸ್ತ್ರಿಯವರ ಆಯ್ದ ೨೪ ಲೇಖನಗಳನ್ನು ಎರಡನೆಯ ಭಾಗದಲ್ಲಿ ಅಳವಡಿಸಲಾಗಿದೆ. ಇಲ್ಲೆಲ್ಲ ಅವರ ಬಹುಮುಖ ಅಧ್ಯಯನ, ಚಿಂತನೆಯ ಕ್ರಮ, ವೈಚಾರಿಕತೆ, ತರ್ಕಬದ್ಧತೆಯನ್ನು ಗುರುತಿಸಬಹುದಾಗಿದೆ.

ಮೂರನೆಯ ಭಾಗದಲ್ಲಿ ನಾಡಿನ ವಿದ್ವಾಂಸರು ಭಾಷೆ, ಸಾಹಿತ್ಯ ಜಾನಪದವನ್ನು ಕುರಿತಂತೆ ಬರೆದ ಅಧ್ಯಯನ ಪೂರ್ಣ ಲೇಖನಗಳಿವೆ. ಇಲ್ಲಿಯವರೆಗೆ ಕನ್ನಡದಲ್ಲಿ ಭಾಷಾ ವಿಜ್ಞಾನದ ಬಗೆಗೆ ನಡೆದ ಅಧ್ಯಯನವನ್ನು ಡಾ. ಕುಶಾಲಪ್ಪಗೌಡರು ಲೇಖನವೊಂದರಲ್ಲಿ ವಿವೇಚಿಸಿದ್ದಾರೆ. ವಿವರಣಾತ್ಮಕ ವ್ಯಾಕರಣ, ಉಪಭಾಷೆ, ಆನ್ವಯಿಕ ವ್ಯಾಕರಣಗಳ ಮೇಲೆ ವಿದ್ವಾಂಸರು ನಡೆಸಿದ ಅಧ್ಯಯನವನ್ನು ಅವರು ಗುರುತಿಸಿದ್ದಾರೆ. ಡಾ.ಎಚ್.ಆರ್. ರಘುನಾಥಭಟ್, ಡಾ. ಶ್ರೀಕೃಷ್ಣಭಟ್ ಅರ್ತಿಕಜೆ, ಡಾ. ಶಾಲಿನಿ ರಘುನಾಥ ಅವರು ಹವ್ಯಕ ಭಾಷೆ, ಹವ್ಯಕ ಜಾನಪದದ ಬಗೆಗೆ ತಮ್ಮ ಲೇಖನಗಳಲ್ಲಿ ವಿಶ್ಲೇಷಿಸಿದ್ದಾರೆ. ಹವ್ಯಕ ಭಾಷಾಧ್ಯಯನದ ಸಮೀಕ್ಷೆಯನ್ನು ಮಾಡುತ್ತಾ ಶಾಲಿನಿಯವರು ''ಹವ್ಯಕ ಭಾಷೆಯನ್ನು ಅಧ್ಯಯನ ಮಾಡಿದಷ್ಟು, ಕನ್ನಡ ಭಾಷೆಗೆ ಸಂಬಂಧಿಸಿದ ಅನೇಕ ಐತಿಹಾಸಿಕ ಅಂಶಗಳು ಬರುವ ಸಾಧ್ಯತೆಗಳಿವೆ'' ಯೆಂಬ ಸೂಚನೆಯನ್ನು ಕೊಟ್ಟಿದ್ದಾರೆ. ಒಟ್ಟಿನಲ್ಲಿ ಇಲ್ಲಿಯ ಲೇಖನಗಳು ಪ್ರೌಢವಾಗಿದ್ದು, ಅಧ್ಯಯನಾಸಕ್ತರಿಗೆ ಸಹಾಯಕಾರಿಯಾಗುತ್ತವೆ. ನಾಲ್ಕನೆಯ ಭಾಗದಲ್ಲಿ ಶಾಸ್ತ್ರಿಯವರ ಬಾಳನೆನಪಿನ ಸಂಕ್ಷಿಪ್ತ ಹಿನ್ನೋಟವಿದೆ. ಅವರ ಪತ್ನಿ, ಮಕ್ಕಳು, ಅಳಿಯಂದಿರು ತಮ್ಮ ಬದುಕನ್ನು ರೂಪಿಸಿದ ಕ್ರಮವನ್ನು ಹೇಳಿಕೊಂಡಿದ್ದಾರೆ. ಅನುಬಂಧದಲ್ಲಿ ಶಾಸ್ತ್ರಿಯವರ ಕೃತಿಗಳನ್ನು ಕುರಿತು ಬಂದ ಅಭಿಪ್ರಾಯಗಳನ್ನು, ಅವರ ಜೀವನ, ಸಾಧನೆಯ ಮಹತ್ವದ ವರ್ಷಗಳನ್ನು ದಾಖಲಿಸಲಾಗಿದೆ. ಇಂಥ ವಿಶಿಷ್ಟಮಯವಾದ ಗ್ರಂಥ 'ಭಾಷೋಪಾಸಕ'ವನ್ನು ಡಾ. ಜಿ.ಎಂ. ಹೆಗಡೆಯವರು ಅಚ್ಚುಕಟ್ಟಾಗಿ ಸಂಪಾದಿಸಿದ್ದಾರೆ.

'ಸಂತುಷ್ಟಿ' ಕನ್ನಡದ ಪ್ರಮುಖ ಜಾನಪದ ವಿದ್ವಾಂಸರಲ್ಲಿ ಒಬ್ಬರಾದ ಡಾ. ಎಂ.ಎಸ್. ಲಠ್ಠೆ ಅವರಿಗೆ ಅರ್ಪಿಸಿದ ಅಭಿನಂದನ ಸಂಪುಟವಿದು. ಇದರಲ್ಲಿಯೂ ನಾಲ್ಕು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ನಾಡಿನ ಪ್ರಮುಖ ವಿದ್ವಾಂಸರ ವಿದ್ವತ್ಪೂರ್ಣವಾದ ಮೂವತ್ತೊಂದು ಲೇಖನಗಳಿವೆ. ಅವು ವಚನಸಾಹಿತ್ಯ, ಹರಿದಾಸ ಸಾಹಿತ್ಯ, ಜಾನಪದ ಸಾಹಿತ್ಯ, ಹೊಸಗನ್ನಡ ಸಾಹಿತ್ಯ, ಭಾಷಾಶಾಸ್ತ್ರಗಳಿಗೆ ಸಂಬಂಧಿಸಿದ ಹೊಸಬಗೆಯ ವಿಚಾರಗಳನ್ನು ತಿಳಿಸಿಕೊಡುತ್ತವೆ. ಎಂಬತ್ತರ ದಶಕದ ಕನ್ನಡ ವಿಮರ್ಶೆಯ ಸಾಧನೆಯನ್ನು ಶ್ರೀ ವೀರೇಂದ್ರಸಿಂಪಿಯವರು ಸ್ಥೂಲವಾಗಿ ಲೇಖನವೊಂದರಲ್ಲಿ ಸಮೀಕ್ಷಿಸಿದ್ದಾರೆ. ಹಲವಾರು ವಿಮರ್ಶಕರು ಈ ದಶಕದಲ್ಲಿ ಮಾಡಿದ ಸಾಧನೆಯನ್ನು ವಿಶ್ಲೇಷಿಸಲಾಗಿದೆ. ಕೃಷ್ಣನ ಪಾತ್ರದ ಬೆಳವಣಿಗೆಯ ಹಿನ್ನೆಲೆಯಲ್ಲಿ ಕನಕದಾಸನ 'ಮೋಹನ ತರಂಗಿಣಿ'ಯನ್ನು ಡಾ. ಬಿ.ವಿ. ಮಲ್ಲಾಪುರ ಅವರು ಅವಲೋಕಿಸಿದ್ದಾರೆ. ಗೋಕಾಕರ 'ಭಾರತ ಸಿಂಧು ರಶ್ಮಿ'ಯ ಭಾಷೆಯ ಬಗೆಗೆ ಡಾ. ಸಂಗಮೇಶ ಸವದತ್ತಿಮಠ ಅವರು ವಿಚಾರಿಸುತ್ತಾ ''ಸಂಸ್ಕೃತ ಭೂಯಿಷ್ಠ ಪ್ರೌಢ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಹಾಗೂ ದೇಸಿ, ಅನ್ಯ ಭಾಷಾ ಪ್ರಯೋಗ ವಿನಾಯಕರ ಮಹಾಕಾವ್ಯದಲ್ಲಿದೆ '' ಎಂದು ಅಭಿಪ್ರಾಯಪಡುತ್ತಾರೆ. ಆಧುನಿಕ ವಚನಸಾಹಿತ್ಯ, ಕನ್ನಡ ಹಸ್ತಪ್ರತಿ ಪ್ರಶಸ್ತಿಗಳು, ಕೋಗಳಿನಾಡಿನ ಕದಂಬರು ಇತ್ಯಾದಿ ಲೇಖನಗಳು ಸಂಶೋಧನಾತ್ಮಕ ಬರಹಗಳಿಂದ ಕೂಡಿದವುಗಳಾಗಿವೆ.

ಎರಡನೆಯ ಭಾಗದಲ್ಲಿ ಡಾ. ಲಠ್ಠೆಯವರ ವ್ಯಕ್ತಿತ್ವವನ್ನು ಕಂಡರಿಸಲಾಗಿದೆ. ಸಜ್ಜನಿಕೆಯ ಸಾಕಾರಮೂರ್ತಿ, ಆದರ್ಶಕಾಯಕ ಜೀವಿ, ಸರಳ ಬದುಕಿನ ಶ್ರೀಮಂತ ವ್ಯಕ್ತಿಯೆಂದು ಅವರನ್ನು ಬಣ್ಣಿಸಲಾಗಿದೆ. ಸ್ನೇಹಿತರು, ವಿದ್ವಾಂಸರು, ವಿದ್ಯಾರ್ಥಿಗಳು ಲಠ್ಠೆಯವರೊಂದಿಗಿನ ತಮ್ಮ ಗಾಢಸ್ನೇಹ ಸಂಬಂಧವನ್ನು ಹೇಳಿಕೊಂಡಿದ್ದಾರೆ. ಮೂರನೆಯ ಭಾಗದಲ್ಲಿ ಅವರ ಸಂಶೋಧನೆ, ಸಂಪಾದನೆ, ಜಾನಪದ ಅಧ್ಯಯನದ ಫಲವಾಗಿ ಪ್ರಕಟವಾದ ಕೃತಿಗಳನ್ನು ಪರಾಮರ್ಶಿಸಲಾಗಿದೆ. ನಾಲ್ಕನೆಯ ಭಾಗದಲ್ಲಿ ಸ್ವತಃ ಅವರೇ ತಮ್ಮ ಬಾಲ್ಯ, ಶಿಕ್ಷಣ, ಕೌಟುಂಬಿಕ ಜೀವನ, ಅಧ್ಯಾಪಕ ವೃತ್ತಿ, ಸ್ನಾತಕೋತ್ತರ ವಿಭಾಗದಲ್ಲಿ ಸಲ್ಲಿಸಿದ ಸೇವೆ, ಸಾಹಿತ್ಯಕೃಷಿ, ಜೀವನ ವಿಧಾನಗಳ ಬಗೆಗೆ ವಿವರಿಸಿದ್ದಾರೆ. ಇಲ್ಲೆಲ್ಲ ಅವರ ವಿಶಾಲ ಹೃದಯವಂತಿಕೆ, ಕೃತಜ್ಞತಾ ಭಾವ ಮನಮುಟ್ಟುವಂತಿವೆ. ಸ್ನೇಹಿತರು, ಆತ್ಮೀಯರು, ಶಿಷ್ಯರು ಇಂಥ ಉಪಯುಕ್ತವಾದ ಗೌರವ ಸಂಪುಟವನ್ನು ಲಠ್ಠೆಯವರಿಗೆ ಅರ್ಪಿಸಿದುದು ತುಂಬಾ ಸಮಂಜಸವಾದುದೆಂದು ಹೇಳಬಹುದು. ಡಾ. ಸಂಗಮೇಶ ಸವದತ್ತಿ ಮಠ ಅವರ ಪ್ರಧಾನ ಸಂಪಾದಕತ್ವದಲ್ಲಿ ಈ ಕೃತಿ ಆಕೃತಿ ಪಡೆದಿದೆ.

ಕಾವ್ಯಮೀಮಾಂಸೆ, ಸಾಹಿತ್ಯ ವಿಮರ್ಶೆ, ವೀರಶೈವ ಸಾಹಿತ್ಯ, ಜಾನಪದ ಸಾಹಿತ್ಯಗಳಲ್ಲಿ ವಿಶೇಷ ಪರಿಣತಿ ಪಡೆದ ಡಾ. ಎಂ.ಬಿ. ಕೊಟ್ರಶೆಟ್ಟಿ ಅವರು ಕನ್ನಡದ ಪ್ರಮುಖ ಪ್ರಾಧ್ಯಾಪಕರಾಗಿದ್ದರು. ಕೇವಲ ೪೮ ವರ್ಷ (೧೯೩೮-೧೯೮೭) ಗಳಲ್ಲಿಯೇ ಆದರ್ಶ ಪ್ರಾಧ್ಯಾಪಕ, ಒಳ್ಳೆಯ ವಿಮರ್ಶಕ, ಉತ್ತಮ ಬರಹಗಾರರೆಂದು ಹೆಸರುಗಳಿಸಿದ್ದರು. ಅವರ ಸ್ಮರಣಾರ್ಥ 'ವಿಭಾವ' ಎಂಬ ಗ್ರಂಥವನ್ನು ಹೊರತರಲಾಗಿದೆ. ವಿಶೇಷತೆಯೆಂದರೆ ಈ ಗ್ರಂಥದಲ್ಲಿ ಡಾ. ಕೊಟ್ರಶೆಟ್ಟಿಯವರ ಬದುಕಿನ ಸಂಕ್ಷಿಪ್ತಪರಿಚಯ ಲೇಖನವೊಂದನ್ನು ಬಿಟ್ಟರೆ, ಉಳಿದ ೧೪ ಲೇಖನಗಳು ಅಧ್ಯಯನಪೂರ್ಣ ಬರಹಗಳಾಗಿವೆ. ಉಡಚಮ್ಮ, ಡೊಳ್ಳಿನ ಹಾಡು, ಮರಾಠಿ ಲಾವಣಿ, ಕೊಡವರ ಸಾವಿನ ಆಚರಣೆ, ಜನಪದ ಭಾಷೆ, ತಮಿಳರ ರಂಗವಲ್ಲಿ ಕಲೆ, ಸಾಂಪ್ರದಾಯಿಕ ಕಲೆ, ನವೋದಯ ವಿಮರ್ಶೆ ಮುಂತಾದವುಗಳ ಬಗೆಗೆ ಇಲ್ಲಿ ವಿವೇಚಿಸಲಾಗಿದೆ. ಮುಖ್ಯವಾಗಿ ಈ ಲೇಖನಗಳಲ್ಲಿ ಸಂಶೋಧನೆ, ವೈಚಾರಿಕತೆಯ ಅಂಶಗಳು ಕಂಡುಬರುತ್ತವೆ. ಇಂಥ ವಿಶಿಷ್ಟವಾದ ಈ ಸಂಪುಟವನ್ನು ಡಾ. ಬಸವರಾಜ ಮಲಶೆಟ್ಟಿಯವರು ಸಂಪಾದಿಸಿದ್ದಾರೆ.

ಕನ್ನಡದ ಜನಪ್ರಿಯ ಬರಹಗಾರರಾದ ನಾ. ಡಿಸೋಜಾ ಅವರಿಗೆ ನಾಡಿನ ಸಾಹಿತಿಗಳು, ಸ್ನೇಹಿತರು ಸನ್ಮಾನ ಸಮಾರಂಭವನ್ನು ಏರ್ಪಡಿಸಿ ಗೌರವಿಸುವುದರೊಂದಿಗೆ, 'ನಾ.ಡಿಸೋಜಾ ಅಭಿನಂದನ' ಎಂಬ ಗ್ರಂಥವನ್ನು ಅರ್ಪಿಸಿದ್ದಾರೆ. ಇದರಲ್ಲಿ ಡಿಸೋಜಾ ಅವರ ವೈವಿಧ್ಯಮಯ ಬರವಣಿಗೆಯನ್ನು ಕುರಿತು ಹಲವಾರು ವಿದ್ವಾಂಸರು ಬರೆದ ಲೇಖನಗಳಿವೆ. ಕನ್ನಡ ಕಥಾಲೋಕದ ಚೆಕೋವ್, ಕನ್ನಡದ ಆರ್ಥರ್ ಹೇಲಿ ಎಂದು ಡಿಸೋಜಾರನ್ನು ಕರೆಯಲಾಗಿದೆ. ಅವರ ಸಾಹಿತ್ಯ ಕೃಷಿ ಕಾದಂಬರಿ, ಕಥೆ, ನಾಟಕ, ಮಕ್ಕಳ ಸಾಹಿತ್ಯ, ಜಾನಪದ ಸಾಹಿತ್ಯಗಳಲ್ಲಿ ನಡೆದಿದೆ. ಒಟ್ಟು ಅವರ ಕೃತಿಗಳಲ್ಲಿ ಸಮಕಾಲೀನ ಜನಜೀವನ, ಸಾಮಾಜಿಕ ಸಮಸ್ಯೆಗಳು ಮತ್ತು ಅವುಗಳ ಪರಿಹಾರ, ಹೆಣ್ಣಿನ

ಮನಸ್ಸಿನಾಳದಲ್ಲಿ ಹೊಯ್ದಾಡುವ ತುಮುಲ ಭಾವನೆಗಳ ನೈಜ ಚಿತ್ರಣವು ಹೇಗೆ ಮೂಡಿಬಂದಿದೆಯೆನ್ನುವುದನ್ನು ಇಲ್ಲಿನ ಲೇಖನಗಳು ವಿವರಿಸುತ್ತವೆ. ಭಾರತೀಯ ಕ್ರೈಸ್ತರು ಹೇಗೆ ಈ ನಾಡಿನ ಸಾಹಿತ್ಯ, ಸಾಮಾಜಿಕ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವೇ ಆಗಿದ್ದಾರೆಂಬುದನ್ನು ಅವರು ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ವಿವಿಧ ವಿಷಯಗಳ ಬಗೆಗೆ ತಮ್ಮ ಕೃತಿಗಳಲ್ಲಿ ಸೂಕ್ಷ್ಮವಾಗಿ ಚಿತ್ರಿಸಿದ ಡಿಸೋಜ ಅವರನ್ನು ಈ ಕೃತಿಯ ಮೂಲಕ ಗೌರವಿಸಿರುವುದು ಅರ್ಥಪೂರ್ಣವಾದುದೆಂದು ಹೇಳಬಹುದು.

'ಸಾಂಸ್ಕೃತಿಕ ರಾಯಭಾರಿ'ಯೆಂದು ಹೆಸರಾದ ಸಾಹಿತಿ ಎ.ಕೆ. ರಾಮಾನುಜನ್ ಅವರು ೧೩.೭.೯೩ರಂದು ನಿಧನರಾದರು. ಅವರ ನೆನಪಿಗಾಗಿ ಪುತ್ತೂರಿನ ಕರ್ನಾಟಕ ಸಂಘವು 'ಎ.ಕೆ. ರಾಮಾನುಜನ್' ನೆನಪಿನ ಸಂಪುಟ ಗ್ರಂಥವನ್ನು ಪ್ರಕಟಿಸಿದೆ. ಇದು ರಾಮಾನುಜನ್ ಅವರ ವ್ಯಕ್ತಿತ್ವ, ಬರವಣಿಗೆಯನ್ನು ಕುರಿತ ವೈವಿಧ್ಯಮಯವಾದ ಲೇಖನಗಳನ್ನೊಳಗೊಂಡಿದೆ. ಕವಿ, ಶಿಕ್ಷಕ, ಗುರು, ಪಂಡಿತ, ಸಾಂಸ್ಕೃತಿಕ ನಾವಿಕ, ಸಾಂಸ್ಕೃತಿಕ ಪರಿಚಾರಕ, ಜಾನಪದಕೋವಿದ, ಪ್ರತಿಭಾವಂತ, ಬಹುಭಾಷಾ ಪಂಡಿತ ಎಂದು ಹಲವು ರೀತಿಯಲ್ಲಿ ರಾಮಾನುಜನ್‌ರನ್ನು ಇಲ್ಲಿಯ ಲೇಖಕರು ಬಣ್ಣಿಸಿದ್ದಾರೆ. ಕಥೆ, ಕವನ, ಕಾದಂಬರಿ, ನಾಟಕ, ಅನುವಾದ, ಜಾನಪದಗಳಲ್ಲಿ ಅವರ ಬರವಣಿಗೆ ಹೊರಹೊಮ್ಮಿದೆ. ಇಲ್ಲಿಯ ಲೇಖಕರು ರಾಮಾನುಜನ್‌ರ ಕೃತಿಗಳನ್ನು ಹಲವು ನೆಲೆಗಳಿಂದ ಚರ್ಚೆಗೆ ಎತ್ತುಕೊಂಡಿದ್ದಾರೆ. 'ಹೊಕ್ಕುಳಲ್ಲಿ ಹೂವಿಲ್ಲ' ಕವನ ಸಂಕಲನ ವಿಮರ್ಶಾಕ್ಷೇತ್ರದಲ್ಲಿ ಹೆಚ್ಚು ಚರ್ಚೆಗೊಳಪಟ್ಟಿದೆ. ಶಾಂತಿನಾಥ ದೇಸಾಯಿ, ಬಿ.ಟಿ. ದೇಸಾಯಿ, ಸುಬ್ರಾಯ ಚೊಕ್ಕಾಡಿ, ಕೀರ್ತಿನಾಥ ಕುರ್ತಕೋಟಿಯವರು ಈ ಸಂಕಲನದ ಬಗೆಗೆ ವಿವೇಚಿಸಿದ್ದಾರೆ. ಅವರೆಲ್ಲರ ಲೇಖನಗಳನ್ನು ಇದರಲ್ಲಿ ಅಳವಡಿಸಲಾಗಿದೆ. ಕನ್ನಡ ವಿಮರ್ಶಕರಲ್ಲಿ ಒಬ್ಬರಾದ ಶ್ರೀ ಟಿ.ಪಿ. ಅಶೋಕ ಅವರು ಹಲವಾರು ನಿಯತಕಾಲಿಕೆಗಳಲ್ಲಿ ರಾಮಾನುಜನ್‌ರ ಬಗೆಗೆ ಬಂದ ಲೇಖನಗಳನ್ನು ಸಂಪಾದಿಸಿ ಇಲ್ಲಿ ಪ್ರಕಟಿಸಿಧ್ದಾರೆ. ಹೀಗಾಗಿ ಎ.ಕೆ. ರಾಮಾನುಜನ್ ಅವರ ವ್ಯಕ್ತಿತ್ವ ಮತ್ತು ಸಾಹಿತ್ಯ ಕೃಷಿಯನ್ನು ಅಧ್ಯಯನ ಮಾಡುವವರಿಗೆ ಈ ಗ್ರಂಥ ಹೆಚ್ಚು ಉಪಯುಕ್ತವಾಗುತ್ತದೆ.

'ಮಹಿಳಾ ಅಧ್ಯಯನ' ಸಮಾಜಶಾಸ್ತ್ರ ಪ್ರಾಧ್ಯಾಪಕರಾದ ಪ್ರೊ. ಎಚ್.ವಿ. ನಾಗೇಶ ಅವರಿಗೆ ಅರ್ಪಿಸಿದ ಅಭಿನಂದನ ಗ್ರಂಥ. ಕಾಯಕನಿಷ್ಠ ದುಡಿಮೆ, ಅಪಾರ ವಿದ್ಯಾಪ್ರೇಮ, ಮಾನವೀಯ ಆದರ್ಶಗಳ ಪ್ರತಿಪಾದಕರಾಗಿ ನಾಗೇಶ ಅವರು ಜನಪ್ರಿಯರಾದವರು. ಪ್ರಸ್ತುತ ಗ್ರಂಥದಲ್ಲಿ ನಾಗೇಶ ಅವರ ವ್ಯಕ್ತಿತ್ವ ಬರಹಗಳ ಬಗೆಗಿನ ನಾಲ್ಕು ಲೇಖನಗಳನ್ನು ಬಿಟ್ಟರೆ ಉಳಿದವುಗಳೆಲ್ಲ ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದವುಗಳಾಗಿವೆ. ಆದುದರಿಂದ ಈ ಕೃತಿಗೆ 'ಮಹಿಳಾ ಅಧ್ಯಯನ' ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ. ''ನಮ್ಮ ಸಮಾಜದಲ್ಲಿ ಮಹಿಳೆ ಇಂದಿಗೂ ಎದುರಿಸುತ್ತಿರುವ ಶೋಷಣೆ ದಬ್ಬಾಳಿಕೆಗಳಿಗೆ ಸಂಬಂಧಿಸಿದಂತೆ ಅನೇಕ ಸಮಸ್ಯೆಗಳನ್ನು ಕುರಿತು ಹೊಸದೃಷ್ಟಿಯಿಂದ ಅಭ್ಯಸಿಸ ಬಯಸುವ ಮಹಿಳಾ ಅಧ್ಯಯನ ಒಂದು ವಿನೂತನ ಶಿಸ್ತು. ಭಾರತದ ಅನೇಕ ವಿಶ್ವವಿದ್ಯಾಲಯಗಳಲ್ಲಿ ಈಚೆಗೆ ಇದೊಂದು ಪದವಿಮಟ್ಟದ

ಅಭ್ಯಾಸಕ್ರಮವಾಗಿ ಅಳವಡಿಸಲ್ಪಟ್ಟಿದೆ. ಈ ಬಗ್ಗೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಗಂಭೀರವಾದ ಚರ್ಚೆಗಳು ನಡೆಯುತ್ತವೆ. ಆದರೆ ಕನ್ನಡದಲ್ಲಿ ಇನ್ನೂವರೆಗೆ ಮಹಿಳಾ ಅಧ್ಯಯನದ ಬಗ್ಗೆ ವ್ಯವಸ್ಥಿತ ರೀತಿಯಲ್ಲಿ ಅಭ್ಯಾಸ, ಸಂಶೋಧನೆ ನಡೆದಿಲ್ಲ. ವೈಯಕ್ತಿಕ ಮಟ್ಟದಲ್ಲಿ ಹಲವಾರು ವಿದುಷಿಯರು, ವಿದ್ವಾಂಸರು ಈ ಬಗ್ಗೆ ಅಧ್ಯಯನ ಮಾಡುತ್ತಿದ್ದಾರೆ. ಆದರೆ ಅಗತ್ಯವಾದ ಆಕರ ಸಾಮಗ್ರಿಯಾಗಲೀ ಇತರ ಯಾವುದೇ ಬಗೆಯ ಮಾಹಿತಿ- ಪುಸ್ತಕಗಳಾಗಲೀ ಕನ್ನಡದಲ್ಲಿ ಲಭ್ಯವಿಲ್ಲ. ಈ ನಿಟ್ಟಿನಲ್ಲಿ ಕಿರುಪ್ರಯತ್ನವಾದ ಈ ಗ್ರಂಥವು, ಸಹೃದಯರೂ ಮಹಿಳಾ ಅಧ್ಯಯನದಲ್ಲಿ ರಚನಾತ್ಮಕ ಅಭಿರುಚಿ ಹೊಂದಿರುವವರೂ ಆದ ನಾಗೇಶರಿಗೆ ಪ್ರಿಯವಾದ ಕೊಡುಗೆಯಾದೀತೆಂಬುದು ನಮ್ಮ ಆಶಯ'' ಎಂದು ಸಂಪಾದಕರಾದ ಡಾ. ವೀಣಾ ಶಾಂತೇಶ್ವರ ಅವರು ಪ್ರಸ್ತಾವನೆಯಲ್ಲಿ ಹೇಳಿದ್ದಾರೆ.

ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದಂತೆ ವೈವಿಧ್ಯಪೂರ್ಣವಾದ ೧೮ ಲೇಖನಗಳು ಇಲ್ಲಿವೆ. ಅವುಗಳನ್ನು ವಿಷಯದ ದೃಷ್ಟಿಯಿಂದ ಎರಡು ವಿಭಾಗಗಳನ್ನಾಗಿ ಮಾಡಿಕೊಳ್ಳಬಹುದು. ಮೊದಲ ಭಾಗದಲ್ಲಿ ಮಹಿಳಾ ಅಧ್ಯಯನದ ವಿವಿಧ ಸಮಸ್ಯೆಗಳಿಗೆ, ವ್ಯಾಪ್ತಿಗೆ, ವೈವಿಧ್ಯತೆಗೆ ಸಂಬಂಧಿಸಿದರೆ, ಎರಡನೆಯ ವಿಭಾಗದಲ್ಲಿ ಮಹಿಳಾ ಅಧ್ಯಯನವು ಸಾಹಿತ್ಯದ ಮೇಲೆ ಬೀರಿದ ಪರಿಣಾಮದಿಂದ ಹುಟ್ಟಿಕೊಂಡ ಸ್ತ್ರೀವಾದಿ ಸಾಹಿತ್ಯದ ಮೇಲೆ ಬೀರಿದ ಪರಿಣಾಮದಿಂದ ಹುಟ್ಟಿಕೊಂಡ ಸ್ತ್ರೀವಾದಿ ಸಾಹಿತ್ಯ ಹಾಗೂ ಸ್ತ್ರೀವಾದಿ ವಿಮರ್ಶೆಗೆ ಸಂಬಂಧಿಸಿದ ಲೇಖನಗಳಾಗಿವೆ. ಕನ್ನಡದ ಪ್ರಮುಖ ಲೇಖಕಿಯರಾದ ಚಿ.ನ.ಮಂಗಳಾ, ಹೇಮಲತಾ ಮಹಿಷಿ, ಸರೋಜಿನಿ, ಶಿಂತ್ರಿ, ವಿನೀತಪ್ಪೈ, ಶಾಂತಾದೇವಿ ಮಾಳವಾಡ, ಶಾಂತಾದೇವಿ ಇಮ್ರಾಪುರ, ಶಾಲಿನಿರಘುನಾಥ ಮೊದಲಾದವರ ಸ್ತ್ರೀವಾದಿ ಚಿಂತನೆಯ ಲೇಖನಗಳನ್ನೊಳಗೊಂಡ ಈ ಗ್ರಂಥ 'ಮಹಿಳಾ ಅಧ್ಯಯನ' ಕೈಗೊಳ್ಳುವವರಿಗೊಂದು ಪೂರಕ ಆಕರ ಗ್ರಂಥವಾಗುತ್ತದೆ.

ಆಡಳಿತಗಾರ, ಸಂಘಟಕ; ಶಿಕ್ಷಣ ಪ್ರೇಮಿ, ಸ್ನೇಹಜೀವಿ ಹೀಗೆ ಬಹುಮುಖೀ ಸಂಪನ್ನರಾದ ಶ್ರೀ ಕೆ.ಸಿ. ಪುಟ್ಟನರಸಯ್ಯ ಅವರಿಗೆ 'ಕೃತಾರ್ಥ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಲಾಗಿದೆ. ೧೯೩೩ ರಿಂದ ಸುಮಾರು ೩೫ ವರ್ಷಗಳ ಕಾಲ ಕಂದಾಯ ಇಲಾಖೆಯ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ ಪುಟ್ಟನರಸಯ್ಯನವರು ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಮತ್ತು ನೆಹರೂ ನಗರ ಸಹಕಾರಿ ಬ್ಯಾಂಕುಗಳ ಬೆಳವಣಿಗೆಯಲ್ಲಿಯೂ ಸಕ್ರಿಯವಾಗಿ ಕಾರ್ಯನಿರ್ವಹಿಸಿದವರು. ನಿಷ್ಠಾವಂತ ಸಮಾಜ ಸೇವಕರಾದ ಇವರಿಗೆ ಅಭಿನಂದನ ಪೂರ್ವಕವಾಗಿ ಈ ಗ್ರಂಥವನ್ನು ಡಾ. ಸಾ. ಶಿ. ಮರುಳಯ್ಯನವರು ಸಂಪಾದಿಸಿರುವುದು ತುಂಬ ಸ್ತುತ್ಯಾರ್ಹವಾದುದಾಗಿದೆ.

ಪ್ರಸ್ತುತ ಗ್ರಂಥವು ವ್ಯಕ್ತಿ-ಅಭಿವ್ಯಕ್ತಿ-ಅನುರಕ್ತಿ ಎಂಬ ಮೂರು ಭಾಗಗಳಿವೆ. ಮೊದಲ ಭಾಗದಲ್ಲಿ ಶ್ರೀಯುತರು ತಮ್ಮ ಜೀವನ, ಅನುಭವ, ಸೇವೆಗಳನ್ನು ಸುಮಾರು ೮೦ ಪುಟಗಳಲ್ಲಿ ಸುದೀರ್ಘವಾಗಿ ಹೇಳಿಕೊಂಡಿದ್ದಾರೆ. ಎರಡನೆಯ ಭಾಗದಲ್ಲಿ ಹಲವು ವಿದ್ವಾಂಸರ ವೈಚಾರಿಕವಾದ ೨೫ ಲೇಖನಗಳಿವೆ ಅವು ಜಾನಪದ, ವಚನ, ಹೊಸಗನ್ನಡ

ಸಾಹಿತ್ಯಕ್ಕೆ ಸಂಬಂಧಿಸಿದವುಗಳಾಗಿವೆ. ಜನಪದ ನಂಬಿಕೆಗಳು, ಜನಪದ ಸಂಗೀತ, ಕರಾವಳಿ ಯಕ್ಷಗಾನ, ಭಾಗವಂತಿಕೆ ಮೇಳ; ಸಮೂಹ ಮಾಧ್ಯಮ- ಜನಪದ ಸಾಹಿತ್ಯ, ಪ್ರದರ್ಶನಾತ್ಮಕ ಜನಪದಕಲೆಗಳ ಸಾಂಸ್ಕೃತಿಕ ಮತ್ತು ವೈಚಾರಿಕ ಹಿನ್ನೆಲೆ- ಈ ಎಲ್ಲಾ ಲೇಖನಗಳು ಜಾನಪದಕ್ಷೇತ್ರದ ತಿಳುವಳಿಕೆಯನ್ನು ವಿಸ್ತರಿಸುವಲ್ಲಿ ನೆರವನ್ನು ನೀಡುತ್ತವೆ. ಬಸವಪೂರ್ವಯುಗದ ಒಂದು ವಿಶಿಷ್ಟ ಅಭಿವ್ಯಕ್ತಿ; ಸಕಳೇಶ ಮಾದರಸ, ಜೇಡರದಾಸಿಮಯ್ಯನ ಸಾಮಾಜಿಕ ಕಳಕಳಿ, ಬೇಂದ್ರೆಯವರ ದೃಷ್ಟಿಯಲ್ಲಿ ಅಲ್ಲಮಪ್ರಭು, ವಚನಗಳಲ್ಲಿ ಪ್ರತಿಮೆಗಳು, ಶರಣರ ದೃಷ್ಟಿಯಲ್ಲಿ ಭಕ್ತಿ, ಸಕಲಪುರಾತನರ ವಚನಕಟ್ಟು: ಕೆಲವು ಸಮಸ್ಯೆಗಳು, ಭಕ್ತಿ ಮತ್ತು ಅನುಭಾವ ಸಾಹಿತ್ಯ ಚಳುವಳಿಗಳು ಮೊದಲಾದ ಲೇಖನಗಳು ಸಂಶೋಧನಾತ್ಮಕ ಗುಣವನ್ನು ಹೊಂದಿವೆ. 'ಕೃತಾರ್ಥ'ದಲ್ಲಿನ ಈ ತೆರನಾದ ಲೇಖನಗಳು ಅಧ್ಯಯನಾಸಕ್ತರಿಗೆ ಉಪಯುಕ್ತವಾಗುತ್ತವೆಂದು ಸ್ಪಷ್ಟವಾಗಿ ಹೇಳಬಹುದು.

'ಪಾಪು' ಎಂದೇ ಜನಪ್ರಿಯರಾದ ಧೀಮಂತ ಪತ್ರಕರ್ತ ಡಾ. ಪಾಟೀಲಪುಟ್ಟಪ್ಪ ಅವರಿಗೆ 'ಪ್ರಪಂಚದ ಪಾಪು' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಲಾಗಿದೆ. ಹಿರಿಯರು, ಮಿತ್ರರು, ಅಭಿಮಾನಿಗಳು ಹಾಗೂ ಪರಿವಾರದ ಸದಸ್ಯರು ಪುಟ್ಟಪ್ಪನವರ ವೈವಿಧ್ಯಮಯ ವ್ಯಕ್ತಿತ್ವ ಮತ್ತು ಸಾಧನೆಗಳನ್ನು ಕುರಿತು ವಿಸ್ತಾರವಾಗಿ ಇಲ್ಲಿ ವಿವರಿಸಿದ್ದಾರೆ. ಕನ್ನಡದ ಹೋರಾಟಗಾರ, ಚತುರ ವಾಗ್ಮಿ ಕನ್ನಡದ ಕಟ್ಟಾಳು, ಅನುಪಮ ಪ್ರಬಂಧಕಾರ, ಸೋಲರಿಯದ ಸಾಹಸಿ ಹೀಗೆ ವೈವಿಧ್ಯಮಯವಾಗಿ ಅವರನ್ನು ವಿವರಿಸಲಾಗಿದೆ. ಒಟ್ಟಿನಲ್ಲಿ ಪಾಟೀಲ ಪುಟ್ಟಪ್ಪನವರ ಬಹುಮುಖ ವ್ಯಕ್ತಿತ್ವವನ್ನು ಇಲ್ಲಿ ಪರಿಚಯಿಸಲಾಗಿದೆ.

ಶ್ರೀಕ್ಷೇತ್ರ ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರು ಪಟ್ಟಾಭಿಷಿಕ್ತರಾಗಿ ಇಪ್ಪತ್ತೈದನೆಯ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಸಂದರ್ಭದಲ್ಲಿ ಅವರಿಗೆ ಸಮರ್ಪಿಸಿದ ಸಂಭಾವನ ಗ್ರಂಥ 'ಪ್ರವರ್ಧಮಾನ'. ೭೦೦ ಪುಟಗಳ ಈ ಬೃಹದ್ಗ್ರಂಥದಲ್ಲಿ ಸ್ವಸ್ತಿ ಸ್ವರೂಪ, ಸಾಧನ ಎಂಬ ಭಾಗಗಳಿವೆ. ಇಪ್ಪತ್ತೊಂದು ಶುಭಸಂದೇಶಗಳು ಎಪ್ಪತ್ತು ವ್ಯಕ್ತಿಚಿತ್ರಣಗಳು ಮತ್ತು ನಲ್ವತ್ತೇಳು ವಿಷಯ ವಿಶ್ಲೇಷಣೆಗಳು ಇದರಲ್ಲಿವೆ. ಮುಕ್ತಮನಸ್ಸಿನ ದಿಟ್ಟ ವಿಚಾರವಾದಿ, ಸಭ್ಯತೆಯ ಸಾಕಾರ, ಮಾನವಧರ್ಮದ ಹರಿಕಾರ, ಸಾಹಿತ್ಯ ಸಂಸ್ಕೃತಿಗಳ ಚೈತ್ರರಾಜ ಕಲಾರಸಿಕ, ಕಲಾಪೋಷಕ, ನಾಡಿನ ಕಣ್ಮಣಿ ಹೀಗೆ ವಿವಿಧ ರೀತಿಯಲ್ಲಿ ಶ್ರೀ ಹೆಗ್ಗಡೆಯವರು ವ್ಯಕ್ತಿತ್ವವನ್ನು ಚಿತ್ರಿಸಲಾಗಿದೆ. ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಕ ಕ್ಷೇತ್ರಗಳಿಗೆ ಅವರು ನೀಡಿದ ಕೊಡುಗೆ, ಪುರಸ್ಕಾರಗಳನ್ನು ಕೂಲಂಕಷವಾಗಿ ಲೇಖಕರು ವಿವರಿಸಿದ್ದಾರೆ. ಶ್ರೀ ಹೆಗ್ಗಡೆಯವರ ಸಮಗ್ರ ಸಾಧನೆಗಳನ್ನು ತಿಳಿಸಿಕೊಡುವ ಈ ಗ್ರಂಥ ಛಾಯಾಚಿತ್ರಗಳಿಂದ ಆಕರ್ಷಕವಾಗಿ ಮುದ್ರಣಗೊಂಡಿದೆ.

ಸ್ವಾತಂತ್ರ್ಯ ಹೋರಾಟಗಾರರೂ ಸಮಾಜ ಸೇವಕರೂ ಆದ ಶ್ರೀ ಎಚ್.ಎಲ್. ವೀರಭದ್ರಪ್ಪಗೌಡರ ಸ್ಮರಣೆಗಾಗಿ ಪ್ರಕಟಿಸಿದ ಗ್ರಂಥ 'ಎಚ್.ಎಲ್. ವ್ಯಕ್ತಿ ಶಕ್ತಿ'.

ವ್ಯಕ್ತಿ-ಶಕ್ತಿ ಎಂಬ ಎರಡು ಭಾಗಗಳಲ್ಲಿ ವೀರಭದ್ರಪ್ಪಗೌಡರ ಜೀವನ ಸಾಧನೆಗಳನ್ನು ಸ್ನೇಹಿತರು, ಅಭಿಮಾನಿಗಳು ಚಿತ್ರಿಸಿದ್ದಾರೆ. ಜ್ಞಾನದಾಸೋಹಿ, ಗಾಂಧೀವಾದಿ, ಹಿತಚಿಂತಕ, ಸಾತ್ವಿಕ, ದಲಿತರದನಿ, ಮಲೆನಾಡಿನ ಮಹಾತ್ಮ ಎಂದು ನಾನಾ ವಿಧದಲ್ಲಿ ಅವರ ಗುಣಗಾನ ಮಾಡಲಾಗಿದೆ. ಎಚ್.ಎಲ್. ರ ರಾಜಕೀಯ ಚಟುವಟಿಕೆ, ಅವರ ಅಪೂರ್ವ ಬದುಕು, ಅವರು ರೂಢಿಸಿಕೊಂಡು ಬಂದ ಶುದ್ಧಮೌಲ್ಯಗಳ ಸ್ಪಷ್ಟ ಚಿತ್ರಣ ಮತ್ತು ತಮ್ಮ ಸುತ್ತ ಅವರು ಬೀರುತ್ತಿದ್ದ ಪ್ರಭಾವಗಳನ್ನು ಈ ಕೃತಿಯ ಮೂಲಕ ವಿವರಿಸಲಾಗಿದೆ.

ಕರ್ನಾಟಕದ ಪ್ರಮುಖ ಗಮಕ ಕಲಾವಿದರಲ್ಲಿ ಶ್ರೀಕೃಷ್ಣಗಿರಿ ಕೃಷ್ಣರಾಯರು ಒಬ್ಬರು. ಅವರ ಜನ್ಮಶತಾಬ್ದಿಸ್ಮರಣೆಗಾಗಿ 'ಭಾರತದ ಕೃಷ್ಣರಾಯರು' ಎಂಬ ಗ್ರಂಥವನ್ನು ಪ್ರಕಟಿಸಲಾಗಿದೆ. ಇದು ಅವರ ಜೀವನ ಪಥದ ಪರಿಚಯವನ್ನು ಮಾಡಿಕೊಡುತ್ತದೆ. ಚಿಕ್ಕಮಗಳೂರು ಜಿಲ್ಲೆಯ ಜನಪದ ಕಲಾ ಉತ್ಸವದ ನೆನಪಿಗಾಗಿ 'ಮಲ್ಲಿಗೆ ಮೊಗ್ಗು ಸುರಿದಾವೆ' ಎಂಬ ಸ್ಮರಣ ಸಂಪುಟವನ್ನು ಪ್ರಕಟಿಸಲಾಗಿದೆ. ಇದರಲ್ಲಿ ಜಾನಪದ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸುಮಾರು ೨೭ ಪ್ರೌಢಪ್ರಬಂಧಗಳಿವೆ. ಜಾನಪದದ ವೈವಿಧ್ಯಮಯ ಮತ್ತು ವೈಶಿಷ್ಟ್ಯಮಯವಾದ ಮುಖಗಳ ಬಗೆಗೆ ಅಭ್ಯಾಸಪೂರ್ಣವಾದ, ಸಂಶೋಧನಾತ್ಮಕವಾದ ಬರವಣಿಗೆಗಳಿವೆ. ಇದೊಂದು ಜಾನಪದ ಕ್ಷೇತ್ರದಲ್ಲಿ ಅಧ್ಯಯನ ಮಾಡುವವರಿಗೆ ಸಾಂದರ್ಭಿಕ ಗ್ರಂಥವಾಗಬಲ್ಲುದು. ಶಿವಮೊಗ್ಗೆಯ ಸಾಂಸ್ಕೃತಿಕ ಸಂಸ್ಥೆಯಾದ 'ಕರ್ನಾಟಕದ ಸಂಘ'ದ ವಜ್ರಮಹೋತ್ಸವ ನೆನಪಿಗಾಗಿ 'ವಜ್ರಪಥ'ಎಂಬ ಸ್ಮರಣ ಗ್ರಂಥವನ್ನು ಹೊರತರಲಾಗಿದೆ. ಇದು ಶಿವಮೊಗ್ಗಾ ಜಿಲ್ಲೆಯ ಸಾಂಸ್ಕೃತಿಕ ಸಂಪತ್ತನ್ನು ತಿಳಿಸಿಕೊಡುವ ಕೃತಿಯಾಗಿದೆ. ಮೊದಲನೆಯ ಭಾಗದಲ್ಲಿ ಕರ್ನಾಟಕ ಸಂಘದ ಬಗೆಗೂ ಎರಡನೆಯ ಭಾಗದಲ್ಲಿ ಶಿವಮೊಗ್ಗ ಜಿಲ್ಲೆಯ ಸಾಂಸ್ಕೃತಿಕ, ರಾಜಕೀಯ, ಜನಪದ ಕಲೆ, ಕೃಷಿ ಅಭಿವೃದ್ಧಿ, ಕೈಗಾರಿಕಾಭಿವೃದ್ಧಿ, ಪ್ರಾಗೈತಿಹಾಸಿಕ ಕುರುಹುಗಳ ಬಗೆಗೂ ಲೇಖನಗಳಿವೆ. ನಾಲ್ಕನೆಯ ಭಾಗದಲ್ಲಿ ಗಮಕಕಲೆ, ಕನ್ನಡದಲ್ಲಿ ವೈದ್ಯಕೀಯ ಸಾಹಿತ್ಯ ಇತ್ಯಾದಿಗಳ ಕುರಿತು ಬರಹಗಳಿವೆ.

ಈ ವರ್ಷದಲ್ಲಿ ಬಂದ ಅಭಿನಂದನ - ಸ್ಮರಣ ಗ್ರಂಥಗಳನ್ನು ಅವಲೋಕಿಸಿದಾಗ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ: ಪ್ರಾಧ್ಯಾಪಕರಾಗಿ ನಿವೃತ್ತಿ ಹೊಂದಿದ ವಿದ್ವಾಂಸರನ್ನು ಕುರಿತಂತೆ ಹೆಚ್ಚಿನ ಅಭಿನಂದನ ಗ್ರಂಥಗಳು ಬಂದಿವೆ. ವಿಶೇಷವಾಗಿ ಭಾಷಾಶಾಸ್ತ್ರ, ಜಾನಪದ, ಕನ್ನಡ, ಸಮಾಜ ಶಾಸ್ತ್ರ ಪ್ರಾಧ್ಯಾಪಕರ ಜೀವನ-ಸಾಧನೆಗಳನ್ನು ಕುರಿತಂತೆ ಈ ಗ್ರಂಥಗಳು ವಿವರಿಸುತ್ತವೆ. ಸಾಮಾಜಿಕ, ಶೈಕ್ಷಣಿಕ ರಂಗಗಳಲ್ಲಿ ಸೇವೆ ಸಲ್ಲಿಸಿದ ಮಹನೀಯರ ಗೌರವಾರ್ಥ ಗ್ರಂಥಗಳು ಹೊರಬಂದಿರುವುದರ ಜೊತೆಗೆ ಧರ್ಮದರ್ಶಿಗಳ ಪಟ್ಟಾಭಿಷೇಕದ ಸವಿನೆನಪಿಗಾಗಿ, ಜಾನಪದ ಕಲಾ ಮಹೋತ್ಸವದ ನೆನಪಿಗಾಗಿ, ಸಂಸ್ಥೆಗಳ ವಜ್ರಮಹೋತ್ಸವದ ಅಂಗವಾಗಿ ಸ್ಮರಣಸಂಪುಟಗಳು ಹೊರಬಂದಿವೆ.

# ವಿಜ್ಞಾನ ಸಾಹಿತ್ಯ

*ಎಚ್.ಎಸ್.ಶ್ರೀಮತಿ*

ವಿಜ್ಞಾನಕ್ಷೇತ್ರಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಸೃಷ್ಟಿಯಾಗುತ್ತಿರುವ ಸಾಹಿತ್ಯ ಕೃಷಿಯ ಬಗ್ಗೆ ಆಶಾದಾಯಕವೆನಿಸುವ ಮಾತುಗಳನ್ನು ಹೇಳಲು ಹಿಂಜರಿಯಬೇಕಾದ ಪರಿಸ್ಥಿತಿ ಇಂದು ಇಲ್ಲ. ಹಾಗೆ ಹೇಳುವಾಗಲೂ ಇಲ್ಲಿ ಆಗಬೇಕಾಗಿರುವ ಕೆಲಸ ಬೆಟ್ಟದಷ್ಟಿದೆ ಎಂಬುದನ್ನು ನೆನೆದರೆ, ಈಗ ನಡೆದಿರುವಷ್ಟನ್ನು ಸಾಸಿವೆಕಾಳಿನ ಗಾತ್ರದ್ದೆಂದೇ ಹೇಳಬೇಕಾಗುತ್ತದೆ. ಆಗೀಗ ಎಂಬಂತೆ ವಿಜ್ಞಾನ ಕ್ಷೇತ್ರದ ಹಲವು ಶಾಖೆಗಳಲ್ಲಿ ನಡೆಯುತ್ತಿರುವ ಹೊಸ ಸಂಶೋಧನೆಗಳು, ಸೈದ್ಧಾಂತಿಕ ಚರ್ಚೆಗಳು, ಭವಿಷ್ಯತ್ತಿನ ನಿರೀಕ್ಷಣೆಗಳು-ಇವೇ ಮೊದಲಾದ ಶುದ್ಧ ಬೌದ್ಧಿಕ ಚಟುವಟಿಕೆಗಳನ್ನು ಕುರಿತು ಸಹ ಕನ್ನಡದಲ್ಲಿ ಬರಹಗಳು ಸೃಷ್ಟಿಯಾಗುತ್ತಿವೆ. ಆದರೂ ಈ ಭಾಗದಲ್ಲಿ ಆಗಿರುವ ಸಾಹಿತ್ಯಕೃಷಿ ತೀರಾ ಸ್ವಲ್ಪ. ಇಂತಹ ಬರಹಗಳು ವಿಜ್ಞಾನದ ಗಂಭೀರ ವಿದ್ಯಾರ್ಥಿಗೆ ಎಷ್ಟು ಅವಶ್ಯಕವೆಂಬುದನ್ನು ವಿವರಿಸಿ ಹೇಳಬೇಕಾಗಿಲ್ಲ. ಮುಂದಿನ ದಿನಗಳಲ್ಲಾದರೂ ಕನ್ನಡದಲ್ಲಿಯೇ ವಿಜ್ಞಾನ ಚಿಂತನೆಗಳನ್ನು ಕಲಿಯಲು, ಅಭಿವ್ಯಕ್ತಿಸಲು ಅನುವು ಮಾಡಿಕೊಳ್ಳಬೇಕೆಂದರೆ ಈ ಬಗೆಯ ಬೌದ್ಧಿಕ ಜ್ಞಾನ ಹೆಚ್ಚಿನ ಪ್ರಮಾಣದಲ್ಲಿ ಸೃಷ್ಟಿಯಾಗಲು ಮೊದಲಾಗಲೇಬೇಕು. ಪ್ರಾರಂಭಿಕ ಹಂತದಲ್ಲಿ ಇವು ಬೇರೆ ಭಾಷೆಗಳಿಂದ ಬರುವ ಅನುವಾದ, ರೂಪಾಂತರ, ಸಾರಸಂಗ್ರಹ - ಇಂತಹ ರೂಪಗಳಲ್ಲಿದ್ದರೂ ಬಾಧಕವೇನಿಲ್ಲ. ಒಟ್ಟಿನಲ್ಲಿವಿಜ್ಞಾನವನ್ನು ಕನ್ನಡದಲ್ಲಿ ಓದಬಯಸುವವರು ಪರಿಕರಗಳೇ ಇಲ್ಲದ ಪರಿಸ್ಥಿತಿಯನ್ನು ಎದುರಿಸಬಾರದು.

ಈ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಬರುತ್ತಿರುವ ವಿಜ್ಞಾನ ಸಾಹಿತ್ಯದ ಒಟ್ಟು ಸ್ವರೂಪವನ್ನು ಮತ್ತೆ ಮತ್ತೆ ವಿಶ್ಲೇಷಿಸಿ, ವಿವರಿಸಿಕೊಳ್ಳಬೇಕಾಗಿದೆ. ಮೊದಲೇ ಹೇಳಿದಂತೆ ಸೈದ್ಧಾಂತಿಕ ತಿಳುವಳಿಕೆಗಳನ್ನು ಕೊಡುವ ಚರ್ಚೆಗಳನ್ನು ಬಯಸುವ ರೀತಿಯ ಬರಹಗಳು ಇಲ್ಲವೆಂಬಷ್ಟು ಅಪರೂಪ. ನಮ್ಮ ಒಟ್ಟು ವಿಜ್ಞಾನ ಬರವಣಿಗೆ ಬಹುಮಟ್ಟಿಗೆ ವೈದ್ಯವಿಜ್ಞಾನ, ಕೃಷಿವಿಜ್ಞಾನ, ಪರಿಸರ ವಿಜ್ಞಾನ ಕ್ಷೇತ್ರಗಳಿಗೆ ಸಂಬಂಧಿಸಿವೆ. ಈ ಬರಹಗಳಲ್ಲೂ ಆಳವಾದ ಕಲಿಕೆ, ಚರ್ಚೆ ಸಂಶೋಧನೆಗಳನ್ನು ಬಯಸುವ ಬರಹಗಳು ಅಷ್ಟಾಗಿ ಬಂದಿಲ್ಲ. ಬದಲಿಗೆ ದಿನನಿತ್ಯದ ಸಮಸ್ಯೆಗಳನ್ನು ಪರಿಚಯಿಸುವ, ಪರಿಹಾರಗಳನ್ನು ಹೇಳುವ ರೂಪದ ಜನಪ್ರಿಯ ಸಾಹಿತ್ಯವೇ ನಿರ್ಮಾಣವಾಗುತ್ತಿದೆ. ಇಂತಹ ಬರಹಗಳ ಉಪಯುಕ್ತತೆಯನ್ನು ಇಲ್ಲಿ ಖಂಡಿತಾ ಪ್ರಶ್ನಿಸುತ್ತಿಲ್ಲ.

ಜನಸಾಮಾನ್ಯರಲ್ಲಿ ಅರಿವು ಹೆಚ್ಚಿದರೆ ಮಾತ್ರವೇ ಸಾಮಾಜಿಕ ಪ್ರಗತಿಸಾಧ್ಯವೆಂಬುವ ಬಗ್ಗೆ ಎರಡು ಮಾತಿಲ್ಲ. ಆದರೆ ಯಾವುದೇ ಭಾಷೆಗೆ ಕಲಿಕೆ ಹಾಗೂ ಸಂವಹನದ ಸಮರ್ಥ ಮಾಧ್ಯಮವಾಗಿ ನಿರಂತರವಾಗಿ ಬೆಳೆಯುತ್ತಲೇ ಇರಬೇಕಾದ ಅವಶ್ಯಕತೆ ಇದ್ದೇ ಇದೆಯಲ್ಲವೇ? ಭಾಷೆಯ ಈ ಬೆಳವಣಿಗೆಗೆ ನಮ್ಮಲ್ಲಿ ಬರುತ್ತಿರುವ ಒಂದೇ ಮಾದರಿಯ ಬರಹಗಳು ಸಾಕಾಗಲಾರವು.

ಈ ಹಿನ್ನೆಲೆಯಲ್ಲಿ ೧೯೯೩ರ ಸಾಲಿಗೆ ಬಂದಿರುವ ಕನ್ನಡದ ವಿಜ್ಞಾನ ಪುಸ್ತಕಗಳನ್ನು ಗಮನಿಸಿದಾಗ ಬಹುಮಟ್ಟಿನ ಬರಹಗಳು ಜನಪ್ರಿಯ ಮಾದರಿಯವೇ ಎಂಬುದು ಗೋಚರವಾದರೂ ಹೆಚ್ಚಿನ ಸಿದ್ಧತೆ, ಪರಿಶ್ರಮ ಹಾಗೂ ಪ್ರತಿಭೆಗಳನ್ನು ಬಯಸುವ ಸಂಶೋಧನಾತ್ಮಕ ಬರಹಗಳೂ ಬಂದಿವೆ ಎಂಬುದು ಸಮಾಧಾನಕರವಾದ ಸಂಗತಿಯಾಗಿದೆ.

ಮೊದಲಿಗೆ ಜನಪ್ರಿಯ ಮಾದರಿಯ ಬರಹಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು. ೧೯೯೩ ರಲ್ಲಿ ಕನ್ನಡದಲ್ಲಿ ಸುಮಾರು ಅರವತ್ತಕ್ಕಿಂತಲೂ ಹೆಚ್ಚಿನ ವಿಜ್ಞಾನ ಪುಸ್ತಕಗಳು ಬಂದಿದ್ದರೆ, ಐವತ್ತೈದರಷ್ಟು ಜನಪ್ರಿಯ ಮಾದರಿಯವು. ಇದರಲ್ಲೂ ಮತ್ತೆ ಮತ್ತೆ ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಳ್ಳುವ ಸಾಹಿತ್ಯದ ಪಾಲು ದೊಡ್ಡದೇ ಇದೆ. ಪಾಕಶಾಸ್ತ್ರ, ಯೋಗ ವಿಜ್ಞಾನ, ಸಾಮಾನ್ಯದ ಎಷ್ಟೋ ದೈಹಿಕ ಹಾಗೂ ಮಾನಸಿಕ ಖಾಯಿಲೆಗಳು, ಹೀಗೇಕೆ ವಿಚಿತ್ರ ಸಂಗತಿಗಳು-ಎಂಬಂತಹ ಬರಹಗಳು ಇಂಥವುಗಳ ಪಟ್ಟಿಯನ್ನು ಮಾತ್ರವೇ ಕೊಟ್ಟರೂ ಈ ಲೇಖನ ಸಾಕಷ್ಟು ದೀರ್ಘವಾಗಿ ಬೆಳೆಯಬಹುದು. ಹಾಗಾಗಿ ಇವುಗಳನ್ನು ಹೊರತು ಪಡಿಸಿದ ಮೇಲೆ ಉಳಿಯುವ ಜನಪ್ರಿಯ ವಿಜ್ಞಾನ ಸಾಹಿತ್ಯದಲ್ಲಿ ಗಮನಿಸಬಹುದಾದ ಕೆಲವು ಕೃತಿಗಳನ್ನು ಇಲ್ಲಿ ಪರಿಚಯಿಸುತ್ತೇನೆ.

ಕನ್ನಡ ವಿಶ್ವವಿದ್ಯಾಲಯದ ಮಂಟಪ ಮಾಲೆಯಲ್ಲಿ ಬಂದಿರುವ 'ಕೀಟಗಳು ಬದುಕುವ ದಾರಿ' ಹಾಗೂ 'ಸತ್ತಮೇಲೆ ಸಮಾಜಸೇವೆ' ಎಂಬ ಕಿರುಪುಸ್ತಕಗಳು ಕ್ರಮವಾಗಿ ಕೃಷಿ ವಿಜ್ಞಾನ ಹಾಗೂ ವೈದ್ಯವಿಜ್ಞಾನ ಕ್ಷೇತ್ರಗಳಿಗೆ ಸಂಬಂಧಿಸಿದ ಹೊಸ ಸಂಗತಿಗಳನ್ನು ಹೇಳುತ್ತವೆ. ಶಿವರಾಮ ರೈ.ಪಿ.ಯವರು ಕೀಟಗಳು ಬದುಕುವ ದಾರಿಯನ್ನು ವಿವರಿಸುತ್ತಲೇ ಇವುಗಳಿಂದ ವಿವಿಧ ಬೆಳೆಗಳನ್ನು ರಕ್ಷಿಸಿಕೊಳ್ಳಬಹುದಾದ ದಾರಿಗಳನ್ನು ಕೃಷಿಕರಿಗೆ ತೋರಿಸಿದ್ದಾರೆ. ಪುಸ್ತಕವನ್ನು ವಿಶೇಷ ಕುತೂಹಲದಿಂದ ಕೊಂಡ ಯಾರೋ ಶೀರ್ಷಿಕೆಯನ್ನು ಕುರಿತು ಕೃಷಿಕನು ಬದುಕುವ ದಾರಿಯನ್ನು ಹೇಳಿ ಎಂದರೆ ಕೀಟಗಳು ಬದುಕುವ ದಾರಿಯನ್ನು ಹೇಳುತ್ತಾರಂತೆ ಎಂದು ಲೇವಡಿ ಮಾಡಿದರೆಂಬ ವದಂತಿ ಇದೆ. ವಾಸ್ತವವಾಗಿ ವಸ್ತುವಿನ ನಿರ್ವಹಣೆ ಕೃಷಿಕನ ಬದುಕನ್ನೇ ಮುಖ್ಯವಾಗಿಸಿಕೊಂಡಿದೆ. ಕೀಟಗಳು ಬದುಕುವ ದಾರಿಯನ್ನು ಅರ್ಥ ಮಾಡಿಕೊಂಡ ಕೃಷಿಕ ಕೀಟಗಳನ್ನು ನಿಯಂತ್ರಿಸಲು ಸಮರ್ಥನೇ ಆಗುತ್ತಾನೆ.

ಡಾ.ನಾಗಲೋಟಿಮಠರ 'ಸತ್ತಮೇಲೆ ಸಮಾಜಸೇವೆ' ಎಂಬ ಹೊತ್ತಿಗೆಯಲ್ಲಿ ತೀರಾ

ಅಪರೂಪದ ಸರಳತೆಯಲ್ಲಿ ನಿರ್ವಹಣೆಗೊಂಡಿರುವ ಅತ್ಯಂತ ಗಂಭೀರ ವಸ್ತುವಿದೆ. ಮನುಷ್ಯ ಬದುಕಿರುವಾಗ ತನ್ನ ಸಹಜೀವಿಗಳಿಗೆ ಹೇಗೆ ನೆರವಾಗಬಹುದೆಂಬ ಬಗೆಗೆ ಚಿಂತನೆಗಳು ಸಾಕಷ್ಟಿವೆ. ಸತ್ತ ಮೇಲೂ ಈ ಕೆಲಸದಲ್ಲಿ ಹೇಗೆ ಪಾಲುಗೊಳ್ಳಬಹುದೆಂಬ ಬಗ್ಗೆ ಈ ವೈದ್ಯರು ಅತ್ಯಂತ ಕುತೂಹಲದಾಯಕವಾದ ವಿವರಗಳನ್ನು ನೀಡಿದ್ದಾರೆ. ಸಾಮಾನ್ಯವಾಗಿ ನೇತ್ರದಾನ, ಮೂತ್ರಪಿಂಡದಾನ, ರಕ್ತದಾನ-ಇಂತಹ ಕೆಲವನ್ನು ನಾವು ಕೇಳಿರಬಹುದು. ಆದರೆ ಒಬ್ಬ ವ್ಯಕ್ತಿಯು ಸತ್ತ ಕೂಡಲೇ ಎಚ್ಚರದ ಕ್ರಮ ವಹಿಸಿದರೆ ಆ ದೇಹದ ಚರ್ಮ, ಒಳಗಿನ ಪೂರ್ಣ ರಕ್ತ, ಮೂಳೆ ಮಜ್ಜೆಗಳನ್ನು ಸಹ ಸಂಗ್ರಹಿಸಿ ಇಟ್ಟುಕೊಂಡು ಅಪಾಯದ ಹಂತಗಳಲ್ಲಿ ಶಸ್ತ್ರಚಿಕಿತ್ಸೆಗೆ ಒಳಗಾಗಬೇಕಾಗಿರುವ ರೋಗಿಗಳನ್ನು ಉಳಿಸಲು ಬಳಸಬಹುದೆಂಬ ಸಂಗತಿ ನಿಜವಾದ ಮಾನವ ಪ್ರೇಮಿಯೊಬ್ಬನಿಗೆ ಉತ್ತೇಜನಕಾರಿಯಾದುದೇ ಸರಿ. ಸತ್ತಮೇಲೆ ಏನಿದೆ, ಎಲ್ಲವೂ ಮುಗಿದಂತೆ ಎನ್ನುವಂತಿಲ್ಲ. ನಮ್ಮ ಪಾಲಿಗೆ ಮುಗಿದದ್ದನ್ನು ಯಾವ ನಷ್ಟವೂ ಇಲ್ಲದೆ ಇನ್ನೊಬ್ಬರ ಉಳಿವಿಗೆ ಬಳಸಬಹುದು. ಜೀವವಿಮೆಯವರ ಮಾತಿನಂತೆಯೇ ಈ ಮಾತು ಸಹ ನಮ್ಮ ಸಾವನ್ನೇ ಕುರಿತು ಆಡುವಂಥದು. ಮೊದಲ ಸಲಕ್ಕೆ ಕೇಳುವಾಗ ಹಿತವೆನಿಸಲಾರದು. ಆದರೆ ಅದರ ಸತ್ಪರಿಣಾಮಗಳನ್ನು ಕುರಿತು ಸಮಾಧಾನವಾಗಿ ಹೇಳುತ್ತಾ ಹೋಗುವ ಡಾ. ನಾಗಲೋಟಿಮಠರು ಓದುಗನ ಮನಸ್ಸನ್ನು ಹದವಾಗಿ ಸಿದ್ಧಗೊಳಿಸಿಬಿಡುತ್ತಾರೆ.

ಇವನ್ನು ಬಿಟ್ಟರೆ ಈ ವಿಭಾಗದಲ್ಲಿ ಎಚ್.ಡಿ.ಚಂದ್ರೇಗೌಡರ "ಸಾಮಾನ್ಯ ಶಸ್ತ್ರವೈದ್ಯದ ಕಾಯಿಲೆಗಳು" ಎಂಬ ಗ್ರಂಥವನ್ನು ಗಮನಿಸಬಹುದು. ಈ ಕೃತಿಯಲ್ಲಿ ವ್ಯಕ್ತವಾಗಿರುವ ವಿಷಯ ಬಹುಮಟ್ಟಿಗೆ ಜನಪ್ರಿಯ ವೈದ್ಯವಿಜ್ಞಾನದಲ್ಲಿ ಈಗಾಗಲೇ ಸಾಕಷ್ಟು ಸಲ ಪ್ರಕಟಕೊಂಡಿರುವಂಥವೇ. ಆದರೂ ಶಸ್ತ್ರವೈದ್ಯವನ್ನು ಕುರಿತಂತೆ ಭಾಷೆಯ ಬಳಕೆಯ ದೃಷ್ಟಿಯಿಂದ ಅತ್ಯಂತ ಕ್ಲಿಷ್ಟದಾಯಕವೆನಿಸಬಹುದಾದ ತೀರಾ ತಾಂತ್ರಿಕವಾದ ಭಾಗಗಳನ್ನು ಲೇಖಕರು ಸಮರ್ಥವಾಗಿ ನಿರ್ವಹಿಸಿರುವ ಬಗ್ಗೆ ಗಮನಹರಿಸಬಹುದಾಗಿದೆ. ಪಾರಿಭಾಷಿಕ ಪದಗಳ ಬಳಕೆ, ನಿರೂಪಣಾ ವಿಧಾನಗಳಲ್ಲಿ ಉಪಯುಕ್ತ ಮಾದರಿಗಳನ್ನು ಅಳವಡಿಸಿಕೊಳ್ಳಲಾಗಿದೆ.

ವಿಜ್ಞಾನಕ್ಕೆ ಸಂಬಂಧಿಸಿದ ಬರಹಗಳು ಕನ್ನಡದಲ್ಲಿ ಸಮೃದ್ಧವಾಗಿ ಬೆಳೆಯಬೇಕು ಎಂದಾಗ ಒಂದು ಮುಖ್ಯ ಸಮಸ್ಯೆ ಎದುರಾಗುತ್ತದೆ. ಈ ಬರಹಗಾರರು ಸಮರ್ಥ ವಿಜ್ಞಾನಿಗಳೂ ಆಗಿರಬೇಕು. ಜೊತೆಗೆ ಕನ್ನಡವನ್ನು ಅತ್ಯಂತ ಸಮರ್ಪಕವಾಗಿ ಬಳಸುವ ಸಮರ್ಥರೂ ಆಗಿರಬೇಕು. ಈ ಸಾಧ್ಯತೆಯನ್ನು ಕಲ್ಪಿಸಿಕೊಂಡರೂ ಸಾಕು. ಈ ಅಭಾವದ ನಿವಾರಣೆಗೆ ಇರುವ ತೊಡಕಿನ ಸ್ವರೂಪ ಅರ್ಥವಾಗುತ್ತದೆ. ಹಾಗಾದರೆ ಕ್ಷೇತ್ರಜ್ಞರೂ ಭಾಷಾತಜ್ಞರೂ ಒಬ್ಬರೇ ಆಗಿರುವ ಅಪರೂಪದ ಸಂದರ್ಭವನ್ನೇ ಕಾಯುತ್ತಾ ಕೂರಬೇಕಾದೀತೆ?ಇಂತಹ ಅಪರೂಪದ ಸಂದರ್ಭಗಳು ಒದಗಿ ಬರುವುದು ಒಂದು ಸೌಭಾಗ್ಯವೇ ಸರಿ. ಆದರೂ ಬೇರೆ ದಿಕ್ಕಿನಿಂದಲೂ ಪ್ರಯತ್ನಗಳು ನಿಲ್ಲದೆ ಮುಂದುವರೆಯುವುದು ಅನಿವಾರ್ಯ. ಅಂತಹದೊಂದು ಸಫಲ ಪ್ರಯತ್ನವನ್ನು

ಕನ್ನಡದಲ್ಲಿ ನಡೆಸುತ್ತಿರುವವರಲ್ಲಿ ಕ್ಷೇತ್ರಜ್ಞರೇ ಭಾಷಾತಜ್ಞರೂ ಆಗಿರುವವರು ಕೆಲವರುಂಟು. ಹಾಗಲ್ಲದೆ ಕೇವಲ ಭಾಷಾತಜ್ಞರಾದವರೂ ಇದ್ದಾರೆ. ಡಾ.ಸಿ.ಆರ್.ಚಂದ್ರಶೇಖರ್, ಕೃಷ್ಣಾನಂದ ಕಾಮತ, ಡಾ.ಎಚ್.ಎಸ್.ಮೋಹನ, ಜೆ.ಆರ್.ಲಕ್ಷ್ಮಣರಾವ್, ಡಾ.ಸಿ.ಅನ್ನಪೂರ್ಣಮ್ಮ, ಬಿ.ಪಿ. ರಾಧಾಕೃಷ್ಣ, ಜಿ.ಟಿ. ನಾರಾಯಣರಾವ್, ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಪ್ರದೀಪ ಕೆಂಜಿಗೆ - ಹೀಗೆ ಹಲವರನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ವಿವಿಧ ಜ್ಞಾನಶಾಖೆಗಳನ್ನು ಕನ್ನಡಕ್ಕೆ ಬರಮಾಡಿಕೊಂಡು ಅಭಿವ್ಯಕ್ತಿಸಬೇಕು ಎಂದಾಗ ವಿಜ್ಞಾನಕ್ಷೇತ್ರ ಹೆಚ್ಚಿನ ಸವಾಲನ್ನು ಒಡ್ಡುವಂತೆ ತೋರುತ್ತದೆ. ಸಾಮಾನ್ಯವಾಗಿ ಈ ಹಂತದಲ್ಲಿ ಇಂಗ್ಲಿಷ್ ಹಾಗೂ ಕನ್ನಡದ ಸಾಮರ್ಥ್ಯಗಳನ್ನು ಹೋಲಿಸಿ ನೋಡುತ್ತಾರೆ. ಪದಕೋಶ ವಾಕ್ಯರಚನೆಗಳೇ ಅಲ್ಲದೆ ಒಟ್ಟು ಅಭಿವ್ಯಕ್ತಿಯ ಸ್ವರೂಪದವರೆಗೂ ಕನ್ನಡಭಾಷೆಯನ್ನು ದುರ್ಬಲವೆಂದು ಶಂಕಿಸಲಾಗುವುದು. ಆದರೆ ಇದನ್ನು ಶಕ್ತಿಯುತವಾಗಿ ನಿರ್ವಹಿಸಬಹುದಾದ ಮಾದರಿಗಳು ಅಲ್ಪಸ್ವಲ್ಪ ಪ್ರಮಾಣದಲ್ಲಿಯೇ ಆದರೂ ಸೃಷ್ಟಿಯಾಗುತ್ತಿದೆ ಎಂಬುದು ಆಶಾದಾಯಕವಾದ ಸಂಗತಿ.

ಇಂತಹ ಮಾದರಿಗಳನ್ನು ಸೃಷ್ಟಿಸಿರುವ ಸೃಜನಶೀಲ ಲೇಖಕರಲ್ಲಿ ಪೂರ್ಣಚಂದ್ರ ತೇಜಸ್ವಿಯವರು ಪ್ರಮುಖರಾಗಿದ್ದಾರೆ. ಅವರ ಕರ್ವಾಲೋ, ಚಿದಂಬರ ರಹಸ್ಯಗಳಂತಹ ಸಾಹಿತ್ಯಕೃತಿಗಳಲ್ಲೇ ವಿಜ್ಞಾನದ ವಿಷಯಗಳನ್ನು ಕನ್ನಡದಲ್ಲಿ ಹೇಗೆ ಹೇಳಬಹುದೆಂಬುದಕ್ಕೆ ಮಾದರಿಗಳು ಸಿಗುತ್ತವೆ. 'ಮಿಸ್ಸಿಂಗ್‌ಲಿಂಕ್ಸ್'ನಂತಹ ಕೃತಿಯಲ್ಲಿ ಶುದ್ಧ ಮಾನವಶಾಸ್ತ್ರದ ವಸ್ತು ಒಂದನ್ನು ಕತೆ ಕಾದಂಬರಿಯಷ್ಟೇ ಸಲೀಸಾಗಿ ಸೃಜನಶೀಲವಾಗಿ ನಿರ್ವಹಿಸಲಾಗಿದೆ. ಇದರ ಮುಂದಿನ ಹಂತವೋ ಎಂಬಂತೆ ಕೀಟಶಾಸ್ತ್ರ, ಪಕ್ಷಿಶಾಸ್ತ್ರ ಹಾಗೂ ಪ್ರಾಣಿಶಾಸ್ತ್ರಗಳಿಗೆ ಸಂಬಂಧಿಸಿದ ವಸ್ತು 'ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು' ಕೃತಿ ಕನ್ನಡದಲ್ಲಿ ಸಮರ್ಥವಾಗಿ ಅಭಿವ್ಯಕ್ತಿಗೊಂಡಿದೆ. ಲೇಖಕರೇ ಒಂದು ಮುನ್ನುಡಿಯಲ್ಲಿ ನಾನು ವಿಜ್ಞಾನ ಪದವೀಧರನಲ್ಲ,ವಿಜ್ಞಾನಿಯೂ ಅಲ್ಲ ಎಂದು ಹೇಳುತ್ತಲೇ, ಸಹಜ ಕುತೂಹಲದಿಂದ ಸುತ್ತಮುತ್ತಲಿನ ಕೌತುಕಮಯ ವಿದ್ಯಮಾನಗಳನ್ನು ಸ್ವಾನುಭವದಿಂದ ತಿಳಿದುಕೊಂಡೆ ಎನ್ನುತ್ತಾರೆ. ಈ ತಿಳುವಳಿಕೆ ವಿಸ್ತಾರವಾದ ಓದಿನಿಂದ ಸಮೃದ್ಧಗೊಂಡಿರುವುದು ಸಾಧ್ಯ. ಇದಿಷ್ಟು ಸಿದ್ಧತೆಯೊಂದಿಗೆ ತನಗೆ ಸಾಹಿತ್ಯ ಪ್ರತಿಭೆಯ ಅಂಗವಾಗಿ ಒಲಿದು ಬಂದಿರುವ ಭಾಷಾಸಾಮರ್ಥ್ಯದ ನೆರವನ್ನು ಕೂಡಿಸಿ ಯಾವುದೇ ಜ್ಞಾನವನ್ನು ಕನ್ನಡದಲ್ಲಿ ಅಭಿವ್ಯಕ್ತಿಸಲು ಸಾಧ್ಯವೆಂಬ ಪ್ರಯೋಗವನ್ನು ಯಶಸ್ವಿಯಾಗಿ ನಡೆಸಿದ್ದಾರೆ. ಜಗತ್ತಿನ ಜ್ಞಾನಕ್ಷೇತ್ರಗಳ ಇತ್ತೀಚಿನ ಸಾಧನೆಗಳನ್ನು ಕುರಿತು ಮಕ್ಕಳಿಗೂ ವರ್ಣಮಾಲೆಯ ಪರಿಚಯವಾದ ಮೊದಲನೆಯ ಅಥವಾ ಎರಡನೆಯ ಪೀಳಿಗೆಗೂ ಸಹ ತಿಳಿಯುವಂತೆ ಹೇಳಲು ಸಮರ್ಥ ಮಾದರಿಗಳನ್ನು ನಿರ್ಮಿಸಿದ್ದಾರೆ.

ಪುಸ್ತಕ ಪ್ರಕಾಶನದ ಅದ್ಭುತ ಜಗತ್ತು ಸರಣಿಯ ವಿಸ್ಮಯ ೧, ೨, ೩ ಎಂಬ ಮೂರು ಸಂಪುಟಗಳನ್ನು ಪೂರ್ಣಚಂದ್ರ ತೇಜಸ್ವಿ ಹಾಗೂ ಪ್ರದೀಪ ಕೆಂಜಿಗೆಯವರು ಕೂಡಿ ಬರೆದಿದ್ದಾರೆ. ಇವು ಪರಿಸರ ವಿಜ್ಞಾನಕ್ಕೆ ಸಂಬಂಧಿಸಿದವು. ವಿಸ್ಮಯ-೧ರಲ್ಲಿ ಮೂರು

ವಿಭಾಗಗಳಿದ್ದು ಇಲ್ಲಿ ಬ್ರಹ್ಮಾಂಡ, ಜೀವಸ್ತರಗಳು ಹಾಗೂ ಸೌರಶಕ್ತಿಯ ವಿಶ್ವರೂಪಗಳನ್ನು ಕುರಿತು ನಿರೂಪಣೆ ಇದೆ. ಜ್ಯೋತಿರ್ಭೌತಶಾಸ್ತ್ರದ ಅಮೂರ್ತ ಕಲ್ಪನೆಗಳನ್ನು ಲೇಖಕರು ಇಲ್ಲಿ ಅದ್ಭುತ ಕಥಾನಕವಾಗಿಸಿದ್ದಾರೆ. ವಿಸ್ಮಯ - ೨ ವಿಕಾಸವಾದದ ಚಾರಿತ್ರಿಕ ವಿವರಗಳೇ ಅಲ್ಲದೆ ಭವಿಷ್ಯದ ದಿನಗಳ ಜಾಡನ್ನು ಗುರುತಿಸಿ, ಅವಿವೇಕದಿಂದ ಒದಗಬಹುದಾದ ಅಪಾಯಗಳ ಬಗ್ಗೆ ಎಚ್ಚರಿಕೆಯ ಗಂಟೆಯನ್ನು ಮೊಳಗಿಸಿದೆ.

ವಿಸ್ಮಯ -೩ ಈ ಅಪಾಯಗಳು ಬಾರದಂತೆ ಎಚ್ಚರವಹಿಸುವಲ್ಲಿ ನಮ್ಮ ಪಾತ್ರವೇನು ಎಂಬ ಮಾರ್ಗ ಸೂಚಿಯನ್ನು ಒದಗಿಸುವ ಮಾದರಿಯದು. ಈ ಮಾದರಿಯನ್ನೊದಗಿಸುವಾಗಲೂ ಮಾನವನ ಸಾಮರ್ಥ್ಯದ ಪರಿಮಿತಿಗಳನ್ನು ಗುರುತಿಸದೆ ಇಲ್ಲ. ವಿಶ್ವದ ಕ್ರಿಯಾವಳಿಗಳು ಸೃಷ್ಟಿ ಮತ್ತು ವಿನಾಶಗಳ ನಿರಂತರ ಆವರ್ತದಲ್ಲಿ ಪರಿಭ್ರಮಿಸುತ್ತಿದೆ ಎಂಬುದು ವಾಸ್ತವವೇ. ಇವುಗಳನ್ನು ಅರ್ಥಮಾಡಿಕೊಳ್ಳುವುದು ಸುಲಭಸಾಧ್ಯವಲ್ಲವೆಂಬುದೂ ಸತ್ಯವೇ. ಆದರೂ ಈ ಅರ್ಥಶೂನ್ಯತೆಯ ಮಹಾವರ್ತುಲದೊಳಗಿದ್ದುಕೊಂಡೇ ನಾವು ಅರ್ಥಪೂರ್ಣ ಬದುಕನ್ನೂ ಸಾರ್ಥಕ ಕ್ರಿಯೆಯನ್ನೂ ಅನ್ವೇಷಿಸಬೇಕಾಗಿದೆ ಎಂಬುದು ಪರಿಸರವಾದಿಯ ಧೋರಣೆ. ಈ ಧೋರಣೆಯು ನಮ್ಮನ್ನು ಭ್ರಮನಿರಸನ ಅಥವಾ ನಿಷ್ಕ್ರಿಯತೆಯ ಸೋಮಾರಿತನಗಳಿಂದ ಪಾರುಮಾಡಬಲ್ಲುದು.

ಪ್ರಕಾಶಕರು ಮೂರೂ ಪುಸ್ತಕಗಳಿಗೆ ಮುನ್ನುಡಿ ಬರೆದಿದ್ದಾರೆ. ವಿಸ್ಮಯ -೧ ರಲ್ಲಿ ಈ ಸರಣಿಯ ಶೈಲಿ ಪಂಚತಂತ್ರ ಕತೆಗಳ ರೀತಿಯದು ಎಂದು ವಿವರಿಸಿ ಇದು ವಿಶ್ವಸಾಮರಸ್ಯವನ್ನು ತಿಳಿಸುವ ಕಥಾಸಂಕಲನ ಎಂದಿದ್ದಾರೆ. ವಿಸ್ಮಯ ೨ರಲ್ಲಿ ವಿಷಯ, ವಿಚಾರ ಮತ್ತು ವಿಧಾನಗಳನ್ನು ಅರಿಯಲು ವೈಜ್ಞಾನಿಕ ಮುನ್ನಡೆಯೊಂದಿಗೆ ಅದರ ಶಿಸ್ತು ಮತ್ತು ವಿಧಾನಗಳನ್ನು ಅನುಸರಿಸಿರುವ ಬಗ್ಗೆ ಹೇಳಿದ್ದಾರೆ. ಈ ನಿಟ್ಟಿನಲ್ಲಿ ವಿವರಣೆ, ವಿಶ್ಲೇಷಣೆಗಳ ಮಾರ್ಗಗಳಿಗಿಂತ ಸಂಶ್ಲೇಷಣ ವಿಧಾನ ಹೇಗೆ ಉಪಯುಕ್ತ ಎಂಬುದನ್ನು ವಿವರಿಸಲಾಗಿದೆ. ಈ ವಿವರಣೆಗೆ ಇಡೀ ನಿರೂಪಣೆ ಸಮರ್ಥ ಸಾಕ್ಷಿಯಾಗಿದೆ. ಪಶ್ಚಿಮದ ಅಧ್ಯಯನ ಮಾದರಿಗಳನ್ನೇ ಅತ್ಯುತ್ತಮವೆಂದು ಪರಿಗಣಿಸುವ ಸಂದರ್ಭದಲ್ಲಿ ಭಾರತೀಯ ಮಾದರಿಯೊಂದನ್ನು ಆಯ್ದು ಒಗ್ಗಿಸಿಕೊಂಡಿರುವುದು ಹೊಸ ಜ್ಞಾನಶಾಖೆಗಳನ್ನು ಕನ್ನಡದಲ್ಲಿ ತರಬೇಕೆನ್ನುವವರಿಗೆ ಅನುಕರಣೀಯ. ವಿಸ್ಮಯ -೩ ಸಂಪುಟದಲ್ಲಿ ಪ್ರಕಾಶಕರು - ಕನ್ನಡ ಭಾಷೆಯ ಪ್ರಬುದ್ಧತೆಯ ಬಗ್ಗೆ ಅನುಮಾನಿಸುವವರು ವಿಸ್ಮಯ ಪುಸ್ತಕಗಳನ್ನು ನೋಡುವುದು ಒಳ್ಳೆಯದು ಎಂದು ಹೇಳಿದಾಗ, ಸರಣಿಯ ಮೂರು ಪುಸ್ತಕಗಳನ್ನು ಓದಿದ ಯಾರಿಗೂ ಇದು ಕೇವಲ ಅಭಿಮಾನದ ಮಾತು ಎನಿಸುವುದಿಲ್ಲ. ಮಾನವಿಕ ಶಾಸ್ತ್ರಗಳು, ಪರಿಸರ ವಿಜ್ಞಾನ, ವೈದ್ಯ ಹಾಗೂ ಕೃಷಿ ವಿಜ್ಞಾನಗಳ ಸಾಮಾನ್ಯ ಜನಬಳಕೆಯ ವಿಷಯಗಳು ಇಂತಹ ವಿಜ್ಞಾನ ವಿಷಯಗಳು ಹೆಚ್ಚು ತಾಂತ್ರಿಕ ವಿವರಣೆಗಳನ್ನು ಒಳಗೊಂಡಿರುವುದಿಲ್ಲ. ಹೆಚ್ಚೂ ಕಡಿಮೆ ಜನಪ್ರಿಯ ವಿಜ್ಞಾನದ ವ್ಯಾಪ್ತಿಗೆ ಬರುವ ಇವುಗಳನ್ನು ಕನ್ನಡದಲ್ಲಿ ಹೇಳಹೊರಟಾಗ

ಭಾಷಾ ಸಮಸ್ಯೆ ತೀವ್ರತರದ್ದಲ್ಲ. ಆದರೆ ಸಿದ್ಧಾಂತಗಳು. ಪರಿಕಲ್ಪನೆಗಳು ಹಾಗೂ ಸಂಶೋಧನಾ ಚಿಂತನೆಗಳನ್ನು ಹೇಳಲು ಸಾಧ್ಯವೇ ಎಂಬ ಅನುಮಾನಗಳಿಗೂ ಈ ಸರಣಿಯ ನಿರೂಪಣೆ ಸಮಾಧಾನಕರವಾದ ಉತ್ತರವನ್ನು ಕೊಟ್ಟಿದೆ. ತೀರ ಅಮೂರ್ತವೆನಿಸಬಹುದಾದ ಪರಿಕಲ್ಪನೆಗಳೂ ಸಿದ್ಧಾಂತಗಳೂ ಕೂಡ ಸುಲಲಿತವಾಗಿ ಅಭಿವ್ಯಕ್ತಗೊಂಡಿವೆ.

ಸರಣಿಯ ಮೂರೂ ಪುಸ್ತಕಗಳ ವಿಷಯಗಳನ್ನು ಕುರಿತು ಈ ಲೇಖನದಲ್ಲಿ ಒತ್ತುಕೊಟ್ಟು ವಿವರಿಸಲು ಹೋಗಿಲ್ಲ. ಒಂದು ಭಾಷೆಯನ್ನು ಸಮರ್ಥ ಅಭಿವ್ಯಕ್ತಿಗೆ ಅನುವು ಮಾಡುವಲ್ಲಿ ನಡೆಸಬೇಕಾದ ಪ್ರಯತ್ನಗಳಿಗೆ ಈ ಸರಣಿ ಒಂದು ಆದರ್ಶ ಮಾದರಿಯನ್ನು ಒದಗಿಸಿದೆ ಎಂಬ ಬಗ್ಗೆಯೇ ಹೆಚ್ಚಿನ ಗಮನವನ್ನು ಸೆಳೆಯಲಾಗಿದೆ. ನಿರೂಪಿತವಾಗಿರುವ ವಿಷಯಗಳನ್ನು ಕುರಿತು ಪ್ರತ್ಯೇಕವಾದ ಲೇಖನವನ್ನೇ ಸಿದ್ಧಪಡಿಸಬಹುದು. ವಿಜ್ಞಾನ ವಿಷಯಗಳನ್ನು ಕನ್ನಡದಲ್ಲಿ ಹೇಳಬಯಸುವವರು ಪಾರಿಭಾಷಿಕ ಹಾಗೂ ಸಾಮಾನ್ಯಪದಕೋಶಗಳ ಬಳಕೆ. ವಾಕ್ಯರಚನೆ, ನಿರೂಪಣಾ ಶೈಲಿ - ಮೊದಲಾದ ಭಾಷಾ ಸಂಬಂಧಿ ಸಮಸ್ಯೆಗಳನ್ನು ಎದುರಿಸಲು ವಿಸ್ಮಯ ಸರಣಿಯ ಬರಹಗಳಲ್ಲಿ ಅತ್ಯುತ್ತಮ ಮಾದರಿಗಳನ್ನು ಕಾಣಬಹುದು ಎಂದಷ್ಟೇ ಸೂಚಿಸಲಾಗಿದೆ.



## ವಿಮರ್ಶೆ

*ಪುರುಷೋತ್ತಮ ಬಿಳಿಮಲೆ*

---

ಸಂಖ್ಯಾದೃಷ್ಟಿಯಿಂದ ೧೯೯೩ರಲ್ಲಿ ಅಂಕ್ಯೂ ಹೆಚ್ಚು ವಿಮರ್ಶಾಕೃತಿಗಳು ಪ್ರಕಟವಾಗಿವೆ. ಎಲ್ಲ ತಲೆಮಾರಿನ ವಿಮರ್ಶಕರೂ ಇಂಥ ಪ್ರಕಟಣೆಗಳಲ್ಲಿ ಭಾಗಿಗಳಾಗಿದ್ದಾರೆ. ಸೃಜನಶೀಲ ಪ್ರಕಾರಗಳಂತೆ ವಿಮರ್ಶೆಯೂ ಹೆಚ್ಚು ಜನಪ್ರಿಯವಾಗುತ್ತಿರುವುದು ಒಂದು ವಿಶೇಷ.

ಕಲಾಕೃತಿಗಳು ನಿಜವಾಗಿಯೂ ಏನನ್ನು ಹೇಳಲು ಉದ್ದೇಶಿಸಿರುತ್ತವೆ ಎಂಬುದರ ಕಡೆಗೆ ಈಚೆಗೆ ಕನ್ನಡ ವಿಮರ್ಶಕರು ಹೆಚ್ಚು ಒತ್ತು ನೀಡುತ್ತಿದ್ದಾರೆ. ಹಾಗೆ ಮಾಡುವ ಉತ್ಸಾಹದಲ್ಲಿ ಅವರು ಕಲಾಕೃತಿಯ ಉಳಿದೆಲ್ಲಾ ಅಂಶಗಳನ್ನು ನಿರ್ಲಕ್ಷಿಸುತ್ತಿದ್ದಾರೆ. ಕಲಾಕೃತಿಯೊಂದು ತನ್ನ ಹಂದರದ ಮೂಲಕ ಓದುಗನಿಗೆ ಏನನ್ನು ಸಂವಹನಗೊಳಿಸಲು ಬಯಸುತ್ತದೆ? ಎಂಬ ಪ್ರಶ್ನೆಯೇನೋ ಮುಖ್ಯವಾದುದು. ಅದರ ಜೊತೆಗೆ ನಿರ್ದಿಷ್ಟ ಚಾರಿತ್ರಿಕ ಸಂದರ್ಭದಲ್ಲಿ ಲೇಖಕನು ಓದುಗನಿಗೆ ಏನನ್ನು ಹೇಗೆ ಮತ್ತು ಯಾಕಾಗಿ ಸಂವಹನಗೊಳಿಸಲು ಪ್ರಯತ್ನಿಸುತ್ತಾನೆ? ಎಂಬ ಅಂಶವನ್ನು ಗಮನಿಸಬೇಕಾಗುತ್ತದೆ. ಇಂತಹ ಪ್ರಶ್ನೆಯನ್ನು ಕೇಳಿಕೊಂಡಾಗ ಕಲಾಕೃತಿಯ ಅವಯವಗಳ ಬಗೆಗೆ ಮಾತಾಡದಿರಲಾಗುವುದಿಲ್ಲ. ಹಾಗೆ ಮಾಡದೆ ಕೇವಲ ಉದ್ದೇಶಗಳ ಕುರಿತು ಚರ್ಚಿಸಿದರೆ ಕಲಾಕೃತಿ ಗೌಣವಾಗಿ ಬಿಡುತ್ತದೆ. ಕನ್ನಡ ವಿಮರ್ಶಕರು ನಡೆಸುವ ಚರ್ಚೆಗಳಿಗೆ ಎಷ್ಟೋ ಬಾರಿ ಕಲಾಕೃತಿಗಳು ಕಾರಣವಾಗಿರುವುದೇ ಇಲ್ಲ. ಪಠ್ಯವೂ ಒಂದು ನಿಯೋಗಾತ್ಮಕ ರಚನೆ ಸರಿ. ಆದುದರಿಂದ, ಅದನ್ನು ತೀರ ಅವಜ್ಞೆಯಿಂದ ಕಾಣಬೇಕಾಗಿಲ್ಲ. ಆದರೆ ನಿಶ್ಚಿತ ವಿನ್ಯಾಸ ಮತ್ತಿತರ ತಂತ್ರಗಳ ಮೂಲಕ ಅದು ಓದುಗರನ್ನು ಪ್ರಭಾವಿಸಲು, ಅವರ ಮೇಲೆ ಪರಿಣಾಮ ಬೀರಲು ಪ್ರಯತ್ನಿಸುತ್ತಿರುತ್ತದೆ. ಎಲ್ಲಾ ನಿರೂಪಣೆಗಳಂತೆ ಕಲಾಕೃತಿಗಳಿಗೂ ನಿರ್ದಿಷ್ಟ ಉದ್ದೇಶಗಳಿರುತ್ತವೆ ಮತ್ತು ಅವುಗಳ ರಚನೆಯ ಹಿಂದೆ ಒಂದು ಬಗೆಯ ರಾಜಕೀಯವೂ ಇರುತ್ತದೆ. ಆದುದರಿಂದಲೇ ಕಲಾಕೃತಿಯ ಉದ್ದೇಶವನ್ನು ಅರ್ಥಮಾಡಿಕೊಳ್ಳುತ್ತಾ ಅದು ಏನನ್ನು? ಯಾರಿಗಾಗಿ? ಯಾತಕ್ಕೆ? ಸಂವಹನಗೊಳಿಸಲು ಬಯಸುತ್ತದೆ ಎಂಬುದನ್ನು ಸೂಕ್ಷ್ಮವಾಗಿ ವಿಶ್ಲೇಷಿಸಬೇಕಾಗುತ್ತದೆ. ಬಹುಶಃ ಕಲಾಕೃತಿ ಯಾಕಾಗಿ ಇರುತ್ತದೆ? ಎಂಬ ನಿಯೋಗಾತ್ಮಕ ಪ್ರಶ್ನೆಯನ್ನು ಒಡ್ಡುವುದರಿಂದ ಮಾತ್ರ ಪಠ್ಯದ ವ್ಯವಸ್ಥಿತ ವಿಶ್ಲೇಷಣೆ ಸಾಧ್ಯವಾಗುತ್ತದೆ. ಅದಕ್ಕೋಸ್ಕರ ಪಠ್ಯ ಒದಗಿಸುವ ಸಂಗತಿಗಳನ್ನು ಪುನರ್‌ಸಂಘಟಿಸಿ, ವಿವರಣೆಗೆ ಬೇಕಾದ ಆವರಣವೊಂದನ್ನು

ವಿಮರ್ಶಕನೇ ಸೃಷ್ಟಿಸಿಕೊಳ್ಳಬೇಕಾಗುತ್ತದೆ. ಸೃಜನಶೀಲ ಕೃತಿಗಳು ತಮ್ಮ ಲೋಕದೃಷ್ಟಿಯನ್ನೇ ವಾಸ್ತವವನ್ನಾಗಿ ಸ್ವೀಕರಿಸಿ ಓದುಗನನ್ನು ಹೇಗೆ ಮತ್ತು ಯಾಕಾಗಿ ಒತ್ತಾಯಿಸಿ ಬಿಡುತ್ತವೆ ಎಂಬುದನ್ನು ಎಚ್ಚರದಿಂದ ಗಮನಿಸಬೇಕಾಗುತ್ತದೆ.

ಈ ಚೌಕಟ್ಟಿನಲ್ಲಿ ೧೯೯೩ರಲ್ಲಿ ಪ್ರಕಟವಾದ ವಿಮರ್ಶಾಕೃತಿಗಳನ್ನು ಪರಿಶೀಲಿಸಿದಾಗ ಈ ಅಂಶಗಳ ಕೊರತೆ ನಿಚ್ಚಳವಾಗಿ ವ್ಯಕ್ತವಾಗುತ್ತವೆ.

ಕನ್ನಡದ ಹಿರಿಯ ಮತ್ತು ಮಹತ್ತ್ವದ ವಿಮರ್ಶಕರಾದ ಕೀರ್ತಿನಾಥ ಕುರ್ತಕೋಟಿಯವರ ಎರಡು ಕೃತಿಗಳು ಈ ವರ್ಷದಲ್ಲಿ ಪ್ರಕಟವಾಗಿವೆ. ಮೊದಲನೆಯದಾದ 'ಉರಿಯ ನಾಲಗೆ' ಯಲ್ಲಿ ಪ್ರಜಾವಾಣಿ ಸಾಪ್ತಾಹಿಕ ವಿಭಾಗಕ್ಕೆ ಬರೆದ ೫೫ ಪುಟ್ಟ ಲೇಖನಗಳಿವೆ. ಇಲ್ಲಿನ ಲೇಖನಗಳ ಮೂಲಕ ಮಾತು ಮತ್ತು ಸತ್ಯಗಳ ನಡುವಣ ಸಂಬಂಧವನ್ನು ಕಂಡುಕೊಳ್ಳಲು, ವಿಶ್ಲೇಷಿಸಲು ಅವರು ಪ್ರಯತ್ನಿಸುತ್ತಾರೆ. ಕುರ್ತಕೋಟಿಯವರು ಹೀಗೆ ಬರೆಯುತ್ತಾರೆ -'' ನೀರಿನಂತೆ ತಣ್ಣಗಿರುವ ಮನುಷ್ಯ ಮಾತ್ರ ಉರಿಯ ನಾಲಗೆಯಿಂದ ಮಾತಾಡಬಲ್ಲ ಎಂದರೆ ಇದು ಕೇವಲ ಚಮತ್ಕಾರದ ಮಾತಲ್ಲ. ನಿಸ್ಪೃಹತೆಯಿಂದ, ತಾಳ್ಮೆಯಿಂದ ವ್ಯಕ್ತಿತ್ವವನ್ನು ರೂಢಿಸಿಕೊಂಡಿರುವವನ ಮಾತಿಗೆ ಅಂಥ ಅಧಿಕಾರ ಪ್ರಾಪ್ತವಾಗುತ್ತದೆ. ತಣ್ಣಗಿನ ವ್ಯಕ್ತಿತ್ವ ಮತ್ತು ಉರಿಯ ನಾಲಗೆ ಇವೆರಡರ ನಡುವಿನ ವಿರೋಧ ಅರ್ಥಪೂರ್ಣವಾಗಿದೆ.'' (ಪು. ೨) ಬೇಂದ್ರೆಯವರ ಕಾವ್ಯದ ಸಾಲನ್ನು ಹೀಗೆ ಸಂಗ್ರಹಿಸುವ ಕುರ್ತಕೋಟಿಯವರು ತಮ್ಮ ಕೃತಿಗೆ 'ಉರಿಯ ನಾಲಗೆ'ಎಂಬ ಶೀರ್ಷಿಕೆ ಕೊಡುವುದರ ಮೂಲಕ, ತನ್ನದು ತಣ್ಣಗಿನ ವ್ಯಕ್ತಿತ್ವ ಮತ್ತು ಸತ್ಯವನ್ನು ನುಡಿದು ದಕ್ಕಿಸಿಕೊಳ್ಳುವ ತ್ರಾಣ ತನಗಿದೆ ಎಂದು ಮೌನವಾಗಿ ಘೋಷಿಸಿಕೊಳ್ಳುತ್ತಾರೆ. ಹೀಗೆ ತನ್ನ ಬರೆಹ ಮತ್ತು ಭಾಷ್ಯಗಳಿಗೆ ಒಂದು ಬಗೆಯ ಕ್ಷೇಮವಲಯವನ್ನು ನಿರ್ಮಿಸಿಕೊಂಡು ಮುಂದೆ ಸಾಗುವ ಕುರ್ತಕೋಟಿಯವರು ಲಿಖಿತ ಪಠ್ಯಗಳನ್ನು ಸತ್ಯದ ಸಾಕ್ಷಾತ್ಕಾರಕ್ಕಾಗಿ ಆಶ್ರಯಿಸಿಕೊಳ್ಳುತ್ತಾರೆ ಮತ್ತು ಅಂಥ ಪಠ್ಯಗಳ ಅರ್ಥಸಾಧ್ಯತೆಗಳನ್ನು ತಾಳ್ಮೆಯಿಂದ ಶೋಧಿಸುತ್ತಾರೆ. ಇಂಥ ತಾಳ್ಮೆ ಜಾನಪದದ ಬಗ್ಗೆ ಬರೆಯುವಾಗ ಮಾತ್ರ ಕಡಿಮೆ ಆಗುತ್ತದೆ. ಆಗ 'ಉರಿಯ ನಾಲಗೆ'ಯಲ್ಲಿ ಬಿರುಕು ಕಾಣಿಸಿಕೊಳ್ಳುತ್ತದೆ. ಅವರು ಬರೆಯುತ್ತಾರೆ- ''ಟೇಪ್ ರೆಕಾರ್ಡ್‌ರನ್ನು ಕೈಯಲ್ಲಿ ಹಿಡಿದುಕೊಂಡು ಹಳ್ಳಿಯ ಹಾಡುಗಳನ್ನು ಸಂಗ್ರಹಿಸುವ ತರುಣ ವಿದ್ವಾಂಸ, ಆ ಹಾಡುಗಳನ್ನು ಅವುಗಳ ಜೀವನ ಸಂದರ್ಭದಿಂದ ತಪ್ಪಿಸಿ ತಂದಿರುತ್ತಾನೆ. ಜಾನಪದ ಶಾಸ್ತ್ರದಲ್ಲಿ ಅವನಿಗೆ ಗತಿ ಇದ್ದರೆ ಅವನು ಈ ಹಾಡುಗಳ ಲಯಗಾರಿಕೆಯನ್ನು ಅವುಗಳಲ್ಲಿಯ ಪ್ರತಿಮೆ ಚಿತ್ರಗಳನ್ನು ಭಾಷೆಯನ್ನು ಶಾಸ್ತ್ರೀಯವಾಗಿಯೇ ಅಭ್ಯಾಸ ಮಾಡುತ್ತಾನೆನ್ನೋಣ. ಆದರೆ ಅಧ್ಯಯನದ ವಸ್ತುವಿನ ಬಗ್ಗೆ ಅವನಿಗೆ ಅರಿವಿಲ್ಲದಂತೆ ಒಂದು ದೃಷ್ಟಿಕೋನ ರೂಪುಗೊಳ್ಳುತ್ತದೆ'' (ಪು.೧೨೫) ಅವರೇ ಇನ್ನೊಂದೆಡೆ ಮುಖ್ಯ ಪ್ರಶ್ನೆಯೊಂದನ್ನು ಮಂಡಿಸುತ್ತಾರೆ. ''ಹಳ್ಳಿಗಳಿಗೆ ಸಂಬಂಧಿಸಿರುವ ಈ ಕಲೆಗಳ ವಿಶಾಲವಾದ ಅಧ್ಯಯನದಿಂದ ನಮಗೆ ಮತ್ತು ಹಳ್ಳಿಗಳಲ್ಲಿದ್ದವರಿಗೆ ಆಗಿರುವ ಲಾಭವೇನು ಎಂಬ ಪ್ರಶ್ನೆಯನ್ನು ಕೇಳಬೇಕಾಗಿದೆ.'' (ಪು.೧೨೪) ಈ ಪ್ರಶ್ನೆಯೇನೋ

ಸಮರ್ಪಕವಾದುದು. ಆದರೆ ಇಡೀ ಪ್ರಶ್ನೆಯನ್ನು ಬೇಂದ್ರೆ ಕಾವ್ಯಕ್ಕೆ ಹಾಕಿದರೆ ಏನಾಗುತ್ತದೆ? ಎಂಬ ಪ್ರಶ್ನೆಗೆ ಕುರ್ತಕೋಟಿಯವರ ಇನ್ನೊಂದು ಕೃತಿ ''ಬಾರೋ ಸಾಧನ ಕೇರಿಗೆ'' ಯಲ್ಲಂತೂ ಉತ್ತರ ದೊರಕುವುದಿಲ್ಲ. ಅಲ್ಲಿ ಅವರು ಬರೆಯುವುದು ಹೀಗೆ-''ನೆನೆಸಿದ ರೂಪ ಭಾಷೆಯಲ್ಲಿ ಮೂಡಿ ಕಾವ್ಯದಲ್ಲಿ ಪ್ರತ್ಯಕ್ಷವಾದರೆ ಮತ್ತು ಸ್ವಲ್ಪ ಹೊತ್ತಾದರೂ ಕವಿ ಅದರಲ್ಲಿ ಮೈಮರೆತರೆ, ಅದನ್ನು ಮಿಥ್ಯಾ ವ್ಯಾಪಾರವೆಂದು ತಿಳಿಯಬೇಕಿಲ್ಲ. ಇಷ್ಟೇ ಪ್ರತಿಭೆಯಿಂದ ಹುಟ್ಟಿಬಂದ ಈ ಸೃಷ್ಟಿಯ ಬೆಲೆ ಅದು ನೀಡುವ ತಿಳುವಳಿಕೆಯನ್ನು ಅವಲಂಬಿಸಿದೆ. ಅಲ್ಲದೆ ಇಂದ್ರಿಯಗಳು ಕಾಣದ ಮತ್ತು ತರ್ಕಪ್ರಜ್ಞೆಗೆ ಗೋಚರವಾಗದ ಸತ್ಯವನ್ನು ಕಲ್ಪನೆ ಕಣ್ಣೆದುರು ಬಂದು ನಿಲ್ಲುವಂತೆ ಮಾಡಬಲ್ಲುದು'' (ಪು. ೩೪) .ಒಂದು ವೇಳೆ ಅದು ಕಣ್ಣೆದುರು ಬಂದು ನಿಲ್ಲದಿದ್ದರೆ ಏನು ಮಾಡುವುದು? ಅದಕ್ಕೂ ಕುರ್ತಕೋಟಿಯವರಲ್ಲಿ ಉತ್ತರವಿದೆ. ಅವರು ಬರೆಯುತ್ತಾರೆ. ''ಬೇಂದ್ರೆಯವರ ಕಾವ್ಯದಲ್ಲಿ ಅಸ್ತಿತ್ವ ಮತ್ತು ಆಸ್ತಿಕತೆಗಳು ಒಂದಕ್ಕೊಂದು ಹೊಂದಿಕೊಂಡೇ ಇವೆ. ಅದನ್ನು ಬಿಡಿಸಬರುವುದಿಲ್ಲ. ಒಪ್ಪಿಕೊಳ್ಳುವ ಅಥವಾ ಒಪ್ಪದಿರುವ ಗೊಡವೆಯೇ ಇಲ್ಲಿಲ್ಲ. ಒಂದು ರೀತಿಯಿಂದ ವಾದಕ್ಕೆ ಮೀರಿದ ಸಂಗತಿ ಇದಾಗಿದೆ. ಅದಕ್ಕಿಂತ ಇಂಥ ಕಾವ್ಯದ ಆಸ್ವಾದ ಹೆಚ್ಚು ಪ್ರಯೋಜನಕಾರಿಯಾಗಿದೆ.'' (ಪು. ೭೭) ಜನಪದ ಕಲೆಯ ಬಗ್ಗೆ ಬರೆಯುವಾಗ ಅದನ್ನು ಸಾಮಾಜಿಕ ಲಾಭದ ದೃಷ್ಟಿಯಿಂದ ಪರಿಶೀಲಿಸುವ ಕುರ್ತಕೋಟಿಯವರು ಬೇಂದ್ರೆ ಕಾವ್ಯದ ಬಗ್ಗೆ ಬರೆಯುವಾಗ 'ವಾದಕ್ಕೆ ಮೀರಿದ ಸಂಗತಿ'ಎಂದು ವರ್ಣಿಸುತ್ತಾರೆ. ಜನಪದ ಸಂಶೋಧಕನಿಂದ ಹಳ್ಳಿಗಳಲ್ಲಿದ್ದವರಿಗೆ ಲಾಭ ಆಗಬೇಕೆಂದು ವಾದಿಸುವುದಾದರೆ ಜಾನಪದದಿಂದ ಪ್ರೇರಣೆ ಪಡೆದ ಬೇಂದ್ರೆಯವರಿಂದ ಹಳ್ಳಿಗರಿಗೆ ಪ್ರಯೋಜನ ಆಗಬೇಕಲ್ಲ? ಕುರ್ತಕೋಟಿಯವರ ವಿಮರ್ಶೆ ಅವರೇ ಘೋಷಿಸಿಕೊಂಡಂತೆ 'ತಣ್ಣಗಿನದೂ ಅಲ್ಲ,' 'ನಿಷ್ಠುರ ಸತ್ಯದ್ದೂ ಅಲ್ಲ.' ಬದಲು ಅದು ಕೂಡಾ ಒಂದು ನಿರ್ದಿಷ್ಟದೃಷ್ಟಿಕೋನವನ್ನು ಸೈದ್ಧಾಂತಿಕತೆಯನ್ನು ಓದುಗನ ಮೇಲೆ ಹೇರಲು ಪ್ರಯತ್ನಿಸುತ್ತಿರುತ್ತದೆ. ಭಾಷೆಗೆ ಉತ್ಪಾದಕ ಶಕ್ತಿ ಇದೆ ನಿಜ. ಆದರೆ ಅದು ಸಾಮಾಜಿಕ ನಿಯಂತ್ರಣಕ್ಕೂ ಒಳಪಟ್ಟಿರುತ್ತದೆ ಎಂಬುದನ್ನು ಮರೆಯಬಾರದು. ಹೀಗೆ ನೋಡಿದಾಗ ಬೇಂದ್ರೆಕಾವ್ಯ ಯಾಕೆ ಕುರ್ತಕೋಟಿಯವರನ್ನು ತನ್ನ ಜ್ಞಾತೃವನ್ನಾಗಿ ಅಂಗೀಕರಿಸಿಕೊಂಡು ಬಿಟ್ಟಿದೆ ಎಂಬುದಕ್ಕೆ ಉತ್ತರ ದೊರೆಯುತ್ತದೆ. ಬೇಂದ್ರೆ ಕಾವ್ಯದ ಬಗ್ಗೆಯೇ ಕುರ್ತಕೋಟಿಯವರು ಮತ್ತೆ ಮತ್ತೆ ಯಾಕೆ ಬರೆಯುತ್ತಾರೆ ಎಂಬುದಕ್ಕೂ ಅಲ್ಲಿಯೇ ಉತ್ತರವಿದೆ.

ಟಿ.ಪಿ. ಅಶೋಕ ಅವರ 'ಪುಸ್ತಕ ಪ್ರೀತಿ'ಯ ಸಮಸ್ಯೆ ಸ್ವಲ್ಪ ಬೇರೆ ಬಗೆಯದು. ಈ ಕೃತಿಯಲ್ಲಿ ೮೭ ಪುಸ್ತಕಗಳ ಅವಲೋಕನವಿದೆ. ಈ ಶತಮಾನದ ಮುಖ್ಯ ಕೃತಿಗಳಿಗೆಲ್ಲ ಅವರು ಇಲ್ಲಿ ಪ್ರತಿಕ್ರಿಯಿಸಿದಂತಿದೆ. ದಾಖಲೆಯ ದೃಷ್ಟಿಯಿಂದ ಇದೊಂದು ಮಹತ್ತ್ವದ ಪ್ರಕಟಣೆಯೇ ಆಗಿದೆ. ಕೃತಿಯ 'ಮೊದಲ ಮಾತು'ವಿನಲ್ಲಿ ಅಶೋಕರು ಹೀಗೆ ಬರೆಯುತ್ತಾರೆ- ''ತಮ್ಮ ಮೇಲೆ ಎಂಥ ಒತ್ತಡಗಳಿದ್ದರೂ ಒಂದು ದಿನವೂ ನಾನು ಇಂಥದ್ದನ್ನೇ ಬರೆಯಬೇಕು, ಹೀಗೆಯೇ ಬರೆಯಬೇಕು ಎಂದು ಅವರು (ಜಿ.ಎಸ್.

ಸಮಾಶಿವ) ಒತ್ತಾಯಿಸಿದ್ದಿಲ್ಲ. ಇಂಥ ಸ್ವಾತಂತ್ರ್ಯವಿಲ್ಲದೆ ಈ ಅಂಕಣ ಇಷ್ಟು ದೀರ್ಘಕಾಲ ನಡೆದುಕೊಂಡು ಬರಲು ಸಾಧ್ಯವಿರಲಿಲ್ಲ. ವಿಮರ್ಶೆಗಾಗಿ ಪತ್ರಿಕೆಯೇ ನನಗೆ ಪುಸ್ತಕಗಳನ್ನು ಕಳಿಸುತ್ತಿದ್ದಿಲ್ಲ. ನನಗೆ ಇಷ್ಟವಾದ ಹಳೆಯ ಅಥವಾ ಹೊಸ ಪುಸ್ತಕದ ಬಗ್ಗೆ ನನಗೆ ಅನಿಸಿದಂತೆ ಬರೆಯುವ ಪೂರ್ಣ ಸ್ವಾತಂತ್ರ್ಯವನ್ನು ನಾನು ಅನುಭವಿಸಿದ್ದೇನೆ.'' ಹೀಗೆ ಬರೆಯುವ ಅಶೋಕರು ಮುಂದಿನ ಪುಟದಲ್ಲಿಯೇ ಸ್ವವಿಮರ್ಶೆ ಮಾಡಿಕೊಳ್ಳುವ ಮಾತನ್ನು ಪ್ರಾಮಾಣಿಕವಾಗಿಯೇ ಆಡುತ್ತಾರೆ. ''ನನ್ನ ವೈಯಕ್ತಿಕ ಆದ್ಯತೆ ಅಭಿರುಚಿಗಳ ಮಿತಿಗಳೊಂದಿಗೆ ಈ ಮಿತಿಯೂ ಸೇರಿಕೊಂಡಿರುವುದರಿಂದ ಏಳೂವರೆ ವರ್ಷಗಳ ಕನ್ನಡ ಪ್ರಕಟಣಾ ಪ್ರಪಂಚದ ಸಮಗ್ರ ಚಿತ್ರವೊಂದನ್ನು ಈ ಬರಹಗಳು ನೀಡುತ್ತವೆ ಎಂದು ಖಚಿತವಾಗಿ ಹೇಳಲಾರೆ. ಆ ಅವಧಿಯ ನನ್ನ ಓದಿನ ಚಿತ್ರವನ್ನಷ್ಟೇ ಅವು ಕೊಡಬಹುದು.'' ಹೀಗೆ ನೋಡಿದಾಗ ಅಶೋಕರು ಯಾವ ಕೃತಿಗಳ ಬಗ್ಗೆ ಬರೆಯುತ್ತಾರೋ, ಅವುಗಳಿಗಿಂತ, ಅವರಿಗೆ ಬರೆಯಲಾಗದೆ ಹೋದ ಕೃತಿಗಳ ಹೆಸರುಗಳೆಲ್ಲ ಕಣ್ಣ ಮುಂದೆ ಬರುತ್ತವೆ.

ಈ ವರ್ಷದ ಮುಖ್ಯ ವಿಮರ್ಶೆ ಕೃತಿಗಳಲ್ಲಿ ರಹಮತ್ ತರೀಕೆರೆ ಅವರ 'ಪ್ರತಿ ಸಂಸ್ಕೃತಿ'ಯೂ ಒಂದು. ಅವರು ತಮ್ಮ ಬರಹಗಳ ಬಗ್ಗೆ ಹೀಗೆ ಹೇಳಿಕೊಂಡಿದ್ದಾರೆ: ಬಿಬಿ ಈ ಲೇಖನಗಳು ಕೇವಲ ಸಾಹಿತ್ಯ ವಿಮರ್ಶೆಯ ಬರಹಗಳೇನು? ಕೇವಲ 'ಸಾಹಿತ್ಯ ವಿಮರ್ಶೆ'ಯಂಥ ಬರವಣಿಗೆಯಲ್ಲಿ ನನಗೆ ಶ್ರದ್ಧೆಯೂ ಇಲ್ಲ. ನಮ್ಮ ಆಲೋಚನೆಗೆ ಹಾಗೂ ನಮ್ಮ ಸಾಹಿತ್ಯದ ಆಕಾರಗಳಿಗೆಲ್ಲ ಕಾರಣವಾಗಿರುವ ಒಟ್ಟು ಸಾಂಸ್ಕೃತಿಕ ಪರಿಸರವನ್ನು ಅರ್ಥಮಾಡಿಕೊಳ್ಳಲು ಬೇಕಾದ ರಾಜಕೀಯ 'ಪ್ರಜ್ಞೆಯ ಗ್ಯಾನ'ವೇ ಇಲ್ಲದಂಥ ಸಾಹಿತ್ಯ ವಿಮರ್ಶೆಯನ್ನು ಈ ಹೊತ್ತು ಕಲ್ಪಿಸಿಕೊಳ್ಳುವುದಕ್ಕೂ ಕಷ್ಟವಾಗುತ್ತಿದೆ.'' ಈ ನೆಲೆಯಿಂದ ಹೊರಡುವ ತರೀಕೆರೆಯವರು ತಮ್ಮ ಗ್ರಹಿಕೆಯ ರಾಜಕೀಯಕ್ಕೆ ಕಲಾಕೃತಿಗಳನ್ನು ಬಳಸುತ್ತಾ ಹೋಗುತ್ತಾರೆ. ವಚನಕಾರರನ್ನು ಪ್ರತಿಸಂಸ್ಕೃತಿ ನಿರ್ಮಾತೃಗಳು ಎಂದು ಕೊಂಡಾಡುತ್ತಾರೆ. ತಿರುಚಿದ ಸಾಂಸ್ಕೃತಿಕ ಆಕೃತಿಗಳನ್ನು ಹೇರುತ್ತಿರುವ ರಾಜಕೀಯವನ್ನು ಇದಿರಿಸಲು 'ಬಹುಮುಖತ್ವ'ದ ಹುಡುಕಾಟ ನಡೆಸುತ್ತಾರೆ. ಜನಪದ ಸಂಸ್ಕೃತಿಯ ನೆಲೆಯಿಂದ ಪ್ರತಿಸಂಸ್ಕೃತಿಯ ನೆಲೆಗೆ ಚಲಿಸಲು ಪ್ರಯತ್ನಿಸುತ್ತಾರೆ. ಹೀಗೆ ಮಾಡುವಾಗ ಕಲಾಕೃತಿಯ ಅನನ್ಯತೆಯನ್ನು ಮರೆತುಬಿಡುತ್ತಿದ್ದಾರೋ ಎಂಬ ಸಂಶಯ ಕಾಡುವುದುಂಟು. ಇಷ್ಟಿದ್ದರೂ ಕಲಾಕೃತಿಗಳ ಮೂಲಕ ಒಂದು ಸಾಂಸ್ಕೃತಿಕ ವಾಗ್ವಾದವನ್ನು ಸಾಧ್ಯವಾಗಿಸುವ ಪ್ರಯತ್ನ ಕುತೂಹಲಕಾರಿಯಾಗಿದೆ.

ಈಚಿನ ದಿನಗಳಲ್ಲಿ ಸ್ತ್ರೀವಾದೀ ವಿಮರ್ಶೆಯೂ ಜನಪ್ರಿಯವಾಗುತ್ತಿದೆ. ಕನ್ನಡ ವಿಮರ್ಶೆಯೂ ಸ್ತ್ರೀವಾದಿ ನೆಲೆಗಳನ್ನು ತನ್ನ ತೆಕ್ಕೆಗೆ ಒಗ್ಗಿಸಿಕೊಳ್ಳಲು ಹವಣಿಸುತ್ತಿದೆ. ಚೆನ್ನಕ್ಕ ಪಾವಟೆ ಅವರ 'ಸಾಹಿತ್ಯ ಚೈತ್ರ' ಮತ್ತು ಸಾಹಿತ್ಯ ಅಕಾಡೆಮಿ ಪ್ರಕಟಿಸಿದ 'ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ' ಕೃತಿಗಳಲ್ಲಿ ಅಂತಹ ನೋಟಗಳಿವೆ. ಈ ಎರಡು ಕೃತಿಗಳಲ್ಲಿನ ಲೇಖಕರು ಮತ್ತು ಲೇಖಕಿಯರು ತಮ್ಮ ಕಣ್ಣಮುಂದಿರುವ ಪ್ರಪಂಚ

ಪ್ರಧಾನ ವ್ಯವಸ್ಥೆಗೆ ಪ್ರತಿಕ್ರಿಯೆಯಾಗಿ ಸ್ತ್ರೀವಾದವನ್ನು ಮಂಡಿಸುತ್ತಾರೆ. ಪಾವಟೆಯುವರು ತಮ್ಮ ವಾದವನ್ನು ಆರಂಭಿಸುವುದೇ ಹೀಗೆ- ''ಕರ್ನಾಟಕದಲ್ಲಿ ಇಲ್ಲಿಯವರೆಗೆ ಪ್ರಕಟಿತ ೨೫ ಸಾವಿರ ಶಾಸನಗಳಲ್ಲಿ ದಾಖಲಿಸಲ್ಪಟ್ಟ ಮಹಿಳೆಯರು ಪ್ರಭುವರ್ಗದವರು ಹಾಗೂ ಯಜಮಾನ ಸಂಸ್ಕೃತಿಯವರು. ಸಾಮಾನ್ಯ ಸಂಸ್ಕೃತಿಯ ಮಹಿಳೆಯರ ಚಿತ್ರಣ ಇಲ್ಲಿ ತುಂಬ ಕಡಿಮೆ. ಶಾಸನಗಳಲ್ಲಿ ಸ್ತ್ರೀಸಂಸ್ಕೃತಿಗೆ ಸಂಬಂಧಿಸಿದ ವಿಷಯ ಸಿಗುವುದು ತುಂಡು ತುಂಡು ರೂಪಗಳಲ್ಲಿ: ಅಲ್ಲೊಂದು ಇಲ್ಲೊಂದು'' (ಪುಟ ೧). ಹೀಗೆ ವಾದಿಸುವ ಪಾವಟೆಯವರು ಮುಂದೆ ಆ ತುಂಡು ತುಂಡು ರೂಪಗಳಲ್ಲಿಯೇ ಅಡಕವಾಗಿರುವ ಮಹಿಳೆಯರನ್ನು ಪರಿಶೀಲಿಸುತ್ತಾ ಹೋಗುತ್ತಾರೆ. ಹೀಗೆ ಮಾಡುವಾಗ ಪುರುಷ ಪ್ರಧಾನ ಸಮಾಜವನ್ನು ಛಿದ್ರಗೊಳಿಸಿದಂತಾಗುವುದಿಲ್ಲ. ಬದಲು ಪುರುಷ ಪ್ರಧಾನ ವ್ಯವಸ್ಥೆಯೊಳಗೇ ಅರ್ಥ ಹುಡುಕಿದಂತಾಗುತ್ತದೆ. ಮತ್ತು ಆ ಮೂಲಕ ಪರೋಕ್ಷವಾಗಿ ಪುರುಷ ಪ್ರಧಾನ ವ್ಯವಸ್ಥೆಯನ್ನೇ ಮುಂದುವರಿಸಿದಂತಾಗುತ್ತದೆ. ಇದಕ್ಕಿಂತ ಭಿನ್ನವಾಗಿ ಶಾಸನಗಳಲ್ಲಿ ಏಕೆ ಮಹಿಳೆಯರ ಚಿತ್ರಣ ತುಂಬ ಕಡಿಮೆ ಇದೆ ಎಂಬ ಪ್ರಶ್ನೆಯನ್ನು ಹಾಕಿಕೊಂಡು ಶಾಸನಗಳ ಪಠ್ಯಕ್ಕೆ ಕಟ್ಟಿಕೊಡಲಾಗದೇ ಇರುವ ಅರ್ಥದ ಕಡೆಗೆ ಚಲಿಸಿದ್ದರೆ ಹೊಸ ನೆಲೆಗಳು ಪ್ರಾಪ್ತವಾಗುತ್ತಿದ್ದವು. ವಿಜಯಾದಬ್ಬೆ, ಬಿ.ಎನ್. ಸುಮಿತ್ರಾಬಾಯಿ, ವಿಜಯಾ ಅವರ ಲೇಖನಗಳಲ್ಲಿ ಅಂಥ ಪ್ರಯತ್ನಗಳಿವೆ.

ಮೇಲೆ ವಿವರಿಸಲಾದ ಕೃತಿಗಳನ್ನು ಹೊರತು ಪಡಿಸಿದರೆ ಗಂಭೀರ ಚರ್ಚೆಗೆ ಒಳಗಾಗುವಂಥ ಕೃತಿಗಳು ೧೯೯೩ರಲ್ಲಿ ಪ್ರಕಟವಾದಂತಿಲ್ಲ. 'ಶೇಕ್‌ಸ್ಪಿಯರ್ ಎರಡು ಸಂಸ್ಕೃತಿಗಳಲ್ಲಿ' (ಲೇಖಕ: ರಾಮಚಂದ್ರದೇವ) ಕೃತಿಯಲ್ಲಿ ಕಳೆದ ೧೨೦ ವರ್ಷಗಳಲ್ಲಿ ಕನ್ನಡದಲ್ಲಿ ಬಂದ ಶೇಕ್ಸ್‌ಪಿಯರ್ ನಾಟಕಗಳ ಅನುವಾದ ಮತ್ತು ರೂಪಾಂತರಗಳ ಅಧ್ಯಯನ ನಡೆದಿದೆ. 'ಕಲೋನಿಯಲ್ ಕಾಲಾವಧಿಯಲ್ಲಿ ಶೇಕ್ಸ್‌ಪಿಯರ್ ಕೃತಿಗಳನ್ನು ಕನ್ನಡಕ್ಕೆ ತರಲು ನಡೆಸಿದ ಪ್ರಯತ್ನವು ಭಾರತೀಯ ಸಮಾಜ ಬಹುವಚನಿಯಾಗಲು (ಪ್ಲೂರಲಿಸ್ಟಿಕ್) ನಡೆಸಿದ ಪ್ರಯತ್ನ' ಎಂಬ ಅವರ ವಾದ ಮಾತ್ರ ಚರ್ಚಾಸ್ಪದವಾದುದು. ಇದು ಹೌದಾದರೆ ಇದೇ ಚೌಕಟ್ಟಿನಲ್ಲಿ ಹಳಗನ್ನಡ ಸಾಹಿತ್ಯವನ್ನು ಹೇಗೆ ವಿವರಿಸಬಹುದು?

ವ್ಯಾಸಭಾರತ ಪಂಪಭಾರತವಾದದ್ದು, ಮುಂದೆ ಕುಮಾರವ್ಯಾಸ ಭಾರತವಾದದ್ದು, ಜೈಮಿನಿ ಭಾರತವನ್ನು ಲಕ್ಷ್ಮೀಶ ಕನ್ನಡಕ್ಕೆ ಅನುವಾದಿಸಿದ್ದು, ಪ್ರಾಕೃತ ಕೃತಿಗಳು ಕನ್ನಡಕ್ಕೆ ಬಂದದ್ದು - ಇವೆಲ್ಲ ಕನ್ನಡ ಸಂಸ್ಕೃತಿ ಬಹುವಚನಿಯಾಗಲು ನಡೆಸಿದ ಪ್ರಯತ್ನಗಳೇ? ಇದೂ ಹೌದಾಗಿದ್ದರೆ ಆಗ ರಾಮಚಂದ್ರ ದೇವ ಅವರು ವಾದಿಸುವ ಪ್ರಜಾಪ್ರಭುತ್ವ ಎಲ್ಲಿತ್ತು? ಮೂಲತಃ ಬಹುವಚನಿಯಾಗಿದ್ದ ದೇಸೀ ಸಂಸ್ಕೃತಿಯು ಕಲೋನಿಯಲ್ ಆಡಳಿತದಲ್ಲಿ ಇಂಥ ಅನುವಾದಗಳ ಮೂಲಕ ಏಕರೂಪಿಯಾಗಲು ಏಕೆ ಹವಣಿಸಿರಬಾರದು? ದೇವ ಅವರ ಈ ಕೃತಿ ತೌಲನಿಕ ಅಧ್ಯಯನದ ಸರಳ ಮಾದರಿಯಾಗಿದೆ.

ಶಿವರಾಮಯ್ಯನವರ 'ಸಾಹಿತ್ಯ ಪರಿಸರ'ದಲ್ಲಿ ನಾಟಕ, ಹಳಗನ್ನಡ, ಮಹಾಕಾವ್ಯ,

ಭಕ್ತಿಪಂಥ, ಮತ್ತಿತರ ವಿಷಯಗಳ ಕುರಿತಾದ ೧೫ ಲೇಖನಗಳಿವೆ. ಕೃತಿಯ ಮೊದಲ ಭಾಗದಲ್ಲಿರುವ ೮ ಲೇಖನಗಳಲ್ಲಿ ಶಿವರಾಮಯ್ಯನವರಿಗೆ ಕೆಲವಾದರೂ ಹೊಸಮಾತುಗಳನ್ನು ಹೇಳಲು ಸಾಧ್ಯವಾಗಿದೆ. ಸಾಹಿತ್ಯ ಪರಿಸರದ ಕುರಿತು ಅವರು ಆಡುವ ಮಾತುಗಳು ಮನನೀಯವಾಗಿವೆ. ಆದರೆ ಎರಡನೇ ಭಾಗದಲ್ಲಿರುವ ೭ ಲೇಖನಗಳಲ್ಲಿ ಆ ಎಚ್ಚರ ಕಾಣುವುದಿಲ್ಲ. ಇಲ್ಲಿ ಕೃತಿಯ ಸೈದ್ಧಾಂತಿಕತೆಗೆ ಅವರು ಪೂರ್ಣ ಮಾರುಹೋಗಿಬಿಟ್ಟು, ಬರಿಕೈಲಿ ಹಿಂದಿರುಗುತ್ತಾರೆ. ಭೈರಪ್ಪನವರ ದಾಟು ಕಾದಂಬರಿಯ ಬಗೆಗಿನ ಚರ್ಚೆಯನ್ನು ಅವರು ಹೀಗೆ ಕೊನೆಮಾಡುತ್ತಾರೆ-''ಚತುರ್ವರ್ಣಗಳು ವೃತ್ತಿಯ ಆಧಾರದ ಮೇಲೆ ನಿರ್ಧರಿತವಾಗಿ, ವೇದಕಾಲದ ಸಂಸ್ಕೃತಿಯನ್ನು ಆಧುನಿಕ ಯುಗದಲ್ಲಿ ಪ್ರತಿಪಾದಿಸಲು ಹೊರಟಿರುವ ಭೈರಪ್ಪನವರ ಸಾಹಸ ಅದ್ಭುತವಾಗಿದೆ. ಮೆಚ್ಚತಕ್ಕದ್ದಾಗಿದೆ.''(ಪು. ೧೦೩)

ಇದೇ ಶಿವರಾಮಯ್ಯನವರು ದೇವನೂರು ಮಹಾದೇವರ 'ಕುಸುಮಬಾಲೆ'ಯ ಬಗ್ಗೆ ಹೀಗೆ ಬರೆಯುತ್ತಾರೆ. ''ಸ್ತ್ರೀವಾದಿ ವಿಮರ್ಶಕರು, ವಿಶ್ವವಿದ್ಯಾಲಯಗಳ ಪೀಠಾಧಿಪತಿಗಳು ಕನ್ನಡ ವಿಮರ್ಶನಲೋಕದ ಜಗದ್ಗುರುಗಳು ಇವರೆಲ್ಲ ಸಾಹಿತ್ಯಿಕ ಅಸ್ಪೃಶ್ಯತೆಯನ್ನು ಆಚರಿಸದೆ, ಕುಸುಮಬಾಲೆಯತ್ತ ಕಣ್ಣುಹಾಯಿಸಿ ನೋಡುವುದಾದರೆ ಅಲ್ಲಿ ಹೆಣ್ಣಿಗೆ ಸಿಕ್ಕಿರುವ ಹಾಗೂ ದಕ್ಕಿರುವ ಆಯ್ಕೆಯ ಸ್ವಾತಂತ್ರ್ಯವನ್ನು ಕಂಡು ದಂಗು ಬಡಿದು ಹೋಗುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ '' (ಪು.೧೫೭) ಭೈರಪ್ಪ ಮತ್ತು ದೇವನೂರು - ಇವರಿಬ್ಬರನ್ನೂ ಏಕಕಾಲದಲ್ಲಿ ಮೆಚ್ಚಿಕೊಳ್ಳಲು ಸಾಧ್ಯವಾದ ಸ್ಥಿತಿ ವಿಚಿತ್ರವಾದುದು. ಕಲಾಕೃತಿಯು ಒಗ್ಗಿಸಬಯಸುವ ಸೈದ್ಧಾಂತಿಕತೆಯಿಂದ ಸಿಡಿದು ದೂರ ನಿಲ್ಲುವುದು ಕೂಡಾ ಅಗತ್ಯವೆಂದು ತೋರುತ್ತದೆ. ಶಿವರಾಮಯ್ಯನವರಿಗೆ ಹಾಗೆ ಮಾಡಲು ಸಾಧ್ಯವಾಗುತ್ತಿಲ್ಲವಾದ್ದರಿಂದ ಅವರಿಗೆ ದಾಟು ಮತ್ತು ಕುಸುಮಬಾಲೆಯನ್ನು ಸಮಪಾತಳಿಯಲ್ಲಿ ನಿಲ್ಲಿಸಲು ಸಾಧ್ಯವಾಗಿದೆ. ರಾಘವೇಂದ್ರ ಪಾಟೀಲರ 'ವಾಗ್ವಾದ' ಕೃತಿಯಲ್ಲಿ ವಾಗ್ವಾದಗಳಿಗೆ ಬದಲು 'ಸ್ವಗತ'ಗಳಿವೆ. ''ನನಗೆ ಈ ಲೇಖನಗಳು ಸಿಕ್ಕಿರುವುದು ನನ್ನೊಳಗಿನ ಇಂಥ ವಾಗ್ವಾದದ ಮಾರ್ಗವಾಗಿಯೇ'' ಎಂದು ಅವರೇ ಹೇಳಿಕೊಂಡಿದ್ದಾರೆ. ನವ್ಯ ಚಿಂತನೆಯ ದಟ್ಟ ಪ್ರಭಾವ ಇರುವ ಇಲ್ಲಿನ ಲೇಖನಗಳಲ್ಲಿ ಸಂಸ್ಕೃತಿ, ಧರ್ಮ, ಸಾಮಾಜಿಕತೆ ಮೊದಲಾದ ಪದಗಳು ಬೇಕಾದಷ್ಟು ಬಾರಿ ಹಾದು ಹೋಗುತ್ತವೆ. ಆದರೆ ಅದಕ್ಕೆ ಪಾಟೀಲರು ಪ್ರತಿಕ್ರಿಯಿಸುವ ರೀತಿ ಮಾತ್ರ ಅತ್ಯಂತ ವೈಯಕ್ತಿಕವಾದುದು. ಅನುಭವಗಳನ್ನು ರೂಪಿಸುವ ನಂಬಿಕೆಗಳನ್ನು ಪಾಟೀಲರು 'ದೃಷ್ಟಿಕೋನ' ಎಂದು ಕರೆಯುತ್ತಾರೆ. ಈ ನಿಲುವಿನಲ್ಲಿ ತಪ್ಪೇನೂ ಇಲ್ಲ. ಆದರೆ ಇಲ್ಲಿಯೇ ನಿಂತುಬಿಟ್ಟರೆ ತಪ್ಪು ತಾನಾಗಿಯೇ ಘಟಿಸಿಬಿಡುತ್ತದೆ. ಯಾಕೆಂದರೆ ಅನುಭವಗಳು ಸರ್ವತಂತ್ರ ಸ್ವತಂತ್ರವೇನೂ ಅಲ್ಲ. ಈ ದೇಶದಲ್ಲಿ ಯಂತೂ ಅವು ಜಾತಿಗೆ ಬದ್ಧವಾಗಿವೆ ಮತ್ತು ಚಾರಿತ್ರಿಕವಾಗಿ ಶ್ರೇಣೀಕರಣಕ್ಕೆ ಒಳಗಾಗಿವೆ ಕೂಡಾ. ಇಲ್ಲಿ ಯಾರ ಅನುಭವವನ್ನು ಅಧಿಕೃತ ಎಂದು ಭಾವಿಸಲಾಗುತ್ತಿದೆ ಮತ್ತು ಯಾಕಾಗಿ ಹಾಗೆಯೇ ಮಾಡಲಾಗಿದೆ ಎಂಬ ಪ್ರಶ್ನೆಯನ್ನು ಕೇಳಿಕೊಂಡಾಗ ದೃಷ್ಟಿಕೋನಗಳ ಮಿತಿಗಳೆಲ್ಲಾ ಮೈದೆರೆಯಲು ಆರಂಭಿಸುತ್ತವೆ. ಪಾಟೀಲರು ತಮ್ಮ ಅನುಭವಗಳಿಗೆ ಸಾಮಾಜಿಕ

ಆಯಾಮವನ್ನು ನೀಡುವುದಿಲ್ಲವಾದ್ದರಿಂದ ಅವು 'ವಾಗ್ವಾದ'ಗಳಾಗದೆ ಸೊರಗಿವೆ.

ಡಾ.ಕೆ.ಎಲ್.ಗೋಪಾಲಕೃಷ್ಣಯ್ಯನವರ 'ಸಾಹಿತ್ಯ ಸಂವಾದ'ಕೃತಿಯಲ್ಲಿ ಪುರಾಣವನ್ನು ಮುಖ್ಯ ವಿಶ್ಲೇಷಣೆಯಾಗಿರಿಸಿಕೊಂಡ ಹದಿನೈದು ಲೇಖನಗಳಿವೆ. ಪುರಾಣಗಳ ಪರಿಕಲ್ಪನೆಗಳ ಬಗೆಗೆ ಆಳವಾದ ಜ್ಞಾನವಿರುವ ಗೋಪಾಲಕೃಷ್ಣಯ್ಯನವರಿಗೆ ಪುರಾಣಗಳನ್ನು ಯಾವ ಬಗೆಯ ಸಮಾಜ ಸೃಷ್ಟಿಸುತ್ತದೆ? ಮತ್ತು ಪುರಾಣಗಳು ಸಂಸ್ಕೃತಿಯೊಂದರಲ್ಲಿ ನಿರ್ವಹಿಸುವ ನಿರ್ದಿಷ್ಟ ಕೆಲಸಗಳೇನು? ಎಂಬಿತ್ಯಾದಿ ವಿಚಾರಗಳ ಕುರಿತು ಲೇಖಕರಿಗೆ ಅಷ್ಟಾಗಿ ಆಸಕ್ತಿ ಇಲ್ಲ. ಅದರ ಬದಲು ಪುರಾಣವನ್ನು ನಿರ್ವಚಿಸುವುದು, ಅದರ ಸ್ವರೂಪವನ್ನು ಖಚಿತಪಡಿಸುವುದು ಅವರ ಉದ್ದೇಶ. ಕನ್ನಡದಲ್ಲಿ ಈ ಬಗೆಯ ಕೆಲಸಗಳು ಅಷ್ಟಾಗಿ ನಡೆದಿಲ್ಲ ಎಂಬುದನ್ನು ನೆನಪಿಸಿಕೊಂಡಾಗ ಇಂಥ ಕೃತಿಗಳ ಮಹತ್ತ್ವ ತಿಳಿಯುತ್ತದೆ.

ಬಿ.ಎಂ. ಶರಭೇಂದ್ರಯ್ಯನವರ 'ಆನಂದ ಮತ್ತು ಅರಿವು' ಕೃತಿಯಲ್ಲಿ ಒಟ್ಟು ೧೨ ಲೇಖನಗಳಿವೆ. ಕೃತಿಯೊಂದನ್ನು ಅರ್ಥಮಾಡಿಕೊಳ್ಳಲು ಬೇಕಾದ ಪರಿಕರಗಳನ್ನು ಶರಭೇಂದ್ರಯ್ಯನವರು ತಾಳ್ಮೆಯಿಂದ ಸಂಗ್ರಹಿಸಿಕೊಡುತ್ತಾರೆ. ಅಷ್ಟರ ಮಟ್ಟಿಗೆ ಇಲ್ಲಿನ ಲೇಖನಗಳು ಉಪಯುಕ್ತವೂ ಹೌದು. ಆನಂದ ಮತ್ತು ಅರಿವಿನ ಕುರಿತಾದ ಅವರ ಚಿಂತನೆ ಸಾಕಷ್ಟು ಪ್ರೌಢವಾಗಿದೆ. ಆದರೆ ಇದೇ ಪ್ರೌಢತೆಯನ್ನು ಸಾಮಾಜಿಕ ಸಂದರ್ಭದ ಚರ್ಚೆಯಲ್ಲಿ ಗುರುತಿಸಲಾಗುವುದಿಲ್ಲ. ದಲಿತ-ಬಂಡಾಯದ ಬಗೆಗೆ ಅವರು ಬರೆದಿರುವ ಮಾತುಗಳೇ ಇದಕ್ಕೆ ಸಾಕ್ಷಿ.

ಎಂ. ಅಕಬರ ಅಲಿಯವರ 'ಕನ್ನಡ ಕಾವ್ಯಾಧ್ಯಯನ'ಕೃತಿಯಲ್ಲಿ ವಿಮರ್ಶೆಗಿಂತ ಮಿಗಿಲಾಗಿ ಪ್ರಶಂಸಾಪರ ಧೋರಣೆಯಿದೆ. ಕನ್ನಡ ನವೋದಯ ಸಂದರ್ಭದ ಬರವಣಿಗೆಯನ್ನು ನೆನಪಿಗೆ ತರುವ ಇಲ್ಲಿನ ವಿಮರ್ಶೆಗೆ ಸಮಕಾಲೀನತೆಯ ಅರಿವಿಲ್ಲ. ಅಂದರೆ ಅದು ಸಮಕಾಲೀನ ಬೆಳವಣಿಗೆಯನ್ನು ಸೈದ್ಧಾಂತಿಕವಾಗಿ ಇದಿರಿಸುವುದೂ ಇಲ್ಲ ಬೆಳೆಸುವುದೂ ಇಲ್ಲ. ಈ ಬಗೆಯ ತಾತ್ತ್ವಿಕ ಮುಗ್ಧತೆ ಕೂಡಾ ಕನ್ನಡ ಸಂಸ್ಕೃತಿಯ ಒಂದು ಭಾಗವಾಗಿದೆ ಎಂಬುದನ್ನು ಇಲ್ಲಿ ನೆನೆಸಿಕೊಳ್ಳಬಹುದು.

ಈ ಹಾದಿಯಲ್ಲಿ ಸಾಗುವ ಇನ್ನಷ್ಟು ವಿಮರ್ಶಾಕೃತಿಗಳು ಕನ್ನಡದಲ್ಲಿ ಪ್ರಕಟವಾಗಿವೆ. ಅವುಗಳಲ್ಲಿ ಡಿ.ಎನ್. ರಾಯ್ಕರ್ ಅವರ 'ನಿರಂತರ', ಎ.ಆರ್. ನಾಗಭೂಷಣ್ ಅವರ 'ನಾಟಕ ಪ್ರವೇಶಿಕೆ', ಬಸವರಾಜ ಪೊಲೀಸ ಪಾಟೀಲ ಅವರ 'ಸಂವೇದನ', ಸಾ. ಶಿ. ಮರುಳಯ್ಯ ಅವರ 'ಅಭಿವ್ಯಕ್ತಿ', ಗುರುಪಾದ ಮರಿಗುದ್ದಿ ಅವರ 'ಶ್ರೀ ಸಾಮಾನ್ಯರಿಗಾಗಿ ಕುವೆಂಪು ಮತ್ತು ಶ್ರೀರಾಮಾಯಣ ದರ್ಶನಂ', ಶಾರದಾ ರಾಮಣ್ಣ ಅವರ 'ವಿಚಾರೋದ್ಯಾನ', ಶೈಲಜಾ ಉಡಚಣ ಅವರ 'ವಚನಗಳಲ್ಲಿ ಸತಿಪತಿಭಾವ'' ಕೃತಿಗಳು ಉಲ್ಲೇಖಕ್ಕೆ ಅರ್ಹವಾದುವು. ಇವರೆಲ್ಲರೂ 'ಕೃತಿಯೊಳಗೆ ಏನಿದೆ' ಎಂಬುದನ್ನು ವಿವರಿಸಲು ಪ್ರಯತ್ನಿಸುತ್ತಾರೆ.

ಕರ್ನಾಟಕ ಸಾಹಿತ್ಯ ಅಕಾಡೆಮಿಯವರು ನಡೆಸಿದ ವಿಚಾರ ಸಂಕಿರಣಗಳಲ್ಲಿ ಮಂಡಿಸಲಾದ ಪ್ರಬಂಧಗಳನ್ನು ಸಂಕಲನ ರೂಪದಲ್ಲಿ ಪ್ರಕಟಿಸಲಾಗಿದೆ. ಇಂತಹ ಸಂಕಲನಗಳಲ್ಲಿ ಬೇರೆ ಬೇರೆ ವಿಮರ್ಶಕರ ಲೇಖನಗಳಿರುವುದರಿಂದ ಈ ಕೃತಿಗಳನ್ನು ಒಂದು ಚೌಕಟ್ಟಿನಲ್ಲಿರಿಸಿ ಚರ್ಚಿಸುವುದು ಕಷ್ಟ. ವಚನ ಚಳುವಳಿಯಲ್ಲಿದ್ದ ಕೆಳವರ್ಗದ ಅಥವಾ ಕೆಳ ಜಾತಿಯ ಜನರ ವಚನಗಳ ಆಶಯ ಮತ್ತು ಅಭಿವ್ಯಕ್ತಿಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ ಕುತೂಹಲಕರ ಪ್ರಯೋಗವೊಂದು ಅಲ್ಲಿದೆ. ಎಕ್ಕುಂಡಿ ಮತ್ತು ವಿ.ಜಿ.ಭಟ್ಟರ ಸಾಹಿತ್ಯದ ಕುರಿತಾದ ಲೇಖನಗಳಲ್ಲಿಯೂ ಸಾಂಪ್ರದಾಯಿಕವಾದ ಹೇಳಿಕೆಗಳಿವೆ. ಜೊತೆಗೆ ಅವುಗಳನ್ನು ಅರ್ಥಮಾಡಿಕೊಳ್ಳಲು ಮಾಡಿದ ಕೆಲವು ಪ್ರಾಮಾಣಿಕ ಪ್ರಯತ್ನಗಳೂ ಇವೆ. ಎಕ್ಕುಂಡಿ ಕಾವ್ಯದಲ್ಲಿನ ಪರಂಪರೆಯ ಬಗೆಗೆ ಮಲ್ಲೇಪುರಂ ಜಿ. ವೆಂಕಟೇಶ ಅವರು ಬರೆದ ಲೇಖನ ಮತ್ತು ವಿ.ಜಿ. ಭಟ್ಟರ ಕಾವ್ಯದ ಬೆಳವಣಿಗೆಯ ಕುರಿತು ಎಚ್.ಆರ್. ಅಮರನಾಥರು ಬರೆದ ಲೇಖನ ಎರಡೂ ಹೊಸ ವಿಚಾರಗಳನ್ನು ಒಳಗೊಂಡಿವೆ.

ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಸಾಹಿತ್ಯ ಪಾರಿಭಾಷಿಕ ಮಾಲೆ'ಯಲ್ಲಿ ಅನೇಕ ಕೃತಿಗಳು ಈಗಾಗಲೇ ಪ್ರಕಟವಾಗಿದ್ದು, ಸಾಹಿತ್ಯಾಭ್ಯಾಸಿಗಳಿಗೆ ಬಹುವಿಧವಾಗಿ ಸಹಕರಿಸಿವೆ. ಪ್ರಸ್ತುತ ವರ್ಷದಲ್ಲಿ ಇದೇ ಮಾಲೆಯಲ್ಲಿ 'ಕಾಮಿಡಿ'ಪ್ರಕಟವಾಗಿದೆ. ಜಿ.ಎಸ್. ಅಮೂರರ ಈ ಪುಟ್ಟ ಕೃತಿಯಲ್ಲಿ ಕಾಮಿಡಿಯ ಪರಿಕಲ್ಪನೆಯನ್ನು ಅತ್ಯಂತ ಸಶಕ್ತವಾಗಿ ವಿವರಿಸಲಾಗಿದೆ.

ಬರಗೂರು ರಾಮಚಂದ್ರಪ್ಪನವರ 'ಸಂಸ್ಕೃತಿ, ಉಪಸಂಸ್ಕೃತಿ'ಕೃತಿಯಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದಂಥ ಹದಿಮೂರು ಲೇಖನಗಳಿವೆ. ಸಮಕಾಲೀನ ಆಗುಹೋಗುಗಳಿಗೆ ಹೆಚ್ಚು ಅಂತರ್ಮುಖಿಯಾಗಿ ಪ್ರತಿಕ್ರಿಯಿಸಿದ್ದರಿಂದ ಬರಗೂರರ ಭಾವುಕತೆಯೇ ಇಲ್ಲಿ ವಿಜೃಂಭಿಸಿದೆ ಮತ್ತು ಅದರಿಂದಾಗಿ ವೈಚಾರಿಕತೆ ಗೌಣವಾಗಿ ಬಿಟ್ಟಿದೆ.

ಹೀಗೆ ಒಟ್ಟಿನಿಂದ ನೋಡಿದಾಗ ಕನ್ನಡ ವಿಮರ್ಶೆ ಅಂಥ ಗಂಭೀರ ಹಾದಿಯಲ್ಲಿದ್ದಂತೇನೂ ಅನಿಸುವುದಿಲ್ಲ.



## ಕಾವ್ಯ

*ಎಚ್.ಎಸ್. ರಾಘವೇಂದ್ರರಾವ್*

೧೯೯೩ರ ಕಾವ್ಯವು ಅಂಥ ಉತ್ಸಾಹ, ಸಮಾಧಾನಗಳನ್ನು ಹುಟ್ಟಿಸುವಂತೆ ಇಲ್ಲ. ಈ ವರ್ಷ ಕೆಲವು ಒಳ್ಳೆಯ ಸಂಕಲನಗಳು ಪ್ರಕಟವಾಗಿವೆ. ಆದರೆ ಅವು ಕನ್ನಡ ಕಾವ್ಯಕ್ಕೆ ಹೊಸದೇನನ್ನೋ ಸೇರಿಸಿವೆ ಎಂದು ಹೇಳಲು ಸಾಧ್ಯವಾಗುತ್ತಿಲ್ಲ. ಸುಮಾರು ಒಂದು ನೂರ ಎಪ್ಪತ್ತಾರರಷ್ಟು ಕವನಸಂಕಲನಗಳು ಹೊರಬಂದಿವೆ. ಅವುಗಳಲ್ಲಿ ಶೇಕಡಾ ತೊಂಬತ್ತು ಭಾಗ ಒಂದೇ ಒಂದು ಓದನ್ನು ಪಡೆಯಲಾರದಷ್ಟು ಸಾಮಾನ್ಯವಾಗಿವೆ. ಇದು ಪ್ರಾಯಶಃ ಪ್ರತಿವರ್ಷದ ಸಹಜ ಸ್ಥಿತಿಯಾದ್ದರಿಂದ ಆ ಬಗ್ಗೆ ವಿಷಾದ ಪಡುವ ಕಾರಣವಿಲ್ಲ. ಕವಿತೆಯು ತನ್ನ ಗತವೈಭವವನ್ನು ಮರೆತು ಅಲ್ಪಸಂಖ್ಯಾತ ಸಹೃದಯ ವರ್ಗದ ಆಸ್ವಾದನೆಯ ವಸ್ತುವಾಗಿ ಮುಂದುವರಿಯುವುದು ಅನಿವಾರ್ಯವೆಂದು ತೋರುತ್ತದೆ. ಈ ಹಿನ್ನೆಲೆಯಲ್ಲಿ ಒಂದೆರಡು ಅಂಶಗಳನ್ನು ಸ್ಥೂಲವಾಗಿ ದಾಖಲೆ ಮಾಡಿ,. ಅನಂತರ ಈ ವರ್ಷದ ಕೆಲವು ಮಹತ್ವದ ಸಂಕಲನಗಳ ಸಂಕ್ಷಿಪ್ತ ಪರಿಶೀಲನೆ ಮಾಡಲಾಗಿದೆ.

೧. ಕನ್ನಡ ಕವಿತೆಯಲ್ಲಿ ಭಾವಗೀತೆಯ ಮರುಹುಟ್ಟು ಅಥವಾ 'ಪುನರ್ ನವೋದಯ'ವನ್ನು ಕಾಣಲು ಕೆಲವು ವಿಮರ್ಶಕರು / ಕವಿಗಳು ಪ್ರಯತ್ನಿಸುತ್ತಿದ್ದಾರೆ. ಈ ವಾದಮಂಡನೆಯಲ್ಲಿ ಒಂದು ಕಡೆಯಿಂದ ಭಾವನಾತ್ಮಕತೆಯನ್ನು ಮೈಗೂಡಿಸಿಕೊಂಡ ಬಂಡಾಯ-ದಲಿತ ಕವಿಗಳು ಆಸಕ್ತರಾದರೆ, ಮತ್ತೊಂದುಕಡೆ ನವ್ಯದೊಂದಿಗಿನ 'ಸಂಕ್ಷಿಪ್ತ ಮಧುಚಂದ್ರ'ವನ್ನು ಮುಗಿಸಿ ಮತ್ತೆ ಹಳೆಯ ರೀತಿಯ ಕವಿತಾರಚನೆಯಲ್ಲಿ ತೊಡಗಿರುವ ಹಿರಿಕಿರಿಯ ಕವಿಗಳಿದ್ದಾರೆ. ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿಯೆಂದರೆ ಭಾವಗೀತಾತ್ಮಕತೆ ಹಾಗೂ ಭಾವಗೀತೆಗಳು ಸಂವಾದಿ ಪದಗಳಲ್ಲವೆನ್ನುವುದು. ಹಾಗೆನೋಡಿದರೆ ಅತ್ಯುತ್ತಮ ನವ್ಯಕಾವ್ಯವೂ ಭಾವಗೀತಾತ್ಮಕತೆಗೆ ಎರವಾಗಿರಲೇ ಇಲ್ಲ. ಎರಡನೆಯದಾಗಿ ಈಗ 'ಭಾವಗೀತೆ'ಯೆಂದೋ 'ಗೀತೆ'ಯೆಂದೋ ಹೊರಬರುತ್ತಿರುವ ರಚನೆಗಳು ಆದೇ ಮಾದರಿಯ ನವೋದಯ ಕವಿತೆಗಳ ಹೆಗಲಿಗೂ ಬರುವುದಿಲ್ಲ. 'ಬಾ ಇತ್ತ ಇತ್ತ','ಪಾಂಚಾಲಿ' ಸಂಕಲನಗಳ ಒಳ್ಳೆಯ ಕವಿತೆಗಳು ಭಾವಗೀತೆಗಳೆಂದು ಕರೆಸಿಕೊಳ್ಳಲಾರವು.

೨. ಬಂಡಾಯ ಕವಿಗಳೆಂದು ಮುನ್ನೆಲೆಗೆ ಬಂದ ಹಲವು ಕವಿಗಳು ಕ್ರಮೇಣ

ಏಕಾಂತದ ಸ್ವಗತಲಹರಿಯ ಮಾದರಿಗಳಿಗೆ ಒಲಿಯುತ್ತಿರುವುದನ್ನು ಗುರುತಿಸಬಹುದು. ವಿಷಾದ, ಅಸಹಾಯಕತೆ ಮತ್ತು ಒಂಟಿತನಗಳು ಈ ಮಾದರಿಯ ಪ್ರಮುಖ ಲಕ್ಷಣಗಳು. ಹೀಗೆ ಆಗಿರುವುದರಿಂದ ಅವರುಗಳ ಮೂಲ ಆಶಯಕ್ಕೇನೂ ವ್ಯತ್ಯಯ ಬಂದಿಲ್ಲ. ಆಶಾವಾದದಿಂದ ಪ್ರೇರಿತವಾದ ಉತ್ಸಾಹ ಭರಿತ ಲಯಗಳ ಜಾಗದಲ್ಲಿ, ಹತಾಶೆಯಿಂದ ಮೂಡಿಬಂದ ಸೋತ ಲಯಗಳಿರುತ್ತವೆ.

೩. ಮಹಿಳೆಯರ ಕವಿತೆಯು ನಿಸ್ಸಂದೇಹವಾಗಿ ಅನನ್ಯವಾದ, ಮಾಧ್ಯಮನಿಷ್ಠವಾದ ಆಯಾಮಗಳನ್ನು ಸಂಪಾದಿಸಿಕೊಳ್ಳುತ್ತಿರುವುದನ್ನು ಈ ವರ್ಷವೂ ಗಮನಿಸಬೇಕು. ಬಂಡಾಯ ಕಾವ್ಯದಿಂದ ಪ್ರೇರಿತವಾದ ಹೆಣ್ಣುಮಕ್ಕಳ ಹಾಗೆಯೇ, ಅಂಥ ಸಹಯೋಗಗಳಿಲ್ಲದೆಯೂ ನಿಜವಾದ ಕಾವ್ಯಾತ್ಮಕ ಪ್ರತಿಭಟನೆಯಲ್ಲಿ ತೊಡಗಿರುವ ಈ ಕವಿಗಳು ಮುಖ್ಯರಾಗುತ್ತಾರೆ. ಹಾ.ಮ.ಕನಕ, ಹೇಮಾ ಪಟ್ಟಣಶೆಟ್ಟಿ, ಸುಧಾಶರ್ಮ ಚವತ್ತಿ ಮುಂತಾದವರ ಎಷ್ಟೋ ಕವಿತೆಗಳು ಯಾವ ರಿಯಾಯಿತಿಯನ್ನು ಬಯಸದೆ ಅನನ್ಯ ಮೋಹಕವಾಗಿದೆ. ಪ್ರತಿಯೊಬ್ಬ ಕವಯತ್ರಿಯೂ ತನ್ನದೇ ವಿಶಿಷ್ಟ ಲಯಗಳನ್ನು ಶೈಲಿಯನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

೪. ಕೆ.ಎಸ್.ನರಸಿಂಹಸ್ವಾಮಿ, ಅಡಿಗರಂಥ ಹಿರಿಯರಿಂದ ಹಿಡಿದು ಹೂವಿನ ಹಡಗಲಿಯ ಪೀರ್‌ಭಾಷಾವರೆಗೆ ಹರಡಿಕೊಂಡಿರುವ ಈ ಕವಿಗಳ ಪ್ರಾದೇಶಿಕ, ಭಾಷಿಕ ಹಾಗೂ ಅನುಭವ ವೈವಿಧ್ಯಗಳು ಅದೇ ಪ್ರಮಾಣದ ಆಕೃತಿ ವೈವಿಧ್ಯವನ್ನು ರೂಪಿಸಿಕೊಂಡಿಲ್ಲವೆನ್ನುವುದು ಗಮನಕ್ಕೆ ಬರುತ್ತದೆ. ಈ ಏಕತಾನತೆಗೆ ಕಾವ್ಯಪರಂಪರೆಯ ಪರಿಚಯದ ಅಭಾವ ಮತ್ತು ಮಾಧ್ಯಮವನ್ನು ಕುರಿತು ಪ್ರಯೋಗಶೀಲತೆಯ ಕೊರತೆಗಳು ಕಾರಣವೆನ್ನುವುದೂ ಸುಸ್ಪಷ್ಟ.

ತಮ್ಮ ಸಮಗ್ರ ಬದುಕನ್ನು ಸಾರ್ಥಕ ಕವಿತೆಯ ಅನ್ವೇಷಣೆಯಲ್ಲಿ ಕಳೆದ ಗೋಪಾಲಕೃಷ್ಣ ಅಡಿಗರ ಕೊನೆಯ ಕವನ ಸಂಕಲನ 'ಬಾ ಇತ್ತ ಇತ್ತ'.ಇದು ಮೂವತ್ತೊಂದು ಪುಟಗಳಲ್ಲಿ ಒಂಬತ್ತು ಕವನಗಳನ್ನು ಒಳಗೊಂಡಿದೆ. ಸುಮಾರು ಹತ್ತು ವರ್ಷಗಳ ಅವಧಿಯಲ್ಲಿ ರೂಪಿತವಾದ ಕೆಲ ಕವನಗಳೂ ಇದರಲ್ಲಿವೆ. ಇವು ಬಹುಮಟ್ಟಿಗೆ ವ್ಯಕ್ತಿಸಂಬಂಧಗಳ ಸ್ವರೂಪವನ್ನು ಶೋಧಿಸುವ ಆಸಕ್ತಿಯಿಂದ ಮೂಡಿಬಂದವು. ಬೆಕ್ಕು ನರಸಿಂಗನಿಂದ ಹಿಡಿದು ಮಾಸ್ತಿಯವರ ವರೆಗೆ ಬೇರೆ ಬೇರೆ 'ಅನ್ಯಕೇಂದ್ರ'ಗಳ ನೆಲೆಯಿಂದ ಬದುಕನ್ನು ನೋಡಹೊರಟಾಗ, ಸಾಮಾನ್ಯವಾಗಿ ಅಡಿಗರಿಗೆ ಪರಕೀಯವಾಗಿದ್ದ ನೆಲೆಗಳು ಮೂಡಿಬರುತ್ತವೆ. ಇವು ವಿಮರ್ಶೆಗಿಂತ ಗ್ರಹಿಕೆಗೆ ಒತ್ತು ಕೊಡುತ್ತವೆ. 'ಚಿಂತಾಮಣಿಯಲ್ಲಿ ಕಂಡಮುಖ'ದಲ್ಲೇ ಪ್ರಾರಂಭವಾಗಿದ್ದ ಈ ಹೃದಯ ಸಂವಾದದ ಪ್ರಕ್ರಿಯೆಯು ಇಲ್ಲಿ ಮುಂದುವರಿಯುತ್ತದೆ. 'ತೀರ್ಥರೂಪ'ದಂತಹ ಕವನಗಳ ಲಕ್ಷಣವೆಂದರೆ ಸಾವನ್ನು ಸ್ವೀಕರಿಸುವ ಪ್ರಕ್ರಿಯೆಯಲ್ಲಿರುವ ಧೀರತೆ. ಗಂಗಾಧರ ಚಿತ್ತಾಲರ 'ಸಂಪರ್ಕ'ದ ಕವಿತೆಗಳೊಂದಿಗೆ ಇದನ್ನು ಹೋಲಿಸಿದಾಗ ನನ್ನ ಮಾತು ಸ್ಪಷ್ಟವಾಗುತ್ತದೆ. ತಾನು ಬುದ್ಧಿಪೂರ್ವಕವಾಗಿ ಕವಿತೆಗೆಂದು ರೂಢಿಸಿಕೊಂಡ ಆಶಯ ಲೋಕಗಳ ಆಚೆಗಿದ್ದ ಅನುಭವಲೋಕಗಳನ್ನು ಕುರಿತು ಬರೆಯುವ

ಅವಕಾಶವನ್ನು ಕವಿ ಉತ್ಸಾಹದಿಂದ ಮತ್ತು ತನಗೆ ಸಹಜವಾದ ಮಾಧ್ಯಮ ನಿಷ್ಠೆಯಿಂದ ಬಳಸಿಕೊಂಡಿದ್ದಾರೆ. ಆದರೆ ಇವುಗಳನ್ನು ಸುಮತೀಂದ್ರ ನಾಡಿಗರು ಹೇಳುವಂತೆ ಭಾವಗೀತೆಗಳೆಂದು ಒಪ್ಪಿಕೊಳ್ಳುವುದು ಕಷ್ಟವಾಗುತ್ತದೆ. ಕುತೂಹಲದ ಮಾತೆಂದರೆ ಇಲ್ಲಿನ ಎಷ್ಟೋ ಕವಿತೆಗಳು ಮಾಸ್ತಿಯವರ ಕಥನಕವನಗಳನ್ನು ಹೋಲುವುದು. ಉಳಿದಂತೆ ಅಡಿಗರಿಗೆ ಈಚಿನ ದಿನಗಳಲ್ಲಿ ಸಹಜವಾಗಿದ್ದ ಸಿನಿಕತೆಯ ನೆಲೆಯ ಕೆಲವು ಕವಿತೆಗಳು ಇಲ್ಲಿವೆ. ಅವು ಅವರದೇ ಹಳೆಯ ಕವಿತೆಗಳ ನಕಲುಗಳಂತೆ ಭಾಸವಾಗುತ್ತವೆ.

ಹಿರಿಯ ಕವಿ ಕೆ.ಎಸ್. ನರಸಿಂಹಸ್ವಾಮಿಯವರು 'ದುಂಡುಮಲ್ಲಿಗೆ'ಸಂಕಲನದಲ್ಲಿ ನಲವತ್ತೆರಡು ಈಚಿನ ಕವನಗಳನ್ನು ಒಟ್ಟಿಗೆ ತಂದಿದ್ದಾರೆ. 'ನವಪಲ್ಲವ'ಬಂದ ಅನೇಕ ವರ್ಷಗಳ ನಂತರದ ಈ ಹತ್ತನೆಯ ಸಂಕಲನವು 'ಗೇಯತೆ'ಗೆ ಒತ್ತು ಕೊಡುತ್ತದೆ. ಕವಿ ಹೇಳುವ, ''ಇವುಗಳಲ್ಲಿ ಕೆಲವು ಹಾಡು, ಕೆಲವು ಹಸೆ. ಹಾಡಿಗೆ ಅನುಗುಣವಾಗಿರುವುದನ್ನು ಹಾಡಬೇಕು. ಮಾತಿನ ಹಸೆಗಳ ಅರ್ಥವನ್ನು ಮನಗಾಣಬೇಕು'' ಎಂಬ ಮಾತುಗಳು ಗೇಯತೆಗೆ ಸಂಬಂಧಪಟ್ಟ ವಾಗ್ವಾದಗಳ ಸಂದರ್ಭದಲ್ಲಿ ಕುತೂಹಲ ಕಾರಿಯಾಗಿವೆ.

ಈ ಕವಿತೆಗಳನ್ನು 'ಪುನರ್ನವೋದಯ','ಭಾವಗೀತೆಯ ಮರುಹುಟ್ಟು', 'ರೊಮ್ಯಾಂಟಿಸಿಸಂ' ಮುಂತಾದ ಲೇಬಲ್‌ಗಳಿಂದ ವಿವರಿಸಹೊರಡುವುದು ಸರಿಯಲ್ಲ. ಕನ್ನಡ ಕವಿತೆಯ ಬೆಳವಣಿಗೆಗೆ ಸಮಾನಾಂತರವಾಗಿ ಈ ಕವಿಯೂ ಬೆಳೆಯುತ್ತಾ ಬದಲಾಗುತ್ತ ಬಂದಿದ್ದಾರೆ. ಕಾಲಕಾಲಕ್ಕೆ ಕವಿತೆಯ ಉದ್ದೇಶ ಮತ್ತು ಸಂವಹನ ವಿಧಾನಗಳಿಗೆ ಸಂಬಂಧಪಟ್ಟ ಅವರ ಅಭಿಪ್ರಾಯಗಳು ಬದಲಾದ ಹಾಗೆ, ಕವಿತೆಯ ಸ್ವರೂಪದಲ್ಲಿ ಬದಲಾವಣೆ ಉಂಟಾಗಿದೆಯೇ ವಿನಾ, ಅವರ ಕವಿತೆಯ ಆಶಯಗಳಲ್ಲಿಅಂಥ ಮೂಲಭೂತ ಬದಲಾವಣೆಯೇನೂ ಆಗಿಲ್ಲ. ಭಾವಗೀತಾತ್ಮಕತೆ, ನಿಯತ ಲಯಗಳಿಂದಲೇ ಮೂಡಿಬರುವ ಗೇಯತೆ, ದೇಶ, ಕಾಲ, ಸಂಸ್ಕೃತಿಬದ್ಧವಲ್ಲದ ಮಾನವತಾವಾದ ಮುಂತಾದವು ಅವರ ಕವಿತೆಯ ಎಂದಿನ ಲಕ್ಷಣಗಳೇ ಆಗಿವೆ. ಬರವಣಿಗೆಯ ಇಳಿದಿನಗಳಲ್ಲಿ ಕೂಡ ಅವರ ಕವಿತೆ ಆಕರ್ಷಕತೆಯನ್ನು ಕಳೆದುಕೊಂಡಿಲ್ಲ. ಆದರೆ ಕನ್ನಡ ಕವಿತೆಯ ಇಂದಿನ ಸಂದರ್ಭದಲ್ಲಿ ಇವು ಕಿರಿಯಾಳದ ಕವಿತೆಗಳೆನಿಸಿ, ಇದೇ ಕವಿಯ ಇನ್ನೂ ಸಾರ್ಥಕವಾದ ಹಳೆಯ ಕವಿತೆಗಳ ಕಡೆಗೆ ನಮ್ಮನ್ನು ಕರೆದೊಯ್ಯುತ್ತವೆ.

'ಹೋಮಾ ಎಂಬ ಪಕ್ಷಿ'ಸಂಕಲನದ ಕವಿಯಾದ ಎಚ್.ಎಸ್.ಭೀಮನಗೌಡರು ಹಲವು ವರ್ಷಗಳಿಂದ ಕವಿತೆಯ ಮಾಧ್ಯಮಕ್ಕೆ ನಿಷ್ಠೆಯಿಂದ ನಡೆದುಕೊಂಡುಬಂದವರು. ಅತ್ತ ನವ್ಯರು ಇತ್ತ ಬಂಡಾಯದವರು ಇಬ್ಬರೊಂದಿಗೂ ಒಪ್ಪಂದಗಳನ್ನು ಮಾಡಿಕೊಳ್ಳದೆ ಒಂಟಿಹಾದಿಯನ್ನು ನಡೆಯುತ್ತ ಬಂದ ಭೀಮನಗೌಡರು ಹಲವು ಮುಖ್ಯ ಕವಿತೆಗಳನ್ನು ಬರೆದಿದ್ದಾರೆ. ''ಕಾವ್ಯಮಾಧ್ಯಮದ ಔಚಿತ್ಯವನ್ನೇ ಪ್ರಶ್ನಿಸುವ... ಗದ್ಯಮಯ ದಿನಗಳಲ್ಲಿ... ನಡೆಸುವ ಏಕಪಾತ್ರಾಭಿನಯ'ವೆಂದು ಅವರು ತಮ್ಮ ಕವಿತೆಗಳನ್ನು ಕರೆದಿರುವುದು ಸಹಜವಾಗಿದೆ. ಕವಿತೆಯ ವಿಮರ್ಶೆ ಇಂಥ ಕವಿಗಳ ಕಡೆಗೆ ಯಾವ ಗಮನವನ್ನೂ ನೀಡದೆ ಉಳಿದಿದೆ.

ಆದರೆ ಭೀಮನಗೌಡರ ಈ ಸಂಕಲನದ ಪ್ರತಿಯೊಂದು ಕವಿತೆಯೂ ಓದುಗನಿಗೆ ಒಂದಷ್ಟು ಕಾವ್ಯಾನುಭವವನ್ನು ನೀಡುತ್ತದೆ. ಆದರೆ ಕವಿತೆಗೆ ಸಹಜವಾದ ಲಯಗಾರಿಕೆ, ನಾದಗುಣ ಮುಂತಾದ ಗುಣಗಳ ಬಗ್ಗೆ ತಲೆಕೆಡಿಸಿಕೊಳ್ಳದೆ, ಚಿಂತನಾಲಯದ ಗದ್ಯವಾಗುವುದು ಇಲ್ಲಿನ ಕವಿತೆಗಳ ಲಕ್ಷಣ.

'ಮೃಗರಾಜ','ಗಲ್ಲಿಗೇರಿದವರು','ಕ್ರಾಂತಿ','ವರ್ತಮಾನ','ಹೋಮಾ ಎಂಬ ಪಕ್ಷಿ','ನಾ ಹೇಳುವ ಮನುಷ್ಯ'ಮುಂತಾದ ಬೇರೆ ಬೇರೆ ಕವಿತೆಗಳು ವಿಭಿನ್ನ ಆಶಯ ವಲಯಗಳನ್ನು, ಈ ಕವಿಯು ರೂಢಿಸಿಕೊಂಡ ಧಾಟಿಯಲ್ಲಿ ಶೋಧಿಸುತ್ತವೆ. ಇಲ್ಲಿನ ತಣ್ಣನೆಯ ರೋಷವು ಆತ್ಮೀಯವಾದ ಓದು, ಮರು ಓದುಗಳ ಮೂಲಕ, ನಮ್ಮ ಅಸಹಾಯಕತೆಯ ಅಭಿವ್ಯಕ್ತಿಯೂ ಆಗಿ ಕವಿಯೊಂದಿಗೆ ಸಂವಾದ ಸಾಧ್ಯವಾಗುತ್ತದೆ.

ಸಿ.ಪಿ.ರವಿಕುಮಾರ್ ಅವರ 'ದಂತಪಂಕ್ತಿ' ಕೆಲವು ಅರ್ಥಗಳಲ್ಲಿ, ಈಚೆಗೆ ಅಪರೂಪವಾಗುತ್ತಿರುವ ಮಾದರಿಯನ್ನು ಪ್ರತಿನಿಧಿಸುತ್ತದೆ. ನೂರಕ್ಕೆ ನೂರರಷ್ಟು ನಗರಜೀವನದ ಸೃಷ್ಟಿಯಾದ ಸಂವೇದನಶೀಲತೆಯು, ಹಲವು ಬಗೆಯ ಕವಿತೆಗೆ ಒಡ್ಡಿಕೊಳ್ಳುವುದರ ಪರಿಣಾಮವಾಗಿ ಇಲ್ಲಿನ ಕವಿತೆಗಳು ಸೃಷ್ಟಿಯಾಗಿವೆ. ತನ್ನನ್ನು ಅಮುಖ್ಯವಾಗಿ ಮಾಡುತ್ತಿರುವ ಕೃತಕ ನಾಗರಿಕತೆಯನ್ನೇ ಕೇಂದ್ರವಾಗಿಟ್ಟುಕೊಂಡು ಧ್ಯಾನಿಸುವ ಈ ಕವಿತೆಯು ವಿಷಾದ ಮತ್ತು ಸೃಜನೋತ್ಸಾಹಗಳ ಸಂಯೋಜನೆಯಾಗಿದೆ. ಏಕೆಂದರೆ ಕವಿತೆಯಲ್ಲಿ ಅಭಿವ್ಯಕ್ತಿ ನೀಡಿದಾಗ ಬಿಡುಗಡೆ ಪಡೆಯುವ ವಿಷಾದಕ್ಕೆ ತಾಳಿಕೆಯ ಗುಣವಿದೆ. ಈ ಸಂಕಲನದ ಕವಿತೆಗಳಲ್ಲಿ ಸ್ವವಿಮರ್ಶೆಯೂ ಧಾರಾಳವಾಗಿದೆ.

'ಆಲಿದೂಲ','ಮೆರವಣಿಗೆ','ಶೋಧ','ಭೂತ' ಮುಂತಾದವು ಇಲ್ಲಿನ ಮುಖ್ಯ ಕವಿತೆಗಳು. ತನ್ನ ಸುತ್ತಲಿನ ಸಮಾಜದಲ್ಲಿ ನಡೆಯುತ್ತಿರುವ ಹೋರಾಟಗಳನ್ನು ಕಾಳಜಿಯಿಂದ ಆದರೂ ನಿರ್ಲಿಪ್ತವಾಗಿ ನೋಡುತ್ತಿರುವ ಈ ಕವಿಗೆ, ಸ್ವತಃ ಹೋರಾಟಗಾರರು ಹೇಳಲು ಹಿಂಜರಿಯಬಹುದಾದ ಕೆಲವು ಸತ್ಯಗಳು ಗೋಚರವಾಗುತ್ತವೆ:

''ಕಿವಿ ತಮಟೆಯನೊಡೆವ ಹಾಗೆ
ಮಡಿಕೆಯೊಳಗೆ ಕುಣಿವ ಹಣ
ಕುಣಿವ ನಾನು, ಕುಣಿವ ನೀವು
ಕುಣಿವ ಇಡೀ ಜನಗಣ''(ಪುಟ೧೧)

''ಒಂದಾಗಿ ಕೇಳುವ ಘೋಷಣೆಯಲ್ಲಿ
ಎಷ್ಟೊಂದು ಒಡಕುಸ್ವರಗಳು
..................................................
ಹಸಿವೊಂದೇ ಸಮಾನಾಂಶ''(ಪುಟ೨೫)

ಈ ಕವಿಗೆ ಕವಿತೆಯ ಪರಿಕರ, ಪರಿಚಯಗಳೆರಡೂ ಇವೆ. ಸಾಮಾಜಿಕ ವಿಷಮತೆಗಳ ಆಚೆಯಿಂದ ಆವರಿಸಿಕೊಂಡು ಎಲ್ಲ ಬಗೆಯ, ಎಲ್ಲರ ಬದುಕನ್ನೂ ಅಂತಿಮವಾಗಿ ಬದಲಾಯಿಸುತ್ತಿರುವ ಬಂಡವಾಳಶಾಹಿಯ ತಂತ್ರಜ್ಞಾನದ ಅರಿವು ಇದೆ. ಇದೆಲ್ಲದರ ನಡುವೆ ಸೊನ್ನೆಯಾಗುತ್ತಿರುವ ಭಾವಲೋಕದ ತಿಳಿವಳಿಕೆ ಇದೆ. ಆದರೆ ಇದೆಲ್ಲ ಮಹತ್ವದ ಕವಿತೆಯಾಗಬೇಕಾದರೆ, ಬರವಣಿಗೆಯು ಹವ್ಯಾಸವಾಗಿ ಉಳಿಯದೆ, ಗಾಢವಾದ ವ್ಯಸನವಾಗಬೇಕು. ಅಂತಹ ತೊಡಗುವಿಕೆಯಿಂದ ರವಿಕುಮಾರ್ ಮಹತ್ವದ್ದನ್ನು ನೀಡಲು ಸಮರ್ಥವಾಗಬಹುದು.

'ಹಕ್ಕಿ ಪಲ್ಟಿ'ಮತ್ತು'ಸುಮ್ಮನಿರುವ ಸುಮ್ಮಾನ'ಗಳ ಮೂಲಕ ಈಗಾಗಲೇ ತಮ್ಮ ಅನನ್ಯತೆಯನ್ನು ರುಜುವಾತು ಮಾಡಿರುವ ಎಸ್.ಮಂಜುನಾಥ ಅವರ 'ಬಾಹುಬಲಿ' ಕನ್ನಡ ಕವಿತೆಯ ವಿಶಿಷ್ಟ ಆಯಾಮವೊಂದನ್ನು ಅವರು ನಿರ್ವಹಿಸುತ್ತಿರುವುದಕ್ಕೆ ಸಾಕ್ಷಿಯಾಗಿದೆ. ಘಟನೆಗಳು ಹಾಗೂ ವಸ್ತುಗಳನ್ನು ಸಾಮಾಜಿಕತೆ ಹಾಗೂ ಐತಿಹಾಸಿಕತೆಗಳ ನೆಲೆಯಿಂದ ಮಾತ್ರ ಪರಿಶೀಲಿಸುವ ಬದಲು, ಕೇವಲ'ಅವುಗಳಿಗಾಗಿ',ಮನುಷ್ಯನ ಪ್ರಜ್ಞೆಯೊಳಗೆ ಅವು ಮೂಡಿಸುವ ಪ್ರತಿಕ್ರಿಯೆಗಳಿಗಾಗಿ ಶೋಧಿಸುವುದು ಮಂಜುನಾಥ್ ಅವರ ವಿಧಾನ. ಹೀಗಾದಾಗ ಸಮಾಜ ಮತ್ತು ಇತಿಹಾಸಗಳು ಕವಿತೆಗೆ ಬಾಹಿರವಾಗದೆ ಅದರೊಳಗಿಂದಲೇ ಮೂಡಿಬರುತ್ತವೆ. ಹಾಗೆ ನೋಡಿದರೆ ಇಂಥ ಪ್ರತಿಕ್ರಿಯೆಗಳು ಸಂವಹನದ ಯಾವುದೇ ಸಮಸ್ಯೆಯನ್ನು ಹುಟ್ಟಿಸದೆ ಓದುಗನಲ್ಲಿ ಬದುಕನ್ನು ನೋಡುವ ಹೊಸ ಬಗೆಗಳನ್ನು ಸ್ಫುರಿಸುತ್ತವೆ. ಇದು ಯಾವುದೇ ಒಳ್ಳೆಯ ಕವಿತೆ ಮಾಡುವ ಮುಖ್ಯ ಕೆಲಸ.

ಇನ್ನೊಂದು ಮಹತ್ವದ ಸಂಗತಿಯೆಂದರೆ, ಮಂಜುನಾಥರು'ಮಾಧ್ಯಮ'ದ ಬಗ್ಗೆ ಹೊಂದಿರುವ ತಿಳುವಳಿಕೆ ಮತ್ತು ಭಾಷಿಕ ಹಾಗೂ ಭಾಷೇತರ ಲಯವೈವಿಧ್ಯವನ್ನು ರೂಢಿಸಿಕೊಳ್ಳುವುದರ ಬಗ್ಗೆ ಅವರಿಗಿರುವ ಕಾಳಜಿಗಳು. ಇದು ಕನ್ನಡ ಕಾವ್ಯಪರಂಪರೆಯ ನಿಕಟಪರಿಚಯದಿಂದ ಮೂಡಿರುವ ಪರಿಣತಿ. ಅಷ್ಟೇ ಅಲ್ಲ, ತನ್ನದೇ ಕವಿತೆಯ ಸ್ವರೂಪದ ಬಗೆಗಿನ ಅಸಮಾಧಾನವೂ ಅವರನ್ನು ಹೊಸ ಹೊಸ ಪ್ರಯೋಗಗಳಿಗೆ ಪ್ರೇರಿಸುತ್ತದೆ.

ಇಂಥ ಕವಿತೆಗಳನ್ನು ಕೇವಲ ಸೌಂದರ್ಯದ ಸೃಷ್ಟಿಯೆಂದು ನಿರಾಕರಿಸುವುದು ತಪ್ಪಾಗುತ್ತದೆ. ಹಾಗೆ ನೋಡಿದರೆ ಅದು ಸತ್ಯದ ಸೃಷ್ಟಿ. ಆ ಸತ್ಯವು ಹಳೆಯದುದರ ಬಗ್ಗೆ ಹೊಸದೊಂದು ಹೊಳಹನ್ನು ಕೊಡುವಂಥದು. ಇವರ ಕವಿತೆ ಇಂಥದೇ ಕೆಲಸದಲ್ಲಿ ತೊಡಗುವ ತಿರುಮಲೇಶ್, ಬಾಲಬೋಧದ ಬೇಂದ್ರೆ, ಮತ್ತು ರಾಮಾನುಜನ್ ಅವರ ಬರಹಕ್ಕಿಂತ ಭಿನ್ನವಾಗುತ್ತದೆ. ಏಕೆಂದರೆ ಇಲ್ಲಿ ಅತ್ಯಂತ ತೀವ್ರವಾದ ಭಾವನೆಗಳು ಕವಿತೆಯನ್ನು ಕೇವಲ ವೈಚಾರಿಕ ಕುತೂಹಲವಾಗದಂತೆ ನೋಡಿಕೊಳ್ಳುತ್ತವೆ. ಆದರೆ ಭಾಷೆಯನ್ನು ಲೋಲುಪವಾಗದೆ ಬಳಸುವ ರೀತಿಯು, ಕವಿತೆಗಳು ಭಾವುಕವಾಗದಂತೆ ನೋಡಿಕೊಳ್ಳುತ್ತದೆ. ನಿಸ್ಸಂದೇಹವಾಗಿ ಇದು ಒಂದು ಕಡೆ ಚೈನೀ, ಜಪಾನೀಸ್ ಮುಂತಾದ ಅಭಿವ್ಯಕ್ತಿ ವಿಧಾನಗಳ ಹಾಗೂ ಇನ್ನೊಂದು ಕಡೆ ವಚನಗಳ ಅರ್ಥ [illegible] [illegible] [illegible]ತೆ.

ಇಂಥ ಕವಿತೆಗಳ ಓದಿನಲ್ಲಿ ತೊಡಗಿಕೊಂಡಾಗ ಉಂಟಾಗುವ ಒಂದು ಸಮಸ್ಯೆಯೆಂದರೆ ಕವಿಯ ಒಟ್ಟು ತಾತ್ವಿಕತೆಯ ಅನುಪಸ್ಥಿತಿ. ತನ್ನದೊಂದು ವ್ಯಾಖ್ಯಾನ ಅನಗತ್ಯವೆನ್ನುವಷ್ಟು ಮಟ್ಟಿಗೆ ವಸ್ತುಲೀನವಾದ ಕವಿಯ ವ್ಯಕ್ತಿತ್ವ ಗೌಣವಾಗಿಬಿಡುತ್ತದೆ. ಮಂಜುನಾಥರ ಕವಿತೆ ರೆಟೊರಿಕ್ ಅನ್ನು ನಿಯತ ಲಯಗಳನ್ನು ತಾನಾಗಿಯೇ ಬಿಟ್ಟುಕೊಡುವುದರಿಂದ ಹುಟ್ಟಿದೆ. ಈ ಕಾರಣಗಳಿಂದಲೇ ಸುದೀರ್ಘವಾದ ಕವಿತೆಗಳನ್ನು ಬರೆಯುವ 'ಚಪಲ'ಕವಿಯನ್ನು ಬಾಧಿಸಿಲ್ಲ. ಆದರೆ ಇಂಥ ದೀರ್ಘ ಕವಿತೆಯ ಸೃಷ್ಟಿ ಎಲ್ಲ ಸಂದರ್ಭಗಳಲ್ಲೂ ಚಪಲತೆಯೇ ಆಗಬೇಕೆಂದಿಲ್ಲ. ಶಿವಪ್ರಕಾಶ್‌ರ ಕವಿತೆಗಳಲ್ಲಿ ಆಗುವುದಕ್ಕಿಂತ ಭಿನ್ನವಾದ ಬಗೆಯಲ್ಲಿ, ಆದರೂ ಮನಸ್ಸನ್ನು ವಸ್ತು ವಿಷಯಗಳ ವಿಭಿನ್ನ ಆಯಾಮಗಳಲ್ಲಿ ತೊಡಗಿಸಿಕೊಳ್ಳುವ ಪ್ರಯತ್ನವನ್ನು ಮಂಜುನಾಥರು ಮಾಡಬಹುದೆಂದು ತೋರುತ್ತದೆ. ಹಾಗೆ ನೋಡಿದರೆ ಕವಿಯು ಬೆನ್ನುಡಿಗಾರರಾಗಿ ಆರಿಸಿಕೊಂಡಿರುವ ಪು.ತಿ.ನ.ಅವರು ತಮ್ಮ ಕವಿತೆಯಲ್ಲಿ ಇಂತಹ ಕೆಲಸವನ್ನು ಮಾಡಿದ್ದಾರೆ. ಮಂಜುನಾಥರ ಕವಿತೆಯ ಸ್ವರೂಪ ಹಾಗೂ ಶಕ್ತಿಗಳನ್ನು ಬಹಳ ಸುಂದರವಾದ ಪ್ರತಿಮೆಯೊಂದರಲ್ಲಿ ಹಿಡಿದಿರುವ ಕವಿತೆಯೊಂದನ್ನು ಇಲ್ಲಿ ಗಮನಿಸಬಹುದು:

**ಆಗುಹೋಗಿನ ಬೆರಗು**

ಬರಲು ಬರಲಾದ ಮರದ ಬೆರಳುಗಳು
ಸುತ್ತಿಸುತ್ತಿವೆ ಗೊರವಂಕವನು
ಹಕ್ಕಿ ಟೊಂಗೆಯ ಮುಟ್ಟಿ ಲೀನವಾಗುವುದು
ಟೊಂಗೆ ಹಕ್ಕಿಯ ಬಿಟ್ಟು ಬಿಡಿಸಿಡುವುದು
ಆಗುಹೋಗಿನ ಬೆಡಗು ಮೂಡುತ್ತಿರುವುದು

ಹೀಗೆ, ಅರ್ಥದ ವಲಯಗಳನ್ನು ಹಿಗ್ಗಿಸಬಲ್ಲ ಅನೇಕ ಕವಿತೆಗಳಿಂದ 'ಬಾಹುಬಲಿ'ಕೇವಲ ಭರವಸೆಯನ್ನು ಮೂಡಿಸುವುದಿಲ್ಲ, ಸಾಧನೆಯನ್ನು ಮಾಡಿದೆ.

ವಿಶೇಷವಾದ ಮಹತ್ವಾಕಾಂಕ್ಷೆಯಿಲ್ಲದೆ, ತಾನು ಕಂಡುಕೊಂಡ ಕಿರುದಾರಿಯಲ್ಲಿ, ತನಗೆ ಸಾಂತ್ವನ ನೀಡುವ ಸ್ವಗತದ ಧಾಟಿಯಲ್ಲಿ ಬರೆದುಕೊಂಡು ಹೋಗುತ್ತಿರುವ ಎಸ್.ಜಿ. ಸ್ವಾಮಿಯವರ ನಾಲ್ಕನೆಯ ಸಂಕಲನವಾದ 'ಕಿಚ್ಚಿಲ್ಲದ ಬೇಗೆ'ಸಾಮಾಜಿಕ ಆಕ್ರೋಶವೇ ಮೂಲಪ್ರೇರಣೆಯಾದ ಕವಿತೆಗಿಂತ ಭಿನ್ನವಾಗಿದೆ. ವೈಯಕ್ತಿಕವಾದ ಅನುಭವಗಳನ್ನು ಕವಿತೆಯಾಗಿಸುವ ಸವಾಲಿಗೆ ಈ ಕವಿ ಕಂಡುಕೊಂಡಿರುವ ಉತ್ತರ ಮಾಧ್ಯಮದ ಬಗೆಗಿನ ಗಾಢವಾದ ಕಾಳಜಿ, ಪ್ರಯೋಗಶೀಲತೆಯಿಂದ ಹುಟ್ಟಿದುದಲ್ಲ. ಮುಖ್ಯವಾಗಿ ಅವರ ಕವಿತೆ ಉಪಮೆ, ರೂಪಕಗಳ ಮೂಲಕ ವ್ಯಕ್ತವಾದ ಭಾವನೆಗಳ ಗೊಂಚಲು. ಈ ಭಾವನೆಗಳಾದರೋ ತಮಗೆ ಪ್ರೇರಣೆ ನೀಡಿರಬಹುದಾದ ಅನುಭವಗಳನ್ನು ಸಾಮಾನ್ಯೀಕರಿಸಿಕೊಂಡು, ವ್ಯಕ್ತವಾದವು. ಕವಿತೆ ಬಳಸುವ ಆಲಂಕಾರಿಕ ಪರಿಕರಗಳು ಕವಿತೆಯ ಸಂದರ್ಭದಲ್ಲಿ ಹೊಸದೇ ಹೊರತು ಕಲ್ಪನಾಶಕ್ತಿಯ ಬಲದಿಂದ ಮೂಡಿಬಂದ ನೂತನ ಸೃಷ್ಟಿಗಳಲ್ಲ.

ಹನಿಗವಿತೆಗಳ ಸಂಕಲನದಿಂದ ಸಾಕಷ್ಟು ಹೆಸರುಪಡೆದ ಈ ಕವಿ ಆ ಮಾದರಿಯನ್ನು ಇಲ್ಲಿ ಕೊಂಚ ವಿಸ್ತರಿಸಿದ್ದಾರೆ. ಇಲ್ಲಿನ ನಲವತ್ತು ಕವಿತೆಗಳಲ್ಲಿ ಒಂದು ಪುಟದ ಗಡಿ ದಾಟುವುದು ಐದೋ ಆರೋ ಮಾತ್ರ. ಈ ಕವಿತೆಗಳ ಕೇಂದ್ರವೆಂದರೆ ವಿಷಾದ ಅಥವಾ ವ್ಯಂಗ್ಯ. 'ಕುದುರೆಮೋತಿ'ಯು'ಅಶ್ವಮುಖಿ' ಯಾಗುವ ಬದಲಾವಣೆ ಸ್ವಾಮಿಯವರ ಕವಿತೆಯ ವಿಧಾನಕ್ಕೆ ಹಿಡಿದ ಕನ್ನಡಿ. ಬಹುಪಾಲು ಕವಿತೆಗಳು ಕವಿಯ ಹೃದಯಕ್ಕೆ ಹಿಡಿದ ಕನ್ನಡಿಯಾಗುತ್ತವೆ, ಅಷ್ಟೆ. ಈ ಕವಿಯ ಮನಃಸ್ಥಿತಿಯ ಪ್ರಬುದ್ಧತೆಯ ಮೇರೆಯನ್ನು ಮೀರದ ಓದುಗರಿಗೆ ಒಂದು ಕ್ಷಣ'ಆಹಾ, ಅಯ್ಯೋ'ಎನಿಸುವುದರ ಆಚೆಗೆ ಇವುಗಳ ಹರಹು ಇಲ್ಲ. ವ್ಯಾನ್‌ಗೋ ಮೇಲೆ ಬರೆದ ಕವಿತೆಯನ್ನು ಹೊರತು ಪಡಿಸಿದರೆ ಇತರ ವ್ಯಕ್ತಿಕೇಂದ್ರಿತ ಕವಿತೆಗಳು ಒಪ್ಪಿಗೆ, ಮೆಚ್ಚಿಗೆಗಳನ್ನು ಭಾವಮಯವಾಗಿ ಹೇಳಿ ವಿರಮಿಸುತ್ತವೆ. ಸ್ವಾಮಿಯವರ ಹತ್ತು ಹಲವು ಆಸಕ್ತಿಗಳಲ್ಲಿ ಕವಿತೆ ಒಂದು ಮಾತ್ರ ಆಗಿರುವುದು ಒಂದು ಮಿತಿ. ಯಾರೋ ಸರಿಯಾಗಿ ಹೇಳಿದ ಹಾಗೆ ಕವಿತೆ ಬಹು ಹೊಟ್ಟೆಕಿಚ್ಚಿನ ಪ್ರೇಯಸಿ.

ಸರಜೂ ಕಾಟ್ಕರ್ ಅವರ ನಾಲ್ಕನೆಯ ಸಂಕಲನವಾದ 'ಏಕಾಂತದ ಮನುಷ್ಯ'ಬಂಡಾಯ ಚಳುವಳಿಯ ಕುತೂಹಲಕಾರಿಯಾದ ಕವಲು. ಇಂಥ ಮಾದರಿಯನ್ನು ತಮ್ಮದಾಗಿಸಿಕೊಂಡ ಅನೇಕ ಕವಿಗಳು, ಕವಿತೆಯ ರಚನೆಯೆಂಬ ಪ್ರಕ್ರಿಯೆಯಿಂದಲೇ ಪಡೆಯುವ ಬಿಡುಗಡೆಯ ಭಾವನೆ ಹಾಗೂ ಆತ್ಮವಿಶ್ವಾಸ ಅಸಾಮಾನ್ಯವಾದುದು;ಅಪೇಕ್ಷಣೀಯವಾದುದು. ಅಕ್ಷರವಂಚಿತ ಸಮುದಾಯಕ್ಕೆ ತಾನು ಆಚರಿಸುತ್ತಲೇ ಬಂದ ಮಾನವೀಯ ಆಶಯಗಳ ಬಗೆಗೆ ಮಾತನಾಡುವ ಅವಕಾಶ ಸಿಗುವ ಕ್ಷಣ ಹಲವು ಸಾಧ್ಯತೆಗಳನ್ನು ಹುಟ್ಟಿಸುತ್ತದೆ. ಈ ಸಂಕಲನದ ಹಲವು ಕವಿತೆಗಳು ವೈಯಕ್ತಿಕ ಸಂಬಂಧಗಳು ಹಾಗೂ ಅನುಭವಗಳ ಚೌಕಟ್ಟಿನೊಳಗೇ ಇದ್ದುಕೊಂಡು ಹೊರಜಗತ್ತನ್ನು ಒಳಗೊಳ್ಳುತ್ತವೆ. ಸಾಮಾನ್ಯೀಕೃತ ಹೇಳಿಕೆಗಳ ನೆಲೆಯಿಂದ ಬಹಳಷ್ಟು ದೂರಬಂದಿರುವ ಕಾಟ್ಕರ್ ಅವರಂತಹ ಕವಿಗಳು ದಿಟವಾದುದನ್ನು ಸುಂದರವಾಗಿ ಹೇಳುವ ಕೆಲಸದಲ್ಲಿ ಸಾಕಷ್ಟು ಪರಿಣತರಾಗಿದ್ದಾರೆ. ಏಕಾಂತದ ದಾರಿಯಲ್ಲಿ ಲೋಕಾಂತವಾಗುವ ಅನಿವಾರ್ಯತೆಯೂ ಅವರಿಗೆ ಅಪರಿಚಿತವಲ್ಲ. ಇಲ್ಲಿನ ಹಲವು ಕವಿತೆಗಳು ತಮ್ಮಷ್ಟಕ್ಕೆ ತಾವು ಮನಮುಟ್ಟುತ್ತವೆ. ಆದರೆ ಮಹತ್ವದ ಕವಿತೆಯನ್ನು ಬರೆಯಬಯಸುವ ಕವಿಯು ತನ್ನ ಸಮುದಾಯದ ಇತಿಹಾಸದೊಂದಿಗೆ ಮುಖಾಮುಖಿಯಾಗುವಂತೆಯೇ, ತನ್ನ ಭಾಷೆಯ ಕವಿತೆಯ ಇತಿಹಾಸದೊಂದಿಗೆ ಅರ್ಥಪೂರ್ಣ ಸಂಪರ್ಕವನ್ನು ಬೆಳೆಸಿಕೊಳ್ಳುವುದೂ ಅನಿವಾರ್ಯವಾಗುತ್ತದೆ. ಇದು ಹಿರಿಯ ಕವಿಗಳ ಕಾವ್ಯವನ್ನು ಕೇವಲ ಓದುವುದರಿಂದ ಸಾಧ್ಯವಾಗದಿರಬಹುದು. ಬದಲಾಗಿ ಪಂಪ, ಅಲ್ಲಮರಿಂದ ಹಿಡಿದು ನೆನ್ನೆ ಮೊನ್ನೆಯವರೆಗಿನ ಕವಿತೆಯನ್ನು ತನ್ನ ಒಳಗುಮಾಡಿಕೊಂಡು ಅದರೊಂದಿಗೆ ಗುದ್ದಾಡಿ ಹೊರಬರಬೇಕಾಗುತ್ತದೆ. ಇಲ್ಲವಾದರೆ ಇದೇ ಇತಿಹಾಸವನ್ನು ಸಾಂಕೇತಿಕವಾಗಿ ಬಚ್ಚಿಟ್ಟುಕೊಂಡಿರುವ ಸಮುದಾಯದ ಭಾಷೆಯ ಜೊತೆಗೆ ಸಂವಹನದ ಸೇತುವೆಗಳನ್ನು ಕಟ್ಟಿಕೊಂಡು ಅದರ ಮೂಲಕ 'ನಿಜ'ವಾಗಬೇಕಾಗುತ್ತದೆ. ತಾನು ಇವೆರಡನ್ನು ಮಾಡಲಾರೆನೆನ್ನುವ ಕವಿಗಿರುವ

ಮಹತ್ವಾಕಾಂಕ್ಷೆಯ ಕೊರತೆಯೇ ಅವನ ಸೆರೆಮನೆಯಾಗಿಬಿಡುತ್ತದೆ. ಅವನು ತನ್ನ ಕವಿತೆಯನ್ನು ಬರೆಯುತ್ತಿರುತ್ತಾನೆ. ಅದು ಕನ್ನಡದ ಕವಿತೆ ಆಗಿರುವುದಿಲ್ಲ. ಮುಖ್ಯ ಮಾತೆಂದರೆ ತನ್ನ ಪೂರ್ವಿಕರ ಕವಿತೆಯ ಬಗ್ಗೆ ಚಳುವಳಿಯೊಂದು ಮೂಡಿಸುವ ಅನಾದರ. ಅದರ ಶಕ್ತಿಯಾಗಿರುವಂತೆಯೇ ಆ ಅನಾದರವನ್ನು ಅಕ್ಷರಶಃ ಮೈಗೂಡಿಸಿಕೊಂಡ ಕವಿಗಳ ಮಿತಿಯಾಗಿಬಿಡುತ್ತದೆ.

ಕನ್ನಡ ಮಾತ್ರವಲ್ಲದೆ ಮರಾಠೀ ಮುಂತಾದ ಇತರ ಭಾಷೆಗಳ ಪರಿಚಯವೂ ಇರುವ ಸರಜೂ ಅವರಿಗೆ ಅನೇಕ ಸೃಜನಶೀಲ ಸಾಧ್ಯತೆಗಳಿವೆ. ಸವಕಲಾದ ಗಾಡಿಜಾಡನ್ನು ಬಿಟ್ಟು ಬರೆಯುವ 'ರಿಸ್ಕ್'ಅನ್ನೂ ಅವರು ಈ ಕವಿತೆಗಳಲ್ಲಿ ತೆಗೆದುಕೊಂಡಿದ್ದಾರೆ. ಗಜಲ್‌ಗಳಿಗೆ ಸಹಜವಾದ ನಾದಮಯತೆಯನ್ನು ಅಲ್ಲದಿದ್ದರೂ, ಭಾವನಾತ್ಮಕತೆ ಹಾಗೂ ಅರ್ಥದ ಚಮತ್ಕಾರಗಳನ್ನು ಇಲ್ಲಿನ ಅನೇಕ ಕವಿತೆಗಳು ಪಡೆದುಕೊಂಡಿವೆ. ಕವಿತೆ ಮತ್ತು ಸಾಮಾಜಿಕತೆಗಳ ಅರ್ಥಪೂರ್ಣ ಸಂಯೋಜನೆಯ ಒಟ್ಟು ಕೆಲಸದಲ್ಲಿ ಈ ಕವಿಯಿಂದ ಮಹತ್ವದ್ದನ್ನು ನಿರೀಕ್ಷಿಸಬಹುದೆನ್ನುವ ಭರವಸೆಯನ್ನು ''ಏಕಾಂತದ ಮನುಷ್ಯ' ಕೊಡುತ್ತದೆ.

೧೯೯೩ರ ಪ್ರಮುಖ ಸಂಕಲನಗಳಲ್ಲಿ ಎಸ್.ಜಿ.ಸಿದ್ಧರಾಮಯ್ಯನವರ 'ಅವಳಿದೆಯ ಜಂಗಮ'ಸೇರುತ್ತದೆ. ಇದು ಕವಿಯ ಮೂರನೆಯ ಸಂಕಲನವಾಗಿದ್ದು ಮೂವತ್ನಾಲ್ಕು ಕವಿತೆಗಳನ್ನು ಒಳಗೊಂಡಿದೆ. ಸಹಜವಾದ ಕಾವ್ಯ ಶಕ್ತಿ, ವಿಶಿಷ್ಟವಾದ ಗ್ರಾಮೀಣ ಹಾಗೂ ಜಾನಪದ ಹಿನ್ನೆಲೆ, ಆ ಹಿನ್ನೆಲೆಯಿಂದ ದತ್ತವಾದ ವಸ್ತುವಿವರಗಳು ಹಾಗೂ ಭಾಷಿಕ ವಿವರಗಳನ್ನು ಕವಿತೆಯಲ್ಲಿ ಬಳಸಿಕೊಳ್ಳುವ ಧೈರ್ಯ ಮತ್ತು ಖಚಿತವಾದ ವೈಚಾರಿಕ ನೆಲೆಗಳು ಅವರ ಕವಿತೆಯ ಶಕ್ತಿಕೇಂದ್ರಗಳಾಗಿವೆ. ಈ ಗುಣಗಳ ಜೊತೆಗೆ ಕನ್ನಡ ಕವಿತೆಯ ಪರಂಪರೆಯ ನಿಕಟವಾದ ಪರಿಚಯವೂ ಅವರಿಗಿದೆ. ಈ ಗುಣಗಳ ಸಂಯೋಜನೆಯಿಂದ ಅವರು ಅನೇಕ ಒಳ್ಳೆಯ ಕವಿತೆಗಳನ್ನು ರಚಿಸಿದ್ದಾರೆ.

ಆದರೆ ಕನ್ನಡ ಕವಿತೆಯ ಇತ್ತೀಚಿನ ಚರಿತ್ರೆಯ ನೆಲೆಯಿಂದ ನೋಡಿದಾಗ, ಅವರು ಕೆಲವು ಇಕ್ಕಟ್ಟುಗಳನ್ನು ಅನುಭವಿಸಬೇಕಾಗಿ ಬಂದಿದ್ದು ಹಾಗೂ ಅದರ ಪರಿಣಾಮವಾಗಿ ತಮ್ಮ ಕವಿತೆಯ ಸೆಲೆಯನ್ನು ಕ್ಷೀಣಗೊಳಿಸಿಕೊಂಡಿದ್ದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ದಲಿತ-ಬಂಡಾಯ ಕವಿಗಳು ಬಂದಿರುವ ಹಿನ್ನೆಲೆಯಿಂದಲೇ ಬಂದಿದ್ದರೂ ಅವರ ಹಾಗೆ ಬರೆಯದ, ನವ್ಯದ ಏರುವೆಯ ದಿನಗಳಲ್ಲಿ ಬರೆಯತೊಡಗಿದರೂ ಅದಕ್ಕಿಂತ ಭಿನ್ನವಾದ 'ಲಯ'ಗಳನ್ನು ರೂಢಿಸಿಕೊಂಡ ಸಿದ್ಧರಾಮಯ್ಯನವರು, ತಮ್ಮ ಹಿನ್ನೆಲೆಯ ವಿವರಗಳನ್ನು ಹೇರಳವಾಗಿ ಬಳಸಿಕೊಂಡರೂ ಅವರ ಕವಿತೆಯ ಪ್ರಮುಖ ಆಸಕ್ತಿಯು ವೈಯಕ್ತಿಕ ಅನುಭವಗಳ ಶೋಧನೆಯೇ ಆಗಿದೆ. ಎಂದರೆ ಇವರು ಸಾಮುದಾಯಿಕವಾದ ನುಡಿಗಟ್ಟಿನಲ್ಲಿ ವ್ಯಕ್ತಿ ಕೇಂದ್ರಿತವಾದ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಾರೆ.

ಜಾನಪದ ಕಥನ ಮಾರ್ಗವನ್ನು ವಿಫುಲವಾಗಿ ಬಳಸಿಕೊಳ್ಳುವ ಈ ಕವಿಯ ವಿಶ್ಲೇಷಣೆಗೆ ಒಳಪಡಿಸುತ್ತಿರುವುದು ಆಧುನಿಕ ಜೀವನವನ್ನೇ ಆಗಿದೆ. ಇವೆರಡರ

ನಡುವಿನ ಕರ್ಷಣದಲ್ಲಿ ಅವರ ಕವಿತೆಯ ಸೋಲು ಗೆಲುವುಗಳು ನಿರ್ಧಾರಿತವಾಗುತ್ತವೆ. ಸಮಕಾಲೀನ ಕಾಳಜಿಗಳು ಅಭಿವ್ಯಕ್ತಿ ಪಡೆಯುವ ಕೆಲಸ ಇವರಲ್ಲಿ ಮತ್ತೆಮತ್ತೆ ನಡೆಯುವುದಾದರೂ ಅವನ್ನು ಎಲ್ಲರಿಗೂ ಅರ್ಥವಾಗುವಂತೆ ಸಂವಹನ ಮಾಡಬೇಕೆಂಬ ಒತ್ತಡ ಇಲ್ಲಿಇಲ್ಲ. ಏಕೆಂದರೆ ಕವಿತೆಯಂತಹ ಪ್ರಕಾರವು ಈಗ ತನ್ನ ಮಹತ್ವವನ್ನು ಕಳೆದುಕೊಂಡಿದೆ, ಕೇವಲ ಅಲ್ಪಸಂಖ್ಯಾತ ಸಹೃದಯರ ಆಸಕ್ತಿಯ ಕ್ಷೇತ್ರವಾಗಿದೆ. ಈ ವಾಸ್ತವಪ್ರಜ್ಞೆಯೇ ಹುಸಿ ಹೇಳಿಕೆಗಳನ್ನು ಕೃತಕ ಆವೇಶಗಳನ್ನು ಹೊರಗಿಟ್ಟಿದೆ.

ಅದಲ್ಲದೆ ಭಾವಗೀತಾತ್ಮಕತೆ ಸಿದ್ಧರಾಮಯ್ಯನವರ ಕವಿತೆಯಲ್ಲಿ ಸಹಜವಾಗಿಯೇ ಮೂಡಿಬಂದಿದೆ. ಇದು ಮತ್ತು ನಿಯತ ಲಯ ವಿನ್ಯಾಸ ಅವರ ಬರವಣಿಗೆಯನ್ನು ಮಾಮೂಲು ನವ್ಯಕ್ಕಿಂತ ಭಿನ್ನವಾಗಿಸಿದೆ. ಗದ್ಯತೆ ಅವರಿಗೆ ಹಿಡಿಸದ ಗುಣ.

ಒಂದು ಗಮನೀಯವಾದ ಸಂಗತಿಯೆಂದರೆ ಸಿದ್ಧರಾಮಯ್ಯನವರ ಕವಿತೆಯು ಕೆಲವು ಕೇಂದ್ರರೂಪಕಗಳನ್ನು ಆರಿಸಿಕೊಂಡು ಬೇರೆ ಬೇರೆ ಕವಿತೆಗಳಲ್ಲಿ ಅದನ್ನು ದುಡಿಸಿಕೊಳ್ಳುವುದು. 'ಕೊಳಲು', 'ತಾಯಿಗಾಗಿ ಹುಡುಕುವ ಪಯಣ', 'ವ್ಯಾಸ-ಪರಾಶರ' ಮುಂತಾದ ಪ್ರತಿಮೆಗಳ ಅಧ್ಯಯನವು ಮಹತ್ವದ ಒಳನೋಟಗಳನ್ನು ನೀಡಬಲ್ಲುದು.

'ಅವಳಿದೆಯ ಜಂಗಮ'ದ ವಿವರವಾದ ವಿಶ್ಲೇಷಣೆಗೆ ಇಲ್ಲಿ ಅವಕಾಶವಿಲ್ಲ. ಆದರೆ ಅದು ಈ ವರ್ಷ ಪ್ರಕಟವಾಗಿರುವ ಸಂಕಲನಗಳಲ್ಲಿ ತೀವ್ರವಾದ ಕುತೂಹಲವನ್ನು ಕೆರಳಿಸುವ ಒಂದೆರಡು ಕೃತಿಗಳ ಗುಂಪಿಗೆ ಸೇರುತ್ತದೆ.

ಹೊಸೂರು ಮುನಿಶಾಮಪ್ಪನವರ 'ಮಾದಾರ ತಾಯಿ' ಈ ವರ್ಷದ ಮತ್ತೊಂದು ಗಮನೀಯವಾದ ಸಂಕಲನ. ಸಾಮಾಜಿಕ ವಿಷಮತೆಯ ಫಲವಾದ ನೋವು ಕವಿತೆಯ ಅಂತರಂಗ-ಬಹಿರಂಗಗಳನ್ನು ವ್ಯಾಪಿಸುವ ಸೂಕ್ಷ್ಮ ಬಗೆಗಳಿಗೆ ಇದು ಇನ್ನೊಂದು ಮಾದರಿ.

ಹಲವು ಬಗೆಯ ಸಾಧ್ಯತೆಗಳನ್ನು ಹುಡುಕುವ ಪ್ರಯೋಗಶೀಲತೆ ಈ ಸಂಕಲನದ ಜೀವಾಳ. ಪ್ರಾದೇಶಿಕ ವಿವರಗಳು ಹಾಗೂ ಭಾಷಿಕ ನೆಲೆಗಳಿಂದ ಮೂಡುವ ಆಕೃತಿಗಳು ಈ ಸಂಕಲನದ ಒಂದು ನೆಲೆ. ತೆಲುಗು - ಕನ್ನಡ ಮಿಶ್ರಿತ ಶಬ್ದಕೋಶ, ಅದಕ್ಕಿಂತ ಹೆಚ್ಚಾಗಿ ಗ್ರಾಮೀಣ ಬದುಕಿನ ಪದಗಳ ಬಳಕೆಯಿಂದಲೇ ಕನ್ನಡ ಕವಿತೆಗೆ ಅಪರಿಚಿತವಾಗಿ ಉಳಿದಿದ್ದ ಜಗತ್ತನ್ನು ಪರಿಚಯಿಸುವುದು ಬಹಳ ಮುಖ್ಯ. ಸಾಮಾನ್ಯೀಕೃತವಾದ ಭಾಷೆಯಿಂದ ಸಾಧ್ಯವಾಗದ್ದು ಇಲ್ಲಿ ಸಾಧ್ಯವಾಗುತ್ತದೆ. ಹಿಂದೊಮ್ಮೆ ಡಿ.ಆರ್. ನಾಗರಾಜ್ ಅವರು ದಲಿತ ಕಾವ್ಯದಿಂದ ಕಾಣೆಯಾಗಿದೆಯೆಂದು ಹೇಳಿದ್ದ 'ದಲಿತಜಗತ್ತು' ಇವರ ಮತ್ತು ಇಂಥ ಕೆಲವರ ಕವಿತೆಯಲ್ಲಿ ಪ್ರತ್ಯಕ್ಷವಾಗುತ್ತಿದೆ.

ಈ ಸಂಕಲನದ ಮತ್ತೊಂದು ಕುತೂಹಲ ಸಂಗತಿಯೆಂದರೆ ಬೇಕೆಂದೇ ಒಡೆಯಲಾಗುವ ನಿಯತಲಯದ ಚೌಕಟ್ಟು. ತನ್ಮಯತೆಯ ಫಲವಾಗಿ

ಮಾಯವಾಗಬಹುದಾದ. ವಿಚಾರದ ಹರಿವನ್ನು ಮತ್ತೆ ಹುಟ್ಟಿಸಲು ಈ ಲಯಭಂಗಗಳು ನೆರವಾಗುತ್ತವೆ. ಅದೇ ರೀತಿಯಲ್ಲಿ ಶಿವಪ್ರಕಾಶ್ ಅವರು ಬೆನ್ನುಡಿಯಲ್ಲಿ ಸೂಚಿಸುವಂತೆ, ಛಂದಸ್ಸಿಗೆ ಮೀರಿದ ನಾದ ಪ್ರತಿಮೆಗಳನ್ನು ಕಟ್ಟುವ ಪ್ರಯತ್ನವೂ ಇಲ್ಲಿ ನಡೆದಿರಬಹುದು. ಎಂದರೆ ಅದು ಅಂಶಗಣದಿಂದ ಹುಟ್ಟಿವೆ. ಗೇಯತೆಯ ಸಂಗಾತಿಯಾದ ಜಾನಪದ ಲಯಗಳ ಮರುಹುಟ್ಟು. ಇಲ್ಲಿನ ಹಲವು ಕವಿತೆಗಳಲ್ಲಿ ಅದು ಸಾಧ್ಯವಾಗಿದೆ.

'ದಪ್ಪಾ ದೋ ದಮ್ಮಾ ದೋ', 'ಅಮ್ಮಾಡ ಅಪ್ಪಾಡ', 'ಬೋಯಿ' ಎಂಬ ಮೂರು ಕವಿತೆಗಳು ಮೇಲೆ ಹೇಳಿದ ಪರಿಕರಗಳ ಮೂಲಕ ವಿಶಿಷ್ಟ ಅನುಭವವನ್ನು ನೀಡುತ್ತವೆ. ಎಲ್ಲ ಕವನಗಳೂ ಐತಿಹಾಸಿಕತೆ ಹಾಗೂ ಸಾಮಾಜಿಕತೆಗಳನ್ನು ಮೈಗೂಡಿಸಿಕೊಂಡವು.

ಇದೇ ರೀತಿಯ ಪ್ರಯತ್ನವನ್ನು ಹೆಚ್ಚು ಪರಿಚಿತವಾದ ಶಿಷ್ಟಭಾಷೆಯ ನೆಲೆಯಲ್ಲಿ ಮಾಡುವಂಥ ಇನ್ನೊಂದು ಗುಂಪಿನ ಕವಿತೆಗಳೂ ಇಲ್ಲಿವೆ. 'ಗಂಗಾ ಮಾತಾಯಿ'. 'ಕಟಕ', 'ಕುಂಚ', 'ನಾನೆಂಬ ಅಹಂ' ಮುಂತಾದವು ಈ ಬಗೆಯವು. 'ರಂಗ' ದಂತಹ ಕವಿತೆ ಸ್ಪಷ್ಟವಾಗಿ ಎಡಪಂಥೀಯ ಕನಸುಗಳು 'ಕೋಕಕೋಲದ ಹೊಳೆ'ಯಲ್ಲಿ ಕೊಚ್ಚಿಹೋದ ಬಗೆಗಿನ ವಿಷಾದವನ್ನು ಹೇಳುತ್ತವೆ. ಉಳಿದ ಎಲ್ಲ ಕವಿತೆಗಳೂ ಒಂದಲ್ಲ ಒಂದು ಕಾರಣದಿಂದ ಗಮನ ಸೆಳೆಯುತ್ತವೆ.

ಕವಿಯು ಮುನ್ನುಡಿಯಲ್ಲಿ ಹೇಳಿಕೊಂಡಿರುವ ಕೆಲವು ಅರ್ಥಪೂರ್ಣ ಮಾತುಗಳೊಂದಿಗೆ ಈ ಪರಿಚಯುವನ್ನು ಮುಗಿಸಬಹುದು.

''ಕಾವ್ಯ ಬರೆಯಲು ಪ್ರಾರಂಭಿಸಿದಾಗ, ಕಾವ್ಯವನ್ನು ನನ್ನ 'ಬದ್ಧತೆಗೆ' ಬಗ್ಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೆ. ಮುಂದು ಸಾಗಿದಂತೆಲ್ಲಾ ಕಾವ್ಯವು ನನ್ನನ್ನು ಬಗ್ಗಿಸಿಕೊಳ್ಳತೊಡಗಿತು. ಕಲಿಸತೊಡಗಿತು.''

ಬಿ.ಚಿನ್ನಸ್ವಾಮಿಯವರ ಎರಡನೆಯ ಸಂಕಲನವಾದ 'ಗೋಧೂಳಿ'ಕೆಲವು ಒಳ್ಳೆಯ ಕವನಗಳನ್ನು ಒಳಗೊಂಡಿರುವುದರ ಜೊತೆಗೆ ದಲಿತ-ಬಂಡಾಯ ಕಾವ್ಯದ ಸಂದರ್ಭದಲ್ಲಿ ಒಂದೆರಡು ಹೊಸ ಸಾಧ್ಯತೆಗಳನ್ನು ಹುಡುಕುತ್ತದೆ. ಮೊದಲನೆಯದಾಗಿ ಅವರು ಕವಿತೆಯೊಳಗೆ ತಮ್ಮ ಬದುಕಿನಿಂದಲೇ ಆಯ್ದು ತೆಗೆದ ಭೌತಿಕವಿವರಗಳನ್ನು ಅಳವಡಿಸಿಕೊಳ್ಳುವುದರ ಮೂಲಕ, ಹೇಳಿಕೆಗಳ ನೆಲೆಯಿಂದ ದೂರ ಸರಿಯುತ್ತಾರೆ. ಏಕೆಂದರೆ ಅಧಿಕೃತವಾದ ಶಬ್ದ ಚಿತ್ರಣಕ್ಕೆ ತನ್ನದೇ ಆದ ಅನುರಣನಶಕ್ತಿಯಿರುತ್ತದೆ. ಕಥೆ-ಕಾದಂಬರಿಗಳನ್ನು ಬರೆಯುವವರು ದಲಿತಜಗತ್ತಿನ ಅನಾವರಣ ಮಾಡುವುದಕ್ಕಿಂತ ಭಿನ್ನವಾದ ರೀತಿಯಲ್ಲಿ ಕವಿತೆಯೂ ತನ್ನ ಸಾಧ್ಯತೆಗಳನ್ನು ಕಂಡುಕೊಳ್ಳುತ್ತದೆ. 'ಮತ್ತೆ ಮಳೆ ಬರುವ ಮುನ್ನ', 'ನೀವ್ ಹುಟ್ಟಿದ್ದೀರಿ ಯಾಕೆ?', 'ಗೋಧೂಳಿ'. 'ಅಧೋಗತಿ' ಮುಂತಾದ ಕವಿತೆಗಳು ಇಂತಹ ಮೂರ್ತಚಿತ್ರಗಳಿಂದ ನಿಬಿಡವಾಗಿದ್ದು ಕವಿಯ ವೈಚಾರಿಕತೆಯಿಂದ ನಿಯಂತ್ರಿತವಾದರೂ ತಮ್ಮದೇ ಆದ ಜೀವಂತಿಕೆಯನ್ನು ಪಡೆದಿವೆ. 'ತೋಳ ರೆಕ್ಕೆ, ಸೆರಗ ಪುಕ್ಕ ಮಾಡಿ ಕೊಕ್ಕ ತೂಗಿ ತವಕದಿಂದ ಹಾರುವ ತಾಯಿಯ' ಚಿತ್ರವು ಭೌತಿಕವಿವರಗಳ ಹಾಗು ತೊರೆದು

ಕವಿತೆಯಾಗುತ್ತದೆ. 'ಅಧೋಗತಿ'ಎಂಬ ಕವಿತೆಯಂತೂ ತಾನು ಚಿತ್ರಿಸುವ ಜಗತ್ತಿನ ದಾರುಣತೆಯ ಮೂಲಕ ಇತ್ತೀಚೆಗೆ ಪ್ರಕಟವಾಗುತ್ತಿರುವ ಮರಾಠೀ ಭಾಷೆಯ ದಲಿತ ಆತ್ಮಕಥೆಗಳ ನೆನಪು ತರುವಷ್ಟು ಸಮರ್ಥವಾಗಿದೆ.

'ಗೋಧೂಳಿ'ಯ ಮತ್ತೊಂದು ವಿಶಿಷ್ಟತೆಯೆಂದರೆ ಪ್ರಾದೇಶಿಕವೂ ಅ-ಶಿಷ್ಟ-ವೂ ಆದ ಭಾಷೆಯನ್ನು ಕವಿತೆಗಾಗಿ ಬಳಸಿಕೊಳ್ಳುವುದರಲ್ಲಿ ಕವಿ ತೋರಿಸುವ ಉಮೇದು. ಅದರಲ್ಲೂ ಅವರು ನೀಡುವ ಅಧಿಕೃತ ವಿವರಗಳು ತಮಗೆ ಸಹಜವಾದ ಭಾಷಾರೂಪದಲ್ಲಿಯೇ ನಿರೂಪಿತವಾದಾಗ ಬಹಳ ಪರಿಣಾಮಕಾರಿಯಾಗುತ್ತದೆ. 'ಯಾರಿಂಗ್ಮಾಡಿದ್ರೋ' 'ನೀವ್ ಹುಟ್ಟಿದ್ದೀರಿ ಯಾಕೆ', 'ಹಣೆಬರಹ'ದಂತಹ ಕವಿತೆಗಳು ಈ ರೀತಿಯ ಪ್ರಯೋಗದಲ್ಲಿ ತೊಡಗುತ್ತವೆ. ಇಂಥ ಭಾಷೆಯ ಜೊತೆಗೆ, ಮಾಮೂಲಿಯಾದ ಪ್ರಮಾಣೀಕೃತವಾದ ಭಾಷೆಯನ್ನು ಬಳಸುವ ಹಲವು ಕವಿತೆಗಳು ಈ ಕವಿಯ ಆಸಕ್ತಿಯ ಇತರ ವಲಯಗಳನ್ನು ಸೂಚಿಸುತ್ತವೆ. ಒಟ್ಟಿನಲ್ಲಿ'ಗೋಧೂಳಿ' ಗಮನೀಯವಾದ ಸಂಕಲನ.

ಬರಗೂರು ರಾಮಚಂದ್ರಪ್ಪನವರ 'ಮಗುವಿನ ಹಾಡು' 'ಸಾಮರಸ್ಯ ಗೀತಗಳ ಸಂಕಲನ' ಎಂಬ ಉಪಶೀರ್ಷಿಕೆಯೊಂದಿಗೆ ಪ್ರಕಟವಾಗಿದೆ. ಇಪ್ಪತ್ತಾರು ಗೀತೆಗಳನ್ನು ಒಳಗೊಂಡಿರುವ ಈ ಪುಸ್ತಕದ ಮೂಲನೆಲೆಯು ವಿಷಾದ ಹಾಗೂ ಅಸಹಾಯಕತೆಗಳ ಮಿಶ್ರಣವಾಗಿದೆ. ವಾಸ್ತವದ ನೆಲೆಯಲ್ಲಿ ಹೋರಾಟಕ್ಕೆ ಅಗತ್ಯವಾದ ಆಶಾವಾದ ಹಾಗೂ ಸೃಜನಶೀಲ ಅಂತರಂಗದಲ್ಲಿ ಆಶಾವಾದಕ್ಕೆ ಎಡೆಕೊಡದ ವಿಷಾದ, ಈ ಜೋಡಿನೆಲೆಗಳು ಅನೇಕ ಜನಪದ ಕವಿಗಳಲ್ಲಿ ಕಂಡು ಬರುವುದು ಆಕಸ್ಮಿಕವಲ್ಲ. ಆದರ್ಶವಾದದ ಎಲ್ಲ ಕನಸುಗಳನ್ನು ಹೊರಗೆ ಮಾತ್ರವಲ್ಲ, ನಮ್ಮೊಳಗೆ ಕೂಡ ಪುಡಿಪುಡಿ ಮಾಡುವ ಒತ್ತಡಗಳ ಮಧ್ಯೆ ನಡೆಸುವ ಬದುಕಿಗೆ ಇದಕ್ಕಿಂತ ಭಿನ್ನವಾದ ಪ್ರತಿಕ್ರಿಯೆ ಸಾಧ್ಯವಿಲ್ಲವೇನೋ!ಶತ್ರು ಯಾರು, ಮಿತ್ರ ಯಾರು ಎನ್ನುವುದು ವಿಚಾರಗಳಲ್ಲಿ ನಿಜವಾಗುವ ಹಾಗೆ ಕಣ್ಣೆದುರುಗಿನ ವ್ಯಕ್ತಿಗಳಲ್ಲಿ ನಿಜವಾಗುವುದಿಲ್ಲ. ಹಾಗಾದಾಗ ಸಂಘರ್ಷವೆನ್ನುವ ಸಂಗತಿಯ ನೆಲೆಗಳು ಒಳಗೂ ಹೊರಗೂ, ನೆರೆ-ಹೊರೆಯೊಂದಿಗೂ ಮೂಡಿಬಿಡುತ್ತವೆ. ಇಂತಹ ಸ್ಥಿತಿ, ಸಾಮಾನ್ಯೀಕರಣಕ್ಕೆ, ಒಂಟಿತನಕ್ಕೆ ಅಥವಾ ಭಾವುಕತೆಗೆ ಅವಕಾಶ ಮಾಡಿಕೊಡುತ್ತದೆ.

'ಮಗುವಿನ ಹಾಡು'ಇಂಥ ಪ್ರಶ್ನೆಗಳನ್ನು ಹುಟ್ಟಿಸುತ್ತದೆ. ಕವಿಯು ತಾವು ಕಂಡುಕೊಂಡ ಕೆಲವು ಉತ್ತರಗಳನ್ನು ಕವಿತೆಗಳ ಒಳಗೆ ಹೇಗೋ ಹಾಗೆಯೇ ಮುನ್ನುಡಿಯಲ್ಲಿಯೂ ದಾಖಲೆಮಾಡಿದ್ದಾರೆ. 'ಕನ್ನಡ'ಒಂದು ನಿರ್ದಿಷ್ಟ ಪ್ರದೇಶದ ವೇಷತೊಟ್ಟು ವಿಜೃಂಭಿಸುವುದಿಲ್ಲ, 'ಭ್ರಷ್ಟತೆಯಲ್ಲಿ ಬೆಂದು ಬೂದಿಯಾದ ಭಾಷೆಯ ಜಾಗದಲ್ಲಿ ಹೊಸಭಾಷೆಯೊಂದು ಹುಟ್ಟಬೇಕಾದರೆ ಮಗುವಾಗಲೇ ಬೇಕು',ಮುಂತಾದ ಆಶಯಗಳು ಹೊಸದೊಂದು ಕಾವ್ಯಮೀಮಾಂಸೆಯನ್ನು ಮೂಡಿಸುವ ಉಮೇದನ್ನು ತೋರಿಸಿದರೂ ಅದರ ಜೊತೆಗಿರುವ ಕವಿತೆಗಳು ಭಾಷೆಗೆ ಸಹಜವಾದ ಐತಿಹಾಸಿಕತೆಯ, ಸಾಮಾಜಿಕತೆಯ, ಬಂಧನದಿಂದ ಬಿಡುಗಡೆ ಪಡೆಯುವುದು ಸಾಧ್ಯವಾಗಿಲ್ಲ. ಚಲನಚಿತ್ರದ ಗೀತೆಗಳಿರಲಿ, ಹೋರಾಟದ ಹಾಡುಗಳಿರಲಿ ಭಾಷೆಗೆ ಒಂದು ರೀತಿಯ

ಗುಲಾಮಗಿರಿಯು ತಪ್ಪುವುದಿಲ್ಲ. ಎಲ್ಲ ಕವಿಗಳೂ ಕೂಡ ಭಾಷೆಯ ದಿನಬಳಕೆಯ ನೆಲೆಗಳಿಗಿಂತ ಭಿನ್ನವಾದ ಅನನ್ಯ ಆದರೂ ಜನಪರ ಅಸ್ತಿತ್ವವನ್ನು ಅದಕ್ಕೆ 'ಕಟ್ಟಿ'ಕೊಡುವುದರ ಮೂಲಕವೇ ಈ ಗುಲಾಮಗಿರಿಯಿಂದ ಬಿಡುಗಡೆಯನ್ನು ಪಡೆಯಲು ಯತ್ನಿಸುತ್ತಿರುತ್ತಾರೆ.

ಆದರೆ 'ಕವಿತೆ'ಗೆ ಯಾವುದೇ ಅರ್ಥವನ್ನು ನಾವು ಕೊಡುವ ಪ್ರಯತ್ನ ಮಾಡಲಿ, ವಿಚಾರಗಳ, ಭಾವನೆಗಳ ನೆಲೆಯಲ್ಲಿ ಓದುಗರೊಂದಿಗೆ ಸಂವಹನವನ್ನು ಸಾಧಿಸಿಕೊಳ್ಳುವ ನೆಲೆಯಲ್ಲಿ ಹಲವು ಬಗೆಯ ರಚನೆಗಳು ಯಶಸ್ವಿಯಾಗುತ್ತವೆ. ಅಲ್ಲಿ ನಡೆಯುವುದು ಕಲಾಕೃತಿಯೊಂದಿಗಿನ ಮುಖಾಮುಖಿಯಲ್ಲ. ಬದಲಾಗಿ ಜೀವನಕ್ರಮ ಹಾಗೂ ಆಲೋಚನಾಕ್ರಮಗಳೊಂದಿಗಿನ ಮಾತುಕಥೆ. ಆದ್ದರಿಂದ ಇಂಥ ಕವಿತೆಗಳು 'ಸೊಫಿಸ್ಟಿಕೇಟೆಡ್' ಆದ ಓದುಗರನ್ನು ಪಡೆಯುವುದಿಲ್ಲವೆಂಬ ಕೊರತೆಯನ್ನು ಸಮಾನ ಆಸಕ್ತಿಯ ಗೆಳೆಯರೊಂದಿಗಿನ ಸಂವಾದದಲ್ಲಿ ತುಂಬಿಕೊಳ್ಳುತ್ತವೆ.

ಬಿ.ಪೀರ್‌ಭಾಷಾ ಅವರ'ಜೀವ ಬಂತು ಹಾದಿಗೆ'ಪರಿವರ್ತನೆಯ ಕನಸುಕಂಡ ಹದಿಹರೆಯದ ಸಂವೇದನಾಶೀಲನೊಬ್ಬನ ಒಳಮನದ ದಾಖಲೆ. ಹೂವಿನ ಹಡಗಲಿಯಂತಹ ದೂರದ ಊರಿನಲ್ಲಿ ಸಕ್ರಿಯವಾದ ಹೋರಾಟದಲ್ಲಿ ತೊಡಗಿಸಿಕೊಂಡ ಈ ತರುಣ ತನ್ನ ಕವಿತೆಗಳಲ್ಲಿ ಬಂಡಾಯದ ಮಾಮೂಲು ನೆಲೆಗಳಿಗಿಂತ ಭಿನ್ನವಾದ ಅಭಿವ್ಯಕ್ತಿಯ ನೆಲೆಗಳನ್ನು ರೂಪಿಸಿಕೊಂಡೂ, ಅದರದೇ ಜನಪರ ಆಶಯಗಳನ್ನು ಮಿಡಿಯುತ್ತಿರುವುದು ಸೋಜಿಗದ ಸಂಗತಿ. 'ಹಗಲು ಬೀದಿಯ ಒಳಗೆ ಮೈತುಂಬಿಕೊಂಡ' ಕಾವ್ಯವೂ ಅಂತರಂಗದಲ್ಲಿ ಮರುಹುಟ್ಟನ್ನು ಪಡೆಯುವುದೆಂದು ಇವರಿಗೆ ಗೊತ್ತು. ಇವರ ಕವಿತೆಯ ಜಗತ್ತು ಕೇವಲ ಸಾಮಾಜಿಕ ಆಶಯಗಳಿಗೆ ಸೀಮಿತವಾಗದೆ, ಆ ಹಿನ್ನೆಲೆಯಲ್ಲಿ ಮೈದಳೆದ ಹತ್ತುಹಲವು ಅನುಭವ ವಲಯಗಳನ್ನು ಭಾಷೆಯಲ್ಲಿ ಶೋಧಿಸುತ್ತದೆ. 'ಸಿಂಧೂ ತಟ', 'ಇರುಳ ಸುಮವಾದ ಹಸಿರು ಹುಡುಗಿ', 'ಉಸಿರಕೊಲ್ಲುವ ಪ್ರಗತಿ', 'ಕುಸುಮಬಾಲೆ' ಮುಂತಾದ ಒಳ್ಳೆಯ ಕವನಗಳು ಇದಕ್ಕೆ ಸಾಕ್ಷಿ. ಅಷ್ಟೇ ಆರೋಗ್ಯಕಾರಿಯಾದ ಇನ್ನೊಂದು ಮಾತೆಂದರೆ, ಕವಿತೆಯ ಲಯದ ಹುಡುಕಾಟವನ್ನು ಗೇಯತೆಯನ್ನು ಮೀರಿದ ಭಾಷೆಯ ವಿನ್ಯಾಸವನ್ನು ಈ ಕವಿ ಹುಡುಕತೊಡಗಿರುವುದು. ಇದೇ ಬಗೆಯ ಪ್ರಯೋಗಪರತೆಯನ್ನು ರೂಢಿಸಿಕೊಂಡು, ಕನ್ನಡ ಕವಿತೆಯಲ್ಲಿ ಅತ್ಯುತ್ತಮವಾದುದಕ್ಕೆ ಮನತೆರೆದುಕೊಂಡಾಗ, ಪೀರ್‌ಭಾಷಾ ಅವರು ಒಳ್ಳೆಯ ಕವಿಯಾಗಿ ಬೆಳೆಯುವ ಎಲ್ಲ ಸಾಧ್ಯತೆಗಳೂ ಇವೆ.

ಹೂವಿನ ಹಡಗಲಿಗಿಂತ ಸಣ್ಣದಾದ ಹಗರಿಬೊಮ್ಮನಹಳ್ಳಿ, ತಾಲೂಕಿನ ಸೊನ್ನ ಕಿರುಗ್ರಾಮದ ಪಡಚನಾಳು ತಿಂದಪ್ಪನವರ ಕವನಗಳು 'ತಿಂದಪ್ಪನ ಕವಿತೆಗಳು' ಎಂಬ ಕಿರುಪುಸ್ತಕದಲ್ಲಿವೆ. ಪ್ರಾದೇಶಿಕವಾದ ಈ ವಿವರಗಳು ಏಕೆ ಅಗತ್ಯವೆಂದರೆ, ಕವಿತೆಯ ರಚನೆ, ಸುಶಿಕ್ಷಿತ ಜಗತ್ತಿನ ಹವ್ಯಾಸಮಾತ್ರವಾಗದೆ, ಪ್ರಜಾಪ್ರಭುತ್ವೀಕರಣಗೊಳ್ಳುವುದರ ಮೂಲಕವೇ ಹೊಸ ಸಾಧ್ಯತೆಗಳ ಬೀಜಾರೋಪಣ ಮಾಡುತ್ತಿರುವುದರ ಕಡೆಗೆ ಗಮನ ಸೆಳೆಯಬೇಕಾಗಿದೆ. ಇವು 'ಹಾಡಲ್ಲದ ಹಾಡು' ಗಳೇ ಆಗಿರಬಹುದು. ಇಲ್ಲಿನ ಆಶಯಗಳೂ ಸುಪರಿಚಿತವೇ ಹೌದು. ಆದರೆ ಇಂಥ ಜೀವನದ ನೆಲೆಗಳು ಕವಿತೆಯ

ಲಯಗಳನ್ನು, ಅದಕ್ಕೆ ಸಹಜವಾದ ನಿರೂಪಣವಿಧಾನಗಳನ್ನು ಹೊಸದಾಗಿ ರೂಢಿಸಿಕೊಂಡಾಗ, ಕನ್ನಡ ಕವಿತೆಗೆ ಹೊಸಶಕ್ತಿ ಬರಬಹುದು. ಆಧುನಿಕತೆಯ ನೋವಿನಲ್ಲಿ ನರಕವಾಗಿರುವ ಇಂದಿನ ಹಳ್ಳಿಗಳಿಗೂ ಆಧುನಿಕ ಕಾವ್ಯಕ್ಕೂ ಇರುವ ಅಂತರವೇ, ಅಲ್ಲಿಂದ ಬರಲಿರುವ ಕಾವ್ಯದ ಸಾಧ್ಯತೆಗಳನ್ನು ಜೀವಂತವಾಗಿಟ್ಟಿದೆ.

'ಕಣ್ಣುಗಳಲಿ ಕನಸುತುಂಬಿ', ಹೇಮಾ ಪಟ್ಟಣಶೆಟ್ಟಿಯವರ ಮೂರನೆಯ ಸಂಕಲನ. ಮೊದಲ ಸಂಕಲನದಿಂದಲೇ ಕೆಲವಾದರೂ ಅಸಲು ಕವಿತೆಗಳನ್ನು ಕೊಡುತ್ತ ಬಂದಿರುವ ಹೇಮಾ ಅವರ ಯಶಸ್ಸು ಹಾಗೂ ಅನನ್ಯತೆಗಳು ರೂಪಿತವಾಗುವುದು, ಕವಿತೆಯ ನಾದಶರೀರ ಮತ್ತು ಪದಗಳಿಗಿರುವ ಬಹುಮುಖೀ ಸಾಧ್ಯತೆಗಳ ಬಗ್ಗೆ ಅವರು ತೋರುವ ಅವಿರತವಾದ ಆಸಕ್ತಿಯಲ್ಲಿ. ಪದರಚನೆ ಹಾಗೂ ವಾಕ್ಯರಚನೆಯ ನೆಲೆಯಲ್ಲಿ ಹಾಗೂ ಪದ ಸಂಯೋಜನೆಯಿಂದಲೇ ಲಯದ ವಿವಿಧತೆಯನ್ನು ಸಾಧಿಸುವುದರಲ್ಲಿ ಅವರು ನಿಪುಣರು.

ಪ್ರಸ್ತುತ ಪರಿಶೀಲನೆಯನ್ನು ಬರೆಯುತ್ತಿರುವವನೇ ಈ ಸಂಕಲನದ ಮುನ್ನುಡಿಯಲ್ಲಿ ಹೇಳಿರುವ ಕೆಲವು ಮಾತುಗಳನ್ನು ಇಲ್ಲಿ ಪುನರುಚ್ಚರಿಸಬಹುದು:

''(ಹೇಮಾ) ಅವರು ಕನ್ನಡದ ಪದಗಳನ್ನು ಕಿವಿತೆರೆದು ಕೇಳಿದವರು. ಅರ್ಥದ ಹಂಗು ತೊರೆದು ಗುಣಗುಣಿಸುವಂತೆಯೇ, ಅಪರೂಪದ ಪದಗಳನ್ನು, ಪದಗಳ ಅಪರೂಪಗಳನ್ನು ನೆನಪಿನ ಉಗ್ರಾಣದಲ್ಲಿ ತುಂಬಿಕೊಂಡು ಅಚ್ಚರಿಯಾಗುವಂತೆ ಬಳಸಬಲ್ಲವರು. ಇಂಥ ಕಡೆ ವ್ಯಾಪಾರಿಕತೆ, ಆಲೋಚನೆ, ವಾದ ಮುಂತಾದವು ಕವಿತೆಗೆ ಅಡಿಯಾಳುಗಳಾಗಿ ಇರುತ್ತವೆಯೇ ಹೊರತು ತಾವೇ ಪ್ರಭುಗಳಾಗುವುದಿಲ್ಲ....

''ಹೇಮಾರವರ ಕವಿತೆಯ ಬಹಳ ಮುಖ್ಯವಾದ ಲಕ್ಷಣಗಳಲ್ಲಿ ಒಂದು, ಸ್ತ್ರೀವಾದೀ ವ್ಯಾಪಾರಿಕತೆ ಮತ್ತು ಅಂಥದೊಂದು 'ಬಂಧನಕ್ಕೆ ಸಿಲುಕಬಯಸದ ನಿಜವಾದ ಕಲಾವಿದೆಯೊಬ್ಬಳ ಸರ್ವಗ್ರಾಹೀ ಪ್ರಾಮಾಣಿಕತೆಗಳ ನಡುವಿನ ತಾಕಲಾಟ......

''ಕೆಲವು ಕವಿತೆಗಳಲ್ಲಿ ಬೇರೆ ಬೇರೆ ಭಾವಲಹರಿಗಳು ಒಂದು ಕಡೆ ಸೇರುವುದರಿಂದ ಸಂಕೀರ್ಣತೆ ಹುಟ್ಟಿದರೆ, ಪರಸ್ಪರ ಪೂರಕ ಭಾವಲಹರಿಗಳನ್ನು ಹೊಂದಿರುವ ಕವಿತೆಗಳು ಸಂಕಲನಕ್ಕೆ ಸಮತೋಲನವನ್ನು ತಂದುಕೊಟ್ಟಿವೆ......

''ಬೆಳಕು, ಸೂರ್ಯ ಮುಂತಾದ ಪ್ರತಿಮೆಗಳು ಅವರ ಕವಿತೆಯಲ್ಲಿ ಪುನರಾವರ್ತನೆಯಾಗುವ, ಹೊಸ ಅರ್ಥವಲಯಗಳನ್ನು ಪಡೆದುಕೊಳ್ಳುವ ರೀತಿಯು'' ಗಮನೀಯವಾದುದು.

ಈ ಸಂಕಲನದಲ್ಲಿರುವ ಕೆಲವು ಅನುವಾದಗಳು ಸ್ವತಃ ಹೇಮಾ ಅವರ ಕವಿತೆಯು ಪಡೆದುಕೊಳ್ಳಬಹುದಾದ ಆಯಾಮಗಳತ್ತ ಕೈತೋರಿಸುತ್ತವೆ. ಒಟ್ಟಿನಲ್ಲಿ ಇದು ಈ ವರ್ಷದ ಓದಲೇಬೇಕಾದ ಸಂಕಲನಗಳಲ್ಲಿ ಒಂದು.

'ಹೊಳೆಬಾಗಿಲು' ಸಂಕಲನದ ಹಾ.ಮಾ. ಕನಕ ಅವರು ಈಗಾಗಲೇ ಶ್ರೀಮಂತವಾಗಿರುವ ಮಹಿಳಾಕಾವ್ಯಕ್ಕೆ ಇನ್ನೊಂದು ಸೇರ್ಪಡೆ. ಈ ಮಹಿಳೆಯರದು

ಯಾವುದೇ ರಿಯಾಯತಿಗಳನ್ನು ಬಯಸದ ಕಾವ್ಯ. ಕನಕ ಅವರು ಸ್ವಾನುಭವದ ಸೀಮೆಗಳಿಂದ ಆಚೆ-ಈಚೆ ಸರಿಯದೆ, ಯಾವುದೋ ಛಿದೆ -ಮುರುವತ್ತುಗಳಿಗೆ ಅಂಜಿ, ತನಗೆ ತೀವ್ರವಾಗಿ ಅನ್ನಿಸದ ಸಾಮಾಜಿಕ ಆಶಯಗಳಿಗೆ ದನಿಯಾಗದೆ ಬರೆಯಬಲ್ಲರು. ಅಷ್ಟೇ ಮುಖ್ಯವಾಗಿ ಕವಿತೆಯು ಭಾಷೆಯಲ್ಲಿ 'ಸಂಭವಿಸಿದಾಗ' ಅನುಭವ ಸುಪಾದಿಯಲ್ಲದ ಬೇರೇನೋ ಆಗುವುದೆಂಬುದನ್ನು ಬಲ್ಲರು. ಭಾಷೆಯ ಲಯಗಳೊಂದಿಗೆ ಆಟವಾಡುವುದು, ಅದರ ಉಲ್ಲಾಸಕ್ಕೆ ಮರುಳಾಗದೆ ಮೋಹಕ ಚಿತ್ರಗಳನ್ನು ಕಟ್ಟುವುದು ಅವರಿಗೆ ಸಾಧ್ಯವಾಗಿದೆ. ನಿಯತಲಯಗಳ ಜೋಕಾಲಿಯಾಗದ ಭಾವನಾತ್ಮಕತೆಯನ್ನು ಒಡಮೂಡಿಸಲು ಪ್ರಯತ್ನಿಸುವುದರಿಂದ ಈ ಕವಿತೆಗಳು ಸ್ತ್ರೀವಿಶಿಷ್ಟ ಸಂವೇದನೆಗಳಿಗೆ ಭಾವೋದ್ರೇಕವಿಲ್ಲದ, ಕೇವಲ ವೈಚಾರಿಕವೂ ಅಲ್ಲದ ಆಕೃತಿಗಳನ್ನು ನೀಡಿವೆ.

ಸಮಸ್ಯೆಯಿರುವುದು ಹೆಣ್ಣಿನ ಆಸಕ್ತಿವಲಯಗಳು ಸಹಜವಾಗಿಯೇ ವಿಸ್ತರಿಸುವಂಥ ಸಾಮಾಜಿಕ ಸಂದರ್ಭವು ಉಂಟಾಗುವವರೆಗೆ ಅವಳು ಕೇವಲ ಆಪ್ತಾನುಭವಗಳ ಕಾವ್ಯಾತ್ಮಕ ಮಂಡನೆಯಷ್ಟರಿಂದಲೇ ಸಮಾಧಾನ ಪಡಬೇಕೇ ಎನ್ನುವುದರಲ್ಲಿ. ಸೂರ್ಯನ ಕೆಳಗಿರುವ ಎಲ್ಲ ಸಂಗತಿಗಳ ಬಗ್ಗೆಯೂ ಹೆಣ್ಣು ಕೂಡ ಗಂಡಿನಷ್ಟೇ ತೀವ್ರವಾಗಿ ತೊಡಗಿಸಿಕೊಂಡು ಬರೆಯಬಾರದೇ, ಬರೆಯಲಾಗದೇ ಎನ್ನುವುದು ಪ್ರಶ್ನೆ. ನಿಜ, ಪುರುಷ ಕೇಂದ್ರಿತ ರಾಜಕಾರಣ, ಚರಿತ್ರೆ, ಸಮಾಜ ಹಾಗೂ ತಂತ್ರಜ್ಞಾನಗಳು ಅವಳಿಗೆ ಇಷ್ಟವಾಗದಿರಬಹುದು. ಆದರೆ ತನ್ನದೇ ಇತಿಹಾಸವನ್ನು ಮರುರಚನೆ ಮಾಡಿಕೊಳ್ಳುವ ಹೊರೆಯೂ ಅವಳಿಗಿದೆಯಲ್ಲವೇ? ಕನಕ ಅವರ ಸಂಕಲನದ ಸಂದರ್ಭದಲ್ಲಿ ಹೇಳುತ್ತಿರುವುದಾದರೂ ಈ ಮಾತುಗಳು ಎಲ್ಲ ಕವಯಿತ್ರಿಯರಿಗೂ ಅನ್ವಯವಾಗುತ್ತದೆ.

ಅದು ಹೇಗೂ ಇರಲಿ. ಈ ಸಂಕಲನದ 'ಹೊಳೆಬಾಗಿಲು', 'ಗಿಣಿ', 'ಹಾರೋ ಕುದುರೆ ಹುಡುಗ', ' ರೂಪಕಮಾಲೆ', 'ಅರ್ಥೈಸಬೇಡಿ', 'ಕವಿತೆ', 'ದೀಪಾವಳಿ', ಮುಂತಾದ ಹಲವು ಕವನಗಳು ಅನೇಕಬಾರಿ ಓದಿಸಿಕೊಳ್ಳುವಷ್ಟು ಭಾವನಿಬಿಡವೂ ರೂಪಕಮಯವೂ ಆಗಿದೆ. ಯಾವುದೇ ಕವಿಯ ಮೊದಲ ಸಂಕಲನವನ್ನು ಕುರಿತು ಈ ಮಾತು ಹೇಳುವುದು ಕಷ್ಟ. ತಮ್ಮ ಪ್ರತಿಭೆಗೆ ಅನುಗುಣವಾದ ಮಹತ್ವಾಕಾಂಕ್ಷೆಯನ್ನು, ಬಹುಮುಖಿ ಆಸಕ್ತಿಗಳನ್ನು ಬೆಳೆಸಿಕೊಂಡು ಅದನ್ನೆಲ್ಲ ಕವಿತೆಯೆಂಬ ಇಂದ್ರಜಾಲದ ವ್ಯಾಪ್ತಿಯೊಳಗೆ ತಂದಾಗ ಇವರು ಮುಖ್ಯವಾದ ಕಾವ್ಯವನ್ನು ಬರೆಯಬಲ್ಲರು. ತನ್ನವಲ್ಲದುದನ್ನೂ ತನ್ನದಾಗಿಸಿಕೊಂಡು, ನಂತರ ಆ ಮೂಲಕ ಸಾಧ್ಯತೆಗಳಿಗೆ ನುಡಿಕೊಡುವ ಸಾಧ್ಯತೆಗಳನ್ನು ರೂಢಿಸಿಕೊಂಡಾಗ, ಗದ್ಯದಲ್ಲಿ ವೈದೇಹಿಯವರಿಗೆ ಸಾಧ್ಯವಾಗಿರುವುದು ಮತ್ತೊಂದು ಮಾಧ್ಯಮದಲ್ಲಿ ಕನಕ ಅವರಿಗೆ ಸಾಧ್ಯವಾಗುತ್ತದೆ.

ಸುಧಾಶರ್ಮ ಚವತ್ತಿಯವರ ಮೊದಲ ಸಂಕಲನವಾದ 'ಒದ್ದೆ ಕಣ್ಣುಗಳ ಪ್ರೀತಿ' ಹವಿಹರೆಯದ ಹರ್ಷ ವಿಷಾದಗಳನ್ನು ಆಕರ್ಷಕವಾದ ರೂಪಕಗಳಲ್ಲಿ ಹಿಡಿದಿಡುವ ಪ್ರಯತ್ನ. ಭಾವನೆ ಮತ್ತು ವಿಚಾರಗಳ ನೆಲೆಗಳು ಪರಸ್ಪರ ಪ್ರತ್ಯೇಕವಾದ

ಹೇಳಿಕೆಗಳಾಗದೆ, ಒಂದರೊಡನೊಂದು ಬೆರೆತುಕೊಂಡು ಕವಿತೆಯಾಗುವ ಪ್ರಕ್ರಿಯೆ ನಡೆಯುತ್ತದೆ. ತಾನು ಕೊಳಲಾಗಲಿರುವ ಕಳಲೆಯೆಂದು ಹೇಳಿಕೊಳ್ಳುವುದರಲ್ಲಿಯೇ ಆತ್ಮವಿಶ್ವಾಸಗಳ ಹಾಗೂ ಅಧೀರತೆಗಳ ಸಂಯೋಜನೆಯಿದೆ. ಆದರೆ ಆ ಚಿತ್ರವೇ ಕವಿತೆಯ ಅನನ್ಯತೆಯನ್ನು ಸಾಧಿಸುತ್ತದೆ. ಹೆಣ್ಣಿನ ಅನುಭವ ಲೋಕದಿಂದ ಆಯ್ದು ತೆಗೆದ ವಿಶಿಷ್ಟ ಚಿತ್ರಗಳು ಈ ಸಂಕಲನದಲ್ಲಿ ಹಲವಾರಿವೆ. ಭೌತಿಕವಿವರಗಳಿಗೆ ತಮ್ಮಷ್ಟಕ್ಕೆ ತಾವೇ ಇರದ ಕಾವ್ಯತ್ವವನ್ನು ಕವಿತೆಯ ಸಂದರ್ಭವು ಮೂಡಿಸಿಕೊಡುತ್ತದೆ.

ಇಲ್ಲಿನ ಕವಿತೆಗಳು ಖಚಿತವಾದ ಸ್ತ್ರೀವಾದೀ ನೆಲೆಗಳಿಂದ ಮೂಡಿಬಂದವೇನೂ ಅಲ್ಲ. ಹಾಗಾಗಲು ಸಹಜವಾಗಿಯೇ ಗದ್ಯದ ಕಟುವಾಸ್ತವ ನೆಲೆಗಳೊಂದಿಗೆ ಮುಖಾಮುಖಿಯಾದಾಗ ಬೀರುತ್ತದೆ. ಇಲ್ಲಿನದು ಕಾರಣವರಿಯದೆ ಅರಿತರೂ ಅವನ್ನು ದ್ವೇಷವಾಗಿ ತಿರುಗಿಸಲಾಗದ ತಾರುಣ್ಯಕ್ಕೆ ಸಹಜವಾದ ವಿಷಾದ. ಅದಕ್ಕೆ 'ಒದ್ದೆ ಕಣ್ಣುಗಳ ಪ್ರೀತಿ' ಸಾಧ್ಯವೇ ವಿನಾ ದ್ವೇಷದ ದಾಸವಾಳವಲ್ಲ.

ಸುಧಾ ಅವರು ಕವಿತೆಯ ಪ್ರತಿಮಾ ಶರೀರಕ್ಕೆ ಕೊಡುವ ಗಮನ ಹಾಗೂ ಆಸಕ್ತಿಯನ್ನು ಅದರ ನಾದಶರೀರಕ್ಕೆ ನೀಡುವುದಿಲ್ಲ. ಕವಿತೆಯು ಹಾಡುಗಳ ಹಾಗೆ ಇರಬೇಕೆಂದು ನನ್ನ ಅಭಿಪ್ರಾಯವಲ್ಲ. ಬದಲಾಗಿ ಗದ್ಯಕ್ಕೆ ಗುಲಾಮವಾಗದ ಲಯಗಳು ಭಾಷೆಯಲ್ಲಿ ಇಂದ್ರಜಾಲವನ್ನು ಮಾಡಬಲ್ಲವೆಂಬ ತಿಳುವಳಿಕೆ ಕವಿಗೆ ಬರಬೇಕು. ಆಗ ಆಟ ಬೇರೆಯಲ್ಲ, ಸೃಷ್ಟಿ ಬೇರೆಯಲ್ಲ ಎಂಬ ಹಂತದಲ್ಲಿ ಕವಿತೆ ಹುಟ್ಟುತ್ತದೆ. ಕನ್ನಡದ ಹಿರಿಯ ಕವಿಗಳ ಅದರಲ್ಲೂ ಬೇಂದ್ರೆ, ಕೆ.ಎಸ್.ನ., ಕುವೆಂಪು ಮುಂತಾದವರ ಕವಿತೆಗಳ ತನ್ಮಯವಾದ ಓದು ಇವರಿಗೆ ಈ ಶಕ್ತಿಯ ವಲಯವನ್ನು ತೆರೆಯಬಲ್ಲದು. ಆಗ ಸುಧಾ ಅವರ ಕವಿತೆಗೆ ಇನ್ನೆರಡು ರೆಕ್ಕೆಗಳು ಬರುತ್ತವೆ. ಇದೇ ವರ್ಷ ಪ್ರಕಟವಾಗಿರುವ ಹಾ.ಮ. ಕನಕ ಅವರ ' ಹೊಳೆಬಾಗಿಲು' ಸಂಕಲನವನ್ನು ಇದರ ಜೊತೆಗೆ ಇಟ್ಟು ನೋಡಿದಾಗ ಇವರಿಬ್ಬರ ಗುಣ ಹಾಗೂ ಪರಿಮಿತಿಗಳು ಸ್ಪಷ್ಟವಾಗುತ್ತವೆ.

ಇಪ್ಪತ್ತನೆಯ ಶತಮಾನದಲ್ಲಿ ವಚನದಂತಹ ಪ್ರಕಾರವನ್ನು ಹಲವು ಆಶಯಗಳಿಗಾಗಿ ಬಳಸಿಕೊಂಡ ನಿದರ್ಶನಗಳಿವೆ. ಕಮಲಾ ಹಂಪನಾ ಅವರ 'ಬುಗುಡಿ' ಸ್ತ್ರೀವಾದೀ ಆಶಯಗಳ ಅಭಿವ್ಯಕ್ತಿಗಾಗಿ ಅದನ್ನು ಉಪಯೋಗಿಸಿಕೊಂಡಿದೆ. ಹಾಗೆ ನೋಡಿದರೆ ಹನ್ನೆರಡನೆಯ ಶತಮಾನದಲ್ಲಿಯೂ ವಚನಗಳಿಗೆ ವೈಚಾರಿಕವೂ ನೀತಿಬೋಧಕವೂ ಆದ ಆಯಾಮವೊಂದು ಇತ್ತು. ಇಲ್ಲಿ ಅಂತಹ ನೆಲೆಗಳ ಮುಂದುವರಿಕೆಯಿದೆ. ಆದರೆ ಗತಕಾಲದ ಅಭಿವ್ಯಕ್ತಿಪ್ರಕಾರವೊಂದು ತಾನು ಇರುವಂತೆಯೇ ಮತ್ತೊಂದು ಕಾಲಕ್ಕೆ ಕಸಿಯಾಗುವುದಿಲ್ಲ. ಹೊಸವೈವಿಧ್ಯಗಳನ್ನು, ಲಯವಿನ್ಯಾಸಗಳನ್ನು ರೂಪಿಸಿಕೊಳ್ಳುವುದು ಆಧುನಿಕ ವಚನಕಾರರಿಗೆ ಅನಿವಾರ್ಯವಾಗುತ್ತದೆ. ಹಾಗಲ್ಲದಿದ್ದರೆ ನಿಯತವಾದ ಚೌಕಟ್ಟು, ಉಪಮೆ ರೂಪಕಗಳಿಂದ ಸಜ್ಜಾದ ವಿಚಾರಗಳನ್ನು ತುಂಬಲು ಯೋಗ್ಯವಾದ ಪಾತ್ರೆಯಾಗುತ್ತದೆ. 'ಬುಗುಡಿ'ಯು ತನ್ನಷ್ಟಕ್ಕೆ ತಾನು ದಲಿತ ಬಂಡಾಯ ಕವಿತೆಯ ಚೌಕಟ್ಟಿನಲ್ಲಿ ಉಳಿದವರಂತೆಯೇ ಸೋಲು-ಗೆಲುವುಗಳನ್ನು ಅನುಭವಿಸುತ್ತದೆ. ವಚನದ ಚೌಕಟ್ಟಿನಿಂದ ಸಾಹಿತ್ಯದ ಹಂಗು ತೊರೆದ ಬಿಡಿಘಟಕಗಳನ್ನು ಕಟ್ಟಲು

ಸಾಧ್ಯವಾಗಿದೆಯಷ್ಟೇ.

ಈಗಾಗಲೇ ಮೂರು ಸಂಕಲನಗಳನ್ನು ಪ್ರಕಟಿಸಿರುವ ಭಾಗ್ಯ ಜಯಸುದರ್ಶನ ಅವರ 'ಭೂಮಿ-ಪದ್ಯಗಳು ' ಹನಿಗವನಗಳ ಗೊಂಚಲು. ಆದರೆ ಸಾಮಾನ್ಯವಾಗಿ ಪ್ರತ್ಯೇಕ ಘಟಕಗಳಾಗುವ ಹನಿಗವನಗಳ ನಡುವಿನ ಸಂಬಂಧದ ಸೇತುವೆಯಾಗಿ, ಅವೆಲ್ಲದರ ವಸ್ತುವಾಗಿ ಭೂಮಿ ಇದೆ. ಅಷ್ಟೇ ಅಲ್ಲ, ಈ ಭೂಮಿ ಎಲ್ಲ ಹೆಣ್ಣುಗಳ ಅನುಭವ ಸಮಗ್ರದ ಪ್ರತೀಕವಾಗಿ ಮೂಲಮಾದರಿಯಾಗಿ ಚಿತ್ರಿತಳಾಗಿರುವುದರಿಂದ ಈ ಸಂಕಲನಕ್ಕೆ ಆತ್ಮ ನಿವೇದನೆ ಹಾಗೂ ವಿಮರ್ಶೆಗಳ ಆಯಮವು ಸಹಜವಾಗಿಯೇ ಉಂಟಾಗಿದೆ. ಬೇರೆ ಹಲವು ಪದ್ಯಗಳಲ್ಲಿ ಭೂಮಿಯಿಂದ ಮೂಡಿಬಂದ ಮನುಷ್ಯಜೀವಿಯಾಗಿ ಕವಯಿತ್ರಿ ಅವರೊಂದಿಗೆ ಮಾತನಾಡುತ್ತಾ ತಾತ್ವಿಕ ಚಿಂತನೆಯಲ್ಲಿ ತೊಡಗುತ್ತಾರೆ. ಒಟ್ಟಿನಲ್ಲೇ ಈ ಕವಿತೆಗಳು ಚಿಂತನೆಯ ಬಿಂದುಗಳ ಒಕ್ಕೂಟ.

ಇಂಥ ಬರವಣಿಗೆಯನ್ನು ಕವಿತೆಯಾಗಿಸುವುದು ಪ್ರತಿ ಪದ್ಯದಲ್ಲೂ ಬರುವ ಚಿತ್ರಗಳು ಹಾಗೂ ರೂಪಕಗಳು ಮಾತ್ರ. ಲಯವಿನ್ಯಾಸಗಳನ್ನು ಮರೆಯದ ಗದ್ಯದ ಧಾಟಿಯನ್ನು ಮೊರೆಹೋಗುವ ಈ ರಚನೆಗಳು ಓದುಗನನ್ನು ಒಂದು ಸಲ ಹೌದಲ್ಲವೇ ಎನ್ನಿಸಬಹುದೇ ವಿನಾ, ತನ್ನ ಆಕೃತಿಯ ಬಲದಿಂದಲೇ, 'ವಿಚಾರಮುಕ್ತವಾದ' ಕವಿತೆಯಾಗಿ ಹೆಚ್ಚಿನದೇನನ್ನೂ ಮಾಡುವುದಿಲ್ಲ. ಪ್ರಬಲವಾದ ಸ್ತ್ರೀವಾದೀ-ಸ್ತ್ರೀ ಸಂವೇದನೆಯ ನೆಲೆಯಿಂದ ರೂಪಿತವಾಗುತ್ತಿರುವ ಇಂದಿನ ಮಹಿಳಾ ಕಾವ್ಯದ ಸಂದರ್ಭದಲ್ಲಿ ಭಾಗ್ಯ ಅವರ ಮೆಲುದನಿಯ ಮಾತುಗಳು ವಿಭಿನ್ನವಾಗಿವೆ. ಮುನ್ನುಡಿಯಲ್ಲಿ ನೇಮಿಚಂದ್ರ ಅವರು ಸರಿಯಾಗಿಯೇ ಹೇಳಿರುವಂತೆ, ''ತಿದ್ದದ, ತೀಡದ, ಹೊಡೆದು ಬರಿಯದ ಹಸಿತನ ಈ ಕವಿತೆಗಳಿಗಿದೆ. ಈ ಹಸಿತನವೇ ಹಲವೆಡೆ ಅಪ್ಯಾಯಮಾನವಾಗಿ ಕಂಡರೆ, ಕೆಲವೆಡೆ ಒಗರಾಗುತ್ತದೆ''.

ಮುಳ್ಳೂರು ನಾಗರಾಜ ಅವರ 'ನೆಲದ ಜೋಗುಳ' ಆಧುನಿಕ ಮಹಾಕಾವ್ಯಗಳ ಸಾಲಿಗೆ ಹೊಸ ಸೇರ್ಪಡೆ. ದಲಿತ ಮಹಾಕಾವ್ಯಗಳಾದ 'ಮಲೆಯಮಾದೇಶ್ವರ' ಮತ್ತು 'ಮಂಟೇಸ್ವಾಮಿ ಕಾವ್ಯ'ಗಳಿಗಿಂತ ಭಿನ್ನವಾದ ನೆಲೆಯಲ್ಲಿ, ಜನಪರವಾದ ಆಶಯಗಳನ್ನು ತುಂಬಿಕೊಂಡು ರಚಿತವಾದ ಈ ಕಾವ್ಯವು ಕೆಲವು ಮಹತ್ವದ ಪ್ರಶ್ನೆಗಳನ್ನು ಎತ್ತುತ್ತದೆ. ಕುವೆಂಪುರವರ ಮಹಾಕಾವ್ಯದ ನಾಯಕನನ್ನು ಖಳನಾಯಕನಾಗಿಸಿಕೊಂಡು ಮುಟಿತ ವಾಗಿರುವ ಈ ಕಾವ್ಯ 'ವೈದಿಕ ಪುರಾಣ' ಗಳನ್ನು ಅನುಸಂಧಾನ ಮಾಡುವ ಬಗೆಗಳು ಮುಖ್ಯವಾದವು. ಕುತೂಹಲದ ಸಂಗತಿಯೆಂದರೆ ಅದೇ ಕುವೆಂಪುರವರ 'ಶೂದ್ರ ತಪಸ್ವಿ' ನಾಟಕದ ಮೂಲಭಿತ್ತಿಯು ಈ ಕಾವ್ಯಕ್ಕೂ ಕಥೆಯನ್ನು ಒದಗಿಸಿರುವುದು. ಸರ್ವಾಧಿಕಾರಿಯಾದರೂ ಬ್ರಾಹ್ಮಣರ ಕೈಗೊಂಬೆಯಾದ ರಾಮ ಮತ್ತು ಎಲ್ಲ ಜೀವನಮೌಲ್ಯಗಳ ಪ್ರತೀಕವಾದ ಶಂಬೂಕರ ನಡುವಿನ ಸಂಘರ್ಷವೂ ಕಥೆಯ ದ್ರವ್ಯವಾದರೂ, ಇಲ್ಲಿ ಪ್ರಮುಖವಾಗುವುದು ಮಾನವತಾವಾದದ ಆಶಯಗಳ ಹಾಗೂ ಪ್ರೀತಿಯಂತಹ ಮೌಲ್ಯಗಳು. ಇದರ ಪರಿಣಾಮವಾಗಿ, 'ಪರಮ ಅಹಿಂಸಾವಾದಿ' ಯಾದ ಲೇಖಕರು ಈ ಕೃತಿಯ ಅಂತರಾಳದಲ್ಲಿ ವರ್ಗ / ವರ್ಣ ಸಂಘರ್ಷದ ಅನಿವಾರ್ಯ

ಹಿಂಸೆಯನ್ನು ಸಮರ್ಥಿಸುವುದರಲ್ಲಾಗಲೀ, ಒಡಮೂಡಿಸುವುದರಲ್ಲಾಗಲೀ ಆಸಕ್ತಿಯನ್ನು ತಳೆಯುವುದಿಲ್ಲ. ಮಹಾದೇವ, ಸಿದ್ಧಲಿಂಗಯ್ಯ ಮುಂತಾದ ದಲಿತ ಸಾಹಿತಿಗಳು ಪ್ರತಿಪಾದಿಸುವ ಮುಖಾಮುಖಿಯ ತಾರ್ಕಿಕ ಮುಕ್ತಾಯವಾದ ಹಿಂಸಾತ್ಮಕ ವಾಸ್ತವಿಕತೆಯ ಕಡೆಗೆ, ಒಪ್ಪಂದಮೂಲ ರಾಜಕೀಯದಲ್ಲಿ ತೊಡಗುವ ಅವರೂ ಚಲಿಸದೆ, ಪ್ರೀತಿಯ ವಕ್ತಾರರಂತೆ ಬರೆಯುವ ನಾಗರಾಜರೂ ಚಲಿಸದೆ ಇರುವುದರಿಂದ ದಲಿತಹೋರಾಟದ ಸಾಮಾಜಿಕ ವಾಸ್ತವತೆಗೂ, ಸಾಂಸ್ಕೃತಿಕ ವಾಸ್ತವತೆಗೂ ನಡುವೆ ಇರುವ ಕಂದರ ಮೂಡಿಬಂದಿದೆ. ಕ್ರಾಂತಿಯ ಘೋಷಣೆಗೂ, ಅದನ್ನು ನಿಜಗೊಳಿಸಲೆಂದೇ ತಮ್ಮ ರಕ್ತ ಚೆಲ್ಲುತ್ತಿರುವವರಿಗೂ ನಡುವಿನ ಅಂತರ ಈ ಕಾರಣದಿಂದಲೇ ಹುಟ್ಟಿದೆ.

ಹಾಗೆ ನೋಡಿದರೆ 'ನೆಲದ ಜೋಗುಳ' ಈ ಶತಮಾನದ ಇತರ ಕೆಲವು ಮಹಾಕಾವ್ಯಗಳಿಗಿಂತ ಮೌಲಿಕವಾಗಿಯೇ ಇದೆ. ಏಕೆಂದರೆ ಇದರಲ್ಲಿ ಲೇಖಕನ ವರ್ತಮಾನದ ಕಾಳಜಿಗಳು, ಕೇವಲ ಭೂತಕಾಲದ ಕಥೆಯ ಮರುನಿರೂಪಣೆಯಲ್ಲಿ ತೃಪ್ತವಾಗದೆ, ವರ್ತಮಾನದ ವಿವರಗಳನ್ನು ಕೃತಿಯೊಳಗೆ ಮಧ್ಯಪ್ರವೇಶ ಮಾಡಿಸುತ್ತದೆ. ಎಂದರೆ ಕವಿಯ ಪ್ರಜ್ಞೆಯೊಳಗೆ ಬೆಳೆದಿರುವ ಸಮಕಾಲೀನ ಜಗತ್ತು ಅವನ ಕಾವ್ಯದೊಳಗಿನ ಪೌರಾಣಿಕ ಜಗತ್ತಿನೊಂದಿಗೆ ಜೊತೆಬಾಳುವೆ ನಡೆಸುತ್ತದೆ. ಗಾಂಧಿಯಿಂದ ಹಿಡಿದು ಗೋಕಾಕರವರೆಗೆ ಎಲ್ಲರೂ ಎಲ್ಲವೂ ಈ ಕೃತಿಯೊಳಗೆ ಒಡಮೂಡಲು ಗತಕಾಲದ ಕಥಾಶರೀರ ಅಡಚಣೆ ಬರುವುದಿಲ್ಲ.

'ಮಹಾಕಾವ್ಯ'ವೆಂದು ರಚಿತವಾಗಿರುವ ಈ ಕೃತಿ ಭಾವಗೀತಾತ್ಮಕತೆಯನ್ನು ಮೈದುಂಬಿಕೊಂಡಿರುವುದು ಇನ್ನೊಂದು ವಿಶೇಷ ಸಂಗತಿ. ಕಾದಂಬರಿಯಿರಲಿ, ಮಹಾಕಾವ್ಯವಿರಲಿ ನಾಗರಾಜರ ಮನಸ್ಸು ಭಾವಗೀತಾತ್ಮಕತೆಯ ಕಡೆಗೆ ಒಲಿಯುತ್ತದೆ. ಎಂದರೆ ಲೇಖಕರ ವ್ಯಕ್ತಿತ್ವವು ಕೃತಿಯ ಹೊರಗೆ ನಿಂತು ಅದರ ವಿವರಗಳನ್ನು ನಿಯಂತ್ರಿಸುವ ಬದಲು ಅದು ಕೃತಿಯ ಕೇಂದ್ರವೇ ಆಗಿಬಿಡುತ್ತದೆ. 'ತನ್ನ ಒಡಲ ನೂಲಿನಿಂದ ತಾನೆ ಜಾಲ ನೇಯುವ ಜೇಡ' ನ ಹಾಗೆ ಲೇಖಕರ ಭಾವನೆ, ವಿಚಾರ ಹಾಗೂ ಅನುಭವಗಳು ಕೃತಿಯೊಳಗೆ ಹಾಸುಹೊಕ್ಕಾಗಿ ಬಿಡುತ್ತವೆ. ಇದು ಕೃತಿಯ ಅನೇಕ ಗುಣ ಹಾಗೂ ಪರಿಮಿತಿಗಳಿಗೆ ಕಾರಣವಾಗುತ್ತದೆ.

ಬೇರೆಲ್ಲ ಮಹಾಕಾವ್ಯಗಳಲ್ಲಿ ಆಗುವ ಹಾಗೆ, ಖಚಿತವಾದ ಛಂದೋರಚನಾ ವಿಧಾನವನ್ನು ಮುಳ್ಳೂರು ನಾಗರಾಜರು ಆಯ್ದುಕೊಂಡಿಲ್ಲ. ಬದಲಾಗಿ ಪ್ರತಿಯೊಂದು ಪುಟದಲ್ಲಿ ಬೇರೆ ಬೇರೆ ಬಗೆಯ ಛಂದೋ ಪ್ರಯೋಗಗಳು ನಡೆದು, ಸಾತತ್ಯಕ್ಕೆ ಧಕ್ಕೆಯಾಗುತ್ತದೆ. ಅಲ್ಲದೆ ಕವಿಯ ಅವಧಾನದ ಬಹುಭಾಗವನ್ನು ಈ ಕೆಲಸವೇ ತೆಗೆದುಕೊಂಡು ಬಿಡುತ್ತದೆ. ಬಹಳ ಸುಂದರವಾದ ಮನಕಲಕುವ ಭಾಗಗಳ ಜೊತೆಗೆ, ಶಿಥಿಲವಾದ, ಭಾವುಕವಾದ ಭಾಗಗಳ ಸಂಯೋಜನೆ ಇಂಥ ಕೃತಿಯಲ್ಲಿ ಅನಿವಾರ್ಯವಾಗುತ್ತದೆ. ಸತತವಾದ ಲಯವಿನ್ಯಾಸಗಳ ಆಯ್ಕೆಯು ಕವಿಯ ಕೆಲಸವನ್ನು ಇನ್ನಷ್ಟು ಹಗುರಗೊಳಿಸುತ್ತಿತ್ತು. ಇನ್ನೊಂದು ಕುತೂಹಲಕಾರಿಯಾದ ಆಯ್ಕೆಯೆ… ರೆ

ಶಿಷ್ಟಭಾಷೆಯನ್ನು ಬಳಸಿರುವುದು. ಸ್ವತಃ ತಾವೇ ಬರೆದ ಕಾದಂಬರಿಯಲ್ಲಿ ಈ ಲೇಖಕರು ಪ್ರಾದೇಶಿಕತೆಯ ಬಳಕೆಯಿಂದ ಪಡೆದುಕೊಂಡಿರುವ ಅನನ್ಯತೆಗೆ ಇಲ್ಲಿ ಎರವಾಗಬೇಕಾಗಿ ಬಂದಿದೆ. ಸಿದ್ಧಲಿಂಗಯ್ಯ, ಕೆ.ಬಿ. ಸಿದ್ಧಯ್ಯನವರೂ ಸೇರಿದಂತೆ ಯಾವುದೇ ದಲಿತ ಕವಿಯು ಭಾಷೆಯ ವಿಚಾರದಲ್ಲಿ ದಲಿತಕಥಾಸಾಹಿತಿಗಳು ತೆಗೆದುಕೊಂಡಿರುವ ಸ್ವಾತಂತ್ರ್ಯವನ್ನು ತೆಗೆದುಕೊಳ್ಳಲು ಸಾಧ್ಯವಾಗಿಲ್ಲ. ಕವಿತೆಯ ಮಾಧ್ಯಮವಾದಾಗ ಇಂಥ ಶಿಷ್ಟತೆಯ ಉಡುಪು ಹಾಕಿಕೊಳ್ಳುವುದು ಅನಿವಾರ್ಯವೆನ್ನುವುದಕ್ಕೆ ಬೇಂದ್ರೆಯವರು ಹಾಕಿಕೊಟ್ಟ ಮಾದರಿಗಳೇ ಸಾಕ್ಷಿಯಾಗಿವೆ.

ಅದೇನೇ ಇರಲಿ, 'ನೆಲದ ಜೋಗುಳ' ಮುಳ್ಳೂರು ನಾಗರಾಜರ ಸೃಜನಶೀಲ ಸಾಧ್ಯತೆಗಳಿಗೆ ಮತ್ತೊಂದು ಸಾಕ್ಷಿಯಾಗಿದೆ. ಅವರಿಗಿರುವ ಅಪಾರ ಅನುಭವ ಮತ್ತು ಸೈದ್ಧಾಂತಿಕ ಸ್ಪಷ್ಟತೆಗಳು ಮಹತ್ವದ ಕೃತಿಯ ರಚನೆಗೆ ಹಿನ್ನೆಲೆಯಾಗಬಲ್ಲವು. ಆದರೆ ಅಂಥ ಕೃತಿ ವಾಸ್ತವವಾದೀ ಮಾರ್ಗವನ್ನು ಅನುಸರಿಸಬೇಕೋ, ಸಾಂಕೇತಿಕತೆಯ ಸಂಕೋಲೆಗಳಲ್ಲಿ ಸಿಕ್ಕಿಹಾಕಿಕೊಳ್ಳಬೇಕೋ, ಮಾಂತ್ರಿಕ ವಾಸ್ತವದ ಸಾಧ್ಯತೆಗಳನ್ನು ಶೋಧಿಸಬೇಕೋ ಅಥವಾ ಹೊಸದೊಂದು ಸಾಹಿತ್ಯ ಪ್ರಕಾರವನ್ನೇ ರೂಪಿಸಿಕೊಳ್ಳಬೇಕೋ ಎಂಬ ಪ್ರಶ್ನೆಯನ್ನು ಕನ್ನಡದ ಸೃಜನಶೀಲತೆಯೇ ಎದುರಿಸಬೇಕಾಗಿದೆ.

ಹಿ. ಮ. ನಾಗಯ್ಯನವರ 'ಭವ್ಯಭಾರತ ಭಾಗ್ಯೋದಯ' ಈ ವರ್ಷ ಪ್ರಕಟವಾಗಿರುವ ಮತ್ತೊಂದು ಮಹಾಕಾವ್ಯ. ಸಮಕಾಲೀನ ಸ್ವಾತಂತ್ರ್ಯ ಸಂಗ್ರಾಮವನ್ನು ಕೇಂದ್ರ ವಸ್ತುವಾಗಿ ಹೊಂದಬಯಸಿದ, ಸುಮಾರು ಮೂರು ಸಾವಿರ ಪುಟಗಳಿರಬೇಕೆಂದು ಉದ್ದೇಶಿತವಾದ ಈ ಬೃಹತ್ ಕಾವ್ಯವು ಕವಿಯ ನಿಧನದಿಂದ ಅಪೂರ್ಣವಾಗಿಯೇ ಉಳಿದು ಒಂದು ಸಾವಿರದ ನೂರು ಪುಟಗಳ ತನಕ ಮಾತ್ರ ಪ್ರಕಟವಾಗಿದೆ. ಕಾವ್ಯಪ್ರವೇಶ ಆತ್ಮಾನುಸಂಧಾನ, ಮಹಾಪ್ರದಕ್ಷಿಣೆ ದಿವ್ಯದರ್ಶನ ಮತ್ತು ಸ್ವಾತಂತ್ರ್ಯ ಮಹಾಪ್ರಗಾಥ ಎಂಬ ನಾಲ್ಕು ಭಾಗಗಳನ್ನು ಹೊಂದಿರುವ ಕೃತಿಯು ಪರಿಣಾಮವನ್ನು ಉಂಟುಮಾಡುವುದರಲ್ಲಿ ಸೋಲುತ್ತದೆ. ಸುಮಾರು ೨೫೦ ಪುಟಗಳಷ್ಟು ದೀರ್ಘವಾದ ಮೊದಲ ಅಧ್ಯಾಯದಲ್ಲಿ ಕಾವ್ಯವನ್ನು ಕುರಿತು ತಾತ್ವಿಕ ಚರ್ಚೆಯೇ ಹರಡಿಕೊಂಡಿದೆ. ಭಾರತೀಯ ಜೀವನಕ್ರಮ ಹಾಗೂ ಸಿದ್ಧಾಂತಗಳ ನಿರೂಪಣೆಯೇ ನಂತರದ ಏಳುನೂರು ಪುಟಗಳನ್ನು ಆವರಿಸಿದೆ. ಅತಿವಿಸ್ತಾರ ಹಾಗೂ ಔಚಿತ್ಯಪ್ರಜ್ಞೆಯ ಭಾವಗಳು ಈ ಕೃತಿಯ ವಾಚನೀಯತೆಯನ್ನು ಸೊನ್ನೆಯಾಗಿಸಿವೆ. ಇಪ್ಪತ್ತನೆಯ ಶತಮಾನವಿರಲಿ, ಯಾವುದೇ ಶತಮಾನದ ಮಹಾಕಾವ್ಯವು ಈ ಗಾತ್ರದ ಭಾರಕ್ಕೆ ಕುಸಿಯುವುದು ಅನಿವಾರ್ಯ. ಓದುಗನ ಸಹನೆಯನ್ನು ಇದು ಪರೀಕ್ಷಿಸುವುದಿಲ್ಲ. ಏಕೆಂದರೆ ಕೊನೆಯುವರೆಗೆ, ಹಾಗೆ ಕೂತು ಇದನ್ನು ಓದುವುದು ಅಸಾಧ್ಯ. ಅಲ್ಲಿಷ್ಟು ಇಲ್ಲಿಷ್ಟು ಓದಿದಾಗಲೂ 'ಶ್ರೀ ರಾಮಾಯಣ ದರ್ಶನಂ' ನ ತೆಳು ಅನುಕರಣೆಯಾಗಿ ಮಾತ್ರ ಇದು ಉಳಿಯುತ್ತದೆ. ಕವಿಯ ಆದರ್ಶಪ್ರಿಯತೆ, ಮಾನವತಾವಾದ, ತಾತ್ವಿಕತೆ ಮುಂತಾದವನ್ನು ಮೆಚ್ಚಿಕೊಂಡರೂ ಇವೆಲ್ಲವರ ಸಹಯೋಗದಿಂದ ಮಹಾಕಾವ್ಯವಾಗಿಬಿಡುವುದಿಲ್ಲ.

ಎನ್ನುವುದನ್ನು ಹೇಳಲೇಬೇಕಾಗುತ್ತದೆ. ಕವಿತೆಯ ಭಾಷೆ, ಅಲಂಕಾರಿಕತೆ, ಮುಂತಾದ ಗುಣಗಳು ಕನ್ನಡ ಕವಿತೆಗೆ ಯಾವುದೇ ಆಯಾಮವನ್ನು ಸೇರಿಸುವುದಿಲ್ಲ. ಈ ಕಾವ್ಯದ ಬಗ್ಗೆ ''ಈ ಮಹಾಕೃತಿ ನಾಡಿನ ಸಾರಸ್ವತ ಸಂಪತ್ತನ್ನು ಹೆಚ್ಚಿಸುವುದರಲ್ಲಿ ಸಂಶಯವಿಲ್ಲ. ಇನ್ನದು ವಿದ್ವದ್ರಸಿಕರ ಸೊತ್ತು ಸಂಪತ್ತು'' ಎಂದು ಹಿರಿಯ ಕವಿ ಪು. ತಿ. ನ. ಹೇಳಿದ್ದಾರೆ. ಇದಕ್ಕೆ ಏನು ಪ್ರತಿಕ್ರಿಯೆ ತೋರಿಸಬೇಕೋ ನಮಗೆ ತಿಳಿಯುವುದಿಲ್ಲ. ಹಿ.ಮ. ನಾ. ರವರ ಮಹತ್ವಾಕಾಂಕ್ಷೆಗೆ ಸರಿಸಮನಾದ ಆಯುಷ್ಯ ದೊರೆತಿದ್ದರೆ ಅವರ ಕಾವ್ಯ ಹೆಚ್ಚು ಮೂರ್ತವಾದ ಸ್ವಾತಂತ್ರ್ಯವನ್ನು ಸಂಗ್ರಾಮದ ವಿವರಗಳನ್ನು ಹೇಗೆ ಚಿತ್ರಿಸುತ್ತಿತ್ತೋ ಎಂಬ ಕುತೂಹಲ ಮಾತ್ರ ನಮ್ಮಲ್ಲಿ ಉಳಿಯುತ್ತದೆ.

ಹೈದರಾಬಾದ್ ಕರ್ನಾಟಕವು ರೂಪಿಸಿರುವ ಅತ್ಯುತ್ತಮ, ಆಧುನಿಕ ಕವಿಯಾದ ಜಂಬಣ್ಣ ಅಮರಚಿಂತರ ಇಪ್ಪತ್ತೈದು ವರ್ಷಗಳ ಕವಿತೆಗಳಲ್ಲಿ ಆರಿಸಿತೆಗೆದ ಅರವತ್ತೇಳನ್ನು 'ಅಮರಚಿಂತಕಾವ್ಯ' ದಲ್ಲಿ ಸಂಗ್ರಹಿಸಲಾಗಿದೆ. ನವ್ಯ, ಬಂಡಾಯ, ಮುಂತಾದ ಹಣೆಪಟ್ಟಿಗಳನ್ನು ಅಂಟಿಸಿಕೊಳ್ಳದೆಯೂ ಅವರ ಕವಿತೆ ಮೊದಲಿನಿಂದ ಇಂದಿನವರೆಗೆ ಕೆಲವು ಸಮಾನ ಆಶಯಗಳಿಂದ ಮೂಡಿ ಬಂದಿದೆ. ಅವರು ಪಡೆದಿರುವ ಸಾಮುದಾಯಿಕ ಅನುಭವವು ಅವರ ವಿಚಾರ-ಭಾವನೆಗಳನ್ನು ರೂಪಿಸಿವೆಯೇ ಹೊರತು ಅವರ ಕವಿತೆಯ ಲೋಕದ ಭೌತಿಕ ವಿವರಗಳನ್ನಲ್ಲ. ಪ್ರಾದೇಶಿಕತೆಯ ನೆಲೆಗಳನ್ನು ಕವಿತೆಯಲ್ಲಿ ಕರಗಿಸಿಕೊಳ್ಳುವುದು ಕಠಿಣವಾದ ಭಾಷಿಕ ಸನ್ನಿವೇಶದಲ್ಲಿ ಬೆಳೆದಿದ್ದು ಈ ಬಿಕ್ಕಟ್ಟಿಗೆ ಒಂದು ಕಾರಣವಿರಬಹುದು. ಕಥೆಗಾರನೊಬ್ಬ ತನ್ನ ನಿರೂಪಣಾ ವಿಧಾನದಿಂದಲೇ ಅನನ್ಯ ಸೃಜನಶೀಲ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಂತೆ, ಕವಿಯೊಬ್ಬನ ಶೈಲೀಯ ಅನನ್ಯತೆಯು ಹೇಗೆ ಸಾಧ್ಯವಾಗುತ್ತದೆ ಎಂಬ ಪ್ರಶ್ನೆಯ ಬಗ್ಗೆ ಅಮರಚಿಂತರಿರಲಿ, ಬಂಡಾಯ ಸನ್ನಿವೇಶವಿರಲಿ ಗಂಭೀರವಾಗಿ ಚಿಂತಿಸಿದಂತೆ ತೋರುವುದಿಲ್ಲ. ಆದ್ದರಿಂದಲೇ ಅವರ ವೈಚಾರಿಕ ಆಯ್ಕೆಯಲ್ಲಿಯೇ ವಿಶಿಷ್ಟತೆಯನ್ನು ಹುಡುಕಬೇಕಾಗುತ್ತದೆ. ಮುನ್ನುಡಿಯಲ್ಲಿ ರಹಮತ್ ತರೀಕೆರೆಯವರು ಈ ಕಾವ್ಯವನ್ನು 'ವಿಶ್ವಹೃದಯದ ಗಾಯಗಳ ಕಾವ್ಯ' ವೆಂದು ಗುರುತಿಸಿರುವುದು ಸರಿಯಾಗಿಯೇ ಇದೆ. ಆದರೆ ಮಾನವತಾವಾದದ ನೆಲೆಯಿಂದ ಹೊರಟು ಜಗತ್ತಿನ ನೋವಿಗೆ ದನಿಯಾಗಹೊರಡುವ ಎಲ್ಲ ಕಾವ್ಯವೂ ಹೀಗೆಯೇ ಇರುತ್ತದೆ. ನೊಂದವರ ಶೋಷಿತರ ಪರವಾಗಿ ಇರುವಾಗಲೂ ಮನುಷ್ಯ ಸ್ವಭಾವದ ಸಂಕೀರ್ಣತೆಯನ್ನು ಪ್ರೀತಿ- ಕ್ರೌರ್ಯಗಳ ಬೆಸುಗೆಯನ್ನು ಕಥೆಯೊಂದು ಕಾಣುವ ಹಾಗೆ ಕವಿತೆಯೇಕೆ ಕಾಣಬಾರದು/ ಕಾಣಲಾರದೇ ಎನ್ನುವುದು ಮೂಲಭೂತ ಪ್ರಶ್ನೆ. 'ನಾನು-ಅವರು,' 'ನಾವು-ನೀವು' ಅವರು ಮುಂತಾದ ವರ್ಗೀಕರಣಗಳು ಒಂದು ನೆಲೆಯವರೆಗೆ ಸರಿಯಾಗುತ್ತವೆ. ಆದರೆ ಯಾವುದೋ ಒಂದು ಕ್ಷಣದಲ್ಲಿ ಈ ಅಂತರಗಳು ಅಳಿಸಿಹೋಗಿ ಬೇಟೆ-ಬೇಟೆಗಾರರಿಬ್ಬರೂ ನಮ್ಮಲ್ಲಿಯೇ ಅಡಗಿರಬಹುದೆಂಬ ಸತ್ಯವನ್ನು ಗ್ರಹಿಸಿದ ಕವಿತೆ ನಿಜಕ್ಕೂ ಸತ್ವಪೂರ್ಣವಾಗಿರುತ್ತದೆ. ಅಮರಚಿಂತರು ಇದನ್ನು ಅರಿಯದ ಭೋಳೆ ಅಲ್ಲವಾದರೂ, ತನ್ನ ಅಂತರಂಗದ ಬಿಕ್ಕಟ್ಟುಗಳನ್ನೂ ಕವಿತೆಯ ಕೇಂದ್ರದಲ್ಲಿ ತರುವ ನಿಷ್ಠುರತೆ ಅವರಿಗೆ ಸಿದ್ಧಿಸಿಲ್ಲ.

ಇಷ್ಟು ಹೇಳಿದ ಮೇಲೆ, ಈ ಸಂಕಲನದಲ್ಲಿರುವ ಹಲವು ಒಳ್ಳೆಯ ಪದ್ಯಗಳ ಪ್ರಸ್ತಾಪ ಮಾಡಬಹುದು. ಅವು ಒಳ್ಳೆಯವಾಗಲು ಕಾರಣ ಪ್ರತಿಮೆಗಳನ್ನು ಆಯ್ದುಕೊಂಡು ನಿಧಾನವಾಗಿ ಬೆಳೆಸುವುದರಲ್ಲಿ ತೋರಿಸಲಾಗಿರುವ ವ್ಯವಧಾನ, (ಶ್ರೀಸಾಮಾನ್ಯರ ಕೂಟ, ಪೆಟ್ರೋಮ್ಯಾಕ್ಸ್ ಹೊತ್ತ ಕೊರವರು, ಜಾಲಿ, ಜನಾರಣ್ಯದೊಳಗೊಂದು ಬೇಟೆ) ನಿಯತವಾದ ಲಯವಿನ್ಯಾಸಗಳನ್ನು ನಾದಮಯತೆಯನ್ನು ಬಳಸುವುದರ ಕಡೆಗಿನ ಒಲುವೆ, (ಬರಗಾಲದ ಹಾಡು, ಬಡವ ಸಿಡಿದರೆ ಬಡಬ) ಚಿಂತನ ಪರವಾದ ತರ್ಕಶುದ್ಧ ಮಂಡನೆ ( ನಾನು ಬೇಟೆಯ ಜೊತೆಗಿದ್ದೇನೆ, ಭೂಮಿಕಂಡ ದುಃಸ್ವಪ್ನ, ಕೆಂಪು ಚೌಕ ಮಾರಾಟಕ್ಕಿದೆ) ಮುಂತಾದ ಗುಣಗಳು. ಈ ಎಲ್ಲ ಗುಣಗಳ ಸಂಯೋಜನೆ ಮಾಡಿಕೊಂಡು, ಗಾಢವಾದ ಹೃದಯ ಸಂವಾದದಲ್ಲಿ ತೊಡಗುವ 'ಶಬ್ದಾರ್ಥಗಳ ಗೂಡು', 'ಜೀವನದಿ', 'ಶಬ್ದ ಶಿಲುಬೆಗೇರುವ ಮೊದಲು' ಮುಂತಾದವು ಈ ಸಂಕಲನದ ಅತ್ಯುತ್ತಮ ಕವಿತೆಗಳು.

'ಮೊಲೆಯಲ್ಲಿ ಹಾಲು ತುಂಬಿಕೊಂಡಂತೆ ಕವಿತೆಯಲ್ಲಿ ಅರ್ಥ ತುಂಬಿಕೊಳ್ಳಲು' ಹಾರೈಸುವ ಈ ಕವಿ ' ವಿಶ್ವದೆಲ್ಲ ಕವಿಗಳಿಂದ ಒಂದೇ ಒಂದು ಕವನ, ಮಾನವನ ಮಹಾಗಾನ' ರಚಿಸಲ್ಪಡುವುದೆಂದು ಹೇಳುತ್ತಾರೆ. ಈ ಮಹಾಗಾನದ ಒಂದು ಅನನ್ಯ ಪಲುಕು ಜಂಬಣ್ಣ ಅಮರಚಿಂತರದೇ ಆಗಲೆಂಬ ಆಶಯದೊಂದಿಗೆ ಈ ಕಿರುಪರಿಚಯವನ್ನು ಮುಗಿಸಬಹುದು.

ತಮ್ಮ ಎರಡೂವರೆ ದಶಕಗಳ ಕವಿತೆಯ ಫಸಲಿನಿಂದ ಸುಮಾರು ಎಪ್ಪತ್ತು 'ಕಾಳು' ಗಳನ್ನು ಆರಿಸಿ ತೆಗೆದಿರುವ ಎನ್.ಎಸ್. ಲಕ್ಷ್ಮೀನಾರಾಯಣಭಟ್ಟರು 'ಪಾಂಚಾಲಿ' ಎಂಬ ಶೀರ್ಷಿಕೆಯಲ್ಲಿ ಅವನ್ನು ಹೊರತಂದಿದ್ದಾರೆ. ಕನ್ನಡ ಕವಿತೆಯ ನಿಕಟವಾದ ಪರಿಚಯ ಹಾಗೂ ಬದುಕು ಮತ್ತು ಕಾವ್ಯದ ಬಗೆಗಿನ ಖಚಿತವಾದ ನಿಲುವುಗಳು ಇಲ್ಲಿನ ಕವಿತೆಗಳನ್ನು ರೂಪಿಸಿವೆ. ಇವರ ಮತ್ತು ಸಮಾನಶೀಲರಾದ ಇತರ ಕೆಲವು ಕವಿಗಳ ಬರವಣಿಗೆಯಲ್ಲಿ ಕಾಣುವ ಕುತೂಹಲಕಾರಿಯಾದ ಲಕ್ಷಣವೆಂದರೆ ನವ್ಯದಿಂದ ನವೋದಯದ ಕಡೆಗೆ ಮೂಡಿರುವ ಹಿಮ್ಮುಖ ಚಲನೆ. ಹೀಗೆ ಆಗಲು ಎರಡು ಕಾರಣಗಳಿವೆ. ಮೊದಲನೆಯದು ಬಂಡಾಯ ಅಥವಾ ಪ್ರತಿಭಟನೆಯ ಆಶಯಗಳನ್ನು ಅರ್ಥಪೂರ್ಣವಾಗಿ ಅರಗಿಸಿಕೊಂಡು ತಮಗೇ ಅನನ್ಯವಾದ ಕವಿತೆ ಕಟ್ಟಬೇಕೆನ್ನುವುದರ ಕಡೆಗಿನ ಅನಾಸಕ್ತಿ. ಎರಡನೆಯದಾಗಿ ಭಾವನಾತ್ಮಕತೆ ಹಾಗೂ ಗೇಯತೆಗಳ ಕಡೆಗಿನ ಖಚಿತ ಒಲವು. ಇತಿಹಾಸದ ವಿಕಾಸ ಅಥವಾ ಸಾಮಾಜಿಕ ಚಲನೆಯ ದಿಕ್ಕಿನ ಸಂಗಡ ತೀವ್ರವಾಗಿ ತೊಡಗಿಸಿಕೊಳ್ಳುವುದು ಅಸಾಧ್ಯವೆನಿಸಿದಾಗ ಬರವಣಿಗೆ 'ಮಾನವತಾವಾದೀ' ಆಶಯಗಳ ಕಡೆಗೆ ಒಲಿಯುತ್ತದೆ. ಅದು ಶೋಷಣೆಯ ವಿರುದ್ಧ ಉಗುರು-ಹಲ್ಲುಗಳಿಲ್ಲದ ಮಾನವತಾವಾದ.

ಆದರೆ ಕವಿತೆ ರಚಿಸಲು ಬೇಕಾದ ಕಸುಬುಗಾರಿಕೆ ಹಾಗೂ ಪ್ರಯೋಗಶೀಲತೆಗಳನ್ನು ಭಟ್ಟರು ಸಾಕಷ್ಟು ಪ್ರಮಾಣದಲ್ಲಿ ರೂಢಿಸಿಕೊಂಡಿದ್ದಾರೆ. ಅವರದು ಶಿಷ್ಟಭಾಷೆಯ ವೈವಿಧ್ಯ ಮತ್ತು ಲಯಗಾರಿಕೆಗಳನ್ನು ಬಳಸಿಕೊಳ್ಳುವ ನಿರುಪಣಾ ವಿಧಾನ. ಸ್ವಗತ ಹಾಗೂ

ಸಂವಾದಗಳೆರಡರ ಸಾಧ್ಯತೆಗಳೂ ಅವರಿಗೆ ಪರಿಚಿತವಾದವೇ. ಆ ಬಗೆಯ ಪೂರ್ವಸಿದ್ಧತೆಯ ಫಲವಾಗಿ ಇಲ್ಲಿ ಹಲವು ವಾಚನೀಯವಾದ ಉತ್ತಮ ಕವಿತೆಗಳಿವೆ.

ಆದರೆ ಈ ಎಲ್ಲ ಕವಿತೆಗಳನ್ನು ಒಟ್ಟಿಗೆ ಸೇರಿಸುವ ಸಂಯೋಜಕಶಕ್ತಿ ಯಾವುದು? ಕನ್ನಡ ಕವಿತೆಯ ಸಂದರ್ಭದಲ್ಲಿ ಇವರ ಅನನ್ಯತೆ ಯಾವ ಬಗೆಯದು ಎಂಬಂತಹ ಪ್ರಶ್ನೆಗಳನ್ನು ಕೇಳಿಕೊಂಡಾಗ ಸರಿಯಾದ ಉತ್ತರಗಳು ಸಿಗುವುದಿಲ್ಲ. ತಾನು ಆಯ್ದುಕೊಂಡ ಪ್ರಕಾರದಲ್ಲಿ ಒಳ್ಳೆಯ ಕೆಲಸಮಾಡಿರುವ, ಆದರೆ ಆ ಪ್ರಕಾರದ ಸಾಧ್ಯತೆಗಳನ್ನೇ ಹಿಗ್ಗಿಸದ 'ಮೈನರ್' ಕವಿಗಳ ಸಾಲಿನಲ್ಲಿ ಈ ಕವಿಯು ಸೇರುವುದು ಅನಿವಾರ್ಯ. ಇದು ಪ್ರಕಟವಾದ ಮನುಷ್ಯಲೋಕದ ವಿಶಿಷ್ಟತೆಯ ಪ್ರಶ್ನೆಯಾಗಲೀ ಅಲ್ಲ. ತನ್ನ ಕಾಲದ ಸಾಂಸ್ಕೃತಿಕ ಸಂಗತಿಗಳ ಜೊತೆಗೆ ತೀವ್ರವಾಗಿ ತೊಡಗಿಸಿಕೊಂಡೂ 'ಮಾಧ್ಯಮ'ದ ಸಾಧ್ಯತೆಗಳನ್ನು ವಿಸ್ತರಿಸಲು ಅಗತ್ಯವಾದ ಪ್ರತಿಭೆಯ ಪ್ರಶ್ನೆ. ಇಷ್ಟು ಹೇಳಿಯೂ ಭಟ್ಟರು ಅನೇಕ ಒಳ್ಳೆಯ ಕವಿತೆಗಳನ್ನು ಬರೆದಿರುವರೆಂದು ಒಪ್ಪಿಕೊಳ್ಳುವುದು ಅನಿವಾರ್ಯ.

'ಸಂಕ್ರಮಣ ಕಾವ್ಯ ಸಂಚಯ' ಮತ್ತು 'ಕನ್ನಡ ತಾಯಿಗೆ ನುಡಿ ನಮನ' ಗಳು ಈ ವರ್ಷ ಪರಿಶೀಲನೆಗೆ ದೊರೆತಿರುವ ಸಂಪಾದಿತ ಸಂಕಲನಗಳು. ಸಂಕ್ರಮಣ ಪತ್ರಿಕೆಯು ಕಳೆದ ಏಳು ವರ್ಷಗಳಿಂದ ನಡೆಸುತ್ತಿರುವ ಕವಿತಾಸ್ಪರ್ಧೆಯಲ್ಲಿ ಬಹುಮಾನಿತವಾದ ಸುಮಾರು ಎಂಭತ್ತು ಕವಿತೆಗಳು ಮೊದಲ ಸಂಕಲನದಲ್ಲಿದ್ದರೆ, ಎರಡನೆಯದು ಕನ್ನಡನಾಡು, ನುಡಿ, ಸಂಸ್ಕೃತಿಗಳ ಬಗ್ಗೆ ನಮ್ಮ ಕವಿಗಳು ಕಾಲದಿಂದ ಕಾಲಕ್ಕೆ ಅಭಿಮಾನದಿಂದ ಹಾಡಿದ ಪದ್ಯಗಳ ಸಂಕಲನ. ಇವುಗಳನ್ನು ಕ್ರಮವಾಗಿ ಚಂದ್ರಶೇಖರ ಪಾಟೀಲ ಮತ್ತು ಎಲ್.ಎಸ್. ಶೇಷಗಿರಿರಾವ್ ಅವರು ಸಂಪಾದಿಸಿದ್ದಾರೆ.

'ಸಂಕ್ರಮಣ'ದ ಕವಿಗಳಲ್ಲಿ ನೂರಕ್ಕೆ ತೊಂಭತ್ತರಷ್ಟು ಹೊಸಬರೆನ್ನುವುದು, ಕರ್ನಾಟಕದ ಮೂಲೆಮೂಲೆಗಳಿಂದ ಬಂದವರೆನ್ನುವುದು ಗಮನೀಯವಾದ ಸಂಗತಿ. ಇಂಥ ಅವಕಾಶ ಪಡೆದವರಲ್ಲಿ ಹತ್ತು ಜನ ಹುಸಿಹೋಗಿ ಒಬ್ಬರು ಉಳಿದರೂ ಅದು ಸಾಧನೆಯೇ. ಚಂಪಾ ಅವರು ಸರಿಯಾಗಿಯೇ ಗುರುತಿಸಿರುವಂತೆ ''ವಸ್ತುವಿನ ಆಯ್ಕೆ, ಅನುಭವದ ಗ್ರಹಿಕೆ, ಭಾಷೆ ಹಾಗೂ ಲಯಗಳ ಬಳಕೆಯ ಅಭ್ಯಾಸದ ಜೊತೆಗೇ ಹೊಸಪೀಳಿಗೆಯ ನಾಡಿ ಹೇಗೆ ಮಿಡಿಯುತ್ತದೆ ಎಂಬುದು ಕೂಡ ಸಂಸ್ಕೃತಿ ವಿಮರ್ಶಕರಿಗೆ ಅಧ್ಯಯನಕ್ಕೆ ಯೋಗ್ಯವಾದ ವಿಷಯವಾಗಿರುತ್ತದೆ.'' ಅಂತಹ ನಾಡಿ ಪರೀಕ್ಷೆಗೆ ಇಲ್ಲಿ ಅವಕಾಶವಿದೆ. ಕೆ.ಪಿ. ಮೃತ್ಯುಂಜಯ, ಶಿವಯೋಗಿ ಮೊಗಲಿ, ಕುಮಾರ ಜೋಶಿ, ಬಂಜಗೆರೆ ಜಯಪ್ರಕಾಶ ಮುಂತಾದವರ ರಚನೆಗಳು ಉತ್ತಮವಾಗಿವೆ.

ಸುಮಾರು ಐವತ್ತು ವರ್ಷಗಳ ಹಿಂದೆಯೇ ರಚಿತವಾದ 'ಕನ್ನಡ ಬಾವುಟ'ದ ಮಾದರಿಯಲ್ಲಿ ಹೊರಬಂದಿರುವ 'ಕನ್ನಡ ತಾಯಿಗೆ ನುಡಿನಮನ' ರಚಿತ ಕವಿಗಳಿಂದ ಹಿಡಿದು ಶಾಸನಗಳವರೆಗೆ ಹಲವು ಕವಿತೆಗಳನ್ನು, ಕಾವ್ಯಭಾಗಗಳನ್ನು ಹೊಂದಿದೆ. ಕನ್ನಡ ಕರ್ನಾಟಕಗಳನ್ನು ಇರಬೇಕೆಂಬ ಮಾನದಂಡದ ಹಾಗೆ, ಒಳ್ಳೆಯ ಕವಿತೆಯೂ ಆಗಿರಬೇಕೆಂಬ ಮಾನದಂಡ ಇಲ್ಲಿ ಮೂಡಿದಂತಿಲ್ಲ. ಅಭಿರುಚಿಯ ಶುದ್ಧಿಯ ಕೊರತೆಯಿಂದಾಗಿ ಕೆಲವಾದರೂ ಅ-ಕವಿತೆಗಳು, ಕನಿಷ್ಠ ಮುಖ್ಯ ಕವಿತೆಯ ಜೊತೆಯಲ್ಲಿ [illegible] ಕವಿತೆಯಾಗಿಯಾದರೂ ಇಲ್ಲಿ ಸೇರಿಕೊಂಡು ಬಿಟ್ಟಿವೆ.

ಉಳಿದಂತೆ ಸಾಕಷ್ಟು ಒಳ್ಳೆಯ ಕವಿತೆಗಳಿಗೆ ಇಲ್ಲಿ ಅವಕಾಶ ದೊರೆತಿದೆ. ನವೋದಯದ ಪೀಳಿಗೆಯ ನಂತರದವರು ನಾಡು-ನುಡಿಗಳನ್ನು ಕುರಿತಂತೆ ಕವಿತೆ ಬರೆಯುವುದಲ್ಲಿ ಅಷ್ಟೇನೂ ಆಸಕ್ತಿ ತೋರಿಸಿಲ್ಲವೆಂಬ ಕುತೂಹಲಕಾರಿಯಲ್ಲದ ಸಂಗತಿಗೆ ಇಲ್ಲಿ ಸಮರ್ಥನೆ ದೊರಕುತ್ತದೆ. ಆದರೂ 'ಕನ್ನಡ ಬಾವುಟ' ದ ಜೊತೆಯಲ್ಲಿ ಸಂಗ್ರಹಿಸಿಟ್ಟುಕೊಳ್ಳಬೇಕಾದ ಸಂಕಲನ ಇದು.

ಬಂಡಾಯ ಕಾವ್ಯ ಸನ್ನಿವೇಶದ ಫಲಿತವಾಗಿ ಹುಟ್ಟಿದೆಂದೆನ್ನಬಹುದಾದ ಆಶಯಗಳಲ್ಲಿ ಮಾನವಪರವಾದ ಹಾಗೂ ಆಕೃತಿಯಲ್ಲಿ ಹೆಚ್ಚಿನ ಅನನ್ಯತೆ/ಹೊಸತನಗಳನ್ನು ತೋರಿಸದ ಕೆಲವು ಸಂಕಲನಗಳನ್ನು ಒಟ್ಟಾಗಿ ತೆಗೆದುಕೊಂಡು ಕೆಲವು ಮಾತುಗಳನ್ನು ಹೇಳಬಹುದು. ಆರ್. ಮೋಹನ ನಾಗಮ್ಮನವರ ಅವರು ಬರೆದಿರುವ 'ವಿಧಾನಸೌಧ', ವಿಠ್ಠಪ್ಪ ಗೋರಂಟ್ಲಿ ಅವರ 'ಈ ನೆಲದೊಡಲಲ್ಲಿ ', ಪ್ರಹ್ಲಾದ ಅಗಸನಕಟ್ಟೆ ಅವರ 'ಗಲ್ಲುಗಳಲ್ಲಿ ಗುಲಾಬಿ', ಹೊರೆಯಾಲ ದೊರೆಸ್ವಾಮಿಯವರ 'ಬಾ ಚೇತನವೇ ಬಾ', ಮಹೇಶ ನಾವಲಿಯವರ 'ಸಂಗಾತಿ' ಚನ್ನಣ್ಣ ವಾಲೀಕಾರ ಅವರ 'ವಾಲೀಕಾರ ಚೆನ್ನಣ್ಣನ ಮುನ್ನೂರು ಕವನಗಳು' ಮತ್ತು 'ವೈರಿಗಳ ಮಧ್ಯ ಎದ್ದ ಕಗ್ಗತ್ತಲ ಖಂಡದ ಕಾವ್ಯ' ಮುಂತಾದ ಅನೇಕ ಸಂಕಲನಗಳು, ಈ ಗುಂಪಿಗೆ ಸೇರುತ್ತವೆ. ಹಾಗೆಯೇ ಲತಾ ರಾಜಶೇಖರ ಅವರ ' ಶೇಫಾಲಿಕಾ', ಲತಾ ಮೈಸೂರು ಅವರ 'ಆವರಣ'ಗಳನ್ನೂ ಇಲ್ಲಿಯೇ ಹೆಸರಿಸಬಹುದು. ಇದರಲ್ಲಿ ಕೆಲವಾದರೂ ಕಾವ್ಯಶಕ್ತಿಯ ಕೊರತೆ ಸೀಮಿತ ಆಶಯಗಳ ಗೋಡೆಗಳ ನಡುವೆ ಸೆರೆಯಾದವರು. ಪ್ರಹ್ಲಾದ ಮತ್ತು ದೊರೆಸ್ವಾಮಿಯವರ ಕವಿತೆಗಳು ಘೋಷಣೆ, ಚೀರುವಿಕೆಗಳನ್ನು ಹಿಂದೆ ಬಿಟ್ಟು ನಡೆದಿದೆ. ಆದರೂ ಈ ಸಂಕಲನಗಳನ್ನು ಒಂದು ಕಡೆ ಇಟ್ಟು ಸಿದ್ಧರಾಮಯ್ಯ, ಕನಕ, ಮಂಜುನಾಥ ಮುಂತಾದವರ ಕವಿತೆಗಳನ್ನು ಇನ್ನೊಂದು ಕಡೆಗಿಟ್ಟು ನೋಡಿದಾಗ ಕನ್ನಡ ಕವಿತೆಯ ವರ್ತಮಾನದ ನೆಲೆಗಳು ಸ್ಪಷ್ಟವಾಗುತ್ತವೆ. ಕವಿತೆ ಬರೆಯದಿದ್ದರೂ ಕವಿತೆಯೊಳಗೇ ಮನಸ್ಸು ತೋಡಿಕೊಳ್ಳಬೇಕೆಂಬ ಬಯಕೆ ಯಾಕೆ ಮೂಡುವುದೋ ಹೇಳುವುದು ಹೇಗೆ? ಈ ಆಸೆಗೆ ಅನುಗುಣವಾದ ತರಬೇತಿ, ಪೂರ್ವಸಿದ್ಧತೆಗಳು ಸಾಧ್ಯವಾಗುವಂಥ ಸನ್ನಿವೇಶ ಇಂದು ಯಾರಿಗೆ ಎಷ್ಟರಮಟ್ಟಿಗೆ ಇದೆ ಎನ್ನುವುದು ಪ್ರಶ್ನೆ.

ಈ ಸಮೀಕ್ಷೆಯು ಈ ವರ್ಷ ಪ್ರಕಟವಾದ ಎಲ್ಲ ಸಂಕಲನಗಳನ್ನು ಪರಿಶೀಲಿಸಿಲ್ಲ. ಹಾಗೆ ಮಾಡುವುದು ಸಾಧ್ಯವೂ ಇಲ್ಲ, ಅಗತ್ಯವೂ ಇಲ್ಲ. ಈ ಪ್ರಕಟಣೆಗೆ ಪೂರಕವಾದ 'ಪುಸ್ತಕ ಮಾಹಿತಿ'ಯ ಸೂಚಿಕೆಗಳಲ್ಲಿ ಇನ್ನೆಷ್ಟೋ ಸಂಕಲನಗಳ ಪರಿಶೀಲನೆ ಹಾಗೂ 'ಮೊದಲನೋಟ'ಗಳು ಕಾಣಿಸಿಕೊಂಡಿವೆ. ಕೆಲವು ಮುಖ್ಯವಾದ ಸಂಕಲನಗಳ ಪರಿಚಯ ಅದಕ್ಕಿಂತ ಹೆಚ್ಚಾಗಿ,- ಸಂಕಲನಗಳ ನೆಪದಲ್ಲಿ- ಇಂದಿನ ಕನ್ನಡ ಕಾವ್ಯ ಸಂದರ್ಭದಲ್ಲಿ ನಿರ್ಣಾಯಕವಾಗಿರುವ ತಾತ್ವಿಕ ಸಂಗತಿಗಳ ಪರಿಶೀಲನೆಗಾಗಿ ಈ ಅವಕಾಶವನ್ನು ಉಪಯೋಗಿಸಿಕೊಳ್ಳಲಾಗಿದೆ.

## ಜಾನಪದ

*ಹಿ. ಚಿ. ಬೋರಲಿಂಗಯ್ಯ*

೧೯೯೩ ನೆಯ ವರ್ಷ ಜಾನಪದ ಕೃತಿಗಳ ದೃಷ್ಟಿಯಿಂದ ಅಂಥ ಮಹತ್ವದ ಕೃತಿಗಳ ವರ್ಷವಲ್ಲದಿದ್ದರೂ ದೇಸಿ ಆಲೋಚನೆಯ ದೃಷ್ಟಿಯಿಂದ ಗಮನ ಸೆಳೆಯುವಂತಹ ಕೃತಿಗಳು ಹೊರಬಂದಿರುವುದು ಸಂತಸದ ಸಂಗತಿಯಾಗಿದೆ. ಸ್ವಾತಂತ್ರ್ಯ ನಂತರದ ನಮ್ಮ ಜಾನಪದ ಅಧ್ಯಯನ ವಿಶ್ವವಿದ್ಯಾಲಯದ ಇಂಗ್ಲಿಷ್ ಬಲ್ಲ ಅಧ್ಯಾಪಕರ ಕೈಗೆ ಸಿಕ್ಕಿಕೊಂಡ ಕಾರಣ ಪ್ರತಿಯೊಂದನ್ನೂ ಪಾಶ್ಚಾತ್ಯ ಸಿದ್ಧಾಂತಗಳ ಕನ್ನಡಿಯಲ್ಲಿಟ್ಟು ನೋಡುವ ಕೆಟ್ಟ ಪರಿಪಾಠವೊಂದು ಬೆಳೆದಿತ್ತು. ಆದರೆ ಈ ಪರಿಪಾಠವನ್ನು ಬದಿಗೆ ಸರಿಸುವ ಮತ್ತು ಸ್ವತಂತ್ರ ಆಲೋಚನೆಯ ದೇಸೀ ಪ್ರಜ್ಞೆಯೊಂದು ನಮ್ಮ ವಿದ್ವಾಂಸರಲ್ಲಿ ಇದೀಗ ಕುಡಿಯೊಡೆಯತೊಡಗಿದೆ. ಈ ದೃಷ್ಟಿಯಿಂದ ಈ ವರ್ಷ ಪ್ರಕಟವಾಗಿರುವ ಕೆಲವು ಕೃತಿಗಳು ಆ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನಗಳಾಗಿವೆ. ಡಾ. ವೀರಣ್ಣ ದಂಡೆಯವರ 'ಕನ್ನಡ ಜಾನಪದ ಪ್ರಜ್ಞೆ,' ಶ್ರೀ ಮುದೇನೂರ ಸಂಗಣ್ಣನವರ 'ಗೊಂದಲಿಗರ ದೇವೇಂದ್ರಪ್ಪನವರ ಆಟಗಳು', ಡಾ. ಟಿ. ಗೋವಿಂದರಾಜು ಅವರ 'ಚನ್ನಾದೇವಿ ಅಗ್ರಹಾರ' ಮುಂತಾದ ಕೆಲವು ಪುಸ್ತಕಗಳು ಮೇಲಿನ ಮಾತಿಗೆ ಪೂರಕವಾಗಿ ನಿಲ್ಲುತ್ತವೆ. ಎಸ್.ಎಸ್. ಹಿರೇಮಠ ಅವರ 'ಜಾತ್ರೆಗಳು', ಎ. ವಿ. ನಾವಡ ಅವರ 'ಜಾನಪದ ಸಮಾಲೋಚನೆ,' ಎಂ. ಪ್ರಭಾಕರ ಜೋಷಿ ಅವರ 'ಪ್ರಸ್ತುತ,' ರಾಮಚಂದ್ರ ಉಚ್ಚಿಲ ಅವರ 'ಯಕ್ಷಗಾನ ನಡೆದು ಬಂದ ದಾರಿ' ಮುಂತಾದ ಪುಸ್ತಕಗಳು ವಿದ್ವತ್ ಪೂರ್ಣವಾದ ಅಂಶಗಳಿಂದಾಗಿ ಗಮನ ಸೆಳೆಯುತ್ತವೆ. ಡಾ. ಎಚ್. ಜೆ. ಲಕ್ಕಪ್ಪಗೌಡ ಮತ್ತು ಶ್ರೀ ಬಸವರಾಜ ನೆಲ್ಲಿಸರ ಸಂಪಾದಕತ್ವದಲ್ಲಿ ಸಿದ್ಧಗೊಂಡು ಹೊರಬಂದಿರುವ 'ಮಲ್ಲಿಗೆ ಮೊಗ್ಗು ಸುರಿದಾವೆ' ಎಂಬ ಗ್ರಂಥ ಹಲವು ಲೇಖಕರ ಲೇಖನಗಳನ್ನೊಳಗೊಂಡು ಜಾನಪದದ ವಿವಿಧ ಮುಖಗಳ ವಿಶ್ಲೇಷಣೆಗೆ ಪ್ರಯತ್ನಿಸಿದೆ. ಮೇಲ್ಕಂಡ ಪುಸ್ತಕಗಳಲ್ಲದೆ, ಭಾರತದ ಬೇರೆ ಬೇರೆ ಪ್ರದೇಶಗಳ ಜನಪದ ಕಥೆಗಳ ಅನುವಾದಿತ ಆವೃತ್ತಿಗಳು ಪ್ರಕಟಗೊಂಡಿವೆ. ಡಾ. ಪಿ.ಕೆ. ಖಂಡೋಬ ಅವರ 'ಜಾನಪದ ಮುನ್ನೋಟ' ಹಾಗೂ ಡಾ. ಚನ್ನಣ್ಣ ವಾಲೀಕಾರ ಅವರ 'ವಾಲೀಕಾರ ಚನ್ನಣ್ಣನ ಜಾನಪದ ಲೋಕ' ಪುಸ್ತಕಗಳು ಕೂಡ ಗಮನ ಸೆಳೆಯುತ್ತವೆ. ಇವಿಷ್ಟು ಈ ವರ್ಷದಲ್ಲಿ ಹೆಸರಿಸಬಹುದಾದ ಕೃತಿಗಳಾಗಿದ್ದರೂ ಅನುವಾದಗೊಂಡ ಕೃತಿಗಳನ್ನು ಹೊರತುಪಡಿಸಿ ಉಳಿದ ಕೃತಿಗಳ ಸಂಕ್ಷಿಪ್ತ ಸಮಾಲೋಚನೆಯನ್ನು ಈ ಮುಂದೆ ನೀಡಲಾಗಿದೆ.

*ಕನ್ನಡ ಜಾನಪದ ಪ್ರಜ್ಞೆ:* ಜಾನಪದ ಅಧ್ಯಯನವನ್ನು ಗಂಭೀರವಾಗಿ ಪರಿಗಣಿಸಿದ ವಿದ್ವಾಂಸರಲ್ಲಿ ವೀರಣ್ಣ ದಂಡೆಯವರೂ ಒಬ್ಬರು. ನಮ್ಮ ಸಂಸ್ಕೃತಿಯ ಮುಖ್ಯ ವಿಚಾರವಾದ ಜಾನಪದವನ್ನು ಸಿದ್ಧಗೊಂಡ ವಿದೇಶೀ ತತ್ವಗಳ ನೆಲೆಯಲ್ಲಿ ವಿಶ್ಲೇಷಣೆ ಮಾಡುವ ಹಳೇ ಚಾಳಿಯನ್ನು ಸ್ವಲ್ಪಮಟ್ಟಿಗಾದರೂ ನಿರ್ಲಕ್ಷಿಸಿದ ಮನೋಭಾವದ ಪ್ರತಿಫಲವೇ ' ಕನ್ನಡ ಜಾನಪದ ಪ್ರಜ್ಞೆ'. ಕನ್ನಡ ಜಾನಪದಕ್ಕೆ ತನ್ನದೇ ಆದ ವೈಶಿಷ್ಟ್ಯ ಮತ್ತು ಪರಂಪರೆ ಇರುವಾಗ ಬೇರೊಂದು ಆಮದು ತತ್ವದ ನೆರಳಲ್ಲಿ ವಿಶ್ಲೇಷಿಸುವ ಅಗತ್ಯವಿಲ್ಲವೆಂಬುದನ್ನು ಮನಗಾಣಿಸುವ ಮೂಲಕ, ದೇಸೀಯ ದೃಷ್ಟಿಕೋನವೊಂದನ್ನು ರೂಪಿಸುವ ಪ್ರಯತ್ನವನ್ನು ದಂಡೆಯವರು ಇಲ್ಲಿ ಮಾಡಿದ್ದಾರೆ. ಕಳೆದ ಕೆಲವು ವರ್ಷಗಳ ಹಲವು ಸಂದರ್ಭಗಳಿಗಾಗಿ ಬರೆದ ಸಂಶೋಧನ ಲೇಖನಗಳ ಸಂಗ್ರಹ ಇದಾದರೂ ಈ ಲೇಖನಗಳ ಹಿಂದೆ ಒಂದು ಧೋರಣೆ ಮತ್ತು ಚಿಂತನೆಯ ಬೆನ್ನೆಲುಬು ಇರುವುದರಿಂದ ಸಂಸ್ಕೃತಿಯ ಆಳಕ್ಕೆ ಇಳಿಯುವ ಪ್ರಯತ್ನಗಳನ್ನು ನಾವು ಕಾಣಬಹುದು. ಜನಪದ ಕಥೆಗಳ ಅಧ್ಯಯನ ಕ್ಷೇತ್ರಕ್ಕೆ ಮೊದಲಿನಿಂದಲೂ ಹೆಚ್ಚು ಗಮನ ಹರಿಸಿದ ದಂಡೆಯವರು ಇಲ್ಲಿ ಕೂಡ ಅವುಗಳ ಸಾಂಸ್ಕೃತಿಕ ಮೌಲ್ಯ ಮತ್ತು ಆಶಯಗಳನ್ನು ಕುರಿತು ವೈಜ್ಞಾನಿಕವಾಗಿ ಚಿಂತಿಸುತ್ತಾರೆ. ಪುರಾಣ, ಐತಿಹ್ಯ, ಗಾದೆ, ಒಗಟು ಮತ್ತು ಕಲೆಗಳನ್ನು ಕುರಿತಾದ ಮೌಲಿಕ ಲೇಖನಗಳು ಈ ಪುಸ್ತಕದಲ್ಲಿವೆ.

*ಗೊಂದಲಿಗರ ದೇವೇಂದ್ರಪ್ಪನವರ ಆಟಗಳು* : ಕರ್ನಾಟಕದ ವೃತ್ತಿಗಾಯಕರನ್ನು ಕುರಿತು ಆಗಿರುವ ಕೆಲವೇ ಅಧ್ಯಯನಗಳ ಸಾಲಿಗೆ ಈ ಕೃತಿಯೂ ಸೇರುತ್ತದೆ. ಹಿರಿಯ ಜಾನಪದ ಆಸಕ್ತರೂ ಜನಪದ ರಂಗಭೂಮಿಯ ಬಗ್ಗೆ ವಿಶೇಷ ಮುತುವರ್ಜಿಯಿಂದ ಕೆಲಸ ಮಾಡಿದವರೂ ಆದ ಶ್ರೀ ಮುದೇನೂರ ಸಂಗಣ್ಣನವರು ಗೊಂದಲಿಗರ ಜೊತೆಗಿನ ತಮ್ಮ ಹಲವಾರು ವರ್ಷಗಳ ಒಡನಾಟದ ಅನುಭವದಿಂದಾಗಿ ಅತ್ಯಂತ ಸಮರ್ಪಕವಾದ ರೀತಿಯಲ್ಲಿ ಈ ಕೃತಿಯನ್ನು ಹೊರ ತಂದಿದ್ದಾರೆ. ಕೇವಲ ವೃತ್ತಿಗಾಯಕ ಕಾವ್ಯವನ್ನಾಗಿ ಪರಿಗಣಿಸುವ ಬದಲು ಇಡೀ ಗೊಂದಲಿಗರ ಮೇಳವನ್ನು ಕಥನ ರೂಪದ 'ಆಟ'ವನ್ನಾಗಿ ಪರಿಭಾವಿಸಿರುವುದು ಇಲ್ಲಿನ ವಿಶೇಷ ಅಂಶ. ಮೂಲತಃ ರಂಗಭೂಮಿ ಮತ್ತು ಅದರ ಸಾಧ್ಯತೆಗಳ ಬಗ್ಗೆ ಅಪಾರ ಪರಿಜ್ಞಾನವಿರುವ ಶ್ರೀ ಸಂಗಣ್ಣನವರು ಜನಪದ ರಂಗಭೂಮಿಯ ಹಲವು ಲಕ್ಷಣಗಳನ್ನು ಗೊಂದಲಿಗರ ಆಟದಲ್ಲಿ ಗುರುತಿಸಿರುವುದು ಸಹಜವೇ ಆಗಿದೆ. ಗೊಂದಲಿಗರು ಅಂಬಾಭವಾನಿಯ ಭಕ್ತರಾಗಿ, ಕರ್ನಾಟಕ ಮತ್ತು ಮಹಾರಾಷ್ಟ್ರದ ಸಮ್ಮಿಶ್ರ ಸಂಸ್ಕೃತಿಯನ್ನು ಮೈಗೂಡಿಸಿಕೊಂಡವರಾಗಿ ಈ ಎರಡೂ ರಾಜ್ಯಗಳ ನಡುವಿನ ಸಾಂಸ್ಕೃತಿಕ ಸಂಬಂಧವನ್ನು ಶ್ರೀಮಂತಗೊಳಿಸಿದ ರೀತಿಯನ್ನು ಈ ಪುಸ್ತಕದ ಪೀಠಿಕೆಯಲ್ಲಿ ಚೆನ್ನಾಗಿ ಮನನ ಮಾಡಿ ಕೊಡಲಾಗಿದೆ. ಹಾಗೆಯೇ ಈ ಪ್ರಕಾರವನ್ನು ಹೋಲುವ ಚೌಡಿಕೆ, ಕಿನ್ನರ ಜೋಗಿ ಮುಂತಾದ ಸಂಪ್ರದಾಯಗಳನ್ನು ತೌಲನಿಕವಾಗಿ ಹಾಗೂ ಸಂಕ್ಷಿಪ್ತರೂಪದಲ್ಲಾದರೂ ಅಧ್ಯಯನಾತ್ಮಕವಾಗಿ ವಿಶ್ಲೇಷಿಸಿರುವುದು ಈ ಕೃತಿಯ ಗುಣಮಟ್ಟವನ್ನು ಹೆಚ್ಚಿಸಿದೆ. ಕೇವಲ ಸಂಗ್ರಹಮಾಡಿ ಸಾರಾಸಗಟಾಗಿ ಪ್ರಕಟಿಸಿ ತಮ್ಮ ಕರ್ತವ್ಯ ಮುಗಿಯಿತೆಂದು ತಿಳಿಯುವ ಅನೇಕರಿಗೆ ಈ ಪುಸ್ತಕದ ಪೀಠಿಕೆ ಪಾಠ ಕಲಿಸುತ್ತದೆ. ಒಟ್ಟಾರೆಯಾಗಿ ಬಳ್ಳಾರಿ ಜಿಲ್ಲೆಯ ಪ್ರಸಿದ್ಧ

ಕಲಾವಿದರಾಗಿದ್ದ ಶ್ರೀ ದೇವೇಂದ್ರಪ್ಪನವರ ಸಾಹಿತ್ಯ ಸಂಗ್ರಹದ ಮೂಲಕ ಇಡೀ ಗೊಂದಲಿಗರ ಸಂಪ್ರದಾಯವನ್ನು ಮತ್ತು ಜನಪದ ರಂಗಭೂಮಿಗೆ ಅವರ ಕೊಡುಗೆಯನ್ನು ಅಧಿಕೃತವಾಗಿ ವಿಶ್ಲೇಷಿಸಿರುವ ಶ್ರೀ ಸಂಗಣ್ಣನವರ ಪ್ರಯತ್ನ ಕೇವಲ ಜಾನಪದ ಕ್ಷೇತ್ರಕ್ಕಷ್ಟೇ ಅಲ್ಲದೆ, ರಂಗಭೂಮಿಗೂ ಒಂದು ಪ್ರಮುಖ ಕೊಡುಗೆಯಾಗುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ.

*ಚನ್ನಾದೇವಿ ಅಗ್ರಹಾರ ಜಾನಪದೀಯ ಅಧ್ಯಯನ :* ತನ್ನದೇ ಆದ ಹಳ್ಳಿಯನ್ನು ಕುರಿತು ಅಧ್ಯಯನವನ್ನು ಮಾಡಹೊರಡುವ ಯಾವುದೇ ಜಾನಪದ ಕ್ಷೇತ್ರಕಾರ್ಯಕರ್ತನಿಗೆ ಎದುರಾಗುವ ಸಮಸ್ಯೆಗಳು ಹಲವು. ಒಂದು ಹಳ್ಳಿ ಯಾವ ಯಾವ ದೃಷ್ಟಿಯಿಂದ ಹೇಗಿದೆ ಎಂಬ ವಿಪುಲ ಮಾಹಿತಿಗಳನ್ನು ಸಂಗ್ರಹಿಸಿ ಪಟ್ಟಿ ಮಾಡಿ ಪ್ರಕಟಿಸುವ ಕೆಲಸ ಅಷ್ಟೇ ಆದರೆ ಅದು ಅಂಥ ಸವಾಲಿನ ಕೆಲಸವೇನೂ ಅಲ್ಲ. ಆದರೆ ಒಂದು ಹಳ್ಳಿಯ ಸಮಸ್ತ ಬದುಕನ್ನು ಅದರ ಎಲ್ಲ ಒಳಸುಳಿಗಳ ಒತ್ತಡದಲ್ಲಿ ಸರಿಯಾಗಿ ಗ್ರಹಿಸುವ ಕೆಲಸ ಅಷ್ಟು ಸುಲಭದ್ದಂತೂ ಅಲ್ಲ. ಚನ್ನಾದೇವಿ ಅಗ್ರಹಾರ ಕೃತಿಯನ್ನು ಓದುವಾಗ ಶ್ರೀ ಗೋವಿಂದರಾಜು ಕೂಡ ಇಂಥ ಸಂದಿಗ್ಧಗಳಿಗೆ ಸಿಲುಕಿದ್ದಾರೆನ್ನಬಹುದಾದರೂ ಸಾಕಷ್ಟು ಕಡೆ ಇವೆಲ್ಲವನ್ನೂ ಒಟ್ಟುಗೂಡಿಸಿ ಅರ್ಥೈಸುವ ಪ್ರಯತ್ನ ಮಾಡಿದ್ದಾರೆ. ಶ್ರೀ ಅರ್ಚಕ ರಂಗಸ್ವಾಮಿ ಭಟ್ಟರವರ 'ಹುಟ್ಟಿದ ಹಳ್ಳಿ' ಯಿಂದ ಪ್ರಸ್ತುತ 'ಚನ್ನಾದೇವಿ ಅಗ್ರಹಾರ'ದ ವರೆಗೆ ಒಂದೇ ಹಳ್ಳಿಯನ್ನು ಇಟ್ಟುಕೊಂಡು ಅಧ್ಯಯನ ಮಾಡಿದವರ ಸಂಖ್ಯೆ ತೀರ ವಿರಳ. ಅದರಲ್ಲೂ ಅರ್ಚಕ ರಂಗಸ್ವಾಮಿ ಭಟ್ಟರು ಹುಟ್ಟಿದ ಹಳ್ಳಿಯನ್ನು ಕುರಿತು ಬರೆದ ಕಾಲಕ್ಕೂ ಗೋವಿಂದರಾಜು ಬರೆಯುತ್ತಿರುವ ಕಾಲಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಅರ್ಚಕ ರಂಗಸ್ವಾಮಿ ಭಟ್ಟರ ಮುಗ್ಧತೆ ಈಗಿನ ಅಧ್ಯಯನಕ್ಕೆ ಸಾಧ್ಯವಾಗುವುದಿಲ್ಲ. ಈ ದೃಷ್ಟಿಯಿಂದ ಸ್ವಾತಂತ್ರ್ಯಾನಂತರದ ಭಾರತದ ಒಂದು ಹಳ್ಳಿಯನ್ನು ಅದರೆಲ್ಲ ಸಮಕಾಲೀನ ಸಮಸ್ಯೆಗಳ ಜೊತೆಯಲ್ಲಿ ಅಧ್ಯಯನ ಮಾಡಿದಾಗ ಮಾತ್ರ ಅದು ಸಾರ್ಥಕವಾಗುತ್ತದೆ. ಮಾಹಿತಿ ಸಂಗ್ರಹ ಮತ್ತು ಅದರ ವಿಂಗಡನೆ ಹಾಗೂ ವಿಶ್ಲೇಷಣೆಯ ದೃಷ್ಟಿಯಿಂದ ಗೋವಿಂದರಾಜು ಗಮನಾರ್ಹ ಕೆಲಸವನ್ನು ಮಾಡಿದ್ದಾರೆ. ಆದರೆ ಸೃಜನಶೀಲ ಬರಹಗಾರನೊಬ್ಬ ಎಲ್ಲ ಸ್ವಾತಂತ್ರ್ಯವನ್ನೂ ವಹಿಸಿ ತನ್ನ ಸ್ವಂತ ಕೃತಿಯಲ್ಲಿ ಒಂದು ಹಳ್ಳಿಯನ್ನು ಪ್ರವೇಶಿಸುವ ಹಾಗೆ ಜಾನಪದ ಅಧ್ಯಯನಕಾರನೊಬ್ಬ ತನ್ನೆಲ್ಲ ಸೂತ್ರಗಳ ಮಿತಿಯ ನಡುವೆಯೂ ಇಂಥ ಒಳಪ್ರವೇಶ ಮಾಡಲು ಸಾಧ್ಯವೇ ಎಂಬುದನ್ನು ಇಲ್ಲಿ ಯೋಚಿಸಬೇಕಾಗಿದೆ. ಇಂಥ ಆಲೋಚನೆಗಳಿಗೆ ಪೂರಕವಾಗಿ ಗೋವಿಂದರಾಜುರವರ ಜಾನಪದೀಯ ಅಧ್ಯಯನ ಒಳ್ಳೆಯ ಸಾಮಾಗ್ರಿಯಾಗುತ್ತದೆ.

*ಜಾನಪದ ಮುನ್ನೋಟ :* ಗುಲ್ಬರ್ಗಾ ವಿಶ್ವವಿದ್ಯಾಲಯದ ಡಾ. ಪಿ.ಕೆ. ಖಂಡೋಬಾ ಅವರ ಈ ಪುಸ್ತಕದಲ್ಲಿ ವಿವಿಧ ಸೆಮಿನಾರುಗಳು ಮತ್ತು ಅಭಿನಂದನ ಗ್ರಂಥಗಳಿಗಾಗಿ ಬರೆದ ಒಟ್ಟು ಹನ್ನೆರಡು ಲೇಖನಗಳಿವೆ. ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಲೇಖನಗಳು ಇವಾಗಿದ್ದು ಹಲವು ವಿಚಾರಗಳ ಬಗ್ಗೆ ಬೆಳಕು ಚೆಲ್ಲುತ್ತವೆ. ಕ್ಷೇತ್ರ

ಕಾರ್ಯದ ಕೊರತೆ ಎದ್ದು ಕಾಣುತ್ತದೆ. ಜಾನಪದವನ್ನು ಅಭ್ಯಾಸ ಮಾಡಬಯಸುವ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಬಲ್ಲ ಈ ಲೇಖನಗಳು ಬಹುಶಃ ಆ ಉದ್ದೇಶದಿಂದಲೇ ಬರೆದವುಗಳಾಗಿರಬೇಕೆನಿಸುತ್ತದೆ. ಖಂಡೋಬಾ ಅವರ ವಿಚಾರ ವಿಶ್ಲೇಷಣೆಗಳಿಗೆ ಕ್ಷೇತ್ರಕಾರ್ಯದ ಬೆನ್ನೆಲುಬಿದ್ದರೆ ನಿಜಕ್ಕೂ ಒಳ್ಳೆಯ ಪ್ರಬಂಧಗಳಾಗುವ ಅವಕಾಶವಿತ್ತು.

*ಯಕ್ಷಗಾನ ನಡೆದು ಬಂದು ದಾರಿ :* ದಕ್ಷಿಣ ಕನ್ನಡದ ಹಲವರಂತೆ ಬಾಲ್ಯದಿಂದಲೇ ಯಕ್ಷಗಾನದ ಬಗ್ಗೆ ಒಲವು ಬೆಳೆಸಿಕೊಂಡ ರಾಮಚಂದ್ರ ಉಚ್ಚಿಲ ತಮ್ಮ ಪ್ರೀತಿಯ ಯಕ್ಷಗಾನವನ್ನು ಚಿಕಿತ್ಸಕ ಮನಸ್ಸಿನಿಂದ ನೋಡಿದ ಕೆಲವೇ ವಿಮರ್ಶಕರಲ್ಲಿ ಒಬ್ಬರು. ಯಕ್ಷಗಾನ ನಡೆದು ಬಂದ ದಾರಿ ಎಂದರೆ, ಹಾಡುಗಾರಿಕೆ, ಬಣ್ಣ, ವೇಷಭೂಷಣಗಳು ಹಾಗೂ ಪ್ರಸಂಗ ರಚನೆಯಲ್ಲಿ ಆದ ಬೆಳವಣಿಗೆಯ ಜೊತೆಯಲ್ಲೇ ಆದ ಬದಲಾವಣೆಗಳ ಆಗುಹೋಗುಗಳನ್ನು ಕುರಿತು ಚಿಂತಿಸಿದ ಪ್ರಬುದ್ಧ ಮನಸ್ಸೊಂದರ ಆಲೋಚನೆಗಳೇ ಈ ಪುಸ್ತಕ ರೂಪ.

*ಪ್ರಸ್ತುತ :* ಯಕ್ಷಗಾನದ ಒಳಹೊರಗುಗಳನ್ನು ಚೆನ್ನಾಗಿ ಬಲ್ಲ ಎಂ. ಪ್ರಭಾಕರ ಜೋಷಿ ಅವರು ಯಕ್ಷಗಾನ ವಿಮರ್ಶೆಗೆ ಸೈದ್ಧಾಂತಿಕ ರೂಪ ಕೊಟ್ಟವರು. ಕಾಲಮಾನಕ್ಕನುಗುಣವಾಗಿ ಕಲೆ ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುವಾಗ ನಾವು ವಹಿಸಬೇಕಾದ ಎಚ್ಚರ, ಕಲೆಯ ಸ್ಥಿರಾಂಶ ಮತ್ತು ಚರಾಂಶ, ಈ ಹಿನ್ನೆಲೆಯಲ್ಲಿ ಆಧುನಿಕತೆಯನ್ನು ಸ್ವೀಕರಿಸಬೇಕಾದ ರೀತಿ; ಆ ಮೂಲಕ ಯಕ್ಷಗಾನಕ್ಕೆ ನಾವು ನೀಡಬೇಕಾದ ಸೈದ್ಧಾಂತಿಕ ಖಚಿತತೆ ಮುಂತಾದಂತೆ ಯಕ್ಷಗಾನ ರಂಗಭೂಮಿಯ ಮೀಮಾಂಸೆ ಮಾಡಿರುವ ಶ್ರೀ ಜೋಷಿ ತಮ್ಮ ಏಳು ಲೇಖನಗಳ ಈ ಪುಸ್ತಕದ ಮೂಲಕ ತಮ್ಮ ಗಂಭೀರ ಚಿಂತನೆಯನ್ನು ಮಂಡಿಸಿದ್ದಾರೆ.

*ಮಲ್ಲಿಗೆ ಮೊಗ್ಗು ಸುರಿದಾವೆ:* ಎಚ್. ಜೆ. ಲಕ್ಕಪ್ಪಗೌಡ ಮತ್ತು ಬಸವರಾಜ ನೆಲ್ಲಿಸರ ಇವರ ಸಂಪಾದಕತ್ವದಲ್ಲಿ ಬಂದ ಈ ಕೃತಿಯು ಚಿಕ್ಕಮಗಳೂರು ಜಿಲ್ಲೆಯ ಜಾನಪದ ಕಲಾ ಉತ್ಸವ 'ಚೈತ್ರಶ್ರೀ ೯೩' ರ ವಿಶೇಷ ಸಂದರ್ಭಕ್ಕಾಗಿ ಸಿದ್ಧಪಡಿಸಿದ ಜಾನಪದ ಲೇಖನಗಳ ಸಂಕಲನ. ಈ ಹಿಂದೆ ತರೀಕೆರೆಯ ಐತಿಹಾಸಿಕ ಜಾನಪದ ಸಮ್ಮೇಳನದಲ್ಲಿ ಹೊರತರಲಾದ 'ಹೊನ್ನ ಬಿತ್ತೇವು ಹೊಲಕೆಲ್ಲ' ಸ್ಮರಣ ಗ್ರಂಥವನ್ನು ನೆನಪಿಗೆ ತರುತ್ತದೆ. ಪ್ರಸ್ತುತ ಸಂಕಲನದ ಸಂಪಾದಕರ ಮಾತಿನಲ್ಲಿಯೇ ಹೇಳುವುದಾದರೆ ' ಜಾನಪದವೆನ್ನುವುದು ವಿಜ್ಞಾನಗಳ ವಿಜ್ಞಾನ'. ಇಂಥ ಬಹುಮುಖ್ಯವಾದ ವಿಜ್ಞಾನವನ್ನು ಇಲ್ಲಿನ ಇಪ್ಪತ್ತೆಂಟು ಲೇಖಕರು ಯಾವ ದೃಷ್ಟಿಕೋನದಿಂದ ನೋಡಿದ್ದಾರೆ ಎನ್ನುವುದು ತುಂಬ ಕುತೂಹಲದ ವಿಚಾರ. ಜೀಶಂಪ, ರಾಮಚಂದ್ರೇಗೌಡ, ಮಾಲಗತ್ತಿ, ದಂಡೆ, ಅಮೃತ ಸೋಮೇಶ್ವರ ಸೇರಿದಂತೆ ಕೆಲವು ವಿದ್ವಾಂಸರನ್ನು ಬಿಟ್ಟರೆ, ಉಳಿದ ಅನೇಕರು ಇನ್ನೂ ತರೀಕೆರೆ ಸಮ್ಮೇಳನದ ಕಾಲದಲ್ಲೇ ಇದ್ದಾರೆ ಎಂದು ಅನುಮಾನ ಉಂಟಾಗುತ್ತದೆ. ಹೇಳಿದ್ದನ್ನೇ ಹೇಳುವ ಹರಕುಬಾಯಿ ದಾಸತನವನ್ನು ಬದಿಗೊತ್ತಿ ವೈಜ್ಞಾನಿಕವೂ ವಿಶಿಷ್ಟವೂ ಆದ ರೀತಿಯಲ್ಲಿ ಈ ಲೇಖನಗಳಿವೆ ಎನ್ನುವ ಸಂಪಾದಕರ ಮಾತನ್ನು ನಂಬಿ ಓದತೊಡಗಿದಂತೆ ನಿರಾಶೆಯಾಗುತ್ತದೆ. ಈ ಸಂಪುಟವನ್ನು ಕುರಿತು

ಒಟ್ಟಾರೆಯಾಗಿ ಹೇಳಬಹುದಾದ ಇನ್ನೊಂದು ಮಾತೆಂದರೆ ಲೇಖನಗಳ ಆಯ್ಕೆ ಮತ್ತು ವಿಂಗಡಣೆಯಲ್ಲಿ ಅಂತರ್‌ಸಂಬಂಧ ಇಲ್ಲದಿರುವುದು. ಈ ದೃಷ್ಟಿಯಿಂದ ಇಲ್ಲಿನ ಲೇಖನಗಳನ್ನು ಬಿಡಿಬಿಡಿಯಾಗಿ ಓದಬಹುದೇ ಹೊರತು ಒಂದು ದರ್ಶನದ ಹಿನ್ನೆಲೆಯಲ್ಲಿ ಅಲ್ಲ. ಈ ಮೇಲಿನ ಟೀಕೆಗಳನ್ನು ಮೀರಿ ಈ ಪುಸ್ತಕದ ಮಹತ್ವ ಇರುವುದು ಜಾನಪದವನ್ನು ಕುರಿತು ವೈಜ್ಞಾನಿಕವಾಗಿ ಚಿಂತಿಸಿರುವ ಕೆಲವೇ ಕೆಲವು ವಿದ್ವಾಂಸರ ವಿಚಾರ ಪೂರ್ಣ ಬರಹಗಳಲ್ಲಿ ಮಾತ್ರ. ಅಷ್ಟರ ಮಟ್ಟಿಗೆ ಇದೊಂದು ಉಪಯುಕ್ತ ಗ್ರಂಥವಾಗಿದೆ.

*ವಾಲೀಕಾರ ಚನ್ನಣ್ಣನ ಜಾನಪದ ಲೋಕ*: ಸಮೃದ್ಧ ಅನುಭವ, ವಿಪುಲ ಮಾಹಿತಿ ಹಾಗೂ ಅಪಾರ ಕಾಳಜಿ ಈ ಪುಸ್ತಕದ ಬಂಡವಾಳ. ಕಳೆದ ಹಲವಾರು ವರ್ಷಗಳಿಂದ ಜನಪದ ಬದುಕಿನ ಬಗ್ಗೆ ತೀವ್ರವಾಗಿ ದುಡಿದಿರುವ ಡಾ. ಚನ್ನಣ್ಣ ವಾಲೀಕಾರ ಸೃಜನಶೀಲ ಸಾಹಿತ್ಯವನ್ನು ಬರೆದವರು. 'ಜಾನಪದ ಸಂಶೋಧನೆ'ಯಿಂದ ದೂರವಿರುವ ಚನ್ನಣ್ಣ ವಿವರಗಳನ್ನು ಕೊಡುವಾಗ ಇದ್ದದ್ದು ಇದ್ದ ಹಾಗೆ ಹೇಳುವ ಪ್ರಾಮಾಣಿಕ. ಹೀಗಾಗಿ ಚನ್ನಣ್ಣನವರ ಈ ಪುಸ್ತಕದಲ್ಲಿ ಗಂಭೀರವಾದ ಮಂಥನವೇನೂ ಇಲ್ಲ. ಆದರೆ ಅಭ್ಯಾಸಿಗಳಿಗೆ ಉಪಯುಕ್ತವಾಗಬಹುದಾದ ಮಾಹಿತಿಗಳು ಹೇರಳವಾಗಿ ದೊರೆಯುತ್ತವೆ.

*ಜಾನಪದ ಸಮಾಲೋಚನ* : ಜಾನಪದ ಅಧ್ಯಯನವನ್ನು ಅತ್ಯಂತ ಗಂಭೀರವಾಗಿ ತಗೆದುಕೊಂಡ ಶ್ರೀ ಎ.ವಿ. ನಾವಡರು ಪ್ರಾಮಾಣಿಕ ಕ್ಷೇತ್ರಕಾರ್ಯ ಮತ್ತು ಕಾಳಜಿ ಪೂರ್ವಕ ವಿಶ್ಲೇಷಣೆಯಿಂದಾಗಿ ಜನಪದ ಆಸಕ್ತರ ಗಮನ ಸೆಳೆದಿದ್ದಾರೆ. ಕನ್ನಡ ಮತ್ತು ತುಳು ಭಾಷೆಗಳೆರಡನ್ನೂ ಸಮರ್ಥವಾಗಿ ಗ್ರಹಿಸಬಲ್ಲ ನಾವಡರು ಆ ಮೂಲಕ ತುಳುಕೇಂದ್ರಿತ ದಕ್ಷಿಣ ಕನ್ನಡದ ಜಾನಪದ ಅಧ್ಯಯನಕ್ಕೆ ಉತ್ತಮ ಕೊಡುಗೆ ನೀಡಿದ್ದಾರೆ. ಪ್ರಸ್ತುತ ಅವರ ಜಾನಪದ ಸಮಾಲೋಚನ ಕೃತಿಯಲ್ಲಿ ಎಂಟು ಲೇಖನಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯ ಕೊರಗರು ಮತ್ತು ಕುಡುಬಿಯರನ್ನು ಕುರಿತ ಎರಡು ಲೇಖನಗಳು ಸಮೃದ್ಧ ಮಾಹಿತಿಯನ್ನೊಳಗೊಂಡಿವೆಯಲ್ಲದೆ ಬುಡಕಟ್ಟು ಅಧ್ಯಯನಕ್ಕೆ ಒಳ್ಳೆಯ ಕೊಡುಗೆಗಳೂ ಆಗಿವೆ. ನಾವಡರ ಲೇಖನಗಳು ಇಂಗ್ಲಿಷ್ ವಿದ್ವಾಂಸರ ವಿಚಾರಗಳಿಂದ ಪೂರಿತವಾದವು ಎಂಬ ಟೀಕೆಗಳಿದ್ದರೂ ಈ ಟೀಕೆ ಸ್ವಲ್ಪ ನಿಜವೆನ್ನಿಸಿದರೂ ನಾವಡರ ಶಕ್ತಿ ಇರುವುದು ಅವರ ಕ್ಷೇತ್ರಾನುಭವ ಮತ್ತು ಆ ನಂತರದ ಅಧ್ಯಯನಾತ್ಮಕ ಶಿಸ್ತಿನಲ್ಲಿ.

*ಜಾತ್ರೆಗಳು* : ಕರ್ನಾಟಕ ದಲಿತ ಸಂಸ್ಕೃತಿಯನ್ನು ಕುರಿತು ಅಪಾರ ಕಾಳಜಿಯಿಂದ ಅಧ್ಯಯನಕ್ಕೆ ತೊಡಗಿರುವ ಎಸ್.ಎಸ್. ಹಿರೇಮಠ ಅವರು ಹೇರಲ್ಪಟ್ಟ ಮೌಲ್ಯಗಳನ್ನೇ ಸತ್ಯ ಎಂದು ಪರಿಭಾವಿಸಿದ ಸಮಾಜವೊಂದರ ನಂಬಿಕೆಯನ್ನು ಜನಪದ ಸಂಸ್ಕೃತಿಯ ಹಸಿ ಹಸಿ ಉದಾಹರಣೆಗಳ ಮೂಲಕ ಒಡೆಯುವ ಕೆಲಸಕ್ಕೆ ಪ್ರಯತ್ನಿಸಿದ್ದಾರೆ. ಈ ಮೂಲಕ ಮೂಲ ಸಂಸ್ಕೃತಿಯ ತತ್ವಗಳು ಸ್ಥಾಪಿತ ಮೌಲ್ಯದ ವಿರುದ್ಧ ಪ್ರತಿಸಂಸ್ಕೃತಿಯೊಂದನ್ನು ನಿರ್ಮಾಣ ಮಾಡುವ ಅಗತ್ಯವೂ ಇದೆ ಎಂದು ನಂಬಿದ್ದಾರೆ. ಹಿರೇಮಠರು ಕೆಲವು ದಿಢೀರ್ ತೀರ್ಮಾನ ಹಾಗೂ ನಿರ್ಧಾರಗಳಿಗೆ ಬರುವ ಮೂಲಕ ತಮ್ಮ ಹಾದಿಯನ್ನು ತಾವೇ ಅಂಕುಡೊಂಕು ಮಾಡಿಕೊಳ್ಳುತ್ತಿದ್ದಾರೆ ಅನ್ನಿಸುತ್ತದೆ. ಇಂಡಿಯಾದಂಥ ಸಂಕೀರ್ಣ ಜನಜೀವನದ ಶೈಲಿಯಲ್ಲಿ ಸಂಸ್ಕೃತಿಯ ವ್ಯಾಖ್ಯಾನ ಅಷ್ಟು

ಸುಲಭದ ಮಾತಲ್ಲ. ಈ ಸವಾಲನ್ನು ಧೈರ್ಯವಾಗಿ ಎತ್ತಿಕೊಂಡಿರುವ ಹಿರೇಮಠರು ತುಂಬಾ ಸಾವಧಾನದಿಂದ ಮುನ್ನಡೆಯಬೇಕಾಗುತ್ತದೆ. ದ್ರಾವಿಡರ ಆಗಮನಕ್ಕಿಂತ ಮೊದಲು ಹೊಲೆ ಮಾದಿಗರು ಈ ಭೂಮಿಯ ಕೃಷಿಕರಾಗಿದ್ದರು ಹಾಗೂ ದ್ರಾವಿಡರು ವಲಸೆಗಾರ ಪಶುಪಾಲಕರಾಗಿ ಇಲ್ಲಿಗೆ ಬರುವ ಮೂಲಕ ಕೃಷಿಯನ್ನು ಕೈವಶ ಮಾಡಿಕೊಂಡರು ಎಂಬುದು ಹಿರೇಮಠರ ವಾದ. ಅವರ ಒಟ್ಟಾರೆ ಕೃತಿ ಓದಿದಾಗ ಅವರು ಕೊಟ್ಟಿರುವ ವಿಪುಲ ಮಾಹಿತಿಗಳನ್ನು ಗಮನಿಸಿದಾಗ ಅಲ್ಲಲ್ಲೋ ಸತ್ಯ ಕೈಗೆ ಸಿಗದೆ ಓಡಾಡುತ್ತಿದೆ ಅನ್ನಿಸುತ್ತದೆ.



# ಅನುವಾದ

*ಓ. ಎಲ್. ನಾಗಭೂಷಣ ಸ್ವಾಮಿ*

ಈ ವರ್ಷದ ಅನುವಾದ ಕೃತಿಗಳಲ್ಲಿ ಸಮೀಕ್ಷೆಗೆ ಒದಗಿದವು ನಲವತ್ತು ಪುಸ್ತಕಗಳು ಮಾತ್ರ. ಇವುಗಳಲ್ಲಿ ಮಕ್ಕಳ ಪುಸ್ತಕಗಳು ಅಧಿಕ ಸಂಖ್ಯೆಯಲ್ಲಿವೆ (೧೫). ಅನಂತರದ ಸ್ಥಾನ ಕತೆ ಕಾದಂಬರಿಗಳದ್ದು (೧೦). ವೈಚಾರಿಕ ಕೃತಿಗಳು (೯)ನಂತರದ ಸ್ಥಾನದಲ್ಲಿವೆ. ಕವನಗಳ ಅನುವಾದ ೬, ನಾಟಕಗಳು ೨, ಸಂಕೀರ್ಣ ಜಾತಿಯ ಕೃತಿಗಳು ೨ ಇವೆ. ಧಾರ್ಮಿಕ ಸ್ವರೂಪದ ಕೃತಿಗಳು ಎರಡು ಬಂದಿವೆ.

ಮಕ್ಕಳ ಪುಸ್ತಕಗಳಲ್ಲಿ ಹನ್ನೆರಡು ನ್ಯಾಶನಲ್ ಬುಕ್ ಟ್ರಸ್ಟ್‌ನ ಪ್ರಕಟಣೆಗಳು. ಉತ್ತಮ ಗುಣಮಟ್ಟದ ಪ್ರಕಟಣೆಗಳು ಇವು. ಆದರೆ ಅನುವಾದದ ಬಗ್ಗೆ ಇದೇ ಮಾತನ್ನು ಹೇಳುವುದು ಕಷ್ಟ. ಇಂಗ್ಲಿಷಿನ ಮೂಲಕ್ಕೆ ನಿಷ್ಠವಾಗಿರಬೇಕೆಂಬ ಹಂಬಲದಿಂದಾಗಿ ಕನ್ನಡ ಕೆಲವೆಡೆ ತೊಡಕಾಗುತ್ತದೆ. ಮುಖ್ಯವಾಗಿ ಜಪಾನಿನ ಬರಹಗಳ ಇಂಗ್ಲಿಷ್ ರೂಪದಿಂದ ಕನ್ನಡಕ್ಕೆ ಬಂದ ''ಹದಿನಾಲ್ಕು ಇಲಿಗಳ ಮನೆ ಬದಲಾವಣೆ'' ''ಚಂದ್ರಣ್ಣನಿಗೆ ನಮಸ್ಕಾರ''ಗಳಲ್ಲಿ ಈ ತೊಡಕು ಕಾಣುತ್ತದೆ. ಕನ್ನಡದ ಮಕ್ಕಳಿಗೆ ಸುಂದರ ಮುದ್ರಣದ, ಕಡಿಮೆ ಬೆಲೆಯ ಪುಸ್ತಕಗಳನ್ನು ಒದಗಿಸುವ ನ್ಯಾಷನಲ್ ಬುಕ್ ಟ್ರಸ್ಟ್‌ನ ಪ್ರಯತ್ನ ಅಭಿನಂದನೀಯ. ಕಾದಂಬರಿಗಳಲ್ಲಿ ತೆಲುಗಿನಿಂದ ಕನ್ನಡಕ್ಕೆ ಬಂದಿರುವ ಜನಪ್ರಿಯ ಕಾದಂಬರಿಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಕನ್ನಡದ ನಿಯತಕಾಲಿಕೆಗಳ ತೆಲುಗು ಕಾದಂಬರಿಗಳ ಅನುವಾದವನ್ನು ಹೆಚ್ಚಾಗಿ ಪ್ರೋತ್ಸಾಹಿಸುತ್ತಿರುವುದೂ ಇದಕ್ಕೆ ಕಾರಣವಿರಬಹುದು. ಮೂರುಭಾಗಗಳಲ್ಲಿರುವ, ಸರಿತಾಜ್ಞಾನಾನಂದ ಅನುವಾದಿಸಿರುವ 'ಕ್ಲಿನಿಕ್',ರಘುಸುತರು ಅನುವಾದಿಸಿರುವ 'ಅಮೃತ ಕಳಸ'ಮತ್ತು 'ಹೆಂಡ್ತಿಬೇಕು'ಇಂಥವು ಈ ಬಗೆಯ ಅನುವಾದದ ಮಾದರಿಗಳು. ವೇಗದ ಓಟವುಳ್ಳ ಕಡೆ, ಕಪ್ಪು ಬಿಳುಪಿನ ಪಾತ್ರಚಿತ್ರಣ, ಇವುಗಳಿಂದ ಈ ಕೃತಿಗಳು ಓದುಗರನ್ನು ಸೆಳೆಯುತ್ತವೆ. ಆದರೆ ಕಾದಂಬರಿಯನ್ನು ಸೃಜನಶೀಲತೆಯ ಪ್ರಕಾರ ಎಂದು ಎಣಿಸುವವರಿಗೆ ಪತ್ರಿಕೆಗಳ ಕೃಪಾಪೋಷಿತ ತೆಲುಗು ಕೃತಿಗಳ ಕನ್ನಡ ರೂಪ ನಿರಾಸೆ ಹುಟ್ಟಿಸುತ್ತದೆ. ಒಂದು ದೃಷ್ಟಿಯಿಂದ ಇಂಥ ತೆಲುಗು ಕಾದಂಬರಿಗಳು ಕನ್ನಡದ ಸೃಜನಶೀಲತೆಗೆ ಧಕ್ಕೆ ತರುತ್ತವೆಂದೂ ಅನಿಸುತ್ತದೆ.

ಮಲೆಯಾಳಂನಿಂದ ಕನ್ನಡಕ್ಕೆ ಬಂದಿರುವ ಪೊಟ್ಟೆಕಾಟ್ ಅವರ 'ವಿಷಕನ್ನಿಕೆ'(ಅನುವಾದ:ಕೃಷ್ಣಭಟ್ಟ ಅರ್ತಿಕಜೆ)ಗುಜರಾತಿನಿಂದ ಬಂದಿರುವ ಸೈಯದ್ ಅಬ್ದುಲ್ ಮಲ್ಲಿಕ್ ಅವರ ''ಸೂರ್ಯನ ಕಾಂತಿಯ ಕನಸು''(ಅನು:ಎ.ಎಂ. ರಾಮಚಂದ್ರ) ಮತ್ತು ಬಂಗಾಳಿಯಿಂದ ಬಂದಿರುವ 'ಗೆದ್ದಲು'(ಅನು:ಗೀತಾ ವಿಜಯಕುಮಾರ್)ಇವು ಈ ವರ್ಷದ ಉತ್ತಮ ಅನುವಾದಿತ ಕಾದಂಬರಿಗಳೆಂದು ಗಮನಸೆಳೆಯುತ್ತವೆ. ವಾಸ್ತವ ನಿರೂಪಣೆ, ಭಾವಗೀತೆಯ ಗುಣ ಎರಡೂ ಇರುವ, ನೈತಿಕತೆಯ ಪ್ರಶ್ನೆಯನ್ನು ಮೀರಿ ಮಾನವ ಸಹ ಸಂಬಂಧದ ಪ್ರಣಯಕತೆ ಹೇಳುವ 'ಸೂರ್ಯಕಾಂತಿಯ ಕನಸು' ಕನ್ನಡಕ್ಕೆ ಒಂದು ಉತ್ತಮ ಕೊಡುಗೆ. 'ವಿಷಕನ್ನಿಕೆ' ಮಲಬಾರು ಪ್ರದೇಶದ ವಲಸೆಗಾರ ಕ್ರಿಶ್ಚಿಯನ್ನರ ನೆಲದ ಸಮಸ್ಯೆಯನ್ನು ಚಿತ್ರಿಸುವ ಕಾದಂಬರಿ. ಅಲ್ಲಲ್ಲಿ ಕನ್ನಡಕ್ಕೆ ಒಗ್ಗದ ಭಾಷಾಬಳಕೆ ತೊಡಕು ಉಂಟುಮಾಡುತ್ತಾದರೂ ಮನಸ್ಸಿನಲ್ಲಿ ಬಹುಕಾಲ ಉಳಿವ ಕೃತಿ ಇದು. ಇಂಥ ಭಾರತೀಯ ಭಾಷಾ ಕೃತಿಗಳನ್ನು ಪರಸ್ಪರರಿಗೆ ಒದಗಿಸಿಕೊಡುವ ನ್ಯಾಶನಲ್ ಬುಕ್ ಟ್ರಸ್ಟ್‌ನ ಪ್ರಯತ್ನಕ್ಕೆ ಹೆಚ್ಚಿನ ಜನಮನ್ನಣೆ ದೊರೆಯಬೇಕಾದದ್ದು ಅಗತ್ಯವಾಗಿದೆ.

ಅನುವಾದದ ಮುಖಾಂತರ ಕನ್ನಡಕ್ಕೆ ಬಂದಿರುವ ವೈಚಾರಿಕ ಕೃತಿಗಳು ಕನ್ನಡದ ಮತ್ತು ಭಾರತದ ಮನಸ್ಸು ಇತ್ತೀಚೆಗೆ ಬಿಡಿಸಲು ಪ್ರಯತ್ನಿಸುತ್ತಿರುವ ಪ್ರಶ್ನೆಗಳನ್ನು ಕುರಿತಂತೆ ಇವೆ. ಅದರಲ್ಲೂ ಹಿಂದೂ- ಮುಸ್ಲಿಂ ಸಮಸ್ಯೆ, ಭಾರತೀಯ ಸಮಾಜದ ಇತರ ತೊಡಕುಗಳು ಈ ಕೃತಿಗಳ ಮುಖ್ಯ ಆಶಯಗಳಾಗಿವೆ. ನವಕರ್ನಾಟಕ ಸಂಸ್ಥೆ ಮತ್ತು ಓರಿಯಂಟ್ ಲಾಂಗ್‌ಮನ್ ಸಂಸ್ಥೆಯವರು ಇಂಥ ವೈಚಾರಿಕ ಕೃತಿಗಳ ಅನುವಾದಗಳನ್ನು ಪ್ರಕಟಿಸುತ್ತಿರುವುದು ಸ್ತುತ್ಯ. ಆನಂದ ಅವರು ಅನುವಾದಿಸಿರುವ ''ಪೂರ್ವಾಗ್ರಹ ಮತ್ತು ಮತಶಕ್ತಿ'' ಸಂಘಪರಿವಾರದ ''ಹಿಂದುತ್ವ'' ಮತ್ತು ''ಕೋಮುವಾದ '' ಗಮನಸೆಳೆವ ಕೃತಿಗಳು. ಕುಸುಮಾಶಂಕರನಾರಾಯಣ ಅವರು ಅನುವಾದಿಸಿರುವ ''ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ '' ಗಂಭೀರ ಅಧ್ಯಯನವನ್ನು ಬೇಡುವ ಉತ್ತಮ ಕೃತಿ. ಬಿ.ಮಾಧವ ಅನುವಾದಿಸಿರುವ ''ಸಮಾಜವಾದಕ್ಕೆ ಭಾರತದ ದಾರಿ'' ವಿಚಾರ ಪ್ರಚೋದಕವಾಗಿದೆ.

ಮೂರು ಮುಖ್ಯವಾದ ನಾಟಕಗಳ ಅನುವಾದಗಳು ಈ ವರ್ಷ ಪ್ರಕಟವಾಗಿವೆ: ಪ್ರೇಮಾಕಾರಂತರ ''ಗುಜರಾತಿ ಏಕಾಂಕಗಳು'' ಕೆ.ಮರುಳಸಿದ್ದಪ್ಪ ಅವರು ಅನುವಾದಿಸಿರುವ ಟಾಗೂರರ ''ರಕ್ತ ಕಣಗಿಲೆ'' ಮತ್ತು ಸಿ.ಪಿ.ಕೆ ಅನುವಾದಿಸಿರುವ ''ಫಿಲೋಕ್ರೆತಸ್''. ಸಿಪಿಕೆ ಅವರ ಅನುವಾದ ವಾಚನೀಯತೆಯೇ ಮುಖ್ಯ ಉದ್ದೇಶವಾಗಿರುವಂಥದ್ದು. ಮರುಳಸಿದ್ದಪ್ಪನವರ ಅನುವಾದ ಟಾಗೂರರ ಆಶಯವನ್ನು ಸಮರ್ಥವಾಗಿ ಕನ್ನಡಕ್ಕೆ ಪರಿಚಯಿಸುವಂಥದು. ಪ್ರೇಮಾಕಾರಂತರ ಅನುವಾದ ರಂಗಭೂಮಿಯ ಪ್ರಯೋಗದ ಅಪೇಕ್ಷೆಗಳನ್ನು ಗಮನದಲ್ಲಿಟ್ಟುಕೊಂಡಿದೆ.

ಕವನಗಳ ಅನುವಾದದಲ್ಲಿ ಶ್ರೀಮತಿ ವಿಜಯಲಕ್ಷ್ಮಿಯವರ 'ಸ್ಯಾಫೋ ಕಾವ್ಯ''ಗಮನಸೆಳೆಯುತ್ತದೆ. ಪ್ರಾಚೀನ ಗ್ರೀಕ್ ಕವಿಯನ್ನು ಕನ್ನಡಕ್ಕೆ ಪರಿಚಯ

ಮಾಡಿಕೊಡುವಲ್ಲಿ ಯಶಸ್ವಿಯಾಗಿದೆ. ಎಸ್.ಎಸ್.ಒಡೆಯರ್ ಅವರ ''ಅವಳ ತೊಡಿಗೆ''ಹೆಚ್ಚು ನೀತಿಪರವಾಗಿದ್ದು, ಬಾಳಿನ ಪಾಠಗಳನ್ನು ಹೇಳಿಕೊಡುವಂಥ ಕವನಗಳ ಅನುವಾದವಾಗಿದೆ. ವೇಮನ ಪದ್ಯಗಳನ್ನು ಶ್ರೀ ಪಾಟೀಲರು ಪ್ರಕಟಿಸಿದ್ದಾರೆ. ಮಲ್ಲಿಕಾರ್ಜುನ ಪರಡ್ಡಿ, ನಾಗಭೂಷಣಶಾಸ್ತ್ರಿ ಮತ್ತು ದೇಶಪಾಂಡೆಯವರು ''ಬಸವ ಪುರಾಣ''ದ ಅನುವಾದ ಹೊರತಂದಿದ್ದಾರೆ. ಇವುಗಳಲ್ಲದೆ ''ಶಿವಭಕ್ತಿಸಾರ''ವೂ ಈ ವರ್ಷ ಕನ್ನಡಕ್ಕೆ ಬಂದಿದೆ.

ಸಂಕೀರ್ಣ ಪ್ರಕಾರದಲ್ಲಿ ಕೇಶವ ಮೆನನ್‌ರ ''ಗತಿಸಿದ ಕಾಲ''ದ ಎಂ.ಎಸ್.ಮೋಹನ್ ಅವರ ಅನುವಾದ ಗಮನಾರ್ಹವಾದುದಾಗಿದೆ.

ಒಟ್ಟಾರೆಯಾಗಿ ನೋಡಿದಾಗ ಅನುವಾದ ಕೃತಿಗಳಲ್ಲಿ ವೈವಿಧ್ಯ ಕಾಣುತ್ತದೆ. ಆದರೆ ಬಹುತೇಕ ಅನುವಾದಗಳು ನಿರಾಸೆ ಹುಟ್ಟಿಸುತ್ತವೆ. ಅನುವಾದದ ಮುಖ್ಯ ಉದ್ದೇಶ ಇನ್ನೊಂದು ಭಾಷೆ ಗೊತ್ತಿಲ್ಲದ ಕನ್ನಡ ಓದುಗರನ್ನು ತಲುಪುವುದು ತಾನೆ? ಅಂದಮೇಲೆ ಅನುವಾದಕರ ಭಾಷೆಯ ಬಳಕೆಯ ಸಾಮರ್ಥ್ಯವನ್ನು ಮೂಲ ಕನ್ನಡ ಲೇಖಕನೊಬ್ಬನ ಭಾಷಾಸಾಮರ್ಥ್ಯದಂತೆಯೇ ಪರಿಗಣಿಸುವುದು ಅಗತ್ಯ. ಕನ್ನಡದ ಮೂಲ ಲೇಖಕ ಸಮರ್ಥವಾಗಿ ಭಾಷೆ ಬಳಸಿದಾಗ ಸಾಧ್ಯವಾಗುವ ಸಂವಹನ ಅನುವಾದದಲ್ಲೂ ಸಿಗಬೇಕಷ್ಟೆ. ''ನಿನಗೆ ಗುರುವಾರ ಕಾಡಿಗೆ ಹೋಗುವುದಕ್ಕಿದೆ''ಎಂಬಂಥ ಕಾವ್ಯ ಮೂಲ ಭಾಷೆಯ ವ್ಯಾಕರಣಕ್ಕೆ ಹೊಂದಿದರೂ ಕನ್ನಡಕ್ಕೆ ಹಿತವಾಗುವುದಿಲ್ಲ. ಚಂದ್ರನನ್ನು ಚಂದಮಾಮ ಎನ್ನುವುದು ಕನ್ನಡಕ್ಕೆ ಹೊಂದುವಂತೆ ಚಂದ್ರಣ್ಣ ಅನ್ನುವುದು ಹೊಂದುವುದಿಲ್ಲ. ಅನುವಾದಕನ ನಿಷ್ಠೆ ಕನ್ನಡಕ್ಕೂ ಸಲ್ಲಬೇಕಷ್ಟೆ. ಅದು ಈ ವರ್ಷದ ಬಹುತೇಕ ಅನುವಾದಗಳಲ್ಲಿ ಕಾಣುವುದಿಲ್ಲ.



## ಸಂಶೋಧನೆ

*ಶಿವಾನಂದ ವಿರಕ್ತಮಠ*

---

ಸತ್ಯವನ್ನು ಪ್ರಕಟಿಸುವ, ಆ ಮೂಲಕ ಜ್ಞಾನ ಕ್ಷಿತಿಜವನ್ನು ವಿಸ್ತರಿಸುವ ಕ್ರಿಯೆ ಹಾಗೂ ಪರಿಕ್ರಮಗಳು ಎಂದಿಗಿಂತ ಇಂದು ಹೆಚ್ಚು ವಿಸ್ತಾರಗೊಳ್ಳುತ್ತಲಿವೆ. ಇಂತಹ ಸಂದರ್ಭದಲ್ಲಿ ಸಂಶೋಧನಾ ಮಾರ್ಗದ ಹೊಣೆಗಾರಿಕೆಯನ್ನು ಪ್ರಶ್ನಿಸುವುದು ತುಂಬಾ ಅಗತ್ಯವಾಗಿದೆ. ವಸಾಹತುಯುಗದ ಕಾಲದಿಂದಲೂ ಒಂದು ಶಿಸ್ತಿಗೆ ಒಳಪಟ್ಟು ತನ್ನ ಹೊಳಹುಗಳನ್ನು ನೀಡುತ್ತಾ ಬಂದ ಈ ಸಂಶೋಧನಾ ಮಾರ್ಗವು ಇಂದು ಸಮಾಜಕೇಂದ್ರ ಅಥವಾ ಮನುಷ್ಯಕೇಂದ್ರ ಕಾಳಜಿಯ ನೆಲೆಯಲ್ಲಿ ನಡೆಯುತ್ತಿರುವುದನ್ನು ಅದರ ಆರೋಗ್ಯಕರ ಬೆಳವಣಿಗೆ ಎಂದೇ ಹೇಳಬೇಕು. ನಾವು ಗಮನಿಸುತ್ತಿರುವ ಸಾಹಿತ್ಯ ಮತ್ತು ಸಾಹಿತ್ಯೇತರ ಸಂಶೋಧನೆಗಳು ಇಂದು ಬಹುಮಟ್ಟಿಗೆ ಶೈಕ್ಷಣಿಕ ಉದ್ದೇಶದ ಪಿಎಚ್. ಡಿ, ಎಂಫಿಲ್ ಪದವಿಗಳಿಗೆ ಸೀಮಿತವಾಗಿ ನಡೆಯುತ್ತಲಿವೆ. ಪದವಿಯೇತರ ಸಂಶೋಧನೆಗಳು ವಿಶಿಷ್ಟ ಆಸಕ್ತಿ ಕಾರಣದಿಂದಾಗಿ ಪದವಿ ಸಂಶೋಧನೆಗಳಿಗಿಂತ ಹೆಚ್ಚಿನ ಅಧಿಕೃತತೆಯನ್ನು ಸಹಜವಾಗಿಯೇ ಪಡೆದುಕೊಂಡಿವೆ; ಪಡೆದುಕೊಳ್ಳುತ್ತಲಿವೆ. ಆದರೂ ೧೯೯೩ ರಲ್ಲಿ ಪ್ರಕಟವಾದ ಪಿಎಚ್.ಡಿ ಪ್ರಬಂಧಗಳು ಮೇಲಿನ ಮಾತನ್ನು ಸುಳ್ಳಾಗಿಸುವಷ್ಟು ಕೆಲ ಸೂಕ್ಷ್ಮ ಒಳನೋಟಗಳನ್ನು ವ್ಯಕ್ತಪಡಿಸಿ, ಸಫಲವಾಗಿವೆ.

ಈ ವರ್ಷ ಪ್ರಕಟವಾದ ಪಿಎಚ್. ಡಿ ಪ್ರಬಂಧಗಳು ಸಂಶೋಧನಾ ಲೇಖನಗಳ ಸಂಕಲನಗಳು ಮತ್ತು ಇತರ ಕೃತಿಗಳು ಸೇರಿ ಒಟ್ಟು ಹದಿಮೂರು ಪುಸ್ತಕಗಳನ್ನು ಇಲ್ಲಿ ಸಮೀಕ್ಷೆಗೆ ಒಳಪಡಿಸಲಾಗಿದೆ :

ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಗಳ ಖಚಿತ ಹಿನ್ನೆಲೆಯಿಂದ 'ಹಳಗನ್ನಡ ಸಾಹಿತ್ಯಾಧ್ಯಯನ ಸಮೀಕ್ಷೆ' ಮಾಡಿದ ಎಚ್.ಎಸ್. ಶ್ರೀಮತಿಯವರ ಸಂಶೋಧನಾ ಕೃತಿಯು ಅನೇಕ ಕಾರಣಗಳಿಂದ ಮಹತ್ವದ್ದು. ಸಾಹಿತ್ಯದ ಆರಂಭದ ಕಾಲದಿಂದ ಹಿಡಿದು ೧೩ನೆಯ ಶತಮಾನದವರೆಗೆ ಗಡುವನ್ನಿಟ್ಟುಕೊಂಡು ಈ ಅಧ್ಯಯನವನ್ನು ಮಾಡಲಾಗಿದೆ. ಈ ಕಾಲಾವಧಿಯ ಸಾಹಿತ್ಯ ಕುರಿತಾಗಿ ನಡೆದಿರುವ ಅಧ್ಯಯನದ ಕ್ರಮಗಳನ್ನು ಒಂದು ವ್ಯವಸ್ಥಿತವಾದ ಅಭ್ಯಾಸಕ್ಕೆ ಇಲ್ಲಿ ಒಳಪಡಿಸಲಾಗಿದೆ. ಇದಿಷ್ಟೆ ಅಧ್ಯಯನವೂ ಕೂಡ ದೊಡ್ಡ ರಾಶಿಯಷ್ಟಿದೆ ಮತ್ತು ಅನೇಕ ಚೆಲ್ಲಾಪಿಲ್ಲಿ ಚಿಂತನೆಗಳಿಂದ ಕೂಡಿ ಕಲಸುಮೇಲೋಗರವಾಗಿ ಉಳಿದಿದೆ. ಇಂತಹ ರಾಶಿಯನ್ನು ಒಟ್ಟಿಗೆ ತಂದು, ಅದರ

ವಿಧಿವಿಧಾನಗಳನ್ನು ಗುರುತಿಸಿ, ವರ್ಗೀಕರಿಸಿ, ವಿವರಿಸಲಾಗಿದೆ. ಕ್ರೈಸ್ತ ಮಿಶನರಿಗಳು ಮತ್ತು ದೇಸಿ ವಿದ್ವಾಂಸರ ಸಂಪಾದನಾ ಕಾರ್ಯದಿಂದ ಆರಂಭವಾಗಿ ಪ್ರಸ್ತುತ ಅಂತರ್‌ಶಿಸ್ತಿನ ಅಧ್ಯಯನದ ವಿಮರ್ಶಕರವರೆಗಿನ ಚಿಂತನೆಗಳನ್ನು ಇಲ್ಲಿ ಸಮೀಕ್ಷಿಸಲಾಗಿದೆ. ಒಂದು ಶತಮಾನದ ಕಾಲಾವಧಿಯಲ್ಲಿ ಹಳಗನ್ನಡ ಸಾಹಿತ್ಯದ ಅಭ್ಯಾಸದಲ್ಲಿ ಉಂಟಾದ ಮೂರು ಮಾದರಿಗಳನ್ನು ಪ್ರಬಂಧ ಗುರುತಿಸುತ್ತದೆ. ಪರಿಕರ ಪ್ರಧಾನತೆ, ವರ್ಣನಾಪ್ರಧಾನತೆ ಹಾಗು ವಿಶ್ಲೇಷಣಾ ಪ್ರಧಾನತೆಗಳೆಂಬ ಈ ಅಧ್ಯಯನ ಕ್ರಮಗಳ ಹಿಂದೆ ಅಡಗಿರುವ ತಾತ್ವಿಕ ಗ್ರಹಿಕೆಯನ್ನು ಪ್ರಬಂಧ ಮಂಡಿಸುತ್ತದೆ. ಆಧುನಿಕ ವಿಮರ್ಶೆಯ ಸಂದರ್ಭದಲ್ಲಿ ಹಳಗನ್ನಡ ಸಾಹಿತ್ಯದ ಕುರಿತಾಗಿ ಕೆಲವು ಮಹತ್ವದ ಪ್ರಶ್ನೆಗಳನ್ನು ಕೃತಿ ಎತ್ತುತ್ತದೆ. ಕೃತಿಯ ಬಗೆಗೆ ಡಾ.ವಿವೇಕ ರೈ ಅವರು ಹೀಗೆ ಹೇಳುತ್ತಾರೆ:"ಸಾಹಿತ್ಯ ಸ್ವರೂಪದ ಪರಿಕಲ್ಪನೆ, ಸಾಹಿತ್ಯದ ಅಧ್ಯಯನವನ್ನು ಕುರಿತು ಇರುವ ವಿಭಿನ್ನ ದೃಷ್ಟಿಕೋನಗಳು, ಸಾಹಿತ್ಯ ಮೌಲ್ಯಮಾಪನದ ಬಗೆಗಿನ ಪೂರ್ವಗ್ರಹಿಕೆಗಳು - ಇವನ್ನು ಅತ್ಯಂತ ಸಮರ್ಪಕವಾಗಿ, ಮುಕ್ತವಾಗಿ ಮತ್ತು ಆಳವಾಗಿ ಈ ನಿಬಂಧದಲ್ಲಿ ಚರ್ಚಿಸಿದ್ದಾರೆ.... ಇಂತಹ ಅನೇಕ ಮುಖ್ಯ ಕಾರಣಗಳಿಂದಾಗಿ ಇದು ಕನ್ನಡ ವಿಮರ್ಶೆಯ ಕ್ಷೇತ್ರದಲ್ಲಿಯೇ ಬಹಳ ಮಹತ್ವದ ಒಂದು ನಿಂಬಂಧ''.

ಮಾನವೀಯ ನೆಲೆ ಮತ್ತು ಸಾಮಾಜಿಕ ಬದ್ಧತೆಯ ನೆಲೆಯಿಂದ 'ಬಸವೇಶ್ವರ ಮತ್ತು ಪುರಂದರದಾಸ'ರನ್ನು ತುಲನಾತ್ಮಕವಾಗಿ ಅಭ್ಯಸಿಸಲು ಹೊರಟ ಬಸವರಾಜ ಸಬರದರು ಸಾಮ್ಯತೆ ಭಿನ್ನತೆಗಳಿಗಿಂತ ಅವರವರ ವಿಶಿಷ್ಟತೆಯನ್ನು ಕಲೆಹಾಕಿ ದಾಖಲಿಸುವಲ್ಲಿಯೇ ಹೆಚ್ಚಿನ ಮಹತ್ವವನ್ನು ಕೊಡುತ್ತಾರೆ. ಬಸವಣ್ಣನಿಗೆ ಪ್ರೇರಕವಾದ ಕಾಲ - ಸಮಾಜ ಮತ್ತು ಪುರಂದರದಾಸನಿಗೆ ಮುಖ್ಯವಾದ ಕಾಲ - ಸಮಾಜಗಳ ಮಿತಿಯಲ್ಲಿಯೂ ಅವರೀರ್ವರು ಹೇಗೆ ಮಾನವೀಯ ನೆಲೆಯಲ್ಲಿ ಸಮಾನ ಮನಸ್ಕರಾಗಿ ಕಾಣುತ್ತಾರೆಂಬುದನ್ನು ಗುರುತಿಸುವುದು ಲೇಖಕರ ಆಶಯವಾಗಿದೆ. ಅವರವರ ದೃಷ್ಟಿ - ಧೋರಣೆಗಳು ಭಿನ್ನವಾಗಿರುವುದರಿಂದಾಗಿ ಬೇರೆ ಬೇರೆಯಾಗಿಯೇ ಅವರನ್ನು ಅಭ್ಯಸಿಸುವುದು ಸೂಕ್ತವೆಂದೂ ಇಬ್ಬರನ್ನು ತೌಲನಿಕವಾಗಿ ನೋಡುವುದೇ ಅಷ್ಟೊಂದು ಸಮಂಜಸವಲ್ಲವೆಂದು ಸಬರದರು(ಪು ೨೫೨)ಹೇಳುತ್ತಾರೆ. ಇಂದಿನ ಸಾಹಿತ್ಯ ವಲಯದ ಚರ್ಚೆಯಲ್ಲಿ ಬಸವಣ್ಣ, ಪುರಂದರ ಧ್ವನಿಗಳು ಮತ್ತೆ ಮತ್ತೆ ಕೇಳಿಬರುವ ಸಂದರ್ಭದಲ್ಲಿ ಈ ಸಪ್ರಬಂಧದ ಚರ್ಚೆಯು ಮಹತ್ವದ್ದಾಗುತ್ತದೆ.

ಹನ್ನೆರಡನೆಯ ಶತಮಾನದ ವಚನಕಾರರಲ್ಲಿ ಅಲ್ಲಮಪ್ರಭು ಒಬ್ಬ ದಾರ್ಶನಿಕ. ಜ್ಞಾನ ವೈರಾಗ್ಯಗಳ ಮೂರ್ತಿರೂಪ ಆತ. ಆಧ್ಯಾತ್ಮ - ಅನುಭಾವಕ್ಕೆ ಸೀಮಾಪುರುಷನಾದ ಅಲ್ಲಮನ ಕಾವ್ಯಶಕ್ತಿ ಮತ್ತು ಜೀವನ ದೃಷ್ಟಿಗಳನ್ನು ಕುರಿತು ನಾಲ್ಕು ಗೋಷ್ಠಿಗಳನ್ನು ಏರ್ಪಡಿಸಿ, ಆಯಾ ವಿಷಯದಲ್ಲಿ ಪರಿಣತರಾದ ವಿದ್ವಾಂಸರಿಂದ ಲೇಖನಗಳನ್ನು ಬರೆಸಿ, ಪ್ರಕಟಿಸಿದ ಸಂಕಲನ ಕೃತಿ " ಅಲ್ಲಮಪ್ರಭುದೇವರು". ಇಲ್ಲಿ ಲೇಖನಗಳನ್ನು ಬರೆದವರು ಅಲ್ಲಮಪ್ರಭುವಿನ ಬಗೆಗೆ ಮಹತ್ವದ ಸಂಶೋಧನೆಯನ್ನು ನಡೆಸಿರುವವರೇ ಆಗಿರುವುದರಿಂದ ಆತನ ಬಗೆಗೆ ಒಂದು ಪೂರ್ಣ ಪ್ರಮಾಣದ ಗ್ರಂಥವನ್ನು ರೂಪಿಸುವಲ್ಲಿ ಸಾಧ್ಯವಾಗಿದೆ.

ಉದ್ಘಾಟನಾ ಸಮಾರಂಭ ಮತ್ತು ಸಮಾರೋಪ ಸಮಾರಂಭದ ದಾಖಲೆಗಳನ್ನು ಹೊರತುಪಡಿಸಿದರೆ ಉಳಿದ ನಾಲ್ಕು ಗೋಷ್ಠಿಗಳು ಮುಖ್ಯವಾಗಿ ಅಲ್ಲಮನ ಅಧ್ಯಯನಕ್ಕೆ ನೇರವಾಗಿ ಸಂಬಂಧಿಸಿದವುಗಳು. ಈ ನಾಲ್ಕೂ ಗೋಷ್ಠಿಗಳಲ್ಲಿ ಅಧ್ಯಕ್ಷತೆ ವಹಿಸಿದ ಪ್ರೊ.ಜಿ.ಎಸ್.ಸಿದ್ಧಲಿಂಗಯ್ಯ, ಡಾ.ಜಿ. ಎಸ್.ಶಿವರುದ್ರಪ್ಪ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಮತ್ತು ಕೊ. ಚೆನ್ನಬಸಪ್ಪ ಅವರು ಸಮೀಕ್ಷೆಯ ಒಟ್ಟೊಟ್ಟಿಗೆ ಅಲ್ಲಮನ ವ್ಯಕ್ತಿತ್ವ ಮತ್ತು ಶಕ್ತಿತ್ವಗಳನ್ನು ಗುರುತಿಸಿದ್ದಾರೆ.

ಗೋಷ್ಠಿ ೧ರಲ್ಲಿ 'ಜೀವನ ಕಥನ'ವನ್ನು ಎಸ್.ಎಂ.ವೃಷಭೇಂದ್ರ ಸ್ವಾಮಿ ಅವರೂ 'ಸಾಧನೆ ಮತ್ತು ವ್ಯಕ್ತಿತ್ವ 'ವನ್ನು ಪ್ರಭುಶಂಕರ ಅವರೂ ಪರಿಚಯಿಸಿದ್ದಾರೆ. ಗೋಷ್ಠಿ ೨ ರಲ್ಲಿ 'ವಚನಗಳ ಕಾವ್ಯ ಸೌಂದರ್ಯ'ವಿವೇಚನೆಯನ್ನು ಪ್ರೊ. ಸುಜನಾ ಅವರೂ 'ಬೆಡಗಿನ ವಚನಗಳ ವಿವೇಚನೆ'ಯನ್ನು ವಿದ್ವಾನ್ ಡಾ. ಶ್ರೀ ಇಮ್ಮಡಿಶಿವಬಸವ ಸ್ವಾಮಿಗಳೂ 'ಅಲ್ಲಮ ಮತ್ತು ನಾಥ ಸಂಪ್ರದಾಯ' ಕುರಿತು ಜಿ.ಎಂ.ಉಮಾಪತಿ ಶಾಸ್ತ್ರಿಗಳು ವಿವೇಚಿಸಿದ್ದಾರೆ. ಗೋಷ್ಠಿ ೩ ರಲ್ಲಿ 'ಅನುಭವ ಮಂಟಪದಲ್ಲಿ ಅಲ್ಲಮ' ಎನ್. ಎಸ್. ತಾರಾನಾಥರೂ 'ಅಲ್ಲಮ ಮತ್ತು ಶೂನ್ಯ ತತ್ವ' ಎ. ಎಲ್. ಶಿವರುದ್ರಪ್ಪ ಅವರೂ 'ಶಿವಯೋಗ ಮತ್ತು ಪೂರ್ಣಯೋಗ' ಕೊ. ಚೆನ್ನಬಸಪ್ಪ ಅವರೂ ಬರೆದಿದ್ದಾರೆ. ಗೋಷ್ಠಿ ೪ ರಲ್ಲಿ ಎನ್. ಜಿ. ಮಹಾದೇವಪ್ಪ ಅವರ 'ಜಾಗತಿಕ ಅನುಭಾವಿಗಳಲ್ಲಿ ಅಲ್ಲಮ ಪ್ರಭು' ಮತ್ತು ಎಚ್.ಪಿ.ಮಲ್ಲೇದೇವರು ಅವರ 'ಅಲ್ಲಮ ಪ್ರಭುಗಳ ಸಂದೇಶ'ಎಂಬ ಲೇಖನಗಳಿವೆ. ಹೀಗೆ ಹಲವು ದೃಷ್ಟಿಕೊನಗಳಿಂದ ನೋಡಲಾದ ಈ ಸಂಕಲನವು 'ಅಲ್ಲಮ ಪ್ರಭು' ವಿನ ಅಭ್ಯಾಸದಲ್ಲಿ ಬಹು ಉಪಯುಕ್ತ.

ವಾದಿರಾಜರ ಬಗೆಗಿನ ಒಂದು ಪೂರ್ಣ ಪ್ರಮಾಣದ ಪುಸ್ತಕವನ್ನು 'ವಾದಿರಾಜರ ಕನ್ನಡ ಕೃತಿಗಳು' ಎಂಬ ಸಂಶೋಧನೆಯ ಮೂಲಕ ಎಚ್.ಜಿ. ಲೋಕೂರ ಅವರು ಒದಗಿಸಿಕೊಟ್ಟಿದ್ದಾರೆ. ಹರಿದಾಸರ ಹಿನ್ನೆಲೆಯೊಂದಿಗೆ ವಾದಿರಾಜರ ಚರಿತ್ರೆ, ವಾಙ್ಮಯಗಳನ್ನು ಪರಿಚಯಿಸಿರುವುದು ಉಚಿತವಾಗಿದೆ. ಸಂಸ್ಕೃತದಲ್ಲಷ್ಟೆ ಅಲ್ಲ, ಕನ್ನಡದಲ್ಲೂ ಕೃತಿ ರಚಿಸಿದವರಲ್ಲಿ ಮೊದಲಿಗರು ವಾದಿರಾಜರು ಎಂಬುದನ್ನು ದಾಖಲಿಸಿದ್ದಾರೆ. ವಾದಿರಾಜರ ಕನ್ನಡ ಕೃತಿಗಳ ಅಂತರಂಗದ ಸಮಾಲೋಚನೆ ಈ ಕೃತಿಯ ಮುಖ್ಯಭಾಗ. ಸಂಸ್ಕೃತ ಕೃತಿಗಳಿಗೂ ಸೂಕ್ತ ಅರ್ಥ ಹೇಳಿ, ವ್ಯಾಖ್ಯಾನವನ್ನು ಮಾಡಿರುವುದು ಇನ್ನೊಂದು ವಿಶೇಷ. ವಾದಿರಾಜರ ಕೃತಿಗಳನ್ನು ಅಭ್ಯಸಿಸುವುದು ಒಂದು ದೈವಯೋಗ ಎಂದೇ ಭಾವಿಸುವ ಲೋಕೂರರು ಧಾರ್ಮಿಕ ಮನೋಭಾವದವರು. ಅಂತೆಯೇ ಕೃತಿಗಳ ಅಧ್ಯಯನದಲ್ಲಿ ತಾದಾತ್ಮ್ಯವನ್ನು ಪಡೆಯುತ್ತಾರೆ. ಲೇಖಕರ ಮಾಧ್ವಮತಜ್ಞಾನ ಮತ್ತು ಸಂಸ್ಕೃತ-ಕನ್ನಡ ಭಾಷೆಗಳ ಪರಿಣತಿಯಿಂದಾಗಿ ಕೃತಿಯು ಪೂರ್ಣತೆಯನ್ನು ಪಡೆದುಕೊಂಡಿದೆ. ದಾಸ ಸಾಹಿತ್ಯ ಸಂದರ್ಭದಲ್ಲಿ ಅಷ್ಟಾಗಿ ಉಲ್ಲೇಖವಾಗದೆ ಉಳಿದಿರುವ ವಾದಿರಾಜರ ಕೃತಿಗಳನ್ನು ಆಮೂಲಾಗ್ರ ಶೋಧಿಸಿ, ವಿವೇಚನೆಗೆ ಒಳಪಡಿಸುವುದರ ಮೂಲಕ ಲೋಕೂರರು ದಾಸಸಾಹಿತ್ಯದ ಕೊರತೆಯನ್ನು ತುಂಬಿಕೊಟ್ಟಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕೆರೂರ ವಾಸುದೇವಾಚಾರ್ಯರ ಕೊಡುಗೆ ಮಹತ್ತರವಾದುದು. ಪ್ರಹ್ಲಾದ ಮುದಗಲ್ಲರು ಕೆರೂರರನ್ನು ಕವಿ-ಕೃತಿಗಳ ಅಧ್ಯಯನ ಎಂಬ ಸಮೀಕ್ಷಾತ್ಮಕ ನೆಲೆಯಲ್ಲಿ ಸಂಪ್ರಬಂಧ ರಚಿಸಿದ್ದಾರೆ. ಕೆರೂರ ಜೀವನ ವೃತ್ತಾಂತವನ್ನು ಕೃತಿಯ ಆರಂಭದಲ್ಲಿ ಪರಿಚಯಿಸಿ, ವಾಲ್ಮೀಕಿವಿಜಯ, ಯವನ ಸೈರಂಧ್ರಿ, ಯದು ಮಹಾರಾಜ, ಭ್ರಾತೃಘಾತಕನಾದ ಔರಂಗಜೇಬ ಮತ್ತು ಇಂದಿರೆ ಕಾದಂಬರಿಗಳನ್ನು ಕುರಿತು ವಿಸ್ತಾರವಾಗಿ ಚರ್ಚಿಸಿದ್ದಾರೆ. ಸಣ್ಣಕತೆಗಳು, ನಾಟಕಗಳು ಮತ್ತು ಶೈಲಿಗಳ ಬಗೆಗೆ ಬೇರೆ ಬೇರೆ ಅಧ್ಯಾಯಗಳನ್ನು ಮೀಸಲಾಗಿಟ್ಟಿದ್ದಾರೆ. ಸಮಕಾಲೀನ ನಾಟಕಕಾರರೊಡನೆ ತುಲನೆ ಮತ್ತು ರಂಗಭೂಮಿಯ ಹಿನ್ನೆಲೆಯೊಂದಿಗೆ ಅವರ ನಾಟಕಗಳ ಅಧ್ಯಯನ ಮಾಡಬಹುದಿತ್ತು. ಒಟ್ಟಾಗಿ ಅವರ ಕೃತಿಗಳ ಬಗ್ಗೆ ವ್ಯಕ್ತವಾಗಿರುವ ಅಭಿಪ್ರಾಯಗಳನ್ನು ನಿಷ್ಕರ್ಷೆಮಾಡುವ ವಿಮರ್ಶನ ಪ್ರಜ್ಞೆಯ ಗೈರುಹಾಜರಿಯಿಂದಾಗಿ ವಸ್ತುನಿಷ್ಠತೆಯನ್ನು ಸಾಧಿಸಲಾಗಿಲ್ಲ. ವಿಸ್ತಾರವಾದ ಕಾರ್ಯಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದ ಕೆರೂರರ ಒಟ್ಟು ಸಾಹಿತ್ಯಕ ಸಾಧನೆಯನ್ನು ಸಮಗ್ರತೆಯ ದೃಷ್ಟಿಯಿಂದ ಪ್ರಹ್ಲಾದ ಮುದಗಲ್ಲರು ಗಮನಿಸಿದ್ದಾರೆ. ಈ ದಿಶೆಯಲ್ಲಿ ಅವರ ಪ್ರಯತ್ನವನ್ನು ನೋಡುವುದು ಉಚಿತವಾದುದು.

ಕರ್ನಾಟಕದ ರಂಗಭೂಮಿಯ ಇತಿಹಾಸದಲ್ಲಿ ವೃತ್ತಿರಂಗಭೂಮಿಯ ಚರಿತ್ರೆ, ಅದರಲ್ಲಿಯೂ ಜನಪದರಂಗಭೂಮಿ ಮತ್ತು ಮಹಾರಾಷ್ಟ್ರ ರಂಗಭೂಮಿಗಳ ಪ್ರಭಾವದಿಂದ ಹುಟ್ಟಿಕೊಂಡ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಚರಿತ್ರೆ ವಿಶಿಷ್ಟವಾದುದ್ದು ಮತ್ತು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡದ್ದು. ಈ ವೃತ್ತಿ ರಂಗಭೂಮಿಯಲ್ಲಿ ಗರುಡ ಸದಾಶಿವರಾಯರು ಒಂದು ವಿಶಿಷ್ಟ ಪರಂಪರೆಯನ್ನೇ ಹುಟ್ಟುಹಾಕಿದರು. ಸಾಹಿತ್ಯ-ರಂಗಭೂಮಿ ಕಲೆಗಳೆರಡರಲ್ಲೂ ಪ್ರಯೋಗಶೀಲತೆಯನ್ನು ಮೆರೆದಿರುವ ಗರುಡರ ಬಗೆಗೆ ಒಂದು ಸಮಗ್ರವಾದ ಅಧ್ಯಯನ ಬಸವರಾಜ ಜಗಜಂಪಿಯವರ 'ಗರುಡ ಸದಾಶಿವರಾಯರು: ನಾಟಕ ಸಾಹಿತ್ಯ ಹಾಗೂ ವೃತ್ತಿ ರಂಗಭೂಮಿಯ ಅಧ್ಯಯನ' ಕೃತಿಯಿಂದ ಸಾಧ್ಯವಾಗಿದೆ.

ಆರಂಭದ ಆರು ಅಧ್ಯಾಯಗಳನ್ನು ವಿಷಯ ವಿಶ್ಲೇಷಣೆಗೆ ಅಗತ್ಯವಾಗುವ ಹಿನ್ನೆಲೆಯಾಗಿ ಪರಿಭಾವಿಸಲಾಗಿದೆ. ಕರ್ನಾಟಕ ವೃತ್ತಿರಂಗಭೂಮಿಯ ಹಿನ್ನೆಲೆ, ಗರುಡರ ಜೀವನ, ದತ್ತಾತ್ರೇಯ ಸಂಗೀತ ನಾಟಕ ಮಂಡಳಿ ಮತ್ತು ಅದರ ಕಲಾವಿದರು, ರಂಗಪರಿಕರಗಳು, ರಂಗಸಂಗೀತ ಇತ್ಯಾದಿ ವಿಷಯ ವಿವರಣೆಯಿದೆ. ಏಳನೆಯ ಅಧ್ಯಾಯದಲ್ಲಿ ಗರುಡರು ನಟನಾಗಿ ನಿರ್ವಹಿಸಿದ ಪಾತ್ರಗಳ ಪರಿಚಯವಿದೆ. ಅಧ್ಯಾಯ-ಎಂಟು ಅವರ ನಾಟಕ ಸಾಹಿತ್ಯ ಕುರಿತಿದೆ. ಸ್ವತಂತ್ರ ನಾಟಕಗಳು, ಅನುವಾದಿಸಿದ ನಾಟಕಗಳು ಮತ್ತು ಅಪ್ರಕಟಿತ ನಾಟಕಗಳು ಎಂಬ ವಿಭಾಗಗಳಡಿಯಲ್ಲಿ ಒಟ್ಟುನಾಟಕಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಅಧ್ಯಾಯ-ಒಂಭತ್ತರಲ್ಲಿ ಗರುಡರ ಸಾಧನೆ ಹಾಗೂ ಕೊಡುಗೆಯನ್ನು ಗುರುತಿಸಲಾಗಿದೆ. ರಂಗಭೂಮಿಯ ಚರ್ಚೆಯ ಒಟ್ಟೊಟ್ಟಿಗೆ ಅವರ ನಾಟಕಗಳನ್ನು ಅಭ್ಯಸಿಸಿರುವುದು ಔಚಿತ್ಯಪೂರ್ಣವಾದುದು.

ಗರುಡರನ್ನು ಪ್ರಸ್ತಾಪಿಸುವ ಸಂದರ್ಭದಲ್ಲಿ ಹಾಗೂ ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯ ಚರಿತ್ರೆಯ ಸಂದರ್ಭದಲ್ಲಿ ಗಮನಿಸಲೇಬೇಕಾದ ಮಹತ್ವದ ಕೃತಿಯಿದು.

'ಹೊಸತು-ಹೊಸತು' ಈ ವರ್ಷ ಪ್ರಕಟವಾದ ಸಂಶೋಧನೆಗಳಲ್ಲಿ ಮುಖ್ಯಕೃತಿ. ಚಿದಾನಂದಮೂರ್ತಿ ಅವರ ಐವತ್ತು ಸಂಶೋಧನಾ ಲೇಖನಗಳ ಸಂಕಲನ ರೂಪದ ಪುಸ್ತಕವೇ 'ಹೊಸತು-ಹೊಸತು'. ಇಲ್ಲಿಯ ಕೆಲವು ಲೇಖನಗಳು ಬೇರೆ ಬೇರೆ ಸಂದರ್ಭಗಳಲ್ಲಿ ಬಿಡಿಯಾಗಿ ಪ್ರಕಟವಾದರೂ ಗ್ರಂಥ ರೂಪದಲ್ಲಿ ಇದೆ ಮೊದಲಬಾರಿಗೆ ಪ್ರಕಟವಾಗಿವೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯ ಈ ಸಂಕಲನವನ್ನು ಪ್ರಕಟಿಸಿದೆ.

ಕನ್ನಡ ಸಂಸ್ಕೃತಿ-ಸಾಹಿತ್ಯ-ಚರಿತ್ರೆಗಳ ಶೋಧದಲ್ಲಿ ಈ ಲೇಖನಗಳು ಉಪಯುಕ್ತವಾದ ಚರ್ಚೆಯನ್ನು ಬೆಳೆಸುತ್ತವೆ. ಇವು ಒಂದು ನೆಲೆಯ ಸತ್ಯವನ್ನು ಪ್ರಕಟಿಸುತ್ತವೆ. ಅದನ್ನು ಇನ್ನಷ್ಟು ಪ್ರಕಾಶಪಡಿಸಲು ಪುರಾವೆಗಳನ್ನು ಆಸಕ್ತಿಯಿದ್ದವರು ಹುಡುಕಿಕೊಳ್ಳಬಹುದು ಅಥವಾ ಇವುಗಳನ್ನಿಟ್ಟುಕೊಂಡು ಹೊಸ ವಾಗ್ವಾದವನ್ನು ಹುಟ್ಟುಹಾಕಬಹುದು. ಕೃತಿಯ ಬಗೆಗೆ ಬೇರೆ ಸಂದರ್ಭದಲ್ಲಿ ಕೆ.ವಿ. ನಾರಾಯಣರು ವ್ಯಕ್ತಪಡಿಸಿದ ಅಭಿಪ್ರಾಯಗಳು ಈ ಲೇಖನಗಳನ್ನು ಹೆಚ್ಚು ಖಚಿತವಾಗಿ ವಿವರಿಸುತ್ತವೆ. ಅವು: 'ಕನ್ನಡ ಅಧ್ಯಯನ ಕ್ಷೇತ್ರದಲ್ಲಿ ಬಳಕೆಯಲ್ಲಿರುವ ಪುನಾರಚನೆಯ ಮಾದರಿಗೆ ಡಾ. ಎಂ. ಚಿದಾನಂದಮೂರ್ತಿಯವರ ಸಂಪ್ರಬಂಧಗಳು ಅತ್ಯುತ್ತಮ ನಿದರ್ಶನಗಳು. 'ಹೊಸತು-ಹೊಸತು' ಸಂಕಲನದ ಪ್ರತಿಯೊಂದು ಸಂಪ್ರಬಂಧವೂ ಮೇಲಿನ ಹೇಳಿಕೆಗೆ ಸಮರ್ಥನೆಯಾಗಬಲ್ಲವು...... ಸಮಸ್ಯೆ - ಆಧಾರಕಲ್ಪನೆ - ಸಾಮಗ್ರಿಶೋಧ ವಿಶ್ಲೇಷಣೆ-ಸಾಧನೆ ಎಂಬೀ ಹಂತಗಳಲ್ಲಿ ಚಿದಾನಂದಮೂರ್ತಿಯವರು ತುಂಬಾ ಎಚ್ಚರವನ್ನು ಕಾಯ್ದುಕೊಳ್ಳುತ್ತಾರೆ. ಅದರಲ್ಲಿಯೂ ಸಾಮಗ್ರಿಶೋಧದ ಹಂತದಲ್ಲಿ ಅವರ ಸಾಧನೆ ಅನುಕರಣೀಯ. ಹತ್ತಾರು ಆಕರಗಳಿಂದ ಬಗೆಬಗೆಯ ಅವಶ್ಯಕ ಮಾಹಿತಿಯನ್ನು ಕೂಡಿ ಹಾಕುವಲ್ಲಿ ಅವರ ಕುಶಾಗ್ರತೆ ಪ್ರಕಟಗೊಳ್ಳುತ್ತದೆ. ವಿವಿಧ ಜ್ಞಾನ ಶಿಸ್ತುಗಳ ಆಕರಗಳನ್ನೂ ವಿವರಣೆಗಳನ್ನೂ ತಮ್ಮ ವಿಶ್ಲೇಷಣೆಗೆ ಬಳಸಿಕೊಳ್ಳಲು ಅವರು ಮುಂದಾಗುತ್ತಾರೆ....... ಹೊಸತು ಹೊಸತು ಸಂಕಲನದ ಅಧ್ಯಯನಗಳು ನಮ್ಮೆದುರು ತೆರೆದಿಡುವ ನಿಸ್ಸಂಶಯ ಸತ್ಯಗಳನ್ನು ಗ್ರಹಿಸುತ್ತ, ಅದನ್ನು ತೆರೆದಿರಿಸಿದ ಚಿದಾನಂದಮೂರ್ತಿಯವರಿಗೆ ಅಭಿನಂದನೆಗಳನ್ನು ಹೇಳಬೇಕು. ಜೊತೆಗೆ ಆ ಸತ್ಯಗಳ ಇಂದಿನ ಪ್ರಸ್ತುತತೆಯನ್ನು, ಆ ಸತ್ಯಗಳು ಸಾಂಸ್ಕೃತಿಕ ಮರೆವಿನಲ್ಲಿ ಹುದುಗಲು ಇದ್ದಿರಬಹುದಾದ ಕೇವಲ ಆಕಸ್ಮಿಕವಲ್ಲದ ಕಾರಣಗಳನ್ನು ಹುಡುಕಲು ಮೊದಲು ಮಾಡಬೇಕು. ಇದು ನಮ್ಮ ಮುಂದಿನ ಸವಾಲು'.

ನವೋದಯದ ಸುಗ್ಗಿ ಕಾಲದ ಕನ್ನಡ ಕಾವ್ಯ ಚರಿತ್ರೆಯಲ್ಲಿ ಮಹತ್ವದ ಸ್ಥಾನ ಪಡೆದ ಹಲಸಂಗಿ ಚೆನ್ನಮಲ್ಲಪ್ಪ ಗಲಗಲಿ ಅವರು ಮಧುರಚೆನ್ನರೆಂದೇ ಹೆಸರಾಗಿದ್ದಾರೆ. ಅನ್ವರ್ಥಕವೆಂಬಂತೆ ಅವರ ಕನ್ನಡ ಭಾಷಾ ಬಳಕೆ ಮಧುರವೇ ಆಗಿದೆ. ವೇದ-ಉಪನಿಷತ್, ಗೀತೆಯಲ್ಲದೆ ಅರವಿಂದರನ್ನೂ ಟಾಲ್‌ಸ್ಟಾಯ್‌ನನ್ನೂ ಐರಿಷ್ ಕವಿ

'ಏಈ'ನನ್ನೂ ಓದಿದವರು ಮಧುರಚೆನ್ನರು. ಅವರ ವರ್ಣನಾಮುಖಿ ವಿಮರ್ಶೆ ಮತ್ತು ಆಧ್ಯಾತ್ಮವಾದಿ ಸಂಶೋಧನೆಗಳು ಇಂದಿನ ಚಿಂತಕರಿಗೆ ಕೊರತೆಯಿಂದ ಕೂಡಿದವುಗಳೆಂದನಿಸಿದರೂ ಕೆಲ ಒಳನೋಟಗಳಿಂದ ಕೂಡಿವೆ ಎಂಬುದು ಒಪ್ಪಿತವಾಗುವ ಮಾತು.

ಗುರುಲಿಂಗ ಕಾಪಸೆಯವರು ಶ್ರದ್ಧೆಯಿಂದ ಸಂಪಾದಿಸಿದ 'ಮಧುರಚೆನ್ನರ ಲೇಖನಗಳು' ಸಂಪುಟದಿಂದಾಗಿ ಕನ್ನಡಕ್ಕೆ ಮಹತ್ವದ ಕೆಲಸವಾಗಿದೆ. ಅಲ್ಲಲ್ಲಿ ಚದುರಿಹೋಗಿರುವ ಮಧುರಚೆನ್ನರ ಲೇಖನಗಳನ್ನು ಸಂಕಲಿಸುವಲ್ಲಿ ಕಾಪಸೆಯವರು ಪಟ್ಟಿರುವ ಶ್ರಮ ಸಾರ್ಥಕವಾಗಿದೆ. ಮಧುರ ಚೆನ್ನರ ಕಾವ್ಯವನ್ನು ಮಾತ್ರ ತಿಳಿದವರಿಗೆ ಗದ್ಯ ಬರಹಗಳ ಬೃಹತ್ ಹೊತ್ತಿಗೆಯೊಂದು ಪ್ರಕಟವಾಗಿ ದೊರೆತಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ.

ಸಂಶೋಧನೆ, ಭಾಷಾಶಾಸ್ತ್ರ, ಕವಿಚರಿತ್ರೆ, ಸಾಹಿತ್ಯಕ ಉಪನ್ಯಾಸಗಳು, ಅರವಿಂದರ ಸಾಹಿತ್ಯ, ಶರಣ ಸಾಹಿತ್ಯ, ಜನಪದ ಸಾಹಿತ್ಯ, ಚಿಂತನೆಗಳು, ಮುನ್ನುಡಿ ಇತ್ಯಾದಿ ಹೀಗೆ ಹತ್ತು ಅಧ್ಯಾಯಗಳಲ್ಲಿ ಒಟ್ಟು ಎಪ್ಪತ್ಮೂರು ಲೇಖನಗಳನ್ನು ವಿಭಾಗಿಸಿಕೊಡಲಾಗಿದೆ. ಮುಲ್ಕಿ ಪರೀಕ್ಷೆಯನ್ನು ಮಾತ್ರ ಪಾಸುಮಾಡಿರುವ ವ್ಯಕ್ತಿಯೊಬ್ಬರು ಇಷ್ಟೆಲ್ಲ ವಿಷಯಗಳ ಬಗೆಗೆ ವಿಸ್ತರಿಸಿಕೊಂಡಿರುವ ತಿಳುವಳಿಕೆಯನ್ನು ನೋಡಿದರೆ ಅಚ್ಚರಿಯಾಗುತ್ತದೆ. ನವೋದಯದ ಉತ್ತಮ ಕವಿಗಳಲ್ಲೊಬ್ಬರಾಗಿ ತಮ್ಮ ಕಾವ್ಯ ಪ್ರತಿಭೆಯನ್ನು ಮೆರೆದ ಮಧುರ ಚೆನ್ನರು ತಮ್ಮ ಚಿಂತನೆಯನ್ನು ಗದ್ಯ ಬರಹಗಳಲ್ಲಿ ದಾಖಲಿಸಿದ್ದಾರೆ. ಈ ಲೇಖನಗಳ ಬಗೆಗೆ ಇರಬಹುದಾದ ಭಿನ್ನಾಭಿಪ್ರಾಯಗಳ ಮಧ್ಯೆಯೂ ಅನೇಕ ಗುಣಾತ್ಮಕ ಅಂಶಗಳಿಂದಾಗಿ ಇವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿವೆ.

ಸಂಸ್ಕೃತ ಸಾಹಿತ್ಯಾಭ್ಯಾಸದಲ್ಲಿ ವಿಶೇಷ ಆಸಕ್ತಿಯನ್ನಿಟ್ಟುಕೊಂಡಿರುವ ಗುರುಪಾದ ಕೆ. ಹೆಗಡೆಯವರು ಶ್ಲೇಷ ಸಿದ್ಧಾಂತವನ್ನು ''ವೇದಾದಿಗಳಲ್ಲಿ ಶ್ಲೇಷ ಪ್ರಪಂಚ' ಎಂಬ ಪುಸ್ತಿಕೆಯಲ್ಲಿ ಮಂಡಿಸಿದ್ದಾರೆ. ಶ್ಲೇಷೆಯನ್ನು ಅಲಂಕಾರ ಮಾತ್ರವಾಗಿ ಭಾವಿಸದೆ, ಅದಕ್ಕೆ ಸೈದ್ಧಾಂತಿಕವಾದ ಸ್ವರೂಪವನ್ನು ಕೊಡಲು ಪ್ರಯತ್ನಿಸಿದ್ದಾರೆ.

ಶ್ಲೇಷ ತತ್ತ್ವದಲ್ಲಿ: ಶ್ಲೇಷಾಲಂಕಾರ, ವೃತ್ಯನೇಕತ್ವ ಸೂಚಕ ಶ್ಲೇಷ, ಪ್ರಬಂಧಶ್ಲೇಷ, ಪ್ರತೀಕ ಶ್ಲೇಷ, ಅವಸ್ಥಾಶ್ಲೇಷ ಮತ್ತು ಶ್ಲೇಷಗುಣ ಎಂಬುದಾಗಿ ಆರು ಪ್ರಭೇದಗಳನ್ನು ಹೆಸರಿಸಿ, ಆಯಾ ಪ್ರಭೇದಗಳಿಗೆ ವೇದ, ಭಾರತ, ರಾಮಾಯಣ, ಗೀತೆ ಇತ್ಯಾದಿ ಪೌರಾಣಿಕ ದಾಖಲೆಗಳಿಂದ ಪ್ರಯೋಗಗಳನ್ನು ನೀಡಿ ಅವುಗಳ ಅರ್ಥಪ್ರಪಂಚವನ್ನು ವಿವರಿಸುತ್ತಾರೆ; ವಿಸ್ತರಿಸುತ್ತಾರೆ. ಕಾವ್ಯ ಮೀಮಾಂಸೆಯ ಪ್ರಸ್ಥಾನಗಳನ್ನು ವಿವರಿಸಿದಂತೆ ಶ್ಲೇಷೆಯನ್ನು ಪ್ರಸ್ಥಾನವನ್ನಾಗಿ ವಿವರಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ಸ್ನಾತಕ, ಸ್ನಾತಕೋತ್ತರ ಮತ್ತು ಸ್ಪರ್ಧಾತ್ಮಕ ಪರೀಕ್ಷೆಯ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರೊ. ಎಂ.ಎಚ್. ಕೃಷ್ಣಯ್ಯ ಅವರು 'ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ' ಪುಸ್ತಕವನ್ನು ರಚಿಸಿದ್ದಾರೆ. ಭಾಷಾವಿಜ್ಞಾನ, ಶಬ್ದಮಣಿದರ್ಪಣಗಳ

ಆಳವಾದ ಅಧ್ಯಯನ ಮತ್ತು ಸತತವಾದ ಬೋಧನಾನುಭವದಿಂದಾಗಿ ಪುಸ್ತಕವು ಗಂಭೀರ ಅಭ್ಯಾಸಗಳಿಗೂ ಉಪಯುಕ್ತವಾಗಿದೆ. ಭಾಷೆ, ಭಾಷಾವಿಜ್ಞಾನ, ಭಾಷಾವರ್ಗ ಮತ್ತು ದ್ರಾವಿಡಭಾಷೆಗಳ ಹಿನ್ನೆಲೆಯೊಂದಿಗೆ ಕನ್ನಡ ಭಾಷೆಯ ಇತಿಹಾಸ ಪರಿಚಯಿಸಿ, ಕನ್ನಡದ ಅವಸ್ಥಾಂತರಗಳ ಮತ್ತು ಕನ್ನಡದ ಉಪಭಾಷೆಗಳನ್ನು ಕುರಿತಾಗಿ ಸವಿವರವಾಗಿ ಸಮೀಕ್ಷಿಸಲಾಗಿದೆ. ಭಾಷಾವ್ಯತ್ಯಾಸಕ್ಕೆ ಕಾರಣಗಳು, ಸ್ವೀಕರಣ ಪ್ರಕ್ರಿಯೆ, ದೇಶ್ಯಶಬ್ದಗಳ ವಿಶ್ಲೇಷಣೆಯೂ ಸಾಕಷ್ಟು ವಿವರಗಳಲ್ಲಿದೆ. ಕೊನೆಯ ಭಾಗವಾಗಿ ವ್ಯಾಕರಣಾಂಶಗಳಾದ ನಾಮಪದ, ಸರ್ವನಾಮ, ಗುಣವಾಚಕ, ಸಂಖ್ಯಾವಾಚಕ, ಕ್ರಿಯಾಪದ, ಅವ್ಯಯಗಳ ಪರಿಕಲ್ಪನೆಗಳಲ್ಲಿ ಆಧುನಿಕ ಕನ್ನಡವನ್ನು ವರ್ಣಿಸಲಾಗಿದೆ. ಸರಳವಾದ ಹಾಗೂ ನೇರವಾದ ನಿರೂಪಣೆಯಿಂದ ಕೂಡಿರುವ ಈ ಪುಸ್ತಕವು ವಿದ್ಯಾರ್ಥಿಗಳಿಗೂ ಕಾಲೇಜು ಅಧ್ಯಾಪಕರಿಗೂ ಆಕರಗ್ರಂಥವಾಗಿ ಮಹತ್ವವನ್ನು ಪಡೆಯುತ್ತದೆ.

ಕನ್ನಡದಲ್ಲಿ ನಿಘಂಟುಗಳು ಬೆಳೆದುಕೊಂಡು ಬಂದ ದಾರಿಯನ್ನು ಗುರುತಿಸಿ, ಅದಕ್ಕೊಂದು ಚೌಕಟ್ಟನ್ನು ರೂಪಿಸುವ ಹವಣಿಕೆಯೇ ''ಕನ್ನಡ ನಿಘಂಟು ಶಾಸ್ತ್ರ ಪರಿಚಯ'' ಪುಸ್ತಕ. ಪ್ರೊ.ಜಿ. ವೆಂಕಟಸುಬ್ಬಯ್ಯ ಅವರು ತಮ್ಮ ಕನ್ನಡ-ಕನ್ನಡ ನಿಘಂಟು ರಚನೆಯ ಸಂಪುಟಗಳ ಅಗಾಧ ಅನುಭವದ ಮೇಲೆ ಇದನ್ನು ರಚಿಸಿದ್ದಾರೆ. ನಿಘಂಟು ನಿರ್ವಚನೆಯಲ್ಲಿ ನಿಘಂಟುಶಾಸ್ತ್ರ (Lexicology) ನಿಘಂಟು ರಚನೆ (Lexicography)ಗಳು ಭಾಷಾವಿಜ್ಞಾನದಲ್ಲಿ ಎರಡು ಶಾಖೆಗಳಾಗಿಯೇ ಬೆಳೆಯುತ್ತಲಿವೆ. ಪ್ರಸ್ತುತ ಪುಸ್ತಿಕೆಯಲ್ಲಿ ಕನ್ನಡ ಭಾಷೆಯ ಬಗೆಗೆ ಬಂದಿರುವ ಅನೇಕ ಬಗೆಯ ನಿಘಂಟುಗಳನ್ನು ಗುರುತಿಸಿ, ಅವುಗಳ ಪ್ರಭೇದಗಳನ್ನು ಹೆಸರಿಸಿ, ಅದರ ಚರಿತ್ರೆಯನ್ನು ಕಟ್ಟಿಕೊಡಲಾಗಿದೆ. ನಿಘಂಟು ರಚನೆಯ ಅನೇಕ ಹಂತಗಳನ್ನು ವಿವರಿಸಲಾಗಿದೆ. ಜೀವಂತ ಭಾಷೆಯೊಂದರ ಬೆಳವಣಿಗೆಯ ಹಂತದಲ್ಲಿ ನಿಘಂಟಿಮ (ಕೋಶಕ್ಕೆ ಆಯ್ಕೆಮಾಡುವ ರೂಪ) ಗಳನ್ನು ಆಯ್ಕೆ ಮಾಡುವ ಸಮಸ್ಯೆ, ನಿಘಂಟಿಮಕ್ಕೆ ನಿರ್ದಿಷ್ಟವಾದ ಮತ್ತು ಹೆಚ್ಚು ಖಚಿತವಾದ ಅರ್ಥವನ್ನು ಹೇಳುವ ಸಮಸ್ಯೆ ಇತ್ಯಾದಿಗಳನ್ನು ಇಟ್ಟುಕೊಂಡು ಅವುಗಳಿಗೆ ಸೂಕ್ತವಾದ ವಿವರಣೆಯನ್ನು ನೀಡಲಾಗಿದೆ. ಅನುಬಂಧದಲ್ಲಿ ನಿಘಂಟುಕಾರನ ಅರ್ಹತೆಗಳು, ನಿಘಂಟನ್ನು ಉಪಯೋಗಿಸುವ ಬಗೆ ಹಾಗೂ ಕೆಲ ವಿಶಿಷ್ಟ ಕೋಶಗಳ ಬಗೆಗೆ ವಿವರಣೆಯನ್ನು ಒದಗಿಸಲಾಗಿದೆ. ಒಟ್ಟಾಗಿ ಕನ್ನಡದಲ್ಲಿ ನಿಘಂಟು ಕುರಿತಾದ ತಿಳುವಳಿಕೆಗೆ ಇದು ಮೊದಲನೆಯ ಪುಸ್ತಕವಾದ್ದರಿಂದ ನಿಘಂಟುಗಳ ಪರಿಚಯವೂ ಹೌದು, ನಿಘಂಟು ಶಾಸ್ತ್ರವೂ ಹೌದು.

ಕನ್ನಡದಲ್ಲಿ ಸಂಶೋಧನೆ ಕೈಕೊಳ್ಳುವವರಿಗೆ ಮಾಹಿತಿಯಾಗಿ ಡಾ. ಸಂಗಮೇಶ ಸವದತ್ತಿಮಠ ಅವರು ' ಕನ್ನಡ ಸಂಶೋಧನ ಕೈಪಿಡಿ' ಯನ್ನು ಒದಗಿಸಿದ್ದಾರೆ. ಇಲ್ಲಿಯ ಕೆಲವು ಭಾಗಗಳು ಅವರೇ ಸಂಪಾದಿಸುವ 'ಸಂಶೋಧನ ವ್ಯಾಸಂಗ' ಪತ್ರಿಕೆಯಲ್ಲಿ ಪ್ರಕಟವಾಗಿವೆ. ಅವುಗಳನ್ನು ಪರಿಷ್ಕರಿಸಿ, ಇನ್ನಷ್ಟು ಉಪಯುಕ್ತ ಮಾಹಿತಿಗಳನ್ನು ಸೇರಿಸಿ ಈ ಪುಸ್ತಕವನ್ನು ಪ್ರಕಟಿಸಿದ್ದಾರೆ. ಭಾಗ-೧ ಮತ್ತು ಭಾಗ-೨ ರಲ್ಲಿ ಪಿಎಚ್.ಡಿ., ಎಂ.ಫಿಲ್ ವಿದ್ಯಾರ್ಥಿಗಳು ಗಮನಿಸಲೇಬೇಕಾದ ಮಾಹಿತಿಗಳಿವೆ. ಭಾಗ- ೩ರಲ್ಲಿ ಸಂಶೋಧನಾ

ಪರಿಕಲ್ಪನೆ ಕುರಿತಾದ ಚರ್ಚೆಗೆ ಕೆಲವು ಟಿಪ್ಪಣಿಗಳು, ಸಂಶೋಧನೆಗೆ ಧನಸಹಾಯ, ಸಂಶೋಧನೆಯ ಭವಿಷ್ಯ, ಕನ್ನಡ ವಿಶ್ವವಿದ್ಯಾಲಯ, ಅಮೆರಿಕದ ಸಂಶೋಧನ ವಿದ್ಯಾಲಯಗಳು ಮತ್ತಿತರ ವಿವರಗಳಿವೆ. ಒಟ್ಟು ಈ ಮೂರು ಭಾಗಗಳಿಗೆ ಪೀಠಿಕೆಯಾಗಿ ಹೇಳಿರುವ ಸಾಹಿತ್ಯ ಸಂಶೋಧನೆಯ ವಿಚಾರಗಳು ಪುಸ್ತಿಕೆಗೆ ಹಿನ್ನೆಲೆಯನ್ನು ಒದಗಿಸುತ್ತವೆ.

ಎನ್.ಜಿ. ಪಟವರ್ಧನ್ ಅವರ 'ಛಂದಸ್ಸಾರ' ಛಂದಸ್ ಶಾಸ್ತ್ರವನ್ನು ಸರಳವಾಗಿ ಮತ್ತು ಸೋದಾಹರಣವಾಗಿ ಹೇಳುವ ಅಗತ್ಯದಿಂದ ರಚಿತವಾದದ್ದು. ಇದರ ಗುರಿ ಸಾಮಾನ್ಯ ಓದುಗರು ಮತ್ತು ವಿದ್ಯಾರ್ಥಿಗಳು. ಹೀಗೆ ನಿರ್ದಿಷ್ಟ ಉದ್ದೇಶವಿರಿಸಿಕೊಂಡು ರೂಪುದಳೆದ 'ಛಂದಸ್ಸಾರವು' (ಅನ್ವರ್ಥಕವಾಗಿ ಸಾರಭೂತವಾಗಿ ಹೇಳುವುದು) ಕನ್ನಡ ಕಾವ್ಯಗಳಲ್ಲಿ ಬಳಕೆಯಾಗಿರುವ ಎಲ್ಲಾ ಛಂದೋ ಪ್ರಕಾರಗಳನ್ನು ಪರಿಚಯಿಸುತ್ತದೆ. ಛಂದಸ್ಸು: ಉಗಮ, ನಿಷ್ಪತ್ತಿ, ಮಹತ್ವ, ಛಂದೋಗ್ರಂಥಗಳ ಪರಿಚಯ, ಲಯ-ಪ್ರಾಸ-ಯತಿ, ಗಣಗಳ ಸ್ವರೂಪ, ವರ್ಣವೃತ್ತ-ಮಾತ್ರವೃತ್ತ-ಅಂಶ ಛಂದಸ್ಸು (ಕರ್ನಾಟಕ ವಿಷಯ ಜಾತಿ) ಮತ್ತು ಹೊಸ ಛಂದಸ್ಸನ್ನು ಕುರಿತು ಲಕ್ಷ್ಯ-ಲಕ್ಷಣ ಸ್ವರೂಪ ವಿವರಣೆಯಿದೆ. ಇದುವರೆಗಿನ ಛಂದೋ ಸಂಶೋಧನೆಗಳನ್ನು ಆಧರಿಸಿ ರಚಿತವಾದ ಈ ಪುಸ್ತಕವು ಛಂದಸ್ಸನ್ನು ಐಚ್ಛಿಕವಾಗಿ ಓದುವ ವಿದ್ಯಾರ್ಥಿಗಳಿಗೆ ಹೆಚ್ಚಿನ ಪ್ರಯೋಜನವನ್ನು ನೀಡುತ್ತದೆ.



## ಜೀವನ ಚರಿತ್ರೆ

*ಅಶೋಕ ಕುಮಾರ ರಂಜೇರೆ*

---

ಒಬ್ಬ ವ್ಯಕ್ತಿಯ ವಿಶಿಷ್ಟ ಜೀವನ ಸಾಧನೆಯ ಹಿನ್ನೆಲೆಯಲ್ಲಿ ಜೀವನ ಚರಿತ್ರೆಗಳು ಹುಟ್ಟುತ್ತವೆ. ಜೀವನ ಚರಿತ್ರೆಗೆ ಬಹಳ ಹಳೆಯ ಚರಿತ್ರೆ ಇಲ್ಲದಿದ್ದರೂ ಕೆಲವು ದಶಕಗಳ ಚರಿತ್ರೆಯಂತೂ ಇದೆ. ಇತ್ತೀಚೆಗೆ ಈ ವಲಯ ಸಾಕಷ್ಟು ವಿಶಾಲವಾಗಿ ಮತ್ತು ಯಶಸ್ವಿಯಾಗಿ ಬೆಳೆಯುತ್ತಿದೆ. ಅದಕ್ಕೆ ಇಂದು ಜೀವನ ಚರಿತ್ರೆಯ ಪುಸ್ತಕಗಳು ಪ್ರಕಟವಾಗುತ್ತಿರುವ ಸಂಖ್ಯೆಯೇ ಸಾಕ್ಷಿಯಾಗಿದೆ.

೧೯೯೨ನೇ ಸಾಲಿಗೆ ಹೋಲಿಸಿದರೆ ೧೯೯೩ರಲ್ಲಿ ಸಾಕಷ್ಟು ಜೀವನ ಚರಿತ್ರೆಗಳು ಪ್ರಕಟವಾಗಿವೆ. ಇವುಗಳಲ್ಲಿ ಕೆಲವು ಜೀವನ ಚರಿತ್ರೆಗಳು ಸ್ವಲ್ಪವಾದರೂ ವಾಸ್ತವ ಜೀವನಕ್ಕೆ ಹತ್ತಿರವಾಗಿವೆ. ಆದರೆ ಕೆಲವು ಧಾರ್ಮಿಕ ವ್ಯಕ್ತಿಗಳ, ಸಾಧು ಸತ್ಪುರುಷರ ಜೀವನಚರಿತ್ರೆಗಳು ಪವಾಡಗಳಿಂದ ತುಂಬಿ ಏಕಮುಖ ರೂಪತಾಳಿ ವಾಸ್ತವದ ಕೊಂಡಿಯನ್ನು ಕಳಚಿಕೊಂಡಿವೆ.

**ಬಾಬು ಜಗಜೀವನರಾಮರ ಹೋರಾಟ ಜೀವನ :** *ಗಣೇಶ ನಾಗರಾಣ*

ದೀನದಲಿತರ ಕಲ್ಯಾಣಕ್ಕಾಗಿ ದುಡಿದ ಧೀಮಂತ ನಾಯಕ ಬಾಬು ಜಗಜೀವನರಾಮ್. ಡಾ.ಬಿ.ಆರ್.ಅಂಬೇಡ್ಕರ್ ಅವರಂತೆ ಬಡತನದಲ್ಲಿ ಹುಟ್ಟಿ ಅನೇಕ ಸಂಕಷ್ಟಗಳನ್ನು ಎದುರಿಸಿದವರು. ಹೋರಾಟದೊಂದಿಗೆ ಒಂದೊಂದೇ ಮೆಟ್ಟಿಲೇರುತ್ತ ರಾಜಕೀಯ ಮತ್ತು ಸಾಮಾಜಿಕ ರಂಗದಲ್ಲಿ ಎತ್ತರಕ್ಕೆ ಏರಿದವರು.

ಬಾಬು ಜಗಜೀವನರಾಮ್ ಅವರ ಇಂಥ ಹೋರಾಟ ಜೀವನವನ್ನೂ ಗಳಿಸಿದ ಯಶಸ್ಸನ್ನೂ ಗಣೇಶ್ ನಾಗರಾಣ ಅವರು ವಿವರವಾಗಿ ಅನೇಕ ಸಾಮಾಜಿಕ, ರಾಜಕೀಯ ನಿದರ್ಶನಗಳೊಂದಿಗೆ ನೀಡಿದ್ದಾರೆ.

**ಡಾ. ಬಿ.ಆರ್.ಅಂಬೇಡ್ಕರರ ಜೀವನ ಸಾಧನೆ ಮತ್ತು ವಿಚಾರ ವಿಮರ್ಶೆ :** *ಮೇಘಮಿತ್ರ*

ಭಾರತಕ್ಕೆ ಸಂವಿಧಾನವನ್ನು ರಚಿಸಿಕೊಟ್ಟು, ಹೇಗೆ ಭಾರತದ ಆಧುನಿಕ ಮನು ಎಂಬ ಪಾತ್ರಕ್ಕೆ ಗುರಿಯಾದರು ಎನ್ನುವುದನ್ನು ಟಿ.ಪಿ.ವಜ್ರಮಟ್ಟಿಯವರು ಅಥವಾ ಮೇಘಮಿತ್ರರವರು ತಮ್ಮ ಈ ಕೃತಿಯಲ್ಲಿ ಎರಡು ಭಾಗ ಮಾಡಿಕೊಂಡು ವಿವರಿಸಿದ್ದಾರೆ.

೧. ಮೊದಲನೇ ಭಾಗದಲ್ಲಿ ಅಂಬೇಡ್ಕರ್‌ಅವರ ಜೀವನ ಮತ್ತು ಸಾಧನೆ ಕುರಿತಂತೆ ವಿವರಗಳಿವೆ. ವಿದ್ಯಾಭ್ಯಾಸ, ವಿದೇಶದ ಪ್ರವಾಸ, ಅಲ್ಲಿನ ವಿದ್ಯಾಭ್ಯಾಸ, ಮರಳಿ ಭಾರತಕ್ಕೆ. ನಂತರ ದಲಿತರ ವಿಮೋಚನೆಗೆ ಮಾಡಿದ ಸೆಣಸಾಟ, ಧರ್ಮಾಂಧತೆಯ ವಿರುದ್ಧ ನಡೆಸಿದ ಹೋರಾಟದ ವಿವರಗಳು ಇವೆ.

೨. ಎರಡನೇ ಭಾಗದಲ್ಲಿ ಸಂಪೂರ್ಣವಾಗಿ ಅಂಬೇಡ್ಕರ್‌ರ ವಿಚಾರಗಳು, ಚಿಂತನೆಗಳನ್ನು ವಿವೇಚಿಸಿದ್ದಾರೆ. ಮಾನವತಾವಾದಿಯಾಗಿ, ಸವ್ಯಸಾಚಿಯಾಗಿ, ವೈಜ್ಞಾನಿಕ ದೃಷ್ಟಿಕೋನದ ವ್ಯಕ್ತಿಯಾಗಿ ಪರಾಮರ್ಶಿಸಿದ್ದಾರೆ. ಜೊತೆಗೆ ಅಂಬೇಡ್ಕರ್ ಮತ್ತು ಅವರ ಸಂವಿಧಾನವನ್ನು ಚರ್ಚಿಸಿದ್ದಾರೆ.

ಕನ್ನಡದಲ್ಲಿ ಅಂಬೇಡ್ಕರರ ವಿಚಾರ, ಚಿಂತನೆ, ಜೀವನ ಸಾಧನೆಗಳ ಬಗೆಗೆ ಈಗಾಗಲೇ ಅನೇಕ ಪುಸ್ತಕಗಳು ಬಂದಿವೆ. ಆದರೂ ಇತ್ತೀಚೆಗೆ ಅಂಬೇಡ್ಕರರ ಕುರಿತು ಬಂದ ಒಂದು ಮೌಲಿಕ ಕೃತಿಯೇ ಎನ್ನಬಹುದು.

**ಸಮರ ಸಮೀರ :** *ಡಾ. ಸರೋಜನಿ ಚವಲಾರ*

ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಕ್ರಾಂತಿಕಾರಿಯಾಗಿ, ಬ್ರಿಟಿಷ್ ಸರ್ಕಾರಕ್ಕೆ ಸವಾಲಾಗಿ, ಅನೇಕ ಭಾರತೀಯರಿಗೆ ಆದರ್ಶ ದೇಶಭಕ್ತರಾಗಿದ್ದ ವಿ.ಗು.ಅಂಗಡಿ ಅವರ ಜೀವನ ಚಿತ್ರಣ ನೀಡುವ ಕೃತಿ ಈ 'ಸಮರ ಸಮೀರ.' ಇಂಥ ಕ್ರಾಂತಿಕಾರಿ ದೇಶಭಕ್ತನ, ಕ್ರಾಂತಿಕಾರಿ, ರಾಜಕೀಯ ಹೋರಾಟದ ಜೀವನವನ್ನು ಡಾ. ಸರೋಜಿನಿ ಚವಲಾರ ಅವರು 'ಸಮರಸಮೀರ' ಕೃತಿಯಲ್ಲಿ ವಿವರಿಸಿದ್ದಾರೆ.

**ಎಳೆಯರಿಗೊಂದು ಬೆಳಕು :** *ಮಹಾದೇವ ಬುಂಯಾರ*

ಮಹಾದೇವ ಬುಂಯಾರ ಅವರು ನೆಹರು ಅವರ ಜೀವನ ಮತ್ತು ಸಾಧನೆ ಕುರಿತು ಚಿಕ್ಕ ಮಕ್ಕಳಿಗಾಗಿ ಪರಿಚಯ ಮಾಡಿಕೊಡಲು ಈ ಕೃತಿ ರಚಿಸಿದ್ದಾರೆ. ವಿವರಣೆ ಬಹಳ ಕಡಿಮೆ, ಬರಹವೂ ಕಡಿಮೆ ಇದ್ದು ನವ ಸಾಕ್ಷರರಿಗೆ ಅಥವಾ ಮಕ್ಕಳಿಗೆ ನೆಹರು ಬಗೆಗೆ ಕಥೆ ರೂಪದಲ್ಲಿ ಪರಿಚಯಿಸಲು ಇದನ್ನು ರಚಿಸಿದ್ದಾರೆ.

**ಅಪರೂಪದ ರಾಜಕಾರಣಿ ರಾಮಪ್ಪ ಬಿದರಿ :** *ಎಸ್.ಎಸ್.ಬಾಣದ*

ಗಾಂಧಿ ನಂತರ ಗಾಂಧಿ ಪ್ರಭಾವ ಬೀರಿದ ಕೆಲವರು ಎಂದರೆ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯದ ನಂತರದ ಕೆಲಕಾಲದಲ್ಲಿಇದ್ದ ಕೆಲವೇ ರಾಜಕಾರಣಿಗಳಲ್ಲಿ ರಾಮಪ್ಪ ಬಿದರಿ ಕೂಡ ಒಬ್ಬರು.

ಔಂಧ ಸಂಸ್ಥಾನದ ಪ್ರಧಾನ ಮಂತ್ರಿಗಳಾಗಿ ಎಂಟುವರ್ಷಗಳ ಕಾಲ ದುಡಿದ ರಾಮಪ್ಪ ಬಿದರಿಯವರ ಜೀವನವನ್ನು ಕುರಿತ ಪುಸ್ತಕ 'ಅಪರೂಪದ ರಾಜಕಾರಣಿ ರಾಮಪ್ಪಬಿದರಿ'.

ಅವರು ಕನಸುಗಾರರಾಗಿ, ಸ್ನೇಹಜೀವಿಯಾಗಿ, ನಿಷ್ಠಾವಂತ ಕಾಂಗ್ರೆಸ್ಸಿಗರಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟದ್ದನ್ನು ಈ ಪುಸ್ತಕದಲ್ಲಿ ವಿವರಿಸಲಾಗಿದ.

**ನೋವಿಗದ್ದಿದ ಕುಂಚ :** *ನೇಮಿಚಂದ್ರ*

ಕಲಾಜಗತ್ತಿನಲ್ಲಿ ತನ್ನ ವರ್ಣಚಿತ್ರಗಳು ಮತ್ತು ರೇಖಾಚಿತ್ರಗಳಿಂದ ಜಗತ್ಪ್ರಸಿದ್ಧನಾದ ವ್ಯಾನ್‌ಗೋನ ಜೀವನ ಚರಿತ್ರೆ ಸಾಮಾನ್ಯ ಕಲಾಕಾರರಿಗಿಂತ ಭಿನ್ನವಾದದ್ದು. ಇದನ್ನು ತಮಗೆ ದೊರೆತ ದಾಖಲೆಗಳ ಹಿನ್ನೆಲೆಯಲ್ಲಿ ಕಥೆಯ ಚೌಕಟ್ಟಿಗೆ ಶ್ರೀಮತಿ ನೇಮಿಚಂದ್ರ ಅಳವಡಿಸಿದ್ದಾರೆ. ಇದಕ್ಕೆ ಒಂದು ಅದ್ಭುತ ಕಥಾ ಚೌಕಟ್ಟು ನೀಡಿರುವುದರಿಂದ ಜೀವನ ಚರಿತ್ರೆಗಿರುವ ಮಿತಿ ಮೀರಿನಿಲ್ಲುತ್ತದೆ. ಇದು ಜೀವನ ಚರಿತ್ರೆಯಾಗಿ ಬೀರುವ ಪ್ರಭಾವಕ್ಕಿಂತ ಕಥೆಯಾಗಿ ಓದುಗನ ಮೇಲೆ ಅಪಾರ ಪ್ರಭಾವ ಬೀರುತ್ತದೆ.

**ಬೆಳಕಿನೊಂದು ಕಿರಣ ಮೇರಿ ಕ್ಯೂರಿ :** *ನೇಮಿಚಂದ್ರ*

ರೇಡಿಯಂ ವುಮನ್ ಎಂದೇ ಹೆಸರುವಾಸಿಯಾದ ಮೇರಿಕ್ಯೂರಿಯ ಸಮಗ್ರ ಜೀವನದ ಮೇಲೆ ಬೆಳಕು ಚೆಲ್ಲುವ ಕೃತಿ 'ಬೆಳಕಿನೊಂದು ಕಿರಣ'.

ಪೋಲೆಂಡಿನಂಥ ಒಂದು ಸಣ್ಣ ದೇಶದಲ್ಲಿ ಜನಿಸಿದ 'ಮೇರಿ ಕ್ಯೂರಿ' ಬಾಲ್ಯದಿಂದಲೇ ಕಡುಬಡತನ ಎದುರಿಸಿ, ವಿದ್ಯಾಭ್ಯಾಸ ಮಾಡಿ, ಎದುರಾದ ಸಮಸ್ಯೆಗಳನ್ನು ಮೀರಿ ಜಗತ್ತಿನ ಶ್ರೇಷ್ಠವಿಜ್ಞಾನಿಯಾದ ಬಗೆಯನ್ನು ಈ ಪುಸ್ತಕ ವಿವರಿಸುತ್ತದೆ. ಲೇಖಕಿಯವರೇ ಪ್ರಸ್ತಾವನೆಯಲ್ಲಿ ಹೇಳುವಂತೆ ತಮ್ಮ ಕಲ್ಪನೆ, ಉತ್ಪ್ರೇಕ್ಷೆ ಏನೂ ತುಂಬದೇ ಅವರ ಜೀವನ ಮಾದರಿಯನ್ನೇ ಹೇಳಿದ್ದಾರೆ. ಆದರೆ ತಮ್ಮ ವಿಶೇಷ ಶೈಲಿಯ ಬರವಣಿಗೆಯಿಂದ ಓದುಗನ ಸಂವೇದನೆಯನ್ನು ತಟ್ಟುತ್ತಾರೆ.

ಈ ಕೃತಿಯಲ್ಲಿ ಮೇರಿಕ್ಯೂರಿಯ ಹುಟ್ಟು ಬಾಲ್ಯ, ಯೌವ್ವನ, ದಾಂಪತ್ಯ ಕಲಹ, ಸಂಶೋಧನೆ, ಹೀಗೆ ಜೀವನದಲ್ಲಿ ಎದುರಾದ ನೋವು ನಲಿವುಗಳು,ಪಟ್ಟು ಹಿಡಿದು ಮಾಡಿದ ಸಾಧನೆಯ ವಿವರಗಳು ಬಿಚ್ಚಿಟ್ಟಿದ್ದಾರೆ.

**ದಾರಾಶಿಖೋ :** *ಅಗ್ರಹಾರ ಕೃಷ್ಣಮೂರ್ತಿ*

ಭಾರತದ ಇತಿಹಾಸದಲ್ಲಿ ಮೊಘಲ್ ಚಕ್ರಾಧಿಪತ್ಯಕ್ಕೆ ವಿಶೇಷವಾದ ಸ್ಥಾನವಿದೆ. ಅನೇಕ ಕಾರಣಗಳಿಂದ ಅಂಥ ಮೊಘಲ್ ಸಾಮ್ರಾಜ್ಞನಾದ ಷಹಜಾನನ ಮಕ್ಕಳಲ್ಲಿ ಒಬ್ಬ ಈ ದಾರಾಶಿಖೋ. ಈತನ ಜೀವನ ದಾರುಣ ಘಟನೆಗಳಿಂದ ಕೂಡಿದೆ. ಆದರೆ ಈತನೊಬ್ಬ ಮಹಾನ್ ದಾರ್ಶನಿಕ. ೧೭ನೇ ಶತಮಾನದಲ್ಲಿಯೇ ಹಿಂದೂ ಮುಸ್ಲಿಮರ ಐಕ್ಯತೆಯನ್ನು ಸಾಧಿಸುವುದು ತನ್ನ ಜೀವನದ ಪರಮ ಗುರಿಯಾಗಿಸಿಕೊಂಡಿದ್ದ ಈತ ತಂದೆಯ ಪ್ರೀತಿಯ ಮಗನಾಗಿ ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ. ನಂತರ ಜೀವನದುದ್ದಕ್ಕೂ ಸಹೋದರ ಜಹಂಗೀರನಿಂದಲೇ ಸೆರೆಯಾಳಾಗಿ ಅನೇಕ ಕಷ್ಟ ಕೋಟಲೆಗಳಿಗೆ ಒಳಗಾದ. ಇಂಥ ದುಃಖಮಯ, ಹೃದಯಸ್ಪರ್ಶಿ ದಾರೋನ ಜೀವನವನ್ನು ಈ ಕೃತಿ ತಿಳಿಸುವುದರ ಜೊತೆಗೆ ಆತನ ಆಧ್ಯಾತ್ಮಿಕ ಚಿಂತನೆಗಳನ್ನು ಕೂಡ ಹೇಳುವುದು ಈ ಪುಸ್ತಕದ ಉದ್ದೇಶವಾಗಿದೆ. ದಾರಾಶಿಖೋನೇ ಸ್ವತಃ ಬರೆದ 'ಸಮುದ್ರ ಸಂಗಮ'ದ ಅನುವಾದ, ಆತನ ಚಿಂತನೆಯನ್ನೊಳಗೊಂಡ ಜೀವನ ಕಥನ ಈ ಕೃತಿಯ

ವ್ಯಾಪ್ತಿಯೊಳಗೆ ಬರುತ್ತದೆ.

ಈ ಕೃತಿಯ ಲೇಖಕ ಅಗ್ರಹಾರ ಕೃಷ್ಣಮೂರ್ತಿಯವರು ಸೂಕ್ಷ್ಮವಾಗಿ, ಸಂಕ್ಷಿಪ್ತವಾಗಿ ದಾರೋನ ಜೀವನ, ಚಿಂತನೆಗಳನ್ನು ಓದುಗನಿಗೆ ಯಶಸ್ವಿಯಾಗಿ ತಲುಪುವಂತೆ ಬರೆದಿದ್ದಾರೆ.

**ಅರಿವು : ಕೃಷ್ಣಮೂರ್ತಿಯವರ ಜೀವನ ಬೋಧನೆ-ಸಾಹಿತ್ಯ** : *ಕೆ.ಶ್ರೀನಿವಾಸ ದೇಸಾಯಿ*

ಭಾರತದ ಕೆಲವೇ ಶ್ರೇಷ್ಠ ದಾರ್ಶನಿಕ, ತತ್ವಜ್ಞಾನಿಗಳಲ್ಲಿ ಒಬ್ಬರಾದ ಜಿಡ್ಡು ಕೃಷ್ಣಮೂರ್ತಿಯವರ ಜೀವನ, ಅವರ ಸಾಹಿತ್ಯ ಮತ್ತುಬೋಧನೆಗೆ ಸಂಬಂಧಿಸಿದ ಪುಸ್ತಕ - ಅರಿವು. ಈ ಕೃತಿಯನ್ನು ಲೇಖಕರು ಕೃಷ್ಣಮೂರ್ತಿಯವರ ಜೀವನ ವಿವರಣೆಗೆ ಸೀಮಿತಗೊಳಿಸದೆ ಅವರ ಸಾಹಿತ್ಯ, ತತ್ವಗಳು ಮತ್ತು ಬೋಧನೆಯ ಸ್ವತಂತ್ರ ಲೇಖನಗಳ ತುಣುಕುಗಳನ್ನು ಸೇರಿಸಿದ್ದಾರೆ.

ಈ ಕೃತಿಯಲ್ಲಿ ಲೇಖಕ ಕೆ.ಶ್ರೀನಿವಾಸ ದೇಸಾಯಿ ಅವರು ಬಹಳ ಸಂಕ್ಷಿಪ್ತವಾಗಿ ಕೃಷ್ಣಮೂರ್ತಿಯವರ ಹುಟ್ಟು, ಬೆಳವಣಿಗೆಯನ್ನು ಹೇಳಿ ಬರಹಗಳ ಭಾಗಗಳನ್ನು ಕೊಟ್ಟಿದ್ದಾರೆ. ಉದಾ:ನುಡಿಮುತ್ತುಗಳು, ಪತ್ರಗಳು, ಬೋಧನೆಯ ಮುಖ್ಯ ಅಂಶಗಳು. ಅಷ್ಟೇ ಅಲ್ಲದೆ ಕೃಷ್ಣಮೂರ್ತಿಯವರ ಬಗೆಗೆ ಅನೇಕ ವ್ಯಕ್ತಿಗಳ ಅನಿಸಿಕೆಗಳನ್ನು ಕೂಡ ಸಂಗ್ರಹಿಸಲಾಗಿದೆ.

ಲೇಖಕರೇ ಮುನ್ನುಡಿಯಲ್ಲಿ ಹೇಳುವಂತೆ "ಜಿಡ್ಡು ಕೃಷ್ಣಮೂರ್ತಿಯವರ ಜೀವನಾಂಶಗಳಿಗಿಂತ ಅವರ ಬೋಧನೆ ಹಾಗೂ ಅವರ ಸಾಹಿತ್ಯವನ್ನು ಪರಿಚಯ ಮಾಡಿಕೊಡುವ ಉದ್ದೇಶ ಹೊಂದಿದೆ - ಈ ಕಿರು ಪುಸ್ತಕ."

**ಮಹಾಮಾನವ ಬಾಬಾ ಆಮ್ಟೆ :** *ಎಚ್.ವಿ.ಕೃಷ್ಣಸ್ವಾಮಿ*

ಶ್ರೀಮಂತ ಮನೆತನದಲ್ಲಿ ಹುಟ್ಟಿ ಬೆಳೆದ ಆಮ್ಟೆ ಬಾಲ್ಯದಿಂದಲೇ ತಮ್ಮ ಸುತ್ತಮುತ್ತಲಿನ ಜನರನ್ನು ಸಂವೇದನಾಶೀಲರಾಗಿ ನೋಡುತ್ತ ಬಂದರು. ಹೊಟ್ಟೆ ಬಟ್ಟೆಗಿಲ್ಲದೆ ಸಾಯುವ ಜನರನ್ನು ಕಂಡರು. ರೋಗ ರುಜಿನಗಳಿಗೆ ಗುರಿಯಾದ ಜನರನ್ನು ನೋಡಿ ದುಃಖಿಸಿದರು. ಆಮ್ಟೆಯವರ ಮನಸ್ಸು ಅವರೆಲ್ಲರ ಸೇವೆಗಾಗಿ ಹಾತೊರೆಯುತ್ತಿತ್ತು. ಅದಕ್ಕಾಗಿ ಮುಂದೆ ತಮ್ಮ ಜೀವನವನ್ನೇ ಮುಡುಪಾಗಿಟ್ಟರು. ತಮ್ಮ ವಕೀಲಿ ವೃತ್ತಿಯನ್ನೇ ಬಿಟ್ಟು 'ಆನಂದವನ'ವನ್ನು ಕಟ್ಟಿ ಇಂಥ ಜನರಿಗೆ ಅನ್ನದಾತರಾದರು, ಜೀವನ ಮಾರ್ಗದರ್ಶಕರಾದರು. ಅನೇಕ ಪ್ರಶಸ್ತಿಗಳು ಇವರನ್ನು ಹುಡುಕಿಕೊಂಡು ಬಂದರೂ ಅದಾವುದಕ್ಕೂ ಗಮನ ಕೊಡದೆ ತಮ್ಮ ಸೇವಾ ಪ್ರವೃತ್ತಿ ಮುಂದುವರೆಸಿದರು. ಅದರಲ್ಲೇ ಜೀವನದ ಸಾರ್ಥಕತೆ ಕಂಡುಕೊಂಡರು. ಈಗಲೂ ಆ ಮಾರ್ಗದಲ್ಲೇ ಬದುಕುತ್ತಿರುವ ಆಮ್ಟೆಯವರ ಇಂಥ ಆದರ್ಶ ಜೀವನದ ಸೂಕ್ಷ್ಮ ಏಳೆಗಳನ್ನು ಎಚ್.ವಿ.ಕೃಷ್ಣಮೂರ್ತಿಯವರು ಈ ಚಿಕ್ಕ ಹೊತ್ತಿಗೆಯಲ್ಲಿ ಬಿಚ್ಚಿಟ್ಟಿದ್ದಾರೆ.

**ಕೀರ್ತನಕೇಸರಿ ಕೋಣನೂರು ಶ್ರೀಕಂಠಶಾಸ್ತ್ರಿಗಳು** : *ವಾಗೀಶ್ವರಿ ಶಾಸ್ತ್ರಿ*

ಕೀರ್ತನೆಯನ್ನೇ ತಮ್ಮ ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸಿದ, ಕೀರ್ತನಕೇಸರಿ ಎಂದು

ಹೆಸರು ಪಡೆದವರಲ್ಲಿ ಕೋಣನೂರು ಶ್ರೀಕಂಠ ಶಾಸ್ತ್ರಿಗಳು ಒಬ್ಬರು. ತಮ್ಮ ತಂದೆ ವೆಂಕಟರಮಣ ದಾಸರಿಂದ ಕೀರ್ತನೆ ಕಲಿತ ಶ್ರೀಕಂಠ ಶಾಸ್ತ್ರಿಗಳು ತಮ್ಮ ಜೀವನಪೂರ್ತಿ ಮೈಸೂರು, ಬೆಂಗಳೂರು, ಸುತ್ತಮುತ್ತಲಿನ ಹಳ್ಳಿಪಳ್ಳಿಗಳಲ್ಲಿ ತಮ್ಮ ಕೀರ್ತನೆಯ ಗಂಧ ಬೀರಿ ಅಲ್ಲಿನ ಜನಮನದಲ್ಲಿ ಉಳಿದುಕೊಂಡವರು ಎನ್ನುವುದನ್ನು ಈ ಚಿಕ್ಕ ಪುಸ್ತಕ ಕೆಲವು ಘಟನೆಗಳ ಮೂಲಕ, ವಿಚಾರಗಳ ಮೂಲಕ ವಿಷದಪಡಿಸುತ್ತದೆ.

**ಆಧುನಿಕ ಕನ್ನಡ ಕವಿ ಚರಿತೆ :** *ಬಿ.ಎಸ್.ತಲ್ವಾಡಿ*

ಬಿ.ಎಸ್.ತಲ್ವಾಡಿಯವರು ೨೦ನೇ ಶತಮಾನದ ಆದಿಯಲ್ಲಿದ್ದ ಪಂಜೆ ಮಂಗೇಶರಾಯರಿಂದ ಇತ್ತೀಚಿನ ಕವಿಗಳಾದ ಸುಮತೀಂದ್ರ ನಾಡಿಗ ಅವರುಗಳವರೆಗೆ ಇಪ್ಪತ್ತೆರಡು ಜನ ಕವಿಗಳ ಜೀವನ ಚಿತ್ರಣ ಈ ಪುಸ್ತಕದಲ್ಲಿ ನೀಡಿದ್ದಾರೆ.

**ಯರ್ಮುಂಜ ರಾಮಚಂದ್ರ ಬದುಕು ಬರಹ :** *ವೇಣುಗೋಪಾಲ್ ಕಾಸರಗೋಡು*

ಈ ಪುಸ್ತಕ ಯರ್ಮುಂಜ ರಾಮಚಂದ್ರರ ಬದುಕು ಬರಹದ ಬಗೆಗೆ ಎಂ.ಫಿಲ್.ಪದವಿಗಾಗಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧ.

ಇದು ಚಿಕ್ಕ ವಯಸ್ಸಿನಲ್ಲೇ ಸಾಹಿತ್ಯ ರಚಿಸಿ ೨೨ನೇ ವಯಸ್ಸಿನಲ್ಲೇ ತೀರಿಕೊಂಡ ಕನ್ನಡದ ಕವಿ, ಕಥೆಗಾರ, ಪತ್ರಕರ್ತ ಯರ್ಮುಂಜ ರಾಮಚಂದ್ರ ಅವರ ಜೀವನ ವೃತ್ತಾಂತವನ್ನು ತಿಳಿಸುತ್ತದೆ.

**ಕೊ.ಅ.ಉಡುಪ ವ್ಯಕ್ತಿ ಮತ್ತು ಸಾಹಿತ್ಯ :** *ಸುಮುಖಾನಂದ ಜಲವಳ್ಳಿ*

ಈ ಪುಸ್ತಕದಲ್ಲಿ ಮುಖ್ಯವಾಗಿ ಎರಡು ಭಾಗ ಇದೆ. ಮೊದಲನೇ ಭಾಗದಲ್ಲಿ ಕೊ.ಅ.ಉಡುಪರ ಜೀವನ, ವ್ಯಕ್ತಿತ್ವದ ವಿವರಗಳಿವೆ (ಹುಟ್ಟು, ಬಾಲ್ಯ, ವಿದ್ಯಾಭ್ಯಾಸ, ವೃತ್ತಿ, ಅಧ್ಯಾಪಕರಾಗಿ, ಪ್ರಕಾಶಕರಾಗಿ ಮತ್ತು ಮನುಷ್ಯನಾಗಿ). ಎರಡನೇ ಭಾಗದಲ್ಲಿ ಉಡುಪರ ಒಟ್ಟು ಸಾಹಿತ್ಯದ ಸಂಕ್ಷಿಪ್ತ ದರ್ಶನವಿದೆ. ಉಡುಪರ ಪದ್ಯ ಸಾಹಿತ್ಯ, ಗದ್ಯ ಸಾಹಿತ್ಯ, ಲೇಖನ ಮತ್ತಿತರ ಸಾಹಿತ್ಯದ ಸಂಕ್ಷಿಪ್ತ ಪರಾಮರ್ಶೆ ಮಾಡಲಾಗಿದೆ.

**ಬೆಳಕು ಬಿತ್ತಿದವರು :** *ದು.ನಿಂ.ಬೆಳಗಲಿ*

ಕನ್ನಡ ನಾಡಿಗಾಗಿ, ಕನ್ನಡ ಭಾಷೆಗಾಗಿ, ಜನರ ಹಿತಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ಜೀವನ ಸವೆಸಿದ ಅನೇಕ ಕನ್ನಡಿಗರಿದ್ದಾರೆ. ಅವರಲ್ಲಿ ಗಂಗಾಧರ ಮಡಿವಾಳೇಶ್ವರ ತುರುಮುರಿ, ಡೆಪ್ಯುಟಿ ಚನ್ನಬಸಪ್ಪ, ಫ. ಗು. ಹಳಕಟ್ಟಿ, ಚಿಕ್ಕೋಡಿ ಪಂಡಿತಪ್ಪ, ಹರ್ಡೇಕರ್ ಮಂಜಪ್ಪ ಈ ಆರು ಜನ ಕನ್ನಡಿಗರ ಜೀವನ, ಹುಟ್ಟು, ಬೆಳವಣಿಗೆ, ಸಾಧನೆಗಳನ್ನು ದು.ನಿಂ.ಬೆಳಗಲಿ ಅವರು 'ಬೆಳಕು ಬಿತ್ತಿದವರು' ಪುಸ್ತಕದಲ್ಲಿ ವಿವರಿಸಿದ್ದಾರೆ.

**ಮಾಗಿದ ಕಾಯ :** *ಡಾ.ಡಿ.ವಿ.ಪುರಾಣಿಕ*

ಬೆಳಗಾವಿ ಜಿಲ್ಲೆಯ ಯಮಕನಮರಡಿ ಸುಕ್ಷೇತ್ರ ಹುಣಸಿಕೊಳ್ಳಮಠದ ಗುರುಸಿದ್ಧ ಮಹಾಶಿವಯೋಗಿಗಳು ಶಿವಭಕ್ತರಾಗಿ, ಸಮಾಜ ಸೇವಕರಾಗಿ, ಜನರ ಹಿತೈಷಿಯಾಗಿ ಮತ್ತು ಅನುಭಾವಿಗಳಾಗಿ ಕಳೆದ ಜೀವನವನ್ನು ವಿವರಿಸಲು ಈ ಪುಸ್ತಕ ಹುಟ್ಟಿಕೊಂಡಿದೆ.

ಲೇಖಕರು ಇಡೀ ಕೃತಿಯಲ್ಲಿ ಪ್ರಾರಂಭದಿಂದ ಕೊನೆಯವರೆಗೆ ಶ್ರೀ ಗುರುಸಿದ್ಧ ಮಹಾಶಿವಯೋಗಿಗಳನ್ನು ದೇವರಾಗಿ, ಯೋಗಿಗಳಾಗಿ ನೋಡುವುದರಿಂದ ಮನುಷ್ಯನಿಂದ ದೂರ ಇಟ್ಟಿದ್ದಾರೆ. ಆದ್ದರಿಂದಲೇ ಇಂಥ ಕೃತಿಗಳು ವಾಸ್ತವದ ನೆಲೆ ಕಳೆದುಕೊಂಡಿದೆ.

**ಶ್ರೀ ಶಂಕರಾಚಾರ್ಯರು :** *ಡಾ.ಬಿ.ಜೆ. ರಂಗನಾಥ್*

ಶಂಕರಾಚಾರ್ಯರು ಕೇರಳದ ಒಂದು ಹಳ್ಳಿಯಲ್ಲಿ ಹುಟ್ಟಿ ವೇದ, ಉಪನಿಷತ್ತು, ತತ್ವಜ್ಞಾನ ಅಧ್ಯಯನ ಮಾಡಿ, ಸನ್ಯಾಸ ಸ್ವೀಕರಿಸಿ ನಾಡಿನಲ್ಲೆಲ್ಲ ಅದ್ವೈತ ಸಿದ್ಧಾಂತ, ವೇದ ಧರ್ಮದ ಪ್ರಚಾರ ಮಾಡಿ ಭಾರತದ ನಾಲ್ಕು ದಿಕ್ಕುಗಳಲ್ಲಿ, ನಾಲ್ಕು ಪೀಠಗಳನ್ನು ಸ್ಥಾಪಿಸಿದ್ದಾರೆ. ಇದನ್ನು ಡಾ. ಬಿ.ಜೆ.ರಂಗನಾಥ್ ಅವರು ಶ್ರೀ ಶಂಕರಾಚಾರ್ಯರು ಎನ್ನುವ ಕಿರು ಹೊತ್ತಿಗೆಯಲ್ಲಿ ಶಂಕರಾಚಾರ್ಯರ ಜೀವನ, ಸಾಧನೆಗಳನ್ನು ಪವಾಡಗಳೊಂದಿಗೆ ಹೆಣೆದು ಅವರನ್ನು ಲೌಕಿಕ ಜಗತ್ತಿನಿಂದ ದೂರಮಾಡುತ್ತಾರೆ. ಇದರ ಬದಲು ಸ್ವಲ್ಪ ವೈಚಾರಿಕ ನೆಲೆಯಿಂದ ವಿಭಿನ್ನವಾಗಿ ಚಿತ್ರಿಸಿದ್ದರೆ ಈ ಕೃತಿಗೆ ಇನ್ನೂ ಹೆಚ್ಚಿನ ಬೆಲೆ ಬರುತ್ತಿತ್ತು.

**ಅನುಭಾವಿಯ ಆತ್ಮಕಥನ :** *ಡಾ.ಎಸ್.ಆರ್.ಗುಂಜಾಳ್*

೧೨ನೇ ಶತಮಾನದ ಚಾರಿತ್ರಿಕ ಚರಿತ್ರೆಯನ್ನು ಡಾ. ಗುಂಜಾಳ್ ಅವರು ಅನುಭಾವಿಯ ಕೃತಿಯಲ್ಲಿ ವಿವರಿಸಿದ್ದಾರೆ.

ಎವ್ವೆಲಿನ್ ಅಂಡರ್‌ಹಿಲ್‌ಳು ಬರೆದ ಪುಸ್ತಕದ ಪ್ರೇರಣೆಯಿಂದ ವಚನಕಾರರ ತಾತ್ವಿಕ ಹಿನ್ನೆಲೆಯಲ್ಲಡಗಿದ ಅನುಭವದ ಚರಿತ್ರೆಯನ್ನು ಹೇಳಲು ಪ್ರಯತ್ನಿಸಿದ್ದಾರೆ.

ಭಕ್ತಿ, ದೇವರು, ತನ್ನನ್ನು ಶುದ್ಧೀಕರಿಸಿಕೊಳ್ಳುವುದು, ದರ್ಶನ, ಸಾಧನೆ, ಸಾಮರಸ್ಯ, ಸುಖೀರಾಜ್ಯ ಮತ್ತು ಹೋರಾಟ ಎನ್ನುವುದನ್ನು ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ.

**ವೀರಶೈವ ಅಧ್ಯಯನ ಸಂಸ್ಥೆಯ ನಾಲ್ಕು ಜೀವನ ಚರಿತ್ರೆಯ ಪುಸ್ತಕಗಳು**

ಈ ವರ್ಷ ವೀರಶೈವ ಅಧ್ಯಯನ ಸಂಸ್ಥೆ ಪ್ರತಿ ವರ್ಷದಂತೆ ಸಮಾಜ ಸೇವಕರು, ಶಿಕ್ಷಣ ತಜ್ಞರು, ಉದ್ಯಮಿಗಳು, ಸಾಹಿತಿಗಳು ಆದ ವೀರಶೈವ ವ್ಯಕ್ತಿಗಳ ಜೀವನ ಚಿತ್ರಣವನ್ನು ನೀಡುವ ಪುಸ್ತಕಗಳನ್ನು ಪ್ರಕಟಿಸಿದೆ.

೧. 'ಚಿಟಗೇರಿ ಮುರಿಗೆಪ್ಪನವರು'- ದಾವಣಗೆರೆಯ ಮುತ್ಸದಿ ಉದ್ಯಮಿಗಳು, ಸಮಾಜ ಸೇವಕರು. ಇವರ ಜೀವನ ಕಾರ್ಯಕ್ಕೆ ಸಂಬಂಧಿಸಿದ ಕೃತಿಯನ್ನು ಎಸ್.ಉಮಾಪತಿಯವರು ಬರೆದಿದ್ದಾರೆ.

೨.'ಯುಗಟಿ ವೀರಪ್ಪನವರು' - ಕನ್ನಡ, ಇಂಗ್ಲೀಷ್, ಸಂಸ್ಕೃತ ಮುಂತಾದ ಭಾಷೆಗಳಲ್ಲಿ ಆಳವಾದ ಸಾಹಿತ್ಯಾಧ್ಯಯನ ಮಾಡಿ, ಕನ್ನಡ ಇಂಗ್ಲಿಷ್‌ನಲ್ಲಿ ಅನೇಕ ಕೃತಿಗಳನ್ನು ರಚಿಸಿದ ವೀರಪ್ಪನವರನ್ನು ಕುರಿತ ಕೃತಿ. ಇವರ ಜೀವನ ಸಾಧನೆಯನ್ನು ಶ್ರೀಯುತ ಎಸ್.ಆರ್.ಗುಂಜಾಳ್ ಅವರು ಚಿತ್ರಿಸಿದ್ದಾರೆ.

೩.'ಗುಬ್ಬಿಯ ವಾಣಿ ಮರುಳಯ್ಯನವರು'- ಸಮಾಜ ಸೇವಕರು, ವಿನಯಶೀಲರು, ಕಲೆ, ಸಾಹಿತ್ಯಕ್ಕೆ ತಮ್ಮಿಂದಾದ ಸಹಾಯ ಮಾಡುತ್ತ ಬಂದವರು ಗುಬ್ಬಿಯವಾಣಿ ಮರುಳಯ್ಯನವರು. ಮರುಳಯ್ಯನವರ ಮಗಳಾದ ಶ್ರೀಮತಿ ಜಯ ರಾಜಶೇಖರ್ ಅವರು ಈ ಪುಸ್ತಕ ಬರೆದಿದ್ದಾರೆ.

೪. 'ಮ.ಗು.ಹಂದ್ರಾಳರು'- ಶಿಕ್ಷಕರಾಗಿ, ಶಿಕ್ಷಣಾಧಿಕಾರಿಯಾಗಿ ಶಿಕ್ಷಣವಲಯದಲ್ಲಿ ತಮ್ಮಿಂದಾದ ಅನೇಕ ಮಾರ್ಪಾಡು ಮಾಡಿದ ಶಿಕ್ಷಣ ತಜ್ಞ ಮ.ಗು.ಹಂದ್ರಾಳರ ಜೀವನದ ಚಿತ್ರಣವನ್ನು ಈ ಚಿಕ್ಕ ಹೊತ್ತಿಗೆಯಲ್ಲಿ ಡಾ.ಸರೋಜನಿ ಶಿಂತ್ರಿಯವರು ಚಿತ್ರಿಸಿದ್ದಾರೆ.

**ಪರಮಹಂಸ ಅಂಜನಪ್ಪ ಸ್ವಾಮಿಗಳವರ ದಿವ್ಯಜೀವನ ಮತ್ತು ತತ್ವಚಿಂತನ :**

*ಪ್ರೊ. ನಂಜುಂಡಶಾಸ್ತ್ರಿ*

ಈ ಕೃತಿಯಲ್ಲಿ ಆರು ಭಾಗಗಳನ್ನು ಮಾಡಿಕೊಂಡು ಅಂಜನಪ್ಪ ಸ್ವಾಮಿಗಳವರ ಜೀವನ ಮತ್ತು ಚಿಂತನೆಗಳನ್ನು ಹೇಳಲು ಪ್ರಯತ್ನಿಸಿದ್ದಾರೆ. ಒಂದನೇ ಭಾಗದಲ್ಲಿ ಅಂಜನಪ್ಪನವರ ಜೀವನದ ವಿವರಗಳನ್ನು ೧೮ ಅಧ್ಯಾಯಗಳಲ್ಲಿ ವಿವರಿಸಿದ್ದಾರೆ. ಹಾಗೆಯೇ ೨ನೇ ಅಧ್ಯಾಯದಲ್ಲಿ ತತ್ವ ಚಿಂತನೆ ಕುರಿತು. ಮೂರನೇ ಭಾಗದಲ್ಲಿ ಆಪ್ತೇಷ್ಟರ ಅನಿಸಿಕೆಗಳನ್ನು ಸಂಗ್ರಹಿಸಿದ್ದಾರೆ. ನಾಲ್ಕನೇ ಭಾಗದಲ್ಲಿ ಸ್ವಾಮಿಗಳು ತೀರಿಕೊಂಡ ನಂತರ ಜನರಿಗೆ ಆದ ಅನುಭವಗಳನ್ನು (ಪವಾಡಗಳನ್ನು) ಹೇಳಿದ್ದಾರೆ. ಐದನೇ ಭಾಗದಲ್ಲಿ ಶ್ರುತಿಸ್ಮೃತಿ ವಿಚಾರಗಳು. ೬ನೇ ಭಾಗದಲ್ಲಿ ಅಷ್ಟೋತ್ತರ ಶತನಾಮಾವಳಿಯನ್ನು ನೀಡಿದ್ದಾರೆ.

೧೯೯೩ನೇ ಸಾಲಿನಲ್ಲಿ ಬಂದ ಜೀವನ ಚರಿತ್ರೆಗಳು ಕಾಲ, ದೇಶದಿಂದ ಮುಕ್ತಿಯನ್ನು ಪಡೆದಿವೆ.



## ಲಲಿತ ಪ್ರಬಂಧ – ಹಾಸ್ಯಸಂಕಲನ

*ಬಿ. ಸುಬ್ಬಾನಮೂರ್ತಿ*

ಕನ್ನಡದಲ್ಲಿ ಲಲಿತ ಪ್ರಬಂಧ ಒಂದು ವಿಶಿಷ್ಟಸಾಹಿತ್ಯ ಪ್ರಕಾರ. ಆದರೆ ಇತ್ತೀಚಿನ ದಿನಗಳಲ್ಲಿ ಈ ಬಗೆಯ ಬರವಣಿಗೆಯ ಪ್ರಮಾಣ ಇಲ್ಲವೆನ್ನುವಷ್ಟು ಕಡಿಮೆಯಾಗಿದೆ. ಇದಕ್ಕೆ ಈ ಪ್ರಕಾರ ಬೇಡುವ ವಿಶಿಷ್ಟತೆಗಳೇ ಕಾರಣ. ಪ್ರಸ್ತುತ ಸಂದರ್ಭದಲ್ಲಿ ಹಾಸ್ಯ ಬರಹಗಳೇ ಅಗಾಧವಾಗಿದೆ.

ಎಚ್.ಜಿ. ಸಣ್ಣಗುಡ್ಡಯ್ಯನವರ 'ಏಕಾಂತ ಮತ್ತು ಇತರ ಪ್ರಬಂಧಗಳು' ಈ ವರ್ಷದ ಅತ್ಯುತ್ತಮ ಲಲಿತಪ್ರಬಂಧಗಳ ಸಂಕಲನ. ಆತ್ಮೀಯವೂ ವೈಯಕ್ತಿಕವೂ ಆದ ಹಲವು ಘಟನೆಗಳು ಪ್ರತಿಯೊಂದು ಪ್ರಬಂಧದಲ್ಲೂ ಸ್ವಾರಸ್ಯಪೂರ್ಣವಾಗಿ ನಿರೂಪಿತವಾಗಿವೆ. ಅನುಭವ ಸಂಪತ್ತು ಮತ್ತು ನಿರೂಪಣಾ ವಿಧಾನದಿಂದ ಈ ಪ್ರಬಂಧಗಳ ವಿಚಾರವಂತಿಕೆಯು ಹೃದ್ಯವಾದ ಗದ್ಯದಲ್ಲಿ ಮೈತಳೆದಿದೆ. 'ಪ್ರೇಮ'ವನ್ನು ಕುರಿತ ಮೊದಲ ಪ್ರಬಂಧವೇ ಮನದಲ್ಲಿ ಮೂಡಿದ ಪ್ರೇಮದ ಪರಿಯನ್ನು, ಅದರ ವಿವಿಧ ಅವಸ್ಥೆಗಳನ್ನು ಸೊಗಸಾಗಿ ತುಂಬಿಗೊಂಡಿದೆ. ಏಕಾಂತದ ವಿವಿಧ ಸಂದರ್ಭಗಳನ್ನು ವಿವರಿಸುವ 'ಏಕಾಂತ' ಪ್ರಬಂಧವು ಏಕಾಕಿತನದ ಹಲವು ಮಗ್ಗುಲುಗಳನ್ನು ಅದೆಷ್ಟು ಅಮೂಲ್ಯವೆಂಬುದನ್ನು ತಿಳಿಸುತ್ತದೆ. ಧೂಮಪಾನವನ್ನು ಕಲಿತಾಗಿನಿಂದ ಅದು ಉಂಟುಮಾಡಿಸಿದ ಹಲವು ಅನುಭವಗಳನ್ನು, ನೀಡಿದ ಆನಂದ, ಸಂಕಟವನ್ನು 'ಧೂಮಾಯಣ'ದಲ್ಲಿ ವಿವರಿಸಿದ್ದಾರೆ. ' ಒಂದು ಬೇಸಗೆಯ ದಿನ'ದಲ್ಲಿ ಪ್ರಕೃತಿಯು ನೀಡಿದ ಬಿಸಿಲಿನ ಹಲವು ಸಂದರ್ಭಗಳಲ್ಲಿ ಅದು ನೀಡಿದ ಸಂತೋಷವನ್ನು ಬಲು ರಮ್ಯವಾಗಿ ನಿರೂಪಿಸಿದ್ದಾರೆ. ಚಿಕ್ಕಂದಿನಲ್ಲಿ ನೋಡಿದ ಬೆಂಗಳೂರನ್ನು ಆಗ ಅದು ಕೆರಳಿಸಿದ ಹಲವು ಭಾವನೆಗಳೊಡನೆ ಇಂದಿನ ಯದ್ವಾತದ್ವಾ ಬೆಳೆದ ಬೆಂಗಳೂರಿಗೆ ಹೋಲಿಸುತ್ತಾ ಹಲವಾರು ವಿವರಗಳ ಮೂಲಕ ಅದು ತಲುಪಿರುವ ಸ್ಥಿತಿಯನ್ನು 'ಬೆಂಗಳೂರು' ಪ್ರಬಂಧ ತಿಳಿಸುತ್ತದೆ. ಸಿಟ್ಟು ಬರುವುದಕ್ಕೆ ಕಾರಣವಾಗುವ ೩೨ ಸಂದರ್ಭಗಳನ್ನು ಗುರುತಿಸುವ ವಿಚಾರಪೂರ್ಣ ಪ್ರಬಂಧವೊಂದಿದೆ.

ಈ ವರ್ಷದ ಇನ್ನೊಂದು ಉತ್ತಮ ಪ್ರಬಂಧಗಳ ಸಂಕಲನ ಪಿ.ಎಸ್.ರಾಮಾನುಜಂ ಅವರ 'ಪ್ರಬಂಧ ವಿಹಾರ'.''ಜೀವನದಲ್ಲಿ ಕಂಡ ಘಟನೆಗಳನ್ನು ಹಿಡಿದು ಅದರ ಸುತ್ತಕಲ್ಪನೆಯನ್ನೂ ಸ್ವಲ್ಪ ಓಡಿಸಿ, ಉತ್ಪ್ರೇಕ್ಷಿತವಾಗಿ ಮಾಡಿ ಬರೆಯುತ್ತಾ ಹೋದಾಗ

ಈ ಪ್ರಬಂಧಗಳು ಮೈದೋರಿದವು. ವ್ಯಕ್ತಿ ಹಾಗೂ ವ್ಯಕ್ತೀತರ ಅನುಭವಗಳೇ ಇವುಗಳ ಭಿತ್ತಿಗಳು'' ಎಂದಿರುವ ಲೇಖಕರ ಮಾತುಗಳು ಇಲ್ಲಿನ ಬರಹಗಳಿಗೆ ಸರಿಯೊಪ್ಪುತ್ತವೆ. ಲಲಿತ ಪ್ರಬಂಧಗಳ ಲಘುವಿನ್ಯಾಸವನ್ನು ಹರಟೆಗಳ ಸನ್ನಿವೇಶ ನಿರ್ಮಾಣವನ್ನು ಎಲ್ಲ ಪ್ರಬಂಧಗಳೂ ಪಡೆದಿವೆ. ಘಟನೆಯನ್ನು ಗೌಣವಾಗಿಸಿಕೊಂಡು ಅದರ ಸುತ್ತ ನವಿರಾದ ಹಾಸ್ಯ ಸನ್ನಿವೇಶವನ್ನು ನಿರ್ಮಿಸುವ ಈ ಪ್ರಬಂಧಗಳ ಭಾಷೆ ಇನ್ನಷ್ಟು ಸೂಕ್ಷ್ಮವಾಗಿದ್ದರೆ ಅತ್ಯುತ್ತಮ ಲಲಿತಪ್ರಬಂಧಗಳಾಗುತ್ತಿದ್ದವು. 'ಬೀಗೋ ರಕ್ಷತಿ ರಕ್ಷಿತಃ' ಬೀಗದ ಸುತ್ತ ನಡೆಸುವ ವಿಚಾರಲಹರಿ. ' ದೀಪಾವಳಿ ಮತ್ತು ಕರ್ಫ್ಯೂ' ಪ್ರಬಂಧದಲ್ಲಿ 'ಕರ್ಫ್ಯೂ' ಸಂದರ್ಭದ ಸ್ವಾರಸ್ಯಕರ ಸಂಗತಿಗಳಿವೆ. ವಿ.ಐ.ಪಿ.ಗಳು ಜಾರಿಬಿದ್ದಾಗ ಏನೇನಾಗಬಹುದೆಂಬುದನ್ನು 'ಜಾರಿಬಿದ್ದಾಗ'ಪ್ರಬಂಧ ಹಾಸ್ಯಪೂರ್ಣವಾಗಿ ಚಿತ್ರಿಸುತ್ತದೆ. 'ಬರೆದರೆ ಓದದಂತಿರಬೇಕು' ಲಿಪಿಯ ವಿಚಿತ್ರರೂಪಗಳನ್ನು ಅದರಿಂದಾಗುವ ಪರಿಣಾಮವನ್ನು ತೋರುವ ಬರಹ. 'ಬಾಲಪಾಠ' ಮಕ್ಕಳಿಗೆ ಪಾಠ ಹೇಳಿಕೊಡುವಾಗ ಆಗುವ ಅನುಭವಗಳನ್ನು, ವಿಶೇಷವಾಗಿ ಲೆಕ್ಕಗಳನ್ನು ಹೇಳಿ ಕೊಡುವಾಗ ಅವರಿಂದ ಬರುವ ವಿಚಿತ್ರ ಉತ್ತರಗಳನ್ನು ವಿವರಿಸುತ್ತದೆ. ವೈವಿಧ್ಯಮಯವಾದ ವಸ್ತು ಸನ್ನಿವೇಶಗಳ ಸುತ್ತ ಸ್ವಾರಸ್ಯಕರ ಸಂಗತಿಗಳನ್ನು ತುಂಬುತ್ತಾ ಲಘುಧಾಟಿಯಲ್ಲಿ ಸಾಗುವ ಈ ಪ್ರಬಂಧಗಳು ಲೇಖಕರ ಚಿತ್ತಭಿತ್ತಿಯ ಚಿತ್ತಾರಗಳು. ಲವಲವಿಕೆಯ ನಿರೂಪಣೆ ಪ್ರತಿ ಪ್ರಬಂಧದಲ್ಲೂ ತುಂಬಿದೆ.

ಕನ್ನಡದ ಪ್ರಮುಖ ಪ್ರಬಂಧಕಾರರಲ್ಲಿ ಒಬ್ಬರಾದ ಎನ್ಕೆ ಅವರಿಗೆ ಎಂಬತ್ತುವರ್ಷ ತುಂಬಿದ ಸಂದರ್ಭದಲ್ಲಿ ಪ್ರಕಟಿಸಿರುವ 'ಲಲಿತಪ್ರಬಂಧಗಳು' ಕೃತಿಯಲ್ಲಿ ಎಂಬತ್ತೊಂದು ಲಲಿತಪ್ರಬಂಧಗಳಿವೆ. ಆದರೆ ಇವುಗಳನ್ನು ಲಲಿತಪ್ರಬಂಧಗಳು ಎಂದು ಕರೆಯುವುದಕ್ಕಿಂತ ಹರಟೆಗಳೆಂದು ಕರೆಯುವುದೇ ಹೆಚ್ಚು ಸಮಂಜಸ. ಸಾಕಷ್ಟು ಜನಪ್ರಿಯವಾದ 'ಮುಂಗಾಲ್‌ಪುಟಿಗೆ','ಮೋಡಕಾಬಜಾರ್'ನಂಥ ಹರಟೆ ಸಂಕಲನಗಳನ್ನು ನೀಡಿದ ಎನ್ಕೆಯವರು ವಿಷಯವೈವಿಧ್ಯದಿಂದ, ಸಮಕಾಲೀನತೆಯ ಸೊಗಡಿನಿಂದ ಕೂಡಿದ ಇನ್ನಷ್ಟು ಬರಹಗಳನ್ನು ಈ ಸಂಕಲನದಲ್ಲಿ ನೀಡಿದ್ದಾರೆ.'ಅಂತಾರಾಷ್ಟ್ರೀಯ ಮಹಾಮೂರ್ಖರ ಸಭೆ'ಯಿಂದ ಹಿಡಿದು 'ಸಹಸ್ರಚಂದ್ರ ದರ್ಶನ'ದವರೆಗೂ ವಿವಿಧ ಅನುಭವಗಳನ್ನು ವಿಚಿತ್ರಬಗೆಯಲ್ಲಿ ಹರಟುವ ಈ ಸಂಕಲನದ ಹರಹು ದೊಡ್ಡದು. ವ್ಯವಹಾರಲೋಕದ ನೂರಾರು ಬಹಿರಂಗ ಚರ್ಯೆಗಳಿಗೆ ಹಾಸ್ಯದ, ವಿಡಂಬನೆಯ ಲೇಪವನ್ನು ಕೊಟ್ಟು, ನೀರಸವಾಗದಂತೆ ಹಲವು ಹತ್ತು ನಿದರ್ಶನಗಳೊಡನೆ ಸುಲಲಿತವಾಗಿ ಬರೆದಿದ್ದಾರೆ.

'ಬಂಧ ಪ್ರಬಂಧ'ಕನ್ನಡ ಸಾಹಿತ್ಯಪರಿಷತ್ತು ಪ್ರಕಟಿಸಿರುವ ಇಪ್ಪತ್ತು ಲಲಿತಪ್ರಬಂಧಗಳ ಸಂಕಲನ. ಈಗಾಗಲೇ ಇತರ ಲಲಿತ ಪ್ರಬಂಧಗಳ ಸಂಕಲನಗಳಲ್ಲಿ ಸೇರಿರುವ ವಿ.ಸೀ ಅವರ 'ಮೈಸೂರು ರುಮಾಲು', ಎ.ಎನ್.ಮೂರ್ತಿರಾಯರ 'ಹರಕೆಗಳು', ಗೊರೂರರ 'ನಮ್ಮ ಎಮ್ಮೆಗೆ ಮಾತು ತಿಳಿಯುವುದೇ'?, ಪು.ತಿ.ನ ಅವರ 'ಭೀತಿಮೀಮಾಂಸೆ.' ತೀನಂಶ್ರೀ ಅವರ 'ನಂಟರು', ಎಂ.ವಿ.ಸೀ ಅವರ 'ಮುಗಿಲುಗಳು',

ರಾಕು ಅವರ 'ಕುರುಡುಕಾಂಚಾಣ' ಮುಂತಾದ ಮತ್ತೆ ಮತ್ತೆ ಓದಬೇಕಾದಂಥ ಉತ್ತಮ ಲಲಿತಪ್ರಬಂಧಗಳು ಈ ಸಂಕಲನದಲ್ಲಿವೆ. ಅಡಿಗರ'ದೇಶಕ್ಕಾಗಿ ತ್ಯಾಗ'ಪ್ರಬಂಧವು ಲಲಿತ ಪ್ರಬಂಧದ ಲಕ್ಷಣಗಳಿಗೆ ಒಳಪಡುವಂಥದಲ್ಲ. ಕುವೆಂಪು ಅವರ 'ರಾಮರಾವಣರಯುದ್ಧ' ಕೂಡಾ ಕಥನಾತ್ಮಕ ಹರಟೆಯಾಗಿದೆ. 'ಜಾಣ'ಪರೀಕ್ಷೆಗೆ ಗೊತ್ತುಪಡಿಸಿರುವ ಪಠ್ಯವಾದ್ದರಿಂದ ಕನ್ನಡ ಲಲಿತಪ್ರಬಂಧಗಳ ಬಗ್ಗೆ ಪ್ರಸ್ತಾವನೆಯನ್ನೂ ನೀಡಿ ಉತ್ತಮಗೊಳಿಸಿದ್ದಾರೆ. ಕಠಿಣಪದಗಳಿಗೆ ಅರ್ಥಗಳನ್ನು ಕೊಡಲಾಗಿದೆ. ಪ್ರಬಂಧಕಾರರ ಸಂಕ್ಷಿಪ್ತ ಪರಿಚಯದಲ್ಲಿ ಒಂದು ಮಾಹಿತಿ ದೋಷವಿದೆ. 'ಕುರುಡುಕಾಂಚಾಣ' ಎಂಬ ಪ್ರಬಂಧವನ್ನು 'ಕುರುಡುಕಾಂಚಾಣ'ಎಂಬ ಪ್ರಬಂಧ ಸಂಕಲನದಿಂದ ಆರಿಸಿದೆ ಎಂದಿದೆ. ಅದು 'ಗಾಳಿಪಟ 'ಎಂಬ ಪ್ರಬಂಧ ಸಂಕಲನದಿಂದ ಎಂದಿರಬೇಕು. ಕೊನೆಯಲ್ಲಿ ಕೊಟ್ಟಿರುವ ಲೇಖಕರ ವಿಳಾಸದಲ್ಲಿ ದ.ಬಾ. ಕುಲಕರ್ಣಿ (ರಾವ್‌ಬಹದ್ದೂರ್)ಎಂದಿದೆ. ದ.ಬಾ.ಕುಲಕರ್ಣಿಯವರೇ ಬೇರೆ, ರಾವ್‌ಬಹದ್ದೂರ್ ಅವರೇ ಬೇರೆ.

'ಮಧ್ಯಾಹ್ನದ ನಿದ್ದೆ' ಸಿ.ಪಿ.ಕೆಯವರ ಲಘು ಹಾಸ್ಯ ಬರಹಗಳ ಸಂಕಲನ. ಏಳು ಗಂಟೆಯಾದರೂ ಏಳದೆ ಮಲಗಿರುವ ಗಂಡನನ್ನು ಪತ್ರಿಕೆಯ ಅಂದಿನ ಯಾವುದಾದರೊಂದು ಆತಂಕದ ಸುದ್ದಿಯೊಂದಿಗೆ ಎಬ್ಬಿಸುವ ಹೆಂಡತಿ, ಪರಸ್ಪರ ಆ ಸುದ್ದಿಯ ಬಗ್ಗೆ ಸಂಭಾಷಿಸುವ ತಂತ್ರವನ್ನು ಪ್ರತಿಯೊಂದು ಬರಹದಲ್ಲೂ ಕಾಣಬಹುದು. ಇಂತಹ ಆತಂಕದ ವಿದ್ಯಮಾನಗಳ ಬಗ್ಗೆ ತಲೆ ಕೆಡಿಸಿಕೊಂಡು ನಗೆಗಣ್ಣಿನಿಂದ ಕೆಣಕುವ, ವಿಡಂಬಿಸುವ ಚೇತೋಹಾರಿಯಾದ ಗದ್ಯ ಬರವಣಿಗೆ ಈ ಬರಹಗಳಲ್ಲಿವೆ. ' ಹೊಟ್ಟೆಕಟ್ಟಿ ದೇಶಕಟ್ಟಿ', 'ಕಲಬೆರಕೆವಿಷ(ಯ)','ಚಾಲಕನಿಲ್ಲದ ಬಸ್ಸು', 'ಡೊನೇಷನ್ ಮತ್ತು ನೇಷನ್', 'ನುಂಗಾಯಣ', 'ಮಂಗಮಾಯ', 'ಬತ್ತಲೂ ಬಯಲು', 'ಯೋಗಾಯೋಗ', '(ಅಪ)ಹಾಸ್ಯ ಅಕಾಡೆಮಿ' ಮುಂತಾದ ಬರಹಗಳಲ್ಲಿ ನವಿರಾದ ಪನ್‌ಪರಾಗನ್ನು ಸಿಂಪಡಿಸಿದ್ದಾರೆ.

'ನಂದೊಂದ್ಮಾತು' ಬಿ.ಎ. ಸನದಿಯವರ ಇಪ್ಪತ್ತೈದು ಕಿರುಹರಟೆಗಳ ಸಂಗ್ರಹ . ''ನಾಗರಿಕ ಜೀವನದ ವಿವಿಧ ಸನ್ನಿವೇಶ, ಸಂದರ್ಭಗಳಲ್ಲಿ, ಒಳ ಹೊರಗೂ ಮಲಿನಗೊಂಡ ಪರಿಸರದಲ್ಲಿ ನಮ್ಮ ಸಾಮಾನ್ಯ ನಾಗರಿಕರಿಗೆ ಬರುವ ಅನುಭವ ಹಾಗೂ ಅವರು ತೋರಬಹುದಾದ ಪ್ರತಿಕ್ರಿಯೆಗಳಿಗೆ ಅವರ ಭಾಷೆಯಲ್ಲೇ ಆಕಾರ ಕೊಡುವ ಪ್ರಯತ್ನ ಮಾಡಿದ್ದೇನೆ'' ಎಂದಿದ್ದಾರೆ ಲೇಖಕರು. ಈ ಮಾತುಗಳು ಅವರ ಬರಹಗಳಿಗೆ ಅನ್ವಯವಾಗಿವೆ. ಮನಸ್ಸಿನ ಮಾಲಿನ್ಯ, ಮನಸ್ಸಿನ ಒಳಹೊರಗುಗಳ ತಾಕಲಾಟ, ನಗುವನ್ನು ಕುರಿತು, ನಾಳಿನ ಪೀಳಿಗೆಯ ಬಗ್ಗೆ, ಮರೆವು ಮತ್ತು ಚಟದ ಬಗ್ಗೆ, ಜನಸಂಖ್ಯೆ ಹೆಚ್ಚಾಗುತ್ತಿರುವ ಬಗ್ಗೆ ಹೀಗೆ ಹಲವು ವಿಚಾರಗಳನ್ನು ಆತ್ಮೀಯರೊಬ್ಬರೊಡನೆ ಹರಟಿದಂತೆ ಚಿತ್ರಿಸಿದ್ದಾರೆ. ಬೆಳಗಾವಿಯ ಸೊಗಡಿನ ಕನ್ನಡದಲ್ಲಿರುವ ಈ ಹರಟೆಗಳು ಲಘುವಾಗಿ ಹಲವು ವಿಚಾರಗಳನ್ನು ಮಂಡಿಸಿವೆ.

'ವಿನೋದ ಸಾಹಿತ್ಯ ೧೯೯೨' ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಕಟಣೆ.

ಅ.ರಾ.ಸೇ ಅವರು ಸಂಪಾದಿಸಿರುವ ೪೦ ಹಾಸ್ಯಬರಹಗಳು, ೯ ಹಾಸ್ಯಕವನಗಳು ಈ ಸಂಕಲನವಲ್ಲಿವೆ. ಪೀಪಿಯವರ 'ಉದ್ಯೋಗಾರಣ್ಯಕ' ಸರ್ಕಾರಿ ಕಚೇರಿಗಳಲ್ಲಿ ಕೆಲಸಗಳ್ಳರಾಗುವ, ಬಗೆಬಗೆಯ ರಜೆಗಳನ್ನು ಸುಲಭವಾಗಿ ಪಡೆಯುವ, ಆ ಮೂಲಕ ಬಡ್ತಿ ಪಡೆಯುವ ವಿಧಾನವನ್ನು ಉಪನಿಷತ್ತಿನ ಅನುಕರಣೆಯ ಧಾಟಿಯಲ್ಲಿ ಸೊಗಸಾಗಿ ನಿರೂಪಿತವಾದ ಹಾಸ್ಯಬರಹ. ಶಿವು ಅವರ ಕತ್ತಲಿನ ವಿಶ್ಲೇಷಣೆ ವೈಜ್ಞಾನಿಕ ಅಜ್ಞಾನಕ್ಕೆ ಹಿಡಿದ ಕನ್ನಡಿ. ಭುವನೇಶ್ವರಿ ಹೆಗಡೆಯವರ 'ವಸಂತವ್ಯಾಧಿಗೆ ವಿನೂತನ ಚಿಕಿತ್ಸೆ' ಕಾಲೇಜಿನ ಎದುರಿದ್ದ ಮಾವಿನ ತೋಪಿನಲ್ಲಿ ಕಾಲೇಜಿನ ಹುಡುಗ ಹುಡುಗಿಯರು ನಡೆಸುತ್ತಿದ್ದ ಪ್ರೇಮದ ಚೆಲ್ಲಾಟಗಳನ್ನು ತಡೆಯಲು ನಡೆಸಿದ ವಿಶಿಷ್ಟ ಬಗೆಯ ಕಡ್ಡಾಯ ವಿವಾಹದ ಯೋಜನೆಯ ಹಾಸ್ಯಭರಿತ ವಿಶ್ಲೇಷಣೆ. ಅ.ರಾ.ಮಿತ್ರ ಅವರ 'ಸ್ವಪಾಕರುಚಿ' ಹೆಂಡತಿಯ ಗೈರುಹಾಜರಿಯಲ್ಲಿ ಗಂಡ ಮಾಡುವ ಅಡಿಗೆ, ಅದು ಪಡೆಯುವ ಭೀಕರ ರೂಪ, ರುಚಿಯನ್ನು ಎಲ್ಲ ಸಂಕಷ್ಟಗಳೊಂದಿಗೆ ಸೊಗಸಾಗಿ ವಿವರಿಸುತ್ತದೆ. ಅಡಿಗೆ ಕಲೆಯು ಹೆಂಗಸರಿಗೇ ವಿಶಿಷ್ಟವಾದದ್ದೆಂದು ಈ ಪ್ರೌಢ ಹಾಸ್ಯಬರೆಹವು ನಿರೂಪಿಸುತ್ತದೆ. ಛಂದಶ್ಶಾಸ್ತ್ರ, ವ್ಯಾಕರಣ ಕಲಿಯುತ್ತಿರುವ ಗಂಡನ ವಿವಿಧ ಅವಾಂತರಗಳಿಗೆ ಬೇಸತ್ತ ಹೆಂಡತಿ ಗಂಡನ ಚೇಷ್ಟೆಗಳನ್ನು ಕಂಡು ಹುಚ್ಚಿಡಿದಿದೆಯೆಂದು ಅನುಮಾನಿಸಿ ಡಾಕ್ಟರಿಗೆ ತೋರಿಸುವ ಬರಹ 'ಪಂಡಿತಪತ್ನಿ'. 'ದರ್ಜಿಪುರಾಣ' ಬಗೆಬಗೆಯ ಚೋಲಿಗಳನ್ನು ಹೊಲಿಸಿಕೊಳ್ಳಲು ಹೆಂಗಸರು ಪಡುವ ಪಾಡನ್ನು ಚಿತ್ರಿಸುವ ಹಾಸ್ಯಬರಹ. ಪಂಡಿತನ ಮಗನೊಬ್ಬನ ಪ್ರೇಮ ವಿವಾಹವನ್ನು ವ್ಯಾಕರಣದ ಪರಿಭಾಷೆಯಲ್ಲಿ ಬರೆದಿರುವ ಹಾಸ್ಯಕವನ 'ಪ್ರಾಯಸ್ಸಂಧಿ'. ಕಾರಂತರ 'ರತ್ನ ಬೇಕೇಬೇಕು' ಪ್ರಶಸ್ತಿಗಳ ಬಗ್ಗೆ ಬರೆದ ವಿಡಂಬನ ಗೀತೆ. ಕಣವಿಯವರ 'ಬಾಪು - ಛಾಪು' ಗಾಂಧೀ ಟೊಪ್ಪಿಗೆಯನ್ನು ನಿರಾಕರಿಸುವ ಕವಿತೆ. ರಸ್ತೆ ಸ್ಥಿತಿ (ಒಂದು ಹೊಂಡ ಕಾವ್ಯ) ಬಗೆ ಬಗೆಯ ಹೊಂಡಗಳನ್ನು ಚಿತ್ರಿಸುವ ಡುಂಡಿರಾಜರ ಹಾಸ್ಯಕವನ. ಇಂಥ ಕವನಗಳನ್ನು ಸೇರಿಸಿರುವುದು ಈ ಸಂಕಲನದ ವಿಶಿಷ್ಟತೆಯಾಗಿದೆ.

ದಿವಂಗತ ರಾಘವೇಂದ್ರ ಕುಷ್ಟಗಿ ಅವರ 'ಜೋಡೋಣಿ ತಾತಯ್ಯ ಮತ್ತು ಇತರ ಹರಟೆಗಳು' ಸಂಕಲನದಲ್ಲಿ ೧೫ ಹರಟೆಗಳಿವೆ. ಹಿರಿಯ ತಲೆಮಾರಿನ ಲೇಖಕರ ಹಲವು ಅನುಭವಗಳನ್ನು ಹರಟೆಗಳಲ್ಲಿ ತುಂಬಿದ್ದಾರೆ. 'ನಾನು ಹಜಾಮನಾದದ್ದು ಹೇಗೆ? ಅರ್ಥಾತ್ ಆಯುಷ್ಯಕರ್ಮದ ಕೈಫಿಯತ್' ಎಂಬ ಬರಹದಲ್ಲಿ ಮುಖಕ್ಷೌರ ಮಾಡಿಕೊಳ್ಳಲು ಅಂದಿನ ಕಾಲದಲ್ಲಿ ಪಟ್ಟಪಾಡುಗಳನ್ನು ವಿವರಿಸಿದ್ದಾರೆ. ' ನಾನು ಹೋಮ್‌ಮಿನಿಸ್ಟರ್ ಅವರಿಂದ ಹೋಮ್ ಸೈನ್ಸ್ ಕಲ್ತೆ ಅರ್ಥಾತ್ ಗೃಹಿಣಿಯಿಂದ ಗೃಹವಿಜ್ಞಾನ ಕಲ್ತೆ?'ಹರಟೆಯಲ್ಲಿ ಲೇಖಕರು ಅಡಿಗೆ ಮಾಡುವ ಕಲೆಯನ್ನು ಕಲಿಯುವಾಗ ಆದ ಅವಾಂತರ, ರಾದ್ಧಾಂತಗಳನ್ನು ಸ್ವಾರಸ್ಯಕರವಾಗಿ ವಿವರಿಸಿದ್ದಾರೆ. 'ಸ್ಫೂರ್ತಿಯ ಬುಗ್ಗೆ ಎಲ್ಲಿದೆ? ರಮ್-ರಮ್ಮಿ-ರಮೆಯರಲ್ಲಿಲ್ಲವೇ? ಎಂಬ ಹರಟೆಯಲ್ಲಿ ಹೊಸತಲೆಮಾರಿನ ಬರಹಗಾರರ ಸ್ಫೂರ್ತಿಯ ಮೂಲವನ್ನು ವಿವರಿಸುತ್ತಾ ವಿಶೇಷವಾಗಿ ತಮ್ಮ ಇಷ್ಟವಸ್ತುವಾದ ರಮ್, ರಮ್ಮಿ ಅಥವಾ ರಮೆಯಲ್ಲಿ ಇರುವುದೆಂದು ಅಣಕಿಸಿದ್ದಾರೆ. ಸಮಾಜದ ವಿವಿಧ ಜನ ಬಗೆಬಗೆಯ ವಸ್ತುಗಳಿಂದ

ಸ್ಫೂರ್ತಿಯನ್ನು ಪಡೆಯುವ ವಿವರಗಳನ್ನು ನೀಡಿದ್ದಾರೆ. ಕೆಲವರಿಗೆ ಸಿಗರೇಟಿನಿಂದ ಸ್ಫೂರ್ತಿ ಮತ್ತೆ ಕೆಲವರಿಗೆ ಬಗೆಬಗೆಯ ವಸ್ತುಗಳಿಂದ ಸ್ಫೂರ್ತಿ ಎಂದಿದ್ದಾರೆ. 'ಇಪ್ಪತ್ತೈದು ವರ್ಷದ ಹಿಂದೆ ಹುಟ್ಟುಬಾರದಾಗಿತ್ತೇ'ಎಂಬ ಹರಟೆಯಲ್ಲಿ ಹಳೆಯ ತಲೆಮಾರಿನ ಸಾಂಪ್ರದಾಯಿಕ ದೈನಂದಿನ ಬದುಕಿಗೂ ಇಂದಿನ ಕಾಲದ ಬದುಕಿನ ಚಟುವಟಿಕೆಗಳಿಗೂ ಇರುವ ವ್ಯತ್ಯಾಸವನ್ನು ವಿವರಿಸಿ ಇಂದು ಹುಟ್ಟಿದವರೇ ಭಾಗ್ಯವಂತರು ಎಂದು ವಿಡಂಬಿಸಿದ್ದಾರೆ.



# ಸಾಹಿತ್ಯ-ಸಂಸ್ಕೃತಿ ಮಾಲೆ

## ವಚನ ಸಾಹಿತ್ಯ ಸಂಪುಟಗಳು

*ಕೆ. ವಿ. ನಾರಾಯಣ*

ಕನ್ನಡ ಪುಸ್ತಕ ಲೋಕದ ಅತ್ಯಂತ ಮಹತ್ವದ ಸಂಭವ ಈ ಸಂಪುಟಗಳ ಪ್ರಕಟಣೆ. ಇವುಗಳ ಚಾರಿತ್ರಿಕ ಮಹತ್ವವನ್ನು ಸ್ಥಾಪಿಸಲು ಯಾರೂ ಪ್ರಯತ್ನಿಸಬೇಕಾಗಿಲ್ಲ. ಇವು ತಂತಾನೇ ತಮ್ಮ ಮಹತ್ವವನ್ನು ಸಾಧಿಸಿ ತೋರಬಲ್ಲವು. ಅಭಿನಂದನೀಯವಾದ ಇಂಥ ಪ್ರಕಟಣೆಯ ಸಂದರ್ಭದಲ್ಲಿ ನಮಗೆ ಜರೂರು ಎನಿಸಿದ ಕೆಲವು ಪ್ರಶ್ನೆಗಳನ್ನು ಮುಂಚೂಣಿಗೆ ತರುವುದು ಅತ್ಯವಶ್ಯ. ಇಲ್ಲದಿದ್ದರೆ ಎಂದಿನ ಸಂಭ್ರಮಗಳಲ್ಲಿ ಚರಿತ್ರೆಯ ಕುಹಕದಿಂದ ಹೊರಬರುವುದು ಸಾಧ್ಯವಾಗುವುದಿಲ್ಲ. ಹೀಗಾಗಿ ಈ ಟಿಪ್ಪಣಿ.

ಮತ್ತೆ ಮತ್ತೆ ನಮ್ಮನ್ನು ನಿಯಂತ್ರಿಸುವ ವೈಚಾರಿಕ ಆಕೃತಿಗಳು ಅಭಿನೀತಗೊಳ್ಳುತ್ತಲೇ ಹೋಗುತ್ತವೆ. ಇದರಿಂದ ಬಿಡುಗಡೆಯೇ ಇಲ್ಲ. ಕೃತಿ ಕೃತಿಕಾರನ ಸ್ವತ್ತು ಎಂಬ ನಂಬುಗೆ ಬ್ರಿಟಿಷರೊಡನೆ ನಮ್ಮನ್ನು ಆಳತೊಡಗಿತಷ್ಟೆ. ಮೂಲಪಾಠ, ಕವಿ ಪಾಠ, ಪಾಠಶುದ್ಧತೆಯ ಕಡೆಗೆ ನಮ್ಮ ಒಲುಮೆ ಬೆಳೆಯತೊಡಗಿತು. ಅಶುದ್ಧವಾದದ್ದು, ಪ್ರಕ್ಷಿಪ್ತವಾದುದು ಅಧ್ಯಯನ ಬಾಹಿರವಾಯಿತು. ಸಂಸ್ಕೃತಿಯ ವಿವಿಧ ವಲಯಗಳಲ್ಲಿ ಬಲವಾಗಿ ಬೇರೂರಿರುವ ಈ ಚಿಂತನೆ ಸಾಹಿತ್ಯ ಕ್ಷೇತ್ರದಲ್ಲೂ ನೆಲೆಯೂರಿದೆ.

ವಚನಗಳನ್ನು 'ಬರೆಹ'ರೂಪಕ್ಕೆ ತಂದ ಕಾರಣಗಳು ಒತ್ತಟ್ಟಿಗಿರಲಿ. ಓಲೆ, ಕಾಗದಗಳ ಮೇಲೆ ಸೀಮಿತ ಜನರ ಹಿಡಿತದಲ್ಲಿದ್ದ ಈ ಬರೆಹವನ್ನು ಮುದ್ರಣದ ಮೂಲಕ ಬಿಡುಗಡೆ ಮಾಡಿದ ಮೊದಲ ಹಂತದಿಂದ ಮೊದಲಾಗಿ, ವಿದ್ವಾಂಸರು ವಚನಗಳನ್ನು ಬೆಳಕಿಗೆ

ತರುತ್ತಲೇ ಇದ್ದಾರೆ. ವರ್ಷವರ್ಷವೂ ಅಷ್ಟಿಷ್ಟು ಹೊಸವಚನಗಳು ಸಂಶೋಧನ ಪತ್ರಿಕೆಗಳಲ್ಲಿ, ಕಿರುಸಂಪುಟಗಳಲ್ಲಿ ಪ್ರಕಟವಾಗುತ್ತಲೇ ಇವೆ. ಪ್ರಕಟಿತ ವಚನಗಳ ಕರ್ತೃತ್ವ, ಪಾಠ ಸಾಧುತ್ವಗಳ ಬಗ್ಗೆ ಚರ್ಚೆ ನಡೆದಿದೆ. ಕೆಲವು ವಚನಸಂಕಲನಗಳನ್ನು ಕೂಟರಚನೆಗಳೆಂದು ವಾದಿಸಿ ಅವುಗಳನ್ನು ಮತ್ತೆ ಕತ್ತಲೆಗೆ ತಳ್ಳಲಾಗುತ್ತಿದೆ. ಈ ಇಂಥ ಎಲ್ಲ ಪ್ರಯತ್ನಗಳು ಒಂದೆಡೆಗೆ ಸೇರಿ ಈಗ 'ಸಮಗ್ರ ವಚನ ಸಂಪುಟ'ಗಳು (ಹದಿನಾಲ್ಕು ಸಂಪುಟ) ಪ್ರಕಟವಾಗಿವೆ. ಈ ಸಂಪುಟಗಳ ಪ್ರಧಾನ ಸಂಪಾದಕರಾದ ಡಾ.ಎಂ.ಎಂ. ಕಲಬುರ್ಗಿಯವರು ''ವಚನ ಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದು. ೧. ಎಲ್ಲ ಶರಣರ ವಚನಗಳನ್ನು ಎಲ್ಲ ಪ್ರಾಚೀನ ಆಕರಗಳಿಂದ ಸಂಗ್ರಹಿಸುವುದು. ೨.ಪ್ರಕ್ಷಿಪ್ತವಾಗಿರಬಹುದಾದ ವಚನಕಾರರನ್ನು, ವಚನಗಳನ್ನು ಕೈಬಿಡುವುದು. ೩. ನಿಜ ವಚನಗಳ ಪಾಠವನ್ನು ಪರಿಷ್ಕರಿಸುವುದು - ಇದು ಈ ಯೋಜನೆಯ ಉದ್ದೇಶವಾಗಿದೆ'' ಎಂದಿದ್ದಾರೆ. ಕೃತಿಪಾಠ ಕುರಿತ ಪ್ರಚಲಿತ ವಿಚಾರಗಳೆಲ್ಲ ಈ ಉದ್ದೇಶದಲ್ಲಿ ಅಡಕಗೊಂಡಿವೆಯಷ್ಟೆ.

ಈ ಸಂಪುಟಗಳನ್ನು ಸಿದ್ಧಪಡಿಸಿ ಪ್ರಕಟಿಸಿ ವಿತರಿಸಿದ ಯೋಜನೆಯ ಹಿಂದಿನ ಶ್ರಮ, ಕ್ರಮಬದ್ಧತೆ, ಕಾರ್ಯವಿಧಾನಗಳನ್ನು ಯಾರೂ ಮೆಚ್ಚಬೇಕಾದದ್ದು. ಇನ್ನು ಮೇಲೆ ಈ ಸಂಪುಟಗಳು ಕನ್ನಡಿಗರ ಮನೆಗಳಲ್ಲಿ ಓದಿನ ಭಾಗವಾಗಬೇಕೆಂಬ ಉದ್ದೇಶ ಈಗ ಈಡೇರಿದೆ. ಆದರೆ ಸಂಪುಟಗಳನ್ನು ಕುರಿತ ಚರ್ಚೆ ಮಾತ್ರ ಇಲ್ಲಿಂದ ಮೊದಲಾಗುತ್ತದೆ. ಎರಡು ದಿಕ್ಕಿನಲ್ಲಿ ಈ ಚರ್ಚೆ ಬೆಳೆಯಬಹುದೆಂದು ತೋರುತ್ತದೆ. ೧. ಈ ಸಂಪುಟ ಸಿದ್ಧತೆಯ ಕ್ರಮವನ್ನು ಕುರಿತು ಮೇಲೆ ಉಲ್ಲೇಖಿಸಿದ ಪ್ರಧಾನ ಸಂಪಾದಕರ ಮಾತು ಎಷ್ಟು ಈಡೇರಿದೆ ಎಂಬ ಬಗ್ಗೆ ಹಾಗೂ ೨. ಈ ಸಂಪುಟಗಳ ಸಿದ್ಧತೆಯ ಬಗ್ಗೆ ಮಂಡಿಸಿದ ಚೌಕಟ್ಟಿನ ಬಗ್ಗೆ.

ಮೊದಲ ನೆಲೆಯ ಚರ್ಚೆ ಇನ್ನೂ ವಿಪುಲವಾಗಿ ಬೆಳೆಯುತ್ತದೆ. ಇನ್ನೂ ಬೆಳಕಿಗೆ ಬಾರದ ವಚನಸಂಕಲನಗಳ ಕಟ್ಟುಗಳು ಹೊರಬರುತ್ತವೆ. ಬೇರೆ ಬೇರೆ ವಚನಗಳು ದೊರಕಲಿವೆ. ಸಂಪಾದಕರೂ ಈ ಬಗ್ಗೆ ಅರಿತಿದ್ದಾರೆ. ತಮ್ಮದು ಈವರೆಗಿನ ಪ್ರಯತ್ನಗಳ ಕ್ರೋಢೀಕರಣವೆಂಬುದನ್ನು ಮತ್ತೆ ಮತ್ತೆ ಸ್ಪಷ್ಟಪಡಿಸಿದ್ದಾರೆ. ವಚನ-ವಚನಕಾರ ಸಮೀಕರಣವನ್ನು ಚರ್ಚಿಸುವುದಂತೂ ಮುಂದುವರೆಯಲಿದೆ. ಸಂಪಾದಕರೊಬ್ಬರು ಗೋರಕ್ಷನದೆಂದು ತಾವೇ ಸಂಕಲಿಸಿರುವ ವಚನ ಅವನದಲ್ಲವೆಂದು ಹೇಳಿದ್ದಾರೆ. ಹೀಗಾಗಿ ಇಂಥ ನಿಗದೀಕರಣದ ವಿವಾದಗಳು, ಚರ್ಚೆಗಳು ನಡೆಯುತ್ತಲೇ ಹೋಗುತ್ತವೆ.

ನಿಜವಚನಗಳನ್ನು ನಿಜವಚನಕಾರರನ್ನು ನಿರ್ಧರಿಸಲು ಸಂಪಾದಕರು ಕೆಲವು ಮಾನದಂಡಗಳನ್ನು ಹೊಂದಿದ್ದಾರೆ. ಇವು ಪಾರಂಪರಿಕ ವಚನ ಸಂಕಲನಗಳಿಂದ ರೂಢಿಗೊಂಡು ಅನಂತರ ವಚನಾಧ್ಯಯನಕಾರರಿಂದ ನೆಲೆಗೊಂಡ ಮಾನದಂಡಗಳು. ಇವೆಲ್ಲವೂ ವಾದಾತೀತವಲ್ಲ. ಅಲ್ಲದೆ ಈ ಸಂಗ್ರಹಗಳಿಗಾಗಿಯೇ ಹೊಸ ಚಿಂತನೆಗಳಿಂದ ರೂಪುಗೊಂಡಂಥವಲ್ಲ. ನಿರ್ಧಾರದ ಹಿಂದಿನ ಶರತ್ತುಗಳು ಕನಿಷ್ಠ ಹಾಗೂ ಗರಿಷ್ಠ ಮಿತಿಗಳೆರಡನ್ನೂ ಒಳಗೊಳ್ಳಬೇಕಷ್ಟೇ. ಇಗೋ ಇವು ನಿಜವಚನಗಳೆಂದು ಹೇಳಲು, ಇಷ್ಟಾದರೂ (Sufficient) ಲಕ್ಷಣಗಳಿರಬೇಕು. ಹಾಗೂ ಇವೆಲ್ಲ (Necessary) ಲಕ್ಷಣಗಳಿರಬೇಕೆಂದು ನಿರ್ದುಷ್ಟವಾಗಿ ನಿರೂಪಿಸಲಾಗಿದೆಯೇ ಎಂದರೆ, ಇಲ್ಲವೆಂದೇ

ಹೇಳಬೇಕು. ಬೇಕಾದ ವಚನಗಳು ಒಳಸೇರುವಾಗ ಕನಿಷ್ಠ ಲಕ್ಷಣಗಳ ವ್ಯಾಪ್ತಿಯನ್ನು ಕುಗ್ಗಿಸುತ್ತ, ಬೇಡದ ವಚನಗಳನ್ನು ಹೊರಗಿಡುವಾಗ ಗರಿಷ್ಠ ಲಕ್ಷಣಗಳ ವ್ಯಾಪ್ತಿಯನ್ನು ಹಿಗ್ಗಿಸುತ್ತ ಹೋಗುವ ಈ ಹಿಂದಿನ ವಿಧಾನವೇ ಈ ಸಂಪುಟಗಳಲ್ಲಿ ಮುಂದುವರೆದಿದೆ.

ಇದಕ್ಕಿಂತಲೂ ಮುಖ್ಯ ಚರ್ಚೆಯೊಂದನ್ನು ನಾವೀಗ ಬೆಳೆಸಬೇಕಿದೆ. (ನಿಜ) ಕರ್ತೃ = (ನಿಜ) ಕೃತಿ ಎಂಬ ಸಮೀಕರಣವೇ ನಮ್ಮ ಸಂಸ್ಕೃತಿಯ ಸ್ವರೂಪವನ್ನು ಅರಿಯುವಲ್ಲಿ ಹಾದಿಮುಳ್ಳಾಗಿದೆ. ಭಾಷಿಕ ಸಂಕಥನಗಳು ಸಂಸ್ಕೃತಿಯಲ್ಲಿ ಹೇಗೆ ಮತ್ತು ಏಕೆ ರೂಪುಗೊಳ್ಳುತ್ತವೆಯೆಂಬ ಪ್ರಶ್ನೆಯನ್ನು ಎದುರಿಸಲು ನಾವು ಸಿದ್ಧರಿಲ್ಲ. ಬದಲಿಗೆ ಆ ಸಂಕಥನಗಳನ್ನು ಅಧಿಕೃತಗೊಳಿಸುವ ವಿಧಾನಗಳನ್ನು ಹುಡುಕುತ್ತಿದ್ದೇವೆ. ಇದು ಅಧಿಕೃತ ಇದು ಅನಧಿಕೃತವೆಂದು ಗೆರೆ ಎಳೆಯುವ ಕೆಲಸದ ಬಗ್ಗೆ ನಾವೆಷ್ಟು ತಲ್ಲೀನರಾಗಿದ್ದೇವೆಂದರೆ, ಹೀಗೆ ಗೆರೆಯೆಳೆಯುವ ಆಟದಲ್ಲಿ ನಮ್ಮನ್ನು ತಳ್ಳಿರುವ ಚರಿತ್ರೆಯ ಕುಹಕವನ್ನು ಅರಿಯದೇ ಹೋಗುತ್ತಿದ್ದೇವೆ. ನಾವು ಈಗ ಅನಧಿಕೃತವೆಂದು ತಿಳಿಯುವುದನ್ನೂ ಈ ಸಂಸ್ಕೃತಿಯೇ ಸೃಷ್ಟಿಸಿದೆಯಷ್ಟೆ. ಅಥವಾ ನಾವು ಈಗ ಅಧಿಕೃತ ವೆಂದು ನಿರ್ಧರಿಸಿದ್ದಕ್ಕಷ್ಟೇ ನಾವು ಮತ್ತು ಮುಂದಿನವರು ಜವಾಬುದಾರರೆಂದು ತೀರ್ಮಾನಿಸಲು ಹೊರಡುವುದು ಎಷ್ಟು ಸರಿ? ವಚನ ಸಂಕಲನ ವಿಷಯಕ್ಕೂ ಈ ಮಾತು ನಿಜ.

ಅಂಕಿತ, ಪಾಠ, ಮೂಲ, ಸಾಧುತ್ವಗಳನ್ನು ಅನುಸರಿಸುವ ಅಧ್ಯಯನಗಳ ಹಿಂದಿನ ಶ್ರಮ ಮತ್ತು ಕ್ರಮಗಳನ್ನು ನಿರಾಕರಿಸುವುದು ಅಸಾಧ್ಯ. ಆದರೆ ಇವೆಲ್ಲದರ ಕೊನೆಗೆ ನಾವು ಹೊರಟಲ್ಲಿಗೇ ಬಂದು ನಿಲ್ಲುವ ಶಪಿತ ಸ್ಥಿತಿಯ ಬಗ್ಗೆ ಮಾತ್ರ ನಾವೀಗ ಎಚ್ಚರ ತಳೆಯಬೇಕಾಗಿದೆ. ಈ ಹೊತ್ತಿಗೆ ಸಂವಾದ ಬಯಸುವ ವಚನಗಳ ಜತೆಗೆ ಸಂವಾದ ಬಯಸದ ವಚನಗಳೂ ನಮ್ಮೆದುರು ನಿಲ್ಲುತ್ತವೆ. ಕೃತಿ= ಕೃತಿಕಾರ ಸಮೀಕರಣದಿಂದಾಗಿ ವಚನಗಳ ನಡುವೆಯೇ ನಡೆಯಬಹುದಾದ ಸಂವಾದಕ್ಕೂ ಮಿತಿಯನ್ನು ಕಲ್ಪಿಸಿದಂತಾಗುತ್ತಿದೆ. ಇಂಥದೊಂದು ಸಂಸ್ಕೃತಿ ಸಂವಾದದ ನೆಲೆಯ ವಚನಸಂಕಲನಕ್ಕೆ ಈ ಸಂಪುಟಗಳ ರಚನೆಯ ಅನಂತರವೂ ಇನ್ನೂ ಅವಕಾಶ ಉಳಿದಿದೆ.

ಈ ಸಂಪುಟಗಳ ಸಾಲಿನಲ್ಲಿ ಕೊನೆಯದು 'ವಚನಗಳ ಪರಿಭಾಷಾಕೋಶ'. ವಚನಾಧ್ಯಯನಕ್ಕೆ ಉಪಯುಕ್ತವಾಗಲೆಂದು, ನೂರಾರು ಧಾರ್ಮಿಕ ಅರ್ಥವ್ಯಾಪ್ತಿಯುಳ್ಳ ಪದಗಳನ್ನು ಸಂಗ್ರಹಿಸಿ ಅವುಗಳಿಗೆ ವಿವರಣೆಯನ್ನು ನೀಡಲಾಗಿದೆ. ಭಾಷಿಕ ದಾಖಲೆಯನ್ನು ಕಾಲದೇಶಗಳಿಗೆ ಬದ್ಧಗೊಳಿಸುವ ಇಡೀ ಸಂಪುಟಗಳ ಯೋಜನೆಗೆ ಈ ಪರಿಭಾಷಾಕೋಶವೂ ಹೊಂದಿಕೊಂಡಿದೆ. ವಚನಕಾರರ ಅನುಭವ ಜಗತ್ತನ್ನು ಚೌಕಟ್ಟಿನಲ್ಲಿರುವ ನಮ್ಮ ಎಂದಿನ ಯತ್ನಗಳಿಗೆ ಈ ಕೋಶ ನೆರವಾಗುತ್ತದೆ ನಿಜ. ಆದರೆ ಈ ಶತಮಾನದ ಈ ಹಂತದಲ್ಲಿ ಅವರ ಅನುಭವ ಲೋಕವನ್ನ ಒಳಹೋಗುವ ಅನ್ಯಮಾರ್ಗಗಳನ್ನು ಹುಡುಕುವ ಅವಶ್ಯಕತೆಯಿದೆಯಲ್ಲವೇ? ವೀರಶೈವ ತತ್ತ್ವ ಪ್ರಣಾಲಿಯಿಲ್ಲದೆ ವಚನಕಾರರು ನಮಗೆ ಸಲ್ಲುವ ಬಗೆಯನ್ನು ನಾವು ಇನ್ನಾದರೂ ಕಾಣತೊಡಗಬೇಕಾಗಿದೆ.

# ಅಂತರ್‌ಶಿಸ್ತೀಯ ಅಧ್ಯಯನ ಮಾಲೆ

*ಕರೀಗೌಡ ಬೀಚನಹಳ್ಳಿ*

ಕರ್ನಾಟಕ ಸಾಹಿತ್ಯ ಅಕಾಡೆಮಿಯು ತನ್ನ ಯೋಜನೆಗಳಲ್ಲೊಂದಾದ ಅಂತರ ಶಿಸ್ತೀಯ ಅಧ್ಯಯನ ಮಾಲೆಯಲ್ಲಿ ಪುರಾಣ, ರಂಗಭೂಮಿ, ಪತ್ರಿಕೋದ್ಯಮ, ಮನೋವಿಜ್ಞಾನ, ಸಿನಿಮಾ, ನೃತ್ಯ, ಚರಿತ್ರೆ, ವಿಜ್ಞಾನ, ಚಿತ್ರಕಲೆ, ಸಮಾಜಶಾಸ್ತ್ರ- ಈ ಶಿಸ್ತುಗಳು ಸಾಹಿತ್ಯದೊಂದಿಗೆ ಹೊಂದಿರುವ ಸಂಬಂಧಗಳನ್ನು ಕುರಿತು ವಿವಿಧ ಲೇಖಕರಿಂದ ಹತ್ತು ಪುಸ್ತಕಗಳನ್ನು ಬರೆಸಿ ಪ್ರಕಟಿಸಿದೆ. ಇದರ ಪ್ರಧಾನ ಸಂಪಾದಕ ''ಸಾಹಿತ್ಯ ಕೃತಿಯ ಅನನ್ಯತೆಯ ಅನಾವರಣಕ್ಕೆ ಅಂತರಶಿಸ್ತೀಯ ಅಧ್ಯಯನ ಅಗತ್ಯ. ಸಾಹಿತ್ಯ ಎನ್ನುವುದೇ ಒಂದು ಅಂತರಶಿಸ್ತೀಯ ಸಂವೇದನೆ. ಭಾಷಿಕವಾಗಿ ಪ್ರಕಟವಾಗುವ ಸಾಹಿತ್ಯಾಂತರ್ಗತ ಸಂವೇದನೆಗಳು ವಿವಿಧ ಶಿಸ್ತುಗಳೊಡನೆ ಸಂಬಂಧ ಕಲ್ಪಿಸಬಹುದಾದ ಸಾಧ್ಯತೆಗಳನ್ನು ಹೊಂದಿವೆ. ಸಂವೇದನಾಶೀಲ ಮನಸ್ಸೊಂದು ಚರಿತ್ರೆ, ಪುರಾಣ, ಚಿತ್ರ, ನೃತ್ಯ ಇತ್ಯಾದಿ ಶಿಸ್ತುಗಳನ್ನು ಭಾವಗ್ರಹಣಕ್ಕೆ ತಂದುಕೊಳ್ಳುವ ಕ್ರಮವೊಂದು ಸಾಹಿತ್ಯ ಸೃಷ್ಟಿಯಲ್ಲಿ ಸಾಧ್ಯ'' ಎಂದಿದ್ದಾರೆ. ಅವರ ಈ ಮಾತುಗಳು ಸಾಹಿತ್ಯ ಸೃಷ್ಟಿ ಸಂವೇದನೆಯಲ್ಲಿ ಸಾಹಿತ್ಯೇತರ ಶಿಸ್ತುಗಳನ್ನು ಬಳಸುವ ಸಾಧ್ಯತೆಯ ಬಗ್ಗೆ ಗಮನ ಸೆಳೆಯುತ್ತವೆ. ಸಾಹಿತ್ಯಕೃತಿ ಎನ್ನುವುದೇ ಬದುಕಿನ ಹಲವು ಶಿಸ್ತುಗಳನ್ನೊಳಗೊಂಡ ಒಂದು ಶಿಸ್ತು.

ಆದರೆ ಅಂತರಶಿಸ್ತೀಯ ಅಧ್ಯಯನ ಕನ್ನಡದ ಸಂದರ್ಭದಲ್ಲಿ ಇನ್ನೂ ಸ್ಪಷ್ಟವಾಗಿ ರೂಪುಗೊಂಡಿಲ್ಲ. ಈ ಬಗೆಯ ಅಧ್ಯಯನಕ್ಕೆ ಪ್ರವೇಶಿಸುವ ವಿದ್ವಾಂಸರಿಗೆ ಅನೇಕ ಗೊಂದಲಗಳಿವೆ. ಅಂತಹ ಗೊಂದಲಗಳೂ ಈ ಮಾಲೆಯ ಹಲವು ಕೃತಿಗಳಲ್ಲೂ ಕಾಣಿಸಿಕೊಂಡಿವೆ. ಅವುಗಳನ್ನು ದಾಟಿ, ಈ ಅಧ್ಯಯನಕ್ಕೆ ಒಂದು ಸ್ವರೂಪವನ್ನು ಕೊಡುವಲ್ಲಿ ಹೆಚ್.ಎಸ್. ಶಿವಪ್ರಕಾಶ್ ಮತ್ತು ಮಲ್ಲೇಪುರಂ ಜಿ. ವೆಂಕಟೇಶ ಅವರ ಕೃತಿಗಳು ಯಶಸ್ವಿ ಪ್ರಯತ್ನಗಳಾಗಿವೆ. ಇವರ ಕೃತಿಗಳಲ್ಲಿ ಕಾಣಿಸಿಕೊಳ್ಳುವ ಸೂಕ್ಷ್ಮವಾದ ಒಳನೋಟ, ಕಸುಬುಗಾರಿಕೆ ಹಾಗೂ ಅಧ್ಯಯನ ಮಾದರಿಗಳು ಕನ್ನಡದಲ್ಲಿ ಅಂತರ ಶಿಸ್ತೀಯ ಅಭ್ಯಾಸ ಹಿಡಿಯಬೇಕಾದ ದಿಕ್ಕನ್ನು ಸೂಚಿಸುತ್ತವೆ.

ಹೆಚ್.ಎಸ್. ಶಿವಪ್ರಕಾಶ್ ಅವರ 'ಸಾಹಿತ್ಯ ಮತ್ತು ರಂಗಭೂಮಿ' ಕೃತಿಯಲ್ಲಿ ಸಾಹಿತ್ಯಕೃತಿ, ರಂಗಕೃತಿ ಹಾಗೂ ರಂಗಭೂಮಿ ಇವುಗಳಿಗೆ ಇರುವ ಸಂಬಂಧದ

ಎಳೆಗಳನ್ನು ಚೆನ್ನಾಗಿ ಹುಡುಕಿ ವಿಶ್ಲೇಷಿಸಲಾಗಿದೆ. ಈ ಪುಟ್ಟ ಕೃತಿಯಲ್ಲಿ ಅತ್ಯಂತ ಅಡಕವಾಗಿ ರಂಗಭೂಮಿ ಮತ್ತು ಅದು ದುಡಿಸಿಕೊಳ್ಳುವ ನಾಟಕೇತರ ಸಾಹಿತ್ಯದ ಪ್ರಕಾರಗಳ ನಡುವಿನ ಅಂತರ ಸಂಬಂಧಗಳನ್ನು ಹೇಳಿದ್ದಾರೆ. ಅವರು ನೀಡುವ ದೃಷ್ಟಾಂತಗಳು ಕೇವಲ ಮಾಹಿತಿಗಳಾಗದೆ ವಿಷಯದ ಅಧ್ಯಯನಕ್ಕೆ ನೇರವಾಗಿ ಒದಗಿಸಿಕೊಂಡ ಆಕರಗಳಾಗಿವೆ. ಕೃತಿಯ ಕೊನೆಯಲ್ಲಿ ನೀಡಿರುವ ನಾಟಕದ ಘಟನೆ, ಪಾತ್ರಗಳಿಂದ ಪ್ರೇರಿತವಾಗಿ ರಚಿತವಾಗಿರುವ ಕವಿತೆಗಳು ಅತ್ಯಂತ ಆಕರ್ಷಣೀಯವಾಗಿವೆ. ಮಲ್ಲೇಪುರಂ ಜಿ. ವೆಂಕಟೇಶ ಅವರ 'ಸಾಹಿತ್ಯ ಮತ್ತು ಪುರಾಣ' ಈ ಮಾಲೆಯ ಮತ್ತೊಂದು ಗಮನಾರ್ಹ ಕೃತಿ. ಪುರಾಣಗಳ ಪರಿಕಲ್ಪನೆಯನ್ನು ತಮ್ಮದೇ ಆದ ಕಸುಬುಗಾರಿಕೆಯಲ್ಲಿ ಹೇಳುವುದರ ಮೂಲಕ ಸಾಹಿತ್ಯ ಮತ್ತು ಪುರಾಣಗಳಿಗೆ ಇರುವ ಅಂತರ ಸಂಬಂಧಗಳನ್ನು ಸ್ಪಷ್ಟವಾಗಿ ವಿಶ್ಲೇಷಿಸಿದ್ದಾರೆ. ಜಾಗತಿಕ ಹಾಗೂ ಭಾರತೀಯ ಪುರಾಣಗಳ ಪರಿಕಲ್ಪನೆಯಿಂದ ಹೊರಟು ವೈದಿಕ, ಜೈನ, ಶೈವ ಪುರಾಣಗಳಿಗೂ ಸಾಹಿತ್ಯಕ್ಕೂ ಇರುವ ಸಂಬಂಧಗಳನ್ನು ಶೋಧಿಸಿದ್ದಾರೆ. ಪ್ರಾಚೀನ ಕನ್ನಡ ಸಾಹಿತ್ಯದಿಂದ ಹಿಡಿದು ಆಧುನಿಕ ಕುವೆಂಪು, ಬೇಂದ್ರೆ, ಪುತಿನ ಅವರ ಸಾಹಿತ್ಯದ ತನಕ ಅಭ್ಯಾಸ ನಡೆದಿದೆ. ಈ ಎರಡೂ ಕೃತಿಗಳಲ್ಲಿ ನೀಡಿರುವ ಸಹಾಯಕ ಸಾಹಿತ್ಯದ ಪಟ್ಟಿಗಳು ಪ್ರಸ್ತುತ ಎಲ್ಲೆಯಲ್ಲಿ ಅಧ್ಯಯನಕ್ಕೆ ಹೋಗುವವರಿಗೆ ಉತ್ತಮ ಆಕರಗಳಾಗಿವೆ.

ಬಿ.ಎ. ಶ್ರೀಧರ ಅವರು ತಮ್ಮ 'ಸಾಹಿತ್ಯ ಮತ್ತು ಪತ್ರಿಕೋದ್ಯಮ' ಕೃತಿಯಲ್ಲಿ 'ಸಾಹಿತ್ಯ ಮತ್ತು ಪತ್ರಿಕೋದ್ಯಮ'ಗಳ ತಾರತಮ್ಯವನ್ನು ಕುರಿತು ಬರೆದಿದ್ದಾರೆ. ಪತ್ರಿಕೋದ್ಯಮದಲ್ಲಿ ಕಥಾಸಾಹಿತ್ಯದ ಸ್ಥಾನ, ಪತ್ರಕರ್ತ ಎದುರಿಸುವ ಸೃಜನಶೀಲ ಕಸುಬುಗಳ, ಸವಾಲುಗಳ ವಿವರಗಳಿವೆ. ಪತ್ರಿಕೋದ್ಯಮದ ಸಿದ್ಧಾಂತ, ಚರ್ಚೆಗಳನ್ನು ಲೇಖಕರು ಸಂಗ್ರಹಿಸಿ ನೀಡಿದ್ದಾರೆ. ಬಿ. ಕೃಷ್ಣಮೂರ್ತಿ ಅವರು ತಮ್ಮ 'ಸಾಹಿತ್ಯ ಮತ್ತು ಮನೋವಿಜ್ಞಾನ' ಕೃತಿಯಲ್ಲಿ ಯೂಂಗ್, ಫ್ರಾಯ್ಡ್‌ರ ವಿಚಾರಗಳನ್ನು ನಿರೂಪಿಸಿದ್ದಾರೆ. ಕನ್ನಡ ಕಥಾ ಸಾಹಿತ್ಯದಲ್ಲಿ ಮನೋವಿಜ್ಞಾನದ ಅಧ್ಯಯನ ಆಗಿಲ್ಲ ಎಂಬ ಹಿಂದಿನ ಕೆಲವು ವಿದ್ವಾಂಸರ ಅಭಿಪ್ರಾಯಗಳಿಗೆ ಇವರೂ ದನಿಕೂಡಿಸಿದ್ದಾರೆ. ಕನ್ನಡದ ಕೆಲವು ಕಥೆ, ಕಾದಂಬರಿಗಳನ್ನು ಮನೋವಿಜ್ಞಾನದ ನೆಲೆಯಿಂದ ನೋಡುವ ಕಣ್ಣರಿಸಿಕೊಂಡಿದ್ದಾರೆ. ಮಹಾಬಲೇಶ್ವರ ಕಾಟ್ರಳ್ಳಿ ಅವರ 'ಸಾಹಿತ್ಯ ಮತ್ತು ಸಿನಿಮಾ' ಕೃತಿಯು ಸಿನಿಮಾ ಮಾಧ್ಯಮದ ತಾತ್ವಿಕತೆಯನ್ನು, ಅದರ ತಾಂತ್ರಿಕ ಕೌಶಲಗಳನ್ನು ವಿವರಿಸುತ್ತದೆ. ಸಾಹಿತ್ಯ ಕೃತಿಗಳನ್ನು ಸಿನಿಮಾ ಮಾಧ್ಯಮಕ್ಕೆ ಮಾಧ್ಯಮಾಂತರ ಮಾಡುವಾಗ ಎದುರಾಗುವ ಸಮಸ್ಯೆಗಳ ಹಾಗೂ ಸರ್ವಾಧಿಕಾರಿ ಕಣ್ಣಿನಲ್ಲಿ ದೃಶ್ಯ, ಶ್ರವ್ಯ ಮಾಧ್ಯಮಗಳ ನಿಯಂತ್ರಣ, ಮಿತಿ, ಪರಿಣಾಮಗಳನ್ನು ಕುರಿತ ವಿವರಗಳಿವೆ. ನೇಮಿಚಂದ್ರರ 'ಸಾಹಿತ್ಯ ಮತ್ತು ವಿಜ್ಞಾನ' ಕೃತಿಯಲ್ಲಿ ವಿಜ್ಞಾನದ ಬೆಳವಣಿಗೆಯ ಇತಿಹಾಸವಿದೆ. ಸಾಹಿತ್ಯದ ಮೇಲೆ ವಿಜ್ಞಾನದ ಪ್ರಭಾವ ಹಾಗೂ ಕನ್ನಡದ ವೈಜ್ಞಾನಿಕ ಕಥೆಗಳಲ್ಲಿ ವೈಜ್ಞಾನಿಕ ಮನೋಧರ್ಮವನ್ನು ಹುಡುಕುವ ನಿಲುವಿದೆ. ಶಿವರಾಮಯ್ಯ ಅವರ 'ಸಾಹಿತ್ಯ ಮತ್ತು ಚರಿತ್ರೆ' ಕೃತಿಯಲ್ಲಿ ಕಥೆ, ಕಾದಂಬರಿಗಳನ್ನು ಚರಿತ್ರೆಯ ಮೂಲಕ ಅರ್ಥೈಸುವ

ಯತ್ನವಿದೆ. ಇದಕ್ಕಾಗಿ ಕನ್ನಡದ ಕೆಲವು ಕಥೆ, ಕಾದಂಬರಿಗಳನ್ನು ಲೇಖಕರು ತಮ್ಮ ವಿಚಾರದ ಪ್ರತಿಪಾದನೆಗೆ ಬಳಸಿಕೊಂಡಿದ್ದಾರೆ. ಚಂದ್ರಕಾಂತ ಕುಸನೂರರು ತಮ್ಮ 'ಸಾಹಿತ್ಯ ಮತ್ತು ಚಿತ್ರಕಲೆ' ಕೃತಿಯಲ್ಲಿ ಕಲೆ, ಚಿತ್ರ, ಸಾಹಿತ್ಯ ಇವುಗಳ ಉಗಮ ಹಾಗೂ ವಿಕಾಸಗಳನ್ನು ಕುರಿತು ವಿಸ್ತಾರವಾಗಿ ಬರೆದಿದ್ದಾರೆ. ಭಾರತದಲ್ಲಿ ಚಿತ್ರಕಲೆ ಮತ್ತು ಅಂತರಶಿಸ್ತೀಯ ಅಧ್ಯಯನದ ಬಗೆಗಿನ ಸಮೀಕ್ಷೆ ಈ ಕೃತಿಯಲ್ಲಿ ನಡೆದಿದೆ.

ಹೆಚ್.ವಿ. ನಾಗೇಶರ 'ಸಾಹಿತ್ಯ ಮತ್ತು ಸಮಾಜಶಾಸ್ತ್ರ' ಕೃತಿಯಲ್ಲಿ ಕನ್ನಡದ ಕೆಲವು ಕಥೆಗಾರರ ಕಥೆ ಹಾಗೂ ಕಾದಂಬರಿಗಳ ಸಾರಾಂಶ, ವಿವೇಚನೆ ಇದೆ. ಕಾದಂಬರಿಕಾರ ರಾವಬಹಾದ್ದೂರರ 'ಗ್ರಾಮಾಯಣ' ಕಾದಂಬರಿಯಲ್ಲಿನ ಪಾದಳ್ಳಿ ಕಥೆ ಮತ್ತು ಸಮಾಜಶಾಸ್ತ್ರಜ್ಞ ಎಂ.ಎನ್. ಶ್ರೀನಿವಾಸರ ಅಧ್ಯಯನ ಕೃತಿ ರಾಮಾಪುರದ ಕಥೆಗಳನ್ನು ಅಚ್ಚುಕಟ್ಟಾಗಿ ಸಂಗ್ರಹಿಸಿ ಕೊಟ್ಟಿರುವುದನ್ನು ಕಾಣಬಹುದು. ಚೂಡಾಮಣಿ ನಂದಗೋಪಾಲ್ ಅವರ 'ಸಾಹಿತ್ಯ ಮತ್ತು ನೃತ್ಯ' ಕೃತಿಯಲ್ಲಿ ನೃತ್ಯದ ಉಗಮ, ವಿಕಾಸದ ಚರಿತ್ರೆ ಇದೆ. ಕನ್ನಡ ಸಾಹಿತ್ಯದಲ್ಲಿ ನೃತ್ಯಕ್ಕೆ ಸಂಬಂಧಿಸಿದ ಪದ್ಯಗಳನ್ನು ಸಂಗ್ರಹಿಸಿಕೊಡಲಾಗಿದೆ. ನೃತ್ಯದ ಪಾರಿಭಾಷಿಕ ಪದಗಳ ವಿವರಣೆ ಇದೆ. ಲೇಖಕಿ ವಿವಿಧ ದಿಕ್ಕಿನಿಂದ ವಿಪುಲವಾದ ಮಾಹಿತಿಗಳನ್ನು ಕಲೆಹಾಕಿದ್ದಾರೆ.

ಈ ಕೃತಿಗಳಲ್ಲಿ ಒಟ್ಟಾರೆ, ಆಯಾಯಾ ವಿಷಯಗಳಿಗೆ ಸಂಬಂಧಿಸಿದ ವಿಸ್ತಾರವಾದ ಮಾಹಿತಿಗಳ ಸಂಗ್ರಹವಿದೆ. ಆದರೆ, ಮಾಹಿತಿಗಳನ್ನು ಅಂತರಶಿಸ್ತೀಯ ಅಧ್ಯಯನಕ್ಕೆ ಬಳಸಿಕೊಳ್ಳುವಲ್ಲಿ ಬಹುಪಾಲು ಲೇಖಕರು ವಿಶಿಷ್ಟವಾದ ಕಸುಬುಗಾರಿಕೆಯನ್ನು ತೋರುವುದಿಲ್ಲ. ಬಹುಮಟ್ಟಿಗೆ ಆಯಾಯಾ ಶಿಸ್ತುಗಳನ್ನು ಸ್ವತಂತ್ರವಾಗಿಯೇ ನೋಡುವ ದೃಷ್ಟಿ ಇಲ್ಲಿನ ಬಹುಪಾಲು ಕೃತಿಗಳ ಹಿಂದೆ ಇದೆ. ಇಲ್ಲಿ ಅವುಗಳ ಅಂತರ ಸಂಬಂಧದ ಬಗೆಗಿನ ಸೂಕ್ಷ್ಮಗಳನ್ನು ಸಾಹಿತ್ಯ ಕೃತಿಯ ಮೂಲಕವೇ ಹುಡುಕಿ ಅನಾವರಣಗೊಳಿಸುವ ಅಧ್ಯಯನ ನಿರೀಕ್ಷಿತ ಮಟ್ಟದಲ್ಲಿ ಆಗಿಲ್ಲ. ಮುಖ್ಯವಾಗಿ ಸಾಹಿತ್ಯ ಕೃತಿಯ ಮೂಲಕ ಇತರ ಶಿಸ್ತುಗಳನ್ನು ಅಧ್ಯಯನ ಮಾಡುವುದರಿಂದಾಗಿ ಅದರ ಕಲಾತ್ಮಕ ಗುಣಗಳನ್ನು ಇನ್ನಷ್ಟು ವಿಸ್ತರಿಸುವ ಅಭ್ಯಾಸ ಆಗಬೇಕಾಗಿತ್ತು. ಆದರೂ ಇಂತಹ ಒಂದು ಮೊದಲ ಪ್ರಯತ್ನಕ್ಕೆ ಕೈ ಹಾಕಿದ ಲೇಖಕರಿಗೆ ಅಭಿನಂದನೆಗಳು.



# ಉಪಸಂಸ್ಕೃತಿ ಮಾಲೆ

*ಎಸ್. ಎಸ್. ಹಿರೇಮಠ*

ಭಾರತೀಯ ಸಂಸ್ಕತಿಯ ಏಕಮುಖೀ ವ್ಯಾಖ್ಯಾನ ಮತ್ತು ಆಧುನಿಕ ವಿದ್ಯಾಭ್ಯಾಸ ಕ್ರಮಗಳಿಂದಾಗಿ ದೊಡ್ಡ ಅನ್ಯಾಯವಾಗಿರುವುದು ದಕ್ಷಿಣ ಭಾರತದ ಜನತೆಗೆ ಮತ್ತು ಉತ್ತರ ಭಾರತದ ದುಡಿಯುವ ಜನ ಜಾತಿಗಳಿಗೆ. ಕರ್ನಾಟಕದಲ್ಲಿ ಈ ದೃಷ್ಟಿಯಿಂದ ಹೊಸ ಆಲೋಚನಾ ವಿಧಾನವನ್ನು ಪ್ರಾರಂಭಿಸುವುದಕ್ಕೆ ತಕ್ಕ ಹಿನ್ನೆಲೆಯನ್ನು 'ಉಪಸಂಸ್ಕೃತಿ' ಮಾಲೆ ಕಲ್ಪಿಸಿದೆ.

ದ್ರಾವಿಡ ಜೀವನ ವಿಧಾನಗಳ ವ್ಯಕ್ತಿ ವೈಶಿಷ್ಟ್ಯಗಳನ್ನು, ಕನ್ನಡ ಅನುಭವದ ಹಿನ್ನೆಲೆಯಲ್ಲಿ ಪುನರಾವಲೋಕಿಸುವ ಕೆಲಸ ಈ ಶತಮಾನದ ಅಂತ್ಯದಲ್ಲಿ ಮತ್ತೆ ಆರಂಭವಾಗಿರುವುದು ಶುಭ ಸಂಕೇತ. ಈ ಶತಮಾನದ ಆದಿಯಲ್ಲಿ ಬ್ರಿಟಿಷ್ ಅಧಿಕಾರ ಮತ್ತು ವಿದ್ವಾಂಸರ ವರ್ಗ, ರಾಜಕೀಯ ಮತ್ತು ಮತೀಯ ಕಾರಣಗಳಿಂದಾಗಿ ಈ ಕೆಲಸದ ತುರ್ತನ್ನು ಅವಗತ ಮಾಡಿಕೊಂಡಿತು. ಅದರದೇ ಆದ ಮಿತಿಗಳು ಮತ್ತು ಪೂರ್ವಗ್ರಹಿಕೆಗಳ ಹಿನ್ನೆಲೆಯಲ್ಲಿಯೂ ಸಾಕಷ್ಟು ವಸ್ತುನಿಷ್ಠವಾಗಿದೆಯೇ ಎಂಬ ವಿಷಯವನ್ನು ಗ್ರಹಿಸಲು ಯತ್ನಿಸಿತು. ಉಪಸಂಸ್ಕೃತಿಗಳ ಹಲವಾರು ಗ್ರಂಥಗಳು ಬ್ರಿಟಿಷ್ ಮಾದರಿಯ ಬಿಗಿ ಮುಷ್ಟಿಯಿಂದ ಬಿಡಿಸಿಕೊಳ್ಳಲಿಕ್ಕಾಗದಿರುವುದನ್ನು ಗಮನಿಸಿದರೆ, ಇಂಥ ಕೆಲಸಗಳ ಉದ್ದೇಶದ ಸಫಲತೆಯ ಬಗ್ಗೆ ಶಂಕೆ ಮೂಡುವ ಸಾಧ್ಯತೆ ಇರುತ್ತದೆ. ಸಂತೋಷವೆಂದರೆ ಸಿಂದ್ ಮಾದಿಗರ ಸಂಸ್ಕೃತಿಯಂಥ ಕೆಲವು ಗ್ರಂಥಗಳಾದರೂ ಅಂಥ ದೋಷಗಳಿಂದ ಮುಕ್ತವಾಗಲು ಪ್ರಾಮಾಣಿಕವಾಗಿ ಯತ್ನಿಸಿರುವುದು.

ಮೂವತ್ತಾರು ಗ್ರಂಥಗಳನ್ನು ಒಟ್ಟಾಗಿ ಅಂದಾಜಿಸುವುದಕ್ಕಷ್ಟೇ ಈ ಲೇಖನವನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ಹಾಗೆ ನೋಡಿದರೆ ಪ್ರತಿಯೊಂದು ಗ್ರಂಥವೂ ಪ್ರತ್ಯೇಕ ಪರಾಮರ್ಶೆಯನ್ನು ಅಪೇಕ್ಷಿಸುತ್ತದೆ. ಅದಕ್ಕೆ ಇಲ್ಲಿ ಅವಕಾಶವಿಲ್ಲ.

ರಾಷ್ಟ್ರೀಯ ವಿಮೋಚನಾ ಚಳುವಳಿಯ ರಾಜಕೀಯ, ಸಾಮಾಜಿಕ ಒತ್ತಡಗಳು ದೇಶದ ಸಮಗ್ರತೆಯ .ಅಗತ್ಯವನ್ನು ಒತ್ತಿ ಹೇಳುತ್ತಿದ್ದುದರ ಇತ್ಯಾತ್ಮಕತೆಯನ್ನು ಒಪ್ಪುತ್ತಲೇ ಪ್ರಾಂತೀಯ ಅನನ್ಯತೆಯ ಅರಿವು ಭಾಷಾವಾರು ಪ್ರಾಂತರಚನೆಯ ಆಕಾರ

ತಾಳಿದುದು ನೇತ್ಯಾತ್ಮಕವೇನಾಗಿರಲಿಲ್ಲ. ನಿಜ, ಆದರೆ ಭಾಷೆಯ ಆಧಾರದಲ್ಲಿ ವಿಭಜನೆಗೊಂಡ ದಕ್ಷಿಣದ ನಾಲ್ಕು ರಾಜ್ಯಗಳನ್ನೇ ಉದಾಹರಿಸುವುದಾದರೆ ಇಲ್ಲಿಯ ಜನಗಳ, ಜೀವನ ವಿಧಾನಗಳ ತೌಲನಿಕ ಅಧ್ಯಯನ ನಡೆಯಲಿಲ್ಲ. ದ್ರಾವಿಡ ಭಾಷೆಗಳ ಅಧ್ಯಯನ ಭಾಷಾಶಾಸ್ತ್ರ ಶಿಸ್ತಿಗೆ ಅಪೂರ್ವ ಒಳನೋಟಗಳನ್ನು ನೀಡಿರುವುದನ್ನು ಬಿಟ್ಟರೆ ಸಾಂಸ್ಕೃತಿಕ ಅನನ್ಯತೆಯ ಬಗ್ಗೆ ಎಳ್ಳಷ್ಟೂ ಶೋಧನೆಯಾಗಲಿಲ್ಲ. ಕನ್ನಡ ನಾಡಿನ ಅಸಂಖ್ಯ ಜಾತಿಗಳ, ಹೋಗಲಿ ಪ್ರಧಾನ ಜಾತಿಗಳ ಜೀವನ ವಿಧಾನದ ಸಮಗ್ರವಾದ ಮತ್ತು ವಸ್ತುನಿಷ್ಠವಾದ ಅಧ್ಯಯನಕ್ಕೆ ಉಳಿದ ಮೂರು ರಾಜ್ಯಗಳಲ್ಲಿಯ ಸೋದರ ಜಾತಿಗಳ ತೌಲನಿಕ ಅಧ್ಯಯನ ಅತ್ಯಗತ್ಯವಾಗುತ್ತದೆಂಬುದನ್ನು ಮನಗಾಣದೆ ಇರುವುದು ನಮ್ಮ ಚರಿತ್ರೆಯ ಮತ್ತು ಸಂಸ್ಕೃತಿ ಪರಂಪರೆಯ ಬಹುದೊಡ್ಡ ದುರಂತಗಳಲ್ಲಿ ಒಂದು. ಈ ಮಾತುಗಳನ್ನು ಇಲ್ಲಿ ಪ್ರಸ್ತಾಪಿಸುತ್ತಿರುವುದರ ಅಗತ್ಯವೇನಿದೆ ಎಂದರೆ ವಿವಿಧ ಉಪಸಂಸ್ಕೃತಿಗಳ ಕುರಿತ ಅಕಾಡೆಮಿಯ ಎಲ್ಲ ಗ್ರಂಥಗಳಲ್ಲೂ ಈ ಬಗೆಯ ಕಣ್ಣೋಟದ ತೀವ್ರ ಕೊರತೆ. ಹಾಗಾಗಿ ಎಲ್ಲ ಲೇಖಕರೂ ಒಪ್ಪಿತವಾದ ಚೌಕಟ್ಟಿನಡಿ ''ವಿಷಯಗಳನ್ನು ಸಂಗ್ರಹಿಸುವುದಷ್ಟಕ್ಕೆ'' ತೃಪ್ತರಾಗುತ್ತಾರೆ.

ವಿಶ್ಲೇಷಣೆಯ ಹೊಸ ಮಾನದಂಡಗಳು ಅಷ್ಟು ಸುಲಭವಾಗಿ ದಕ್ಕಲಾರವು ಎಂಬುದು ನಿಜವಾದರೂ, ಅಂಥ ಮುಂದಿನ ಕೆಲಸಕ್ಕೆ ಈ ಗ್ರಂಥಗಳು ''ಮತ್ತೆ'' ಆಕರಗಳಾಗುತ್ತವೆಂಬುದಂತೂ ಖಂಡಿತ. ಇಲ್ಲಿ ಪ್ರಶ್ನೆ ಇಷ್ಟೆ, ಈ ಹಿಂದೆ ಈ ಶತಮಾನದ ಆದಿಯಿಂದ ಥರ್‌ಸ್ಟನ್, ಅನಂತಕೃಷ್ಣ ಅಯ್ಯರ್ ಮೊದಲಾದವರು ಸಂಗ್ರಹಿಸಿಕೊಟ್ಟ ಮಾಹಿತಿಗಿಂತ ಇಲ್ಲಿಯವು ಭಿನ್ನವಾಗುತ್ತವೆಯೆ, ಇಲ್ಲವೆ ಎಂಬುದು. ಈ ದೃಷ್ಟಿಯಿಂದ ಕನ್ನಡ ವಿದ್ಯಾವಂತ ಲೋಕವು ಹೆಸರನ್ನೂ ಕೇಳರಿಯದ, ಹೊಸ ಲೋಕಗಳು ಕೆಲವಾದರೂ ಅನಾವರಣಗೊಂಡಿರುವುದು ನಿಜ.

ಈ ಗ್ರಂಥಗಳ ಪ್ರತಿಯೊಬ್ಬ ಲೇಖಕನೂ ತನಗಿದ್ದ ಪರಿಮಿತ ಕಾಲಾವಧಿಯ ಬಗ್ಗೆ ಹೇಳಿಕೊಂಡಿದ್ದು, ತನ್ನ ಬರಹದ ಮಿತಿಯನ್ನು ತಿಳಿದಿದ್ದಾನೆ. ಪ್ರಾಮಾಣಿಕವಾಗಿ ಪ್ರಯತ್ನ ಮಾಡಿದ ಕೆಲವರಾದರೂ ಉತ್ತಮ ಗ್ರಂಥ ಮಾದರಿಗಳನ್ನು ನೀಡಿದ್ದು ಈ ಯೋಜನೆಯ ಹೆಮ್ಮೆಯಾಗಿದೆ. ಹಿಂದಿರುವ ಇತಿಮಿತಿಗಳನ್ನು, ತಪ್ಪುಗ್ರಹಿಕೆಗಳನ್ನು, ಎತ್ತಿ ತೋರಿಸಿ ಹೊಸ ಮಾಹಿತಿಗಳ ಕಣಜವನ್ನೂ ತೆರೆದಿಡಲು ಇಲ್ಲಿ ಸಾಧ್ಯವಾಗಿದೆ. ಅಂತೂ ಕರ್ನಾಟಕದ ಸಂಸ್ಕೃತಿ ಪರಂಪರೆಗಳ ಮಹಾಗಾಥೆಯ ಸಣ್ಣ ಮಟ್ಟದ ಉದ್ಘಾಟನೆ ಆಗಿದೆ. ''ಸಾಹಿತ್ಯ'' ಅಕಾಡೆಮಿಯ ಯೋಜನೆಯಾಗಿರುವ ಕಾರಣಕ್ಕಾಗಿ ೩೭ ಗ್ರಂಥಗಳ ಈ ಬೃಹತ್ ಸಂಪುಟಕ್ಕೆ ಒಂದು ಶಿಸ್ತುಬದ್ಧವಾದ ಚೌಕಟ್ಟಿದೆ. ೩೭ ಭಿನ್ನ ಭಿನ್ನ ಲೇಖಕರೇ ಬರೆದಿದ್ದರೂ ಚೌಕಟ್ಟಿನ ಒಳಗೆ ಹಿಗ್ಗುವ, ಕುಗ್ಗುವ, ಗುಣಗಳನ್ನು ತೋರ್ಪಡಿಸಿದ್ದಾರೆ. ಇದು ಅವರವರ ಪ್ರಯತ್ನದ ಮತ್ತು ಸಾಮರ್ಥ್ಯದ ಪರೀಕ್ಷೆಯೂ ಆಗಿದೆ.

ಪ್ರತಿ ಪುಸ್ತಕದಲ್ಲೂ ವಿಷಯದ ಹಿನ್ನೆಲೆ, ಅಧ್ಯಯನ ವ್ಯಾಪ್ತಿ, ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ, ಭಾಷೆ - ಸಾಹಿತ್ಯ, ಆಚರಣೆ ಮತ್ತು ಕಲೆ, ಪ್ರದರ್ಶನಾತ್ಮಕ ಕಲೆ, ಕ್ರೀಡೆ, ಸಾಮಾಜಿಕ ಪರಿವರ್ತನೆಯ ಹಾದಿಯಲ್ಲಿ, ಅನುಬಂಧ, ಸಮಾರೋಪ, ಭಾವಚಿತ್ರ

ಮತ್ತು ರೇಖಾಚಿತ್ರಗಳು ಇಲ್ಲಿರುವ ಚೌಕಟ್ಟು. ಹಲವಾರು ಗ್ರಂಥಗಳಲ್ಲಿ ಆಯಾಯಾ ಸಂಸ್ಕೃತಿಯ ಜನಗಳ ಮೌಖಿಕ ಸಾಹಿತ್ಯವು ಸಂಗ್ರಹವಾಗಿದೆ.

ಮತ್ತೆ ಪ್ರಾರಂಭದ ತಾತ್ವಿಕ ಚರ್ಚೆಯನ್ನು ಮುಂದುವರಿಸಿ ಹೇಳುವುದಾದರೆ ಉತ್ತರದ ಸಾಂಸ್ಕೃತಿಕ ಪರಂಪರಾಗತ ಹೇರಿಕೆಗಳ ಆಧುನಿಕ ಪರಿಷ್ಕೃತ ಮಾದರಿಗಳನ್ನು ವಿರೋಧಿಸುತ್ತ ಬಂದ ಪೆರಿಯಾರ್‌ರಂಥವರ ಹೋರಾಟಕ್ಕೆ ದಕ್ಷಿಣದ ರಾಜ್ಯಗಳಲ್ಲಿ ನ್ಯಾಯವಾದ ನೆಲೆಗಟ್ಟು ರಚನೆಯಾಗಲಿಲ್ಲ. ಆಗಲೇ ಹೊರಬರುತ್ತಿದ್ದ ಅಧ್ಯಯನಗಳನ್ನು ತಮ್ಮ ಹೋರಾಟಕ್ಕೆ ತಾತ್ವಿಕ ತಳಹದಿಯಾಗಿ ಮಾರ್ಪಡಿಸಿಕೊಳ್ಳುವ ಸಾಧ್ಯತೆ ಪೆರಿಯಾರ್‌ರಿಗೂ ಆಗ ಇರಲಿಲ್ಲ. ಆಶ್ಚರ್ಯವೆಂದರೆ ಈವರೆಗೂ ಅಂಥ ಪ್ರಯತ್ನಗಳು ನಡೆಯದೆ ಇರುವುದು. ಉಪಸಂಸ್ಕೃತಿಗಳ ಪ್ರಕಟಣೆಯ ಹಿಂದೆ ಇಂಥ ಒತ್ತಾಸೆಗಳು ಸ್ಥಿರಗೊಳ್ಳದಿದ್ದಲ್ಲಿ ಅವುಗಳ ಗ್ರಹಿಕೆಯ ಮತ್ತು ಬಳಕೆಯ ಬಗ್ಗೆ ಗೊಂದಲಗೊಳ್ಳುವ ಸಾಧ್ಯತೆ ಇರುತ್ತದೆ. ಸ್ವಾತಂತ್ರ್ಯ ಹೋರಾಟದ ದಿನಗಳಿಂದಲೂ (ಲಿಖಿತ ಚರಿತ್ರೆಯ ಕಾಲದಿಂದಲೂ) ಉತ್ತರದ ರಾಜಕೀಯ ಮತ್ತು ಸಾಂಸ್ಕೃತಿಕ ಪ್ರಾಬಲ್ಯ ದಕ್ಷಿಣದ ಸಾಂಸ್ಕೃತಿಕ ಇತಿಹಾಸವನ್ನು, ಅದರ ಶ್ರೇಷ್ಠ ಕೊಡುಗೆಯನ್ನು ಅರಿಯಲು ಅಡ್ಡಿಯಾಗಿದೆ.

ಅಲ್ಪಸಂಖ್ಯಾತರ ಲಿಖಿತ ಪರಂಪರೆಯ ಅಧಿಕೃತತೆಯ ಮುಂದೆ, ಬಹುಸಂಖ್ಯೆಯ ಅಲಿಖಿತ ಜೀವನ ವಿಧಾನಗಳು ಕತ್ತಲೆಗೆ ಸೇರಿದುದು ವರ್ಗ-ವರ್ಣ ಧೋರಣೆಯ ಸಾಮಾಜಿಕಾರ್ಥಿಕ ವ್ಯವಸ್ಥೆಯೊಂದರಲ್ಲಿ ಸಹಜವೇ. ಇದಕ್ಕೆ ಸ್ವಾತಂತ್ರ್ಯೋತ್ತರ ಭಾರತದ ನವವಸಾಹತುಶಾಹಿ ಸುಲಿಗೆ, ಅರೆಫ್ಯೂಡಲ್ ದೌರ್ಜನ್ಯಗಳು, ಇನ್ನೊಂದೆಡೆ 'ಸುಳ್ಳು ಕನಸುಗಾರಿಕೆಗಳ ಭ್ರಮನಿರಸನದ ವೈರುಧ್ಯ ಪ್ರೇರಣೆ ಒದಗಿಸುತ್ತದೆ.

ಒಂದೇ ಮಟ್ಟದ ಮತ್ತು ಗುಣಪ್ರಮಾಣದ ಬರವಣಿಗೆ ಈ ಮಾಲೆಯಲ್ಲಿಲ್ಲ. ಕನಿಷ್ಠ ನಾಲ್ಕು ಗುಂಪುಗಳನ್ನಾಗಿ ಇವನ್ನು ವಿಭಜಿಸಬಹುದು. ಮೊದಲ ಗುಂಪಿನ 'ಸಿಂದ್ ಮಾದಿಗರ ಸಂಸ್ಕೃತಿ'. ಅದು ಪ್ರಾರಂಭವಾಗುವುದು ಹೀಗೆ -

''ಪ್ರಧಾನ ಸಂಸ್ಕೃತಿಯ ಪ್ರಾಬಲ್ಯದಡಿ ತನ್ನತನ ಕಾಪಾಡಿಕೊಳ್ಳಲು ಶತಾಯ ಗತಾಯ ಹೆಣಗುತ್ತಿರುವ ಮೂಲ ಸಂಸ್ಕೃತಿಗಳ ಅಧ್ಯಯನವು ಮನುಕುಲದ ಒಟ್ಟಾರೆ ಉಳಿವಿಗೆ ಅಗತ್ಯವಾದ ಒಳನೋಟಗಳನ್ನು ಒದಗಿಸಬಲ್ಲದು. ಪ್ರಧಾನ ಸಂಸ್ಕೃತಿಯ ಪ್ರವಾಹಕ್ಕೆ ವಿರುದ್ಧವಾದ ಹಾಗೂ ಭಿನ್ನವಾದ ನಾನಾ ಮೂಲಧಾರೆಗಳು ಆಶ್ಚರ್ಯಕರ ರೀತಿಯಲ್ಲಿ ಇನ್ನೂ ಉಳಿಸಿಕೊಂಡಿರುವ 'ದೇಸೀ ಜೀವಜಲ', 'ಜೀವಹೀನ' ಸಂಸ್ಕೃತಿಯ ಏಕತಾನತೆಯನ್ನು ಮೀರಿ ಜೀವಪರ ಸಾಂಸ್ಕೃತಿಕ ಪರ್ಯಾಯವೊಂದಕ್ಕೆ ದಾರಿ ಮಾಡಿಕೊಡಬಲ್ಲುದು.'' ಈ ಅರ್ಥದಲ್ಲಿ ಅಲಭ್ಯವಾದ ಅಮೂಲ್ಯ ಆಕರ ಇನ್ನೂ ಬೃಹತ್ ಪ್ರಮಾಣದಲ್ಲಿ ಹೀಗೆಯೇ ಪ್ರಕಟವಾಗುವ ಅಗತ್ಯವಿದೆ.

ಏಕೆಂದರೆ ಏಕಮುಖಿ ಮತ್ತು ಪ್ರಧಾನವೆಂದು ಗ್ರಹಿತವಾಗಿರುವ ನೆಲೆಗಳನ್ನು ತೀವ್ರವಾದ ಪರೀಕ್ಷೆಗೆ ಒಡ್ಡಿ ಹೊಸ ಬೆಳಕನ್ನು ನೀಡುವುದು - ಈ ಮಾಲೆಯಲ್ಲಿ ಮೂವತ್ತಕ್ಕೂ ಹೆಚ್ಚು ಪ್ರಕಟವಾಗಿರುವ ಎಲ್ಲಾ ಪುಸ್ತಕಗಳ ಮುಖ್ಯ ಉದ್ದೇಶವಾಗಿದೆ.

ಈ ಗ್ರಂಥಗಳು, ಪುನರ್ ಮುದ್ರಣವಾಗುವ ಸಂದರ್ಭವೊದಗಿದರೆ ಕೆಲವನ್ನಾದರೂ ಸೂಕ್ತವಾಗಿ ಪರಿಷ್ಕರಿಸುವ ಅಗತ್ಯವಿದೆ. ಹಾಗೆಯೇ ಈ ಮಾಲೆಯ ಎಲ್ಲಾ ಪುಸ್ತಕಗಳೊಂದಿಗೆ ಸೇರಿರುವ 'ಪ್ರಸ್ತಾವನೆ'ಯನ್ನು ಬೇರೆಯಾಗಿಯೇ ಪ್ರಕಟಿಸಿವುದು ಸೂಕ್ತ.



## ಅಕ್ಷರ ಚಿಂತನ ಮಾಲೆ

*ಚಂದ್ರಶೇಖರ ಕಂಬಾರ*

---

**ನಮ್ಮ ಪ್ರಜ್ಞೆಗೆ ಒಂದು ಆಹ್ವಾನ**

ಅಕ್ಷರ ಚಿಂತನ ಮಾಲೆಯಲ್ಲಿ ಪ್ರಕಟವಾಗಿರುವ ಗ್ರಂಥಗಳು- ಅವುಗಳಲ್ಲಿ ಕೆಲವು ನಮ್ಮವೇ ಆಗಿದ್ದರೂ- ನಮಗೆ ಪರಕೀಯವಾಗಿರುವ ಚಿಂತನವನ್ನು ನಿರೂಪಿಸುವಂಥವಾಗಿವೆ. ಭರ್ತೃಹರಿಯ ವಾಕ್ಯಪದೀಯ, ವಿದ್ಯಾಪತಿಯ ಕತೆಗಳು, ನಾಗಾರ್ಜುನನ ತಾತ್ವಿಕ ಗ್ರಂಥಗಳು, ತಮಿಳಿನ ಕಾವ್ಯಮೀಮಾಂಸೆ ಮೊದಲಾದವು - ನಮ್ಮ ನೆಲದಿಂದಲೇ ಹುಟ್ಟಿಬಂದ ಚಿಂತನ ಕ್ರಮಗಳಾಗಿದ್ದರೂ ಯಾವ್ಯಾವುದೋ ಕಾರಣಕ್ಕಾಗಿ ಪರಕೀಯವಾಗಿ ಉಳಿದುವು. ಸದ್ಯದ ಮಟ್ಟಿಗೆ ಹೇಳುವುದಾದರೆ ನಮಗೆ ಅರಿಸ್ಟಾಟಲನ ಕಾವ್ಯಮೀಮಾಂಸೆ ತಮಿಳಿನ ಕಾವ್ಯಮೀಮಾಂಸೆಗಿಂತ ಹೆಚ್ಚು ಹತ್ತಿರವಾಗಿದೆ. ಇನ್ನು ತಮಿಳಿನ ಪಂಡಿತರನ್ನು ಕೇಳಿದರೂ ಅದೇ ಕತೆ. ಅವರಿಗೆ ಪಾಶ್ಚಾತ್ಯ ಕಾವ್ಯಮೀಮಾಂಸೆ ಸಂಸ್ಕೃತ ಕಾವ್ಯಮೀಮಾಂಸೆಗಿಂತ ಹೆಚ್ಚು ಸಮೀಪವಾಗಿದೆ.

ಇದು ನಮ್ಮ ಇಂದಿನ ತಿಳುವಳಿಕೆಯ ಪರಿಸ್ಥಿತಿಯಾಗಿದೆ. ಅಕ್ಷರ ಚಿಂತನ ಮಾಲೆಗೆ ಬರೆದಿರುವ ಮುನ್ನುಡಿಯಲ್ಲಿ ಡಾ. ಡಿ.ಆರ್. ನಾಗರಾಜ ಇದನ್ನೇ ಸಾಮಾಜಿಕ ವಿಸ್ಮೃತಿ ಎಂದು ಕರೆದಿದ್ದಾರೆ. ವ್ಯಕ್ತಿಗೆ ಆವರಿಸುವ ವಿಸ್ಮೃತಿಗಿಂತ ಭಿನ್ನವಾದ ವಿಸ್ಮೃತಿಯಿದು. ಇದು ನಮ್ಮ ತಿಳುವಳಿಕೆಯ ಸ್ವಭಾವಕ್ಕೆ ಸಂಬಂಧಪಟ್ಟ ಮಾತಾಗಿದೆ. ಒಂದು ವಸ್ತುವನ್ನು ಕುರಿತ ನಮ್ಮ ತಿಳುವಳಿಕೆಗೆ ಒಂದೇ ಮುಖ ಇದ್ದರೆ ಅದು ತಿಳುವಳಿಕೆಯೇ ಅಲ್ಲ. ತಿಳುವಳಿಕೆ ಇತ್ಯಾತ್ಮಕವಾಗಿರುವಂತೆ ನೇತ್ಯಾತ್ಮಕವೂ ಆಗಿರಬೇಕು. ಬಂಗಾರದ ಬಗ್ಗೆ ಮಾತನಾಡುವಾಗ ಅದು ಬಂಗಾರ ಎಂಬ ತಿಳುವಳಿಕೆ ಮಾತ್ರವಲ್ಲದೆ ಅದು ಕಲ್ಲಲ್ಲ ಎಂಬ ತಿಳುವಳಿಕೆಯೂ ಇರಬೇಕು. ತನಗೆ ಪರಕೀಯವಾದದ್ದನ್ನು ವಿರುದ್ಧವಾದದ್ದನ್ನು ಅರಗಿಸಿಕೊಂಡಾಗ ಮಾತ್ರ ತಿಳುವಳಿಕೆ ಗಟ್ಟಿಮುಟ್ಟಾಗುತ್ತದೆ. ಅಕ್ಷರ ಚಿಂತನ ಮಾಲೆಯ ಈ ಗ್ರಂಥಗಳು ನಮ್ಮ ತಿಳುವಳಿಕೆಯನ್ನು ಹೆಚ್ಚು ಸಮೃದ್ಧವಾಗಿಸುತ್ತವೆಂಬ ಮಾತಿನಲ್ಲಿ ಸಂಶಯವೇ ಇಲ್ಲ.

ಈಗ ಪ್ರಕಟವಾಗಿರುವ ಅಕ್ಷರ ಚಿಂತನ ಮಾಲೆಯ ಹನ್ನೆರಡು ಗ್ರಂಥಗಳು ಬೇರೆ ಬೇರೆ ಕಾಲಮಾನಗಳಿಗೆ, ಕೆಲವು ದೇಶ, ಭಾಷೆಗಳಿಗೆ ಸೇರಿದವುಗಳಾಗಿವೆ. 'ತಮಿಳು ಕಾವ್ಯ ಮೀಮಾಂಸೆ' ನಮ್ಮ ನೆರೆಯ ಭಾಷೆಗೆ ಸೇರಿದ್ದಾದರೆ ದಾವ್ ದ ಜಿಂಗ್‌ನ 'ಧರ್ಮಪಥ'

ಸೂತ್ರ ಚೀನಿ ಭಾಷೆಗೆ ಸೇರಿದ್ದಾಗಿದೆ. 'ಕನ್ನಡದ ಪ್ರಜ್ಞೆಗೆ ಇವು ಬಹಳ ದೂರದ ಕೃತಿಗಳು.' ಅಪರಿಚಿತವಾದದ್ದನ್ನ ಪರಿಚಯಿಸುವುದು, ತಿಳುವಳಿಕೆಯ ಆಯಾಮಗಳನ್ನು ವಿಸ್ತರಿಸುವುದು ಈ ಗ್ರಂಥಮಾಲೆಯ ಉದ್ದೇಶಗಳಲ್ಲಿ ಒಂದಾಗಿದೆ. 'ವಾಕ್ಯಪದೀಯ' ಸಂಸ್ಕೃತದಲ್ಲಿದ್ದರೂ ಕನ್ನಡದ ಮಟ್ಟಿಗೆ ಅದು ಹೊಸದಾಗಿಯೇ ಇದೆ. ಹೊಸದನ್ನು ಬರಮಾಡಿಕೊಳ್ಳುವಾಗ, ಅಪರಿಚಿತವಾದದ್ದನ್ನು ಸ್ವೀಕರಿಸುವಾಗ ಸಂಶಯ ಮತ್ತು ಹೆದರಿಕೆಗಳು ಸ್ವಾಭಾವಿಕವಾಗಿ ಹುಟ್ಟಿಕೊಳ್ಳುತ್ತವೆ. ಈ ಶತಮಾನ ಪ್ರಾರಂಭವಾಗುವ ಮೊದಲೇ ನಮಗೆ ಇಂಗ್ಲಿಷ್ ಭಾಷೆಯ ಮೂಲಕ ಪಾಶ್ಚಾತ್ಯ ವಿದ್ಯೆ, ಸಂಸ್ಕೃತಿ ಹಾಗೂ ಧರ್ಮಗಳ ಪರಿಚಯವಾಯಿತು. ಆಗ ರಾಜಕೀಯವಾಗಿ ಆಯ್ಕೆ ನಮ್ಮದಾಗಿರಲಿಲ್ಲ. ಆದ್ದರಿಂದ ಎಷ್ಟೇ ಭಯ, ಸಂಶಯಗಳಿದ್ದರೂ ಇಂಗ್ಲಿಷನ್ನು ಒಪ್ಪಿಕೊಳ್ಳಬೇಕಾಯಿತು, ಪಳಗಿಸಿಕೊಳ್ಳಬೇಕಾಯಿತು. ಆಗ ತೆರೆದ ಬಾಗಿಲು ಇನ್ನೂ ತೆರೆದೇ ಇದೆ. ಆದರೂ ಇಂಗ್ಲಿಷನ್ನು ಬಿಟ್ಟು ಬೇರೆ ಭಾಷೆ, ಸಂಸ್ಕೃತಿ ಮನೆ ಬಾಗಿಲಿಗೆ ಬಂದಾಗ ಮತ್ತೆ ಬಾಗಿಲು ಮುಚ್ಚಿಕೊಳ್ಳುವ ಮನಸ್ಸಾಗುತ್ತದೆ.

ಅಕ್ಷರ ಚಿಂತನ ಮಾಲೆಯ ಗ್ರಂಥಗಳು ನಮ್ಮ ಪ್ರಜ್ಞೆಗೆ ಒಂದು ಆಹ್ವಾನವಾಗಿ ಬಂದರೆ ಅವುಗಳನ್ನೂ ಪಳಗಿಸಿಕೊಳ್ಳಬೇಕಾಗುತ್ತದೆ. ಈ ಪಳಗಿಸಿಕೊಳ್ಳುವ ಪ್ರಕ್ರಿಯೆಯ ಮೊದಲ ಹೆಜ್ಜೆ ಎಂದರೆ ಅನುವಾದ. ವಿದ್ಯಾಪತಿಯ ಮೈಥಿಲೀ ಕತೆಗಳು ಕನ್ನಡವಾಗಿಬಿಟ್ಟರೆ ಅವನ್ನು ಓದಿಕೊಳ್ಳುವುದು ಸುಲಭವಾಗುತ್ತದೆ. ಪರಿಚಯ ಹೆಚ್ಚಾದಂತೆ ಇವು ನಮ್ಮ ಕತೆಗಳೇ ಆಗುತ್ತವೆ. 'ಪುರುಷ ಪರೀಕ್ಷೆ'ಗೆ ಬರೆದಿರುವ ಹಿನ್ನುಡಿಯಲ್ಲಿ ಒಂದು ಮಾತಿದೆ. ವಿದ್ಯಾಪತಿ ಮತ್ತು ಕುಮಾರವ್ಯಾಸ ಇವರಿಬ್ಬರಲ್ಲಿ ಸಮಾನಧರ್ಮವಿದೆ. ಇಬ್ಬರೂ ಸಂಪ್ರದಾಯನಿಷ್ಠರು. ಆದರೆ ಕುಮಾರವ್ಯಾಸ ಭಾಷೆಯ ಮಟ್ಟದಲ್ಲಿ ಸಂಪ್ರದಾಯನಿಷ್ಠತೆಯನ್ನು ಮೀರಿದ್ದರೆ, ವಿದ್ಯಾಪತಿ ಕೃಷ್ಣರಾಧೆಯರ ಸಮಾಜ ಬಾಹಿರವಾದ ಪ್ರಣಯದಲ್ಲಿ ಅದನ್ನು ಮೀರಿದ. ಈ ಒಳನೋಟದಿಂದ ವಿದ್ಯಾಪತಿಯ ಪರಿಚಯ ನಮಗಾಗುವುದಲ್ಲದೇ, ಕುಮಾರವ್ಯಾಸನ ಬಗ್ಗೆ ಕೂಡ ನಮ್ಮ ತಿಳುವಳಿಕೆ ಹೆಚ್ಚಾಗುತ್ತದೆ. ಆದರೆ ಇದು ಕೂಡ ಚರ್ಚೆಯ ಆರಂಭವೆಂದೇ ನನ್ನ ಗ್ರಹಿಕೆ. ಈ ಒಳನೋಟದಿಂದ ಕುಮಾರವ್ಯಾಸ ಮತ್ತು ವಿದ್ಯಾಪತಿ ಇವರ ಕಾವ್ಯದ ಬಗ್ಗೆ ಇನ್ನೂ ವಿಸ್ತಾರವಾದ ಚರ್ಚೆ ಸಾಧ್ಯವಾಗುವುದೆಂಬ ನಂಬಿಕೆ ಹುಟ್ಟುತ್ತದೆ.

ಅಕ್ಷರ ಚಿಂತನ ಮಾಲೆಯ ಈ ಗ್ರಂಥಗಳನ್ನು ಪ್ರತ್ಯೇಕವಾಗಿ ಓದಿಕೊಂಡು ಅವುಗಳ ಮೌಲ್ಯಮಾಪನ ಮಾಡುವುದು ಸಾಧ್ಯ. ಆದರದು ಸದ್ಯಕ್ಕೆ ಪ್ರಯೋಜನಕಾರಿಯಲ್ಲ. ದಾವ್‌ದ ಜಿಂಗ್‌ನ ಭಾಷಾಂತರ ಸರಿಯಾಗಿದೆಯೇ, ಚೀನೀ ಕಾವ್ಯ ಪರಂಪರೆಯಲ್ಲಿ ಅದರ ಸ್ಥಾನಮಾನವೇನು ಎಂಬುದರ ಬಗ್ಗೆ ಈ ಚಿಕ್ಕ ಪುಸ್ತಕ ಯಾವ ತಿಳುವಳಿಕೆಯನ್ನೂ ಕೊಡುವುದಿಲ್ಲ. ತಮಿಳು ಕಾವ್ಯಮೀಮಾಂಸೆಯಿಂದ 'ಶಿಲಪ್ಪದಿಕಾರಂ'ದಂಥ ಕೃತಿಯನ್ನು ಇಡಿಯಾಗಿ ಗ್ರಹಿಸಲು ಸಾಧ್ಯವೆ? ಅಥವಾ ಅವರದ್ದೇ ಈಚಿನ ಸಾಹಿತ್ಯವನ್ನು ವಿವರಿಸಲು, ಸ್ವೀಕರಿಸಲು ಸಾಧ್ಯವೆ? ಈ ಬಗ್ಗೆ ಆ ಗ್ರಂಥದಲ್ಲಿ ಉತ್ತರಗಳಿಲ್ಲ. ಆದರೆ ಈ ಗ್ರಂಥಗಳನ್ನೆಲ್ಲ ಒಟ್ಟಾಗಿಯೇ ನೋಡಬೇಕು. ಈ ಹನ್ನೆರಡು ಗ್ರಂಥಗಳ ಆಯ್ಕೆ, ಅವು

ಒಟ್ಟಾಗಿ ಕನ್ನಡದ ಬರವಣಿಗೆಯ ಮೇಲೆ ಬೀರಬಹುದಾದ ಪ್ರಭಾವ. ಅವೆಲ್ಲ ಕೂಡಿಕೊಂಡು ನಿರ್ಮಿಸುವ ಚಿಂತನಕ್ರಮ ಇವುಗಳ ಬಗ್ಗೆ ನಮ್ಮ ವಿಮರ್ಶೆ ಲಕ್ಷ್ಯಕೊಡಬೇಕಾಗಿದೆ. ಪಂಜಾಬದ ಸೂಫಿ ಕವಿ ಶೇಕ್ ಫರೀದ ಮತ್ತು ದಾರಶಿಕೊ ಇವರ ನಡುವಿನ ಐತಿಹಾಸಿಕ ಸಂಬಂಧ ನಮ್ಮನ್ನು ಕೆರಳಿಸಬೇಕು. ಋಗ್ವೇದ ಚಿಂತನೆ ನಾಗಾರ್ಜುನನ ಚಿಂತನಕ್ರಮವನ್ನು ಎದುರಿಸಬೇಕು. ಬಹುಶಃ ಇದೇ ಗ್ರಂಥಮಾಲೆಯ ಪ್ರಕಾಶನದ ಹಿಂದಿನ ಉದ್ದೇಶವೆಂದು ನನ್ನ ಭಾವನೆ.

ಇನ್ನೂ ಒಂದು ಮಾತನ್ನು ಹೇಳಬಯಸುತ್ತೇನೆ. ದೇಶಾದ್ಯಂತ ಪ್ರಕಾಶನದ ಕಾರ್ಯಕ್ರಮದಲ್ಲಿ ಅಕ್ಷರ ಚಿಂತನಗ್ರಂಥ ಮಾಲೆಯ ಪ್ರಕಾಶನ ಒಂದು ತುದಿಯಾಗಿದ್ದರೆ, ನಮ್ಮ ನವಸಾಕ್ಷರರನ್ನು ತಯಾರು ಮಾಡುವ ಪ್ರಕಾಶನ ಇನ್ನೊಂದು ತುದಿಯಾಗಿದೆ. ಆದ್ದರಿಂದ ಪ್ರಕಾಶನದ ಉದ್ದೇಶದ ಬೆಳಕಿನಲ್ಲಿಯೇ ಈ ಗ್ರಂಥಗಳನ್ನು ಬೆಲೆಗಟ್ಟುವುದು ಹೆಚ್ಚು ಫಲಪ್ರದವಾಗಿದೆ.



# ಪುನರ್‌ಮೌಲ್ಯೀಕರಣ ಮಾಲೆ

*ಮಲೇಪುರಂ ಜಿ. ವೆಂಕಟೇಶ*

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಈ ಮಾಲೆಯು ನಿರ್ದಿಷ್ಟ ಪರಿಕಲ್ಪನೆಗಳ ನೆಲೆಯಿಂದ ನಡೆಸುವ ಹೊಸ ಹುಡುಕಾಟವಾಗಿದೆ. ಈ ಮಾಲೆಯಲ್ಲಿ ಹನ್ನೆರಡು ಪುಸ್ತಕಗಳು ಪ್ರಕಟಗೊಂಡಿವೆ.

''ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕತಿ'' ಪುಸ್ತಕವು ಸಂಸ್ಕತಿಯ ಎರಡು ಭಿನ್ನ ನೆಲೆಗಳನ್ನು ಪರಿಶೀಲಿಸುತ್ತದೆ. ಪ್ರಧಾನ ಮತ್ತು ಅಧೀನವೆಂಬ ಪರಿಕಲ್ಪನೆಗಳನ್ನು ಸಾಹಿತ್ಯಕ ನೆಲೆಗಳಲ್ಲೂ ನೋಡಲಾಗಿದೆ. ಕಳೆದ ಅರುವತ್ತು ದಶಕಗಳ ಕಾಲ ಸಾಹಿತ್ಯ ಮತ್ತು ಸಂಸ್ಕೃತಿ ಕುರಿತ ಚಿಂತನೆಯ ಸೀಳುನೋಟಗಳ ಬಹುರೂಪಿ ಗ್ರಹಿಕೆಯಾಗಿದೆ. ಬಹುಮುಖ್ಯವಾಗಿ ಕೆ.ವಿ.ನಾರಾಯಣ. ಬಸವರಾಜ ಕಲ್ಗುಡಿ ಮತ್ತು ಎಚ್.ಎಸ್.ಶಿವಪ್ರಕಾಶರ ಲೇಖನಗಳು ಹೊಸ ನೋಟಗಳಿಂದ ಕೂಡಿವೆ. ಉಳಿದ ಲೇಖನಗಳು ಆಯಾ ಕಾಲಘಟ್ಟಗಳ ಸಂಕೀರ್ಣ ಸ್ವರೂಪ ಮತ್ತು ಪ್ರಕ್ರಿಯೆಯನ್ನು ಅರಿಯಲು ಹಾತೊರೆಯುತ್ತವೆ. ಪ್ರಾಚೀನ ಮತ್ತು ಮಧ್ಯಕಾಲೀನ ಸಂಸ್ಕೃತಿ ನೆಲೆಯನ್ನು ಅರಿಯಲು ಈ ಪುಸ್ತಕವು ಹೊರದಾರಿಗಳನ್ನು ನಿರ್ಮಿಸುತ್ತದೆ. ಕಳೆದ ಅರುವತ್ತು ವರ್ಷಗಳ ಸಂಸ್ಕೃತಿ ಸಂಬಂಧಿ ವ್ಯಾಖ್ಯಾನಗಳನ್ನು ಇಲ್ಲಿ ಪುರ್ನವಿಮರ್ಶೆಗೆ ಒಳಪಡಿಸಲಾಗಿದೆ.

''ಕನ್ನಡ ಸಾಹಿತ್ಯದಲ್ಲಿ ಹಿಂಸೆಯ ಸ್ವರೂಪ'' ಪುಸ್ತಕದಲ್ಲಿ ಹಿಂಸೆಯ ಸ್ವರೂಪವನ್ನು ಮನಃಶಾಸ್ತ್ರ ಮತ್ತು ಸಮಾಜಶಾಸ್ತ್ರಗಳ ನೆಲೆಯಲ್ಲಿ ನೋಡಲಾಗಿದೆ. ಕೆ.ಜಿ.ನಾಗರಾಜಪ್ಪ ಅವರ ಲೇಖನ ಸಾಕಷ್ಟು ದೀರ್ಘವಾಗಿದ್ದು ಮಧ್ಯಕಾಲೀನ ಕನ್ನಡಸಾಹಿತ್ಯದ ವಿಸ್ತೃತ ಭಿತ್ತಿಯನ್ನು ಕಟ್ಟಿಕೊಡುತ್ತ ಧರ್ಮಮೂಲವಾದ ಹಿಂಸೆಯ ಸ್ವರೂಪವನ್ನು ಮನನೀಯವಾಗಿ ವಿಶ್ಲೇಷಿಸುತ್ತದೆ. ಕೆ.ವಿ.ನಾರಾಯಣರ ಲೇಖನವು ಹಿಂಸೆಯ ಸ್ವರೂಪವನ್ನು ಅದರ ಆಕೃತಿ ವಿಶೇಷವನ್ನು ಕುರಿತು ಚಿಂತಿಸುತ್ತದೆ. ದಲಿತ - ಬಂಡಾಯ, ಪ್ರಗತಿಶೀಲ ಮತ್ತು ನವ್ಯದ ಮಾರ್ಗಗಳಲ್ಲಿನ ಹಿಂಸೆಯ ಸ್ವರೂಪವನ್ನು ಒರೆಗೆ ಹಚ್ಚುವ ಲೇಖನಗಳೂ ಇವೆ.

''ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ '' ಪುಸ್ತಕದ ಲೇಖನಗಳಲ್ಲಿ ಶೋಧನೆಯ ಕಡೆಗೆ ಒಲವು ಇದೆ. ಇಲ್ಲಿರುವ ಲೇಖನಗಳಲ್ಲಿ ತಕ್ಕಮಟ್ಟಿಗೆ ಅಸ್ಪೃಶ್ಯತೆಯ ವಿವೇಚನೆ ನಡೆದಿದೆ. ಶಾಸನ, ಪ್ರಾಚೀನ ಸಾಹಿತ್ಯ, ಮಧ್ಯಕಾಲಿನ ಸಾಹಿತ್ಯದಲ್ಲಿ ಅಸ್ಪೃಶ್ಯತೆ ಕುರಿತ ಚಿಂತನೆಯು ಗಟ್ಟಿ ಮುಟ್ಟಾಗಿದೆ. ಶಾಸನ ಮತ್ತು ಪ್ರಾಚೀನ ಸಾಹಿತ್ಯ ಕುರಿತ

ಲೇಖನಗಳಲ್ಲಿ ಶೂದ್ರ ಮತ್ತು ಅಸ್ಪೃಶ್ಯ ಕಲ್ಪನೆಗಳ ಸಾಹಿತ್ಯವು ಮಧ್ಯಕಾಲೀನ ಸಾಹಿತ್ಯದಲ್ಲಿ ಅಸ್ಪೃಶ್ಯತೆಯೆಂಬ ಲೇಖನದಲ್ಲಿ ಗೈರುಹಾಜರಿಯಾಗಿದೆ.

''ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ'' ಒಂದು ವಿಶೇಷ ಬಗೆಯ ಪುಸ್ತಕ. ಒಂಬತ್ತು ಲೇಖನಗಳಿರುವ ಈ ಪುಸ್ತಕದ ''ಆಶಯ ಲೇಖನ''ವು ಒಂದು ಹಂತದಲ್ಲಿ ಸಮಗ್ರನೆಲೆಯಿಂದ ಗ್ರಹಿಸುವ ಶಕ್ತಿಯನ್ನು ಪಡೆದಿದೆ. ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಕನ್ನಡ ಸಾಹಿತ್ಯದ ವಿವಿಧ ಘಟ್ಟಗಳಲ್ಲಿ ಇದು ಪ್ರಕ್ರಿಯಾ ರೂಪದಲ್ಲಿ ಬೆಳೆದದ್ದನ್ನೂ ಸಾಹಿತ್ಯವು ಸ್ತ್ರೀಸಂವೇದನೆಯ ಸ್ವರೂಪವನ್ನೂ ಒಂದೆಡೆ ತಂದು ನಿಲ್ಲಿಸುತ್ತದೆ. ಜನಪದ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ ವಿವಿಧ ಮಜಲುಗಳನ್ನು ತಿಳಿಯುವವರಿಗೆ ಹೊಸ ಸಂಗತಿಗಳತ್ತ ಗಮನ ಸೆಳೆಯುತ್ತದೆ.

''ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ''ಯು ಆಸಕ್ತಿದಾಯಕವಾಗಿದೆ. ಇಲ್ಲಿರುವ ಮೂರು ಲೇಖನಗಳೂ ಗಮನಾರ್ಹ. ಬಸವರಾಜ ಕಲ್ಗುಡಿ ಅವರ ಆಶಯ ಲೇಖನವು ಕೆಲವೊಂದು ಪ್ರಶ್ನೆಗಳನ್ನು ಎತ್ತುತ್ತದೆ. ಈ ಪ್ರಶ್ನೆಗಳು ಸಂಸ್ಕೃತಿನಿಷ್ಠವಿರುವಂತೆ ಪ್ರಕ್ರಿಯಾನಿಷ್ಠವೂ ಆಗಿದೆ. ಪ್ರಾಚೀನ ಮತ್ತು ಮಧ್ಯಕಾಲೀನಕ್ಕೆ ಸಂಬಂಧಿಸಿದ ಎರಡು ಲೇಖನಗಳು ಸಾಮಾನ್ಯವಾಗಿವೆ. ವಿವರಣೆಗಳೇ ಅವುಗಳ ಮುಖ್ಯ ಆಸಕ್ತಿ. ಆದರೆ, ನವೋದಯ ಮತ್ತು ನವ್ಯಕಾವ್ಯದ ಬಗೆಗಿನ ನೋಸಂತಿ ಮತ್ತು ಅಮರೇಶ ನುಗಡೋಣಿ ಅವರ ಲೇಖನಗಳು ರಕ್ತ ಮಾಂಸವನ್ನು ಪಡೆದು ಮನುಷ್ಯನ ''ಚೈತನ್ಯ''ವನ್ನು ಹುಡುಕುತ್ತವೆ. ಕುಂ. ವೀರಭದ್ರಪ್ಪನವರ ಲೇಖನ ಆಸಕ್ತಿಯಿಂದ ಕಂಡಿದೆ.''ಕನ್ನಡ ಸಾಹಿತ್ಯದಲ್ಲಿ ಯುದ್ಧ ಮತ್ತು ಶಾಂತಿ ''ಪುಸ್ತಕದಲ್ಲಿ ಬಂಡಾಯ - ದಲಿತ ಸಾಹಿತ್ಯವನ್ನು ಅಧೀಕರಿಸಿಕೊಂಡು ನಡೆಸುವ ಚರ್ಚೆ ಸ್ವಾರಸ್ಯವಾಗಿದೆ.

ಆಧುನಿಕ ಸಮಾಜದ ಒತ್ತಡಗಳು ಉಂಟುಮಾಡುವ ನೋವಿನ ತಳಮಳಗಳು ವಿಭಿನ್ನವಾಗಿವೆ. ಈ ಹಿನ್ನೆಲೆಯಲ್ಲಿ ರೂಪಿತಗೊಂಡಿರುವ ''ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು''ಗಮನಿಸಬೇಕಾದ ಕೃತಿ. ಎಚ್.ಎಸ್.ರಾಘವೇಂದ್ರ ರಾವ್ ಅವರ ಆಶಯ ಲೇಖನವು ನೋವಿನ ಪರಿಕಲ್ಪನೆಗೆ ಇರುವ ಆಯಾಮಗಳನ್ನು ವಿಸ್ತರಿಸುತ್ತ ವಿಶ್ಲೇಷಿಸುತ್ತದೆ. ''ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ'' ಪುಸ್ತಕವು ವಿಶಿಷ್ಟವಾಗಿದೆ. ಇದಕ್ಕೆ ಎರಡು ಮುಖ್ಯಕಾರಣಗಳು. ಮೊದಲನೆಯದು ''ಪ್ರಭುತ್ವ'' ದ ಬಗೆಬಗೆಯ ಆಶಯಗಳ ನೆಲೆಯನ್ನು ಹುಡುಕುವುದು. ಎರಡನೆಯದು ಪ್ರಭುತ್ವ ಮತ್ತು ಜನಸಮುದಾಯದ ಕ್ರಿಯೆ – ಪ್ರತಿಕ್ರಿಯೆಗಳ ಮೌನ. ಎಚ್.ಎಸ್.ಶಿವಪ್ರಕಾಶರ ''ಆಶಯ ಲೇಖನ''ವು ಸಮರ್ಥವಾಗಿ ''ಚಾರಿತ್ರಿಕ ಮೌನ'' ವನ್ನು ತಿಳಿಸುತ್ತದೆ.

''ಕನ್ನಡ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣ'' ಒಂದು ವಿಶಿಷ್ಟ ಅಧ್ಯಯನವಾಗಿದೆ. ಪ್ರಾಚೀನ ಮಧ್ಯಕಾಲೀನ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳು ಸಾಕಷ್ಟು ಹೊಸದಾಗಿವೆ. ಪುರುಷೋತ್ತಮ ಬಿಳಿಮಲೆ ಅವರ ಜನಪದ ಸಾಹಿತ್ಯದಲ್ಲಿ ಚರಿತ್ರೆ, ಪುರಾಣ ಲೇಖನ ಸಮರ್ಪಕವಾಗಿ ಮೂಡಿಬಂದಿದೆ. ''ಕನ್ನಡ ಸಾಹಿತ್ಯದಲ್ಲಿ ನಿಸರ್ಗ ಮತ್ತು ಸಾಮಾಜಿಕ ಸ್ಥಿತ್ಯಂತರ'' ಪುಸ್ತಕದಲ್ಲಿ ಸಾಮಾಜಿಕ ಸ್ಥಿತ್ಯಂತರಗಳ

ಹಿನ್ನೆಲೆಯಲ್ಲಿ ನಿಸರ್ಗವನ್ನು ನೋಡುವ ದೃಷ್ಟಿಕೋನ ಹೊಸ ಬಗೆಯದೇ ಆಗಿದೆ. ವಿ. ಚಂದ್ರಶೇಖರ ನಂಗಲಿ ಅವರ ಲೇಖನ ಮಧ್ಯಕಾಲಿನ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಒಳ್ಳೆಯ ಗ್ರಹಿಕೆಯಿಂದ ಕೂಡಿದೆ. ''ಕನ್ನಡ ಸಾಹಿತ್ಯದಲ್ಲಿ ಗ್ರಾಮೀಣ ಬದುಕಿನ ಅಭಿವ್ಯಕ್ತಿ''ಈ ದಿಕ್ಕಿನಲ್ಲಿ ಒಂದು ಉತ್ತಮ ಕೃತಿ. ಜನಪದದ ಒಡಲಿನಿಂದಲೇ ಮಾತನಾಡಲು ಶುರುಮಾಡುವ ಇಲ್ಲಿನ ಲೇಖನಗಳು ವಿಭಿನ್ನ ನೆಲೆಗಳಲ್ಲಿ ಸಂಚರಿಸಿದರೂ ಸಂವೃತ ನೆಲೆಯಲ್ಲಿ ನಿಲ್ಲುತ್ತವೆ. ನಗರಕೇಂದ್ರಿತ ಮತ್ತು ಗ್ರಾಮಕೇಂದ್ರಿತ ಚಿಂತನೆಗಳು ಈ ಹೊತ್ತಿಗೂ ಅತ್ಯಂತ ಉಪಯೋಗ. ಈ ಪರಿಕಲ್ಪನೆಗಳನ್ನು ಬಳಸಿಕೊಂಡು ಪ್ರಾಚೀನ - ಮಧ್ಯಕಾಲೀನ ಮತ್ತು ಆಧುನಿಕ ಗ್ರಾಮೀಣ ಬದುಕನ್ನು ಹುಡುಕುವುದೇ ಹೊಸ ಸಾಹಸ. ಇಲ್ಲಿಯ ಹಲವು ಲೇಖನಗಳು ಆ ಬಗೆಯ ಯಶಸ್ಸನ್ನು ಪಡೆದಿವೆ. ಪಿ. ಕೆ. ಖಂಡೋಬಾ, ಶಿಷ್ಟ ಸಾಹಿತ್ಯದ ಮೀಮಾಂಸೆಯನ್ನು ಜಾನಪದ ಮೀಮಾಂಸೆಯ ಆಶಯವನ್ನು ಒಂದೆಡೆಗೆ ತರುವ ಕೆಲಸ ಮಾಡಿದ್ದಾರೆ. ಶಿಷ್ಟಸಾಹಿತ್ಯದಲ್ಲಿರುವ 'ಜಾನಪದೀಯತೆ'ಯನ್ನು ಸಮಗ್ರ ನೆಲೆಯಿಂದ ಗುರುತಿಸಿದ್ದಾರೆ. ಆದರೆ, 'ಜಾನಪದೀಯತೆ' ಎನ್ನುವ ಮಾತಿನ ವ್ಯಾಪ್ತಿಯನ್ನು ಇದರ ಪ್ರಕ್ರಿಯಾ ಸ್ವರೂಪವನ್ನು ಗ್ರಹಿಸಬೇಕಾದ ಅನಿವಾರ್ಯತೆ ನಮ್ಮ ಮುಂದಿದೆ.

ಈ ಕೃತಿಗಳನ್ನು ಈಗಾಗಲೇ ಸಿದ್ಧವಾಗಿರುವ ಪುಸ್ತಕಗಳ ಸ್ವರೂಪದಲ್ಲೇ ಗ್ರಹಿಸುವುದು ಒಂದು ಮಾರ್ಗವೇನೊ ಸರಿ. ಆದರೆ, ಇಡೀ ಪುಸ್ತಕಗಳನ್ನು ಅಡ್ಡಕೊಯ್ತಗಳಲ್ಲಿ ನೋಡುವುದು ಇನ್ನಷ್ಟು ಉಪಯುಕ್ತ.



# ಭಾಗ — ೨

## ಅಂದು ಇಂದು ಜೋಡಿಸುವ ನೆನಪು

* ಕಿಟೆಲ್ ಕೋಶಕ್ಕೆ ನೂರುವರ್ಷ
* ಕನ್ನಡ ಭಾಷಾ ಪಂಡಿತ ಪರೀಕ್ಷೆಗೆ ನೂರುವರ್ಷ
* ಕನ್ನಡ ಪತ್ರಿಕೋದ್ಯಮಕ್ಕೆ ೧೫೦ ವರ್ಷ
* ಮಹಾಮೂರ್ತಿಗೆ ಮಹಾಮಜ್ಜನ

# ಕಿಟೆಲ್ ಕೋಶಕ್ಕೆ ನೂರು ವರ್ಷ

*ಕೆ.ವಿ. ನಾರಾಯಣ*

---

ನಿಘಂಟುಗಳು ಕನ್ನಡಕ್ಕೆ ಹೊಸವೇನಲ್ಲ. ಕನ್ನಡ ಪದಕೋಶಕ್ಕೆ ಸಂಸ್ಕೃತ ಅರ್ಥವ್ಯಾಖ್ಯೆ ನೀಡುವ ನಿಘಂಟುಗಳೂ ರಚಿತವಾಗಿವೆ. ನಿಘಂಟು ಎಂದರೆ ಅರ್ಥಕೋಶ ಎಂದಷ್ಟೇ ತಿಳಿದರೆ ಆಗ ದ್ವಿಭಾಷಿಕ ನಿಘಂಟುಗಳು ಕನ್ನಡದಲ್ಲಿ ಇದ್ದವೆನ್ನಬಹುದು. ಆದರೆ ನಿಘಂಟು ಕೇವಲ ಅರ್ಥಕೋಶವಲ್ಲ. ಈ ಅಂಶವನ್ನು ಕನ್ನಡದ ಮಟ್ಟಿಗೆ ವ್ಯವಸ್ಥಿತವಾಗಿ ಸಾಧಿಸಿ ತೋರಿಸಿದ ಯಶಸ್ಸು ಕಿಟೆಲ್‌ಕೋಶಕ್ಕೆ ಸೇರಬೇಕು.

ಕಿಟೆಲ್ ಸಂಪಾದಿಸಿದ ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು ಇಂದಿಗೂ ಒಂದು ಅಪೂರ್ವ ದಾಖಲೆ. ಇದಕ್ಕೆ ಕಾರಣಗಳನ್ನು ಒಂದೊಂದಾಗಿ ನೋಡೋಣ.

೧. ನಮೂದುಗಳಿಗಾಗಿ ಕೇವಲ ಲಿಖಿತ ದಾಖಲೆಗಳನ್ನು ಮಾತ್ರ ಆಧರಿಸದೆ ಆಡುಮಾತಿನ ರೂಪಗಳನ್ನೂ ದಾಖಲಿಸಿರುವುದು. ನೂರಾರು ಪ್ರಯೋಗಗಳನ್ನು ಜನರ ನುಡಿಯಿಂದ ಕಿಟೆಲ್ ಆಯ್ದು ದಾಖಲಿಸಿದ್ದಾರೆ. ಕನ್ನಡ ಪ್ರದೇಶದ ವೈವಿಧ್ಯಗಳೆಲ್ಲ ಪ್ರತಿನಿಧಿತವಾಗಿಲ್ಲವೆಂಬ ಕೊರತೆಯನ್ನು ಹೇಳಬಹುದು. ನೂರು ವರ್ಷದ ಹಿಂದಿನ ಈ ಪ್ರಯತ್ನಕ್ಕೆ ಇಂಥ ಕೊರತೆಯ ಆರೋಪ ಸಲ್ಲದು. ಏಕೆಂದರೆ ಇಂದಿಗೂ ನಮಗೆ ಅಂಥ ಪ್ರಾತಿನಿಧಿಕ ಪದಕೋಶವನ್ನು ರೂಪಿಸುವುದು ಸಾಧ್ಯವಾಗಿಲ್ಲ.

೨. ನಮೂದುಗಳ ಬಳಕೆಯನ್ನು ತೋರಿಸಲು ಉಲ್ಲೇಖಗಳನ್ನು ನೀಡಿರುವುದು. ಆಗ ಲಭ್ಯವಿದ್ದ ಪರಿಚಿತವಿದ್ದ ಕನ್ನಡ ಕೃತಿಗಳಿಂದ ಪ್ರಯೋಗಗಳನ್ನು ಆಯ್ದು ನೀಡಲಾಗಿದೆ. ಜನರ ನುಡಿಗಟ್ಟುಗಳನ್ನು ಗಾದೆ ಮಾತುಗಳನ್ನು ಉಲ್ಲೇಖಗಳನ್ನಾಗಿ ಆರಿಸಿಕೊಟ್ಟಿದ್ದಾರೆ. ಕನ್ನಡದ ನೂರಾರು ವೈವಿಧ್ಯಮಯ ಗಾದೆಗಳ ಸಂಗ್ರಹವೇ ಈ ಕೋಶದಲ್ಲಿದೆ. ಲಿಖಿತ ದಾಖಲೆಗಳಿಂದ ಲಕ್ಷ್ಯಗಳನ್ನು ನೀಡಿದ್ದು ಗಮನಾರ್ಹ ಪ್ರಯೋಗ.

೩. ಅರ್ಥವಿವರಣೆ ನೀಡುವಾಗ ಮೂಲ ನಮೂದುಗಳಿಗೆ ಇಂಗ್ಲಿಷಿನಲ್ಲಿ ಅರ್ಥ ನೀಡಿ ಪಾರಿಭಾಷಿಕ ರೂಪಗಳನ್ನೂ ಒದಗಿಸಲಾಗಿದೆ. ಸಸ್ಯವರ್ಗದ ನಾಮರೂಪಗಳನ್ನು ಈ ಮಾತಿಗೆ ನಿದರ್ಶನವಾಗಿ ನೋಡಬಹುದು. ದೇಶೀಯ ಪ್ರಾಣಿಸಸ್ಯವರ್ಗಕ್ಕೆ ಈ ಕೋಶ ನೀಡಿರುವ ಪಾರಿಭಾಷಿಕ ಸಮಾನಾರ್ಥಕಗಳ ಪ್ರಯೋಜನವನ್ನು ನಾವಿನ್ನೂ ಪಡೆದುಕೊಳ್ಳಬೇಕಾಗಿದೆ.

ಕಿಟೆಲ್ ಈ ಕೋಶ ರಚಿಸುವ ಹೊತ್ತಿಗೆ ಕಾಲ್ಡ್‌ವೆಲ್ಲರು ದ್ರಾವಿಡ ಭಾಷಾವರ್ಗ

ಹಾಗೂ ಆ ವರ್ಗದ ಭಾಷೆಗಳ ವ್ಯಾಕರಣವನ್ನು ಆಗಲೇ ಚರ್ಚಿಸಿದ್ದರು. ಸ್ವತಃ ಕಿಟೆಲ್ ಕನ್ನಡ ಶಾಸ್ತ್ರಗ್ರಂಥಗಳ, ಅದರಲ್ಲೂ ಕೇಶಿರಾಜನ ಶಬ್ದಮಣಿದರ್ಪಣದ ನಿಕಟಪರಿಚಯ ಪಡೆದಿದ್ದರು. ಇಂಗ್ಲಿಷಿನಲ್ಲಿ ಕನ್ನಡಭಾಷೆಯ ಬೆಳವಣಿಗೆಯನ್ನು ಆಧರಿಸಿದ ವ್ಯಾಕರಣ ರಚಿಸಲು ಸಿದ್ಧತೆ ಮಾಡಿಕೊಳ್ಳುತ್ತಿದ್ದರು. ಇವೆಲ್ಲದರ ಸಮೂಹ ಪರಿಣಾಮ ಈ ಕೋಶದಲ್ಲಿದೆ. ಜ್ಞಾತಿ ಭಾಷೆಗಳಿಂದ ಸಂವಾದಿ ರೂಪಗಳನ್ನು ದಾಖಲು ಮಾಡುವ ಕ್ರಮವನ್ನು ಕಿಟೆಲ್ ಬಳಸಿದ್ದಕ್ಕೆ ಈ ಮೇಲಿನ ಸಂದರ್ಭವೂ ಕಾರಣ. ಹೀಗೆ ಸಂವಾದಿ ರೂಪಗಳ ಸಿದ್ಧ ಆಕರಗಳೇನು ಆಗ ಲಭ್ಯವಿರಲಿಲ್ಲ. ಆಯಾ ಭಾಷೆಯ ಕೋಶ, ವ್ಯಾಕರಣಗಳನ್ನು ಬಳಸಿ ಈ ಪದಪಟ್ಟಿಯನ್ನು ಪಡೆಯಬೇಕಿತ್ತು.

ಇಂಗ್ಲಿಷಿನಲ್ಲಿ ಈ ಕೋಶಕ್ಕೆ ಒಂದು ಉಪೋದ್ಘಾತವಿದೆ. ಕನ್ನಡ ಭಾಷೆಯ ಬಗ್ಗೆ ಈ ಭಾಗದಲ್ಲಿ ಚರ್ಚಿಸುತ್ತಲೇ ಕಿಟೆಲ್ ಒಂದು ಮಹತ್ವದ ಸಂಗತಿಯನ್ನು ದಾಖಲಿಸಿದ್ದಾರೆ. ಭಾರತೀಯ ಭಾಷೆಗಳಿಗೆಲ್ಲ ಸಂಸ್ಕೃತ 'ಕೊಡುವ ಭಾಷೆ'ಯಾಗಿದೆ. ಆದರೆ ಅನ್ಯ ಭಾಷಾವರ್ಗದ ಭಾಷೆಗಳಿಂದ ಅದು ತೆಗೆದುಕೊಂಡಿದೆ ಕೂಡ. ಹೀಗೆ ತೆಗೆದುಕೊಂಡ ಪದಗಳು ಕಡಿಮೆ ಇರಬಹುದು. ಆದರೆ ಅಂಥ ಪದಗಳಿವೆ. ಪಾರಂಪರಿಕ ವೈಯಾಕರಣರು ಇಂಥ ಪದಗಳನ್ನು ಗುರುತಿಸಿದ್ದರು. ಆದರೆ ಅವು ಎರಡೂ ಭಾಷೆಗಳಿಗೂ ಸಮಾನವೆಂದಷ್ಟೇ ತಿಳಿದಿದ್ದರು. ಆದರೆ ಕಿಟೆಲ್ ಇದೇ ಅಂಶವನ್ನು ಬೇರೆ ರೀತಿಯಿಂದ ವಿವರಿಸಿದ್ದಾರೆ. ಈ ಪದಗಳು ಸಂಸ್ಕೃತದ ಕಡೆಗೆ ಪಯಣಿಸಿವೆ ಎಂಬುದೇ ಆ ವಿವರಣೆ.

ಮೇಲುನೋಟಕ್ಕೆ ಕಿಟೆಲ್‌ರ ಈ ವಿವರಣೆ ಹಾಗೂ ಆ ಮೂಲಕ ಸಾಬೀತು ಮಾಡಿದ ಅಂಶ ತೀರಾ ಸಾಮಾನ್ಯ ಅನ್ನಿಸಲು ಸಾಧ್ಯ. ಆದರೆ ಈ ಸಂಗತಿಗೆ ಬೇರೊಂದು ಮಹತ್ವವಿದೆ. ಭಾರತೀಯ ಭಾಷೆಗಳಿಗೆ ವ್ಯಾಕರಣ ರಚಿಸಿದ, ಕೋಶರೂಪಿಸಿದ ಐರೋಪ್ಯ ಮಿಷನರಿಗಳು ಪರೋಕ್ಷವಾಗಿ ಒಂದು ಸಾಂಸ್ಕೃತಿಕ ವಾಗ್ವಾದವನ್ನು ರೂಪಿಸಿದ್ದಾರೆ. ಭಾರತೀಯ ಸಂಸ್ಕೃತಿಯನ್ನು ಸಂಸ್ಕೃತ ಕೇಂದ್ರಿತವಾಗಿ ನೋಡುವ ಪ್ರವೃತ್ತಿಯನ್ನು ನಿರಾಕರಿಸಿ ಹಲವಾರು ಪ್ರಧಾನ ಸಂಸ್ಕೃತಿಗಳ ನೇಯ್ಗೆಯೆಂದು ನೋಡಲು ಮಿಷನರಿಗಳ ಈ ಯತ್ನಗಳು ಪ್ರೇರೇಪಿಸುತ್ತದೆ. ಹಾಗಾಗಿ ಕಿಟೆಲ್ ನಿಘಂಟು ಕನ್ನಡದ ಒಂದು ಶ್ರೇಷ್ಠ ಕೋಶ ಮಾತ್ರವಲ್ಲ; ಕನ್ನಡದ ಅಂತಃಸತ್ತ್ವವನ್ನು ಸ್ಥಾಪಿಸುವ ಯತ್ನವೂ ಆಗಿದೆ.

ಈ ನೂರು ವರ್ಷಗಳಲ್ಲಿ ಕಿಟೆಲ್‌ಕೋಶವನ್ನು ಪರಿಷ್ಕರಿಸುವ ಯತ್ನ ಮದರಾಸ್ ವಿಶ್ವವಿದ್ಯಾಲಯದ ವತಿಯಿಂದ ನಡೆದಿದೆ. ಹೆಚ್ಚಿನ ನಮೂದುಗಳು, ಅಧಿಕ ಉಲ್ಲೇಖಗಳು, ದೇಶೀ ಮತ್ತು ಅನ್ಯದೇಶ್ಯ ಪದಗಳನ್ನು ಬೇರ್ಪಡಿಸಲು ಮುದ್ರಣದಲ್ಲಿ ಕೆಲವು ಸೂಚನೆಗಳು ಇತ್ಯಾದಿಗಳನ್ನೊಳಗೊಂಡು ನಾಲ್ಕು ಸಂಪುಟಗಳಲ್ಲಿ ಕಿಟೆಲ್‌ಕೋಶ ಪ್ರಕಟಗೊಂಡಿದೆ. ಕಿಟೆಲ್‌ಕೋಶದ ಗಾದೆಗಳನ್ನು ಹೊರತೆಗೆದು ಪ್ರತ್ಯೇಕ ಪುಸ್ತಕವನ್ನಾಗಿ ಪ್ರಕಟಿಸಲಾಗಿದೆ. ಈಚೆಗೆ ಕಿಟೆಲ್‌ಕೋಶ ಯಥಾಮುದ್ರಣಗೊಂಡಿದೆ; ಅಭ್ಯಾಸಿಗಳಿಗೆ ಸುಲಭ ಲಭ್ಯವಿದೆ. ಪರಾಮರ್ಶನ ಗ್ರಂಥವೊಂದು ದೇಶಭಾಷೆಯೊಂದರಲ್ಲಿ ಇಷ್ಟು ಪ್ರಭಾವಶಾಲಿಯಾಗುವ ಪ್ರಸಂಗಗಳು ವಿರಳ.

## ಕನ್ನಡ ಭಾಷಾ ಪಂಡಿತ ಪರೀಕ್ಷೆಗೆ ನೂರುವರ್ಷ

ಸಾ. ಮಂಚಯ್ಯ

ಭಾಷೆ ಮಾನವನ ಜೀವನದಲ್ಲಿ ಅತಿ ಪ್ರಮುಖ ಸ್ಥಾನ ಪಡೆದಿದೆ. ಶಿಕ್ಷಣದಲ್ಲಿ ಭಾಷೆ ಪ್ರಧಾನ ಪಾತ್ರ ವಹಿಸುತ್ತದೆ. ಮಕ್ಕಳು ಶಾಲೆಗಳಲ್ಲಿ ತಾವು ಕಲಿಯುವ ಇತಿಹಾಸ, ಭೂಗೋಳ, ಪೌರನೀತಿ, ವಿಜ್ಞಾನ ಮುಂತಾದ ವಿಷಯಗಳನ್ನು ಶಿಕ್ಷಕರ ಬೋಧನೆಯ ಮೂಲಕ ಮತ್ತು ಪಠ್ಯ ಪುಸ್ತಕಗಳು ಮತ್ತು ಇತರ ಪೂರಕ ಪುಸ್ತಕಗಳನ್ನು ಓದಿ ವಿಷಯವನ್ನು ಅರ್ಥಮಾಡಿಕೊಳ್ಳಬೇಕಾದರೆ, ಹಾಗೆ ಪಡೆದ ಜ್ಞಾನವನ್ನು ತಮ್ಮದೇ ಆದ ಭಾಷೆಯಲ್ಲಿ ಇತರರಿಗೆ ತಿಳಿಸಬೇಕಾದರೆ ಭಾಷಾ ಜ್ಞಾನ ಅಗತ್ಯ. ಭಾಷಾ ಜ್ಞಾನ ಸಾಕಷ್ಟಿಲ್ಲದಿದ್ದರೆ ಶಿಕ್ಷಕರು ಬೋಧಿಸಿದುದನ್ನು, ಅರ್ಥಮಾಡಿಕೊಳ್ಳುವುದಾಗಲಿ, ಇತರ ಪುಸ್ತಕಗಳನ್ನು ಓದಿ ವಿಷಯ ಸಂಗ್ರಹಿಸುವುದಾಗಲಿ ಸಾಧ್ಯವಿಲ್ಲ. ಹಾಗೆಯೇ ತಮಗೆ ತಿಳಿದುದನ್ನು ಸರಳವೂ ಸ್ಪಷ್ಟವೂ ಆದ ಭಾಷೆಯಲ್ಲಿ ಇತರರಿಗೆ ತಿಳಿಸುವುದೂ ಕಷ್ಟ. ಶಾಲಾ ಪಠ್ಯವಸ್ತುವಿನಲ್ಲಿ ಇಷ್ಟೊಂದು ಪ್ರಮುಖವಾಗಿರುವ ಭಾಷೆಯ ಬೋಧನೆ ಮತ್ತು ಭಾಷಾ ಶಿಕ್ಷಕರನ್ನು ಅಲಕ್ಷ್ಯಮಾಡಿದ್ದೇವೆಯೆ? ಇದಕ್ಕೆ ಉತ್ತರ 'ಹೌದು' ಎಂದೇ. ಭಾಷಾ ಶಿಕ್ಷಕರಿಗೆ ಕಾರ್ಯಾಗಾರಗಳು ಬೇಡವೇ? ಅವರು ಭಾಷಾ ಬೋಧನೆಗೆ ಸಂಬಂಧಿಸಿದಂತೆ ನಡೆಸಿರುವ ಸಂಶೋಧನೆಯ ಪರಿಚಯ ಮಾಡಿಕೊಳ್ಳಬೇಡವೇ?

ಪ್ರಾಥಮಿಕ ಮತ್ತು ಪ್ರೌಢ ಶಾಲಾ ಹಂತದಲ್ಲಿ ಕಲಿಸುವ ಇಂಗ್ಲಿಷು, ಗಣಿತ, ವಿಜ್ಞಾನ ಮುಂತಾದ ವಿಷಯಗಳನ್ನು ಪರಿಣಾಮಕಾರಿಯಾಗಿ ಬೋಧಿಸುವುದು ಹೇಗೆ ಎಂಬುದನ್ನು ಶಿಕ್ಷಕರಿಗೆ ತಿಳಿಸಲು ಸಂಕಿರಣಗಳು, ಕಾರ್ಯಾಗಾರಗಳು ಮತ್ತು ಅಲ್ಪಕಾಲದ ತರಬೇತಿ ಮೂಲಕ ಪರಿಚಯಿಸಿ ಕೊಡುತ್ತೇವೆ. ಆದರೆ ಕನ್ನಡ ಭಾಷಾ ಬೋಧನೆಗೆ ವಿಶೇಷ ತರಬೇತು ಅನಗತ್ಯವೆಂದೂ ಇಲ್ಲ ಅದನ್ನು ಹೇಗೆ ಬೋಧಿಸಿದರೂ ಚಿಂತೆಯಿಲ್ಲ ಎಂದೂ ಭಾವಿಸಿ ಅದಕ್ಕೆ ಸಂಬಂಧಿಸಿದಂತೆ ಆಲೋಚಿಸುವುದನ್ನೇ ಕೈಬಿಟ್ಟಿದ್ದೇವೆ. ಕನ್ನಡ ಜಾಗೃತಿ ವರ್ಷ ಆಚರಿಸುತ್ತಿರುವ ಈ ವರ್ಷ ಈ ವಿಷಯಕ್ಕೆ ಆದ್ಯತೆ ಕೊಟ್ಟು ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕನ್ನಡ ಭಾಷಾಬೋಧೆ ಸಮರ್ಪಕವಾಗಿ ಸಾಗಿ ಆಯಾಯಾ ಹಂತದಲ್ಲಿ ಮಕ್ಕಳು ಬೆಳೆಸಿಕೊಳ್ಳಬೇಕೆಂದು ನಿರ್ಧರಿಸುವಷ್ಟು ಭಾಷಾಶಕ್ತಿಯನ್ನು ಬೆಳೆಸಿಕೊಳ್ಳಲು ನೆರವಾಗಬೇಕು. ಇದಕ್ಕಾಗಿ ಶಿಕ್ಷಕರಿಗೆ ವಿಶೇಷ ತರಬೇತು ಬೇಕು.

ಕರ್ನಾಟಕದಲ್ಲಿ ಇಂದು ೨೪ ಹಿಂದಿ ಶಿಕ್ಷಕ ತರಬೇತಿ ಸಂಸ್ಥೆಗಳಿವೆ. ಇವು ಹಿಂದಿ

ಶಿಕ್ಷಕರಿಗೆ ತರಬೇತು ನೀಡುತ್ತವೆ. ಸರ್ಕಾರ ಈ ಸಂಸ್ಥೆಗಳಿಗೆ ಶಿಕ್ಷಕರನ್ನು ನಿಯೋಜನೆಯ ಮೇಲೆ ಕಳುಹಿಸಿಕೊಡುವುದು. ಅವರು ತರಬೇತಿನ ಅವಧಿಯಲ್ಲಿ ಪೂರ್ಣ ವೇತನ ಪಡೆಯುವರು. ಈ ಹಣ ರಾಜ್ಯಕ್ಕೆ ಕೇಂದ್ರದಿಂದ ಸಹಾಯಧನವಾಗಿ ಬರುತ್ತದೆ. ದೇಶಭಾಷೆಗಳು ಬೆಳೆಯಬೇಕು. ಅವು ಎಲ್ಲ ಹಂತದಲ್ಲೂ ಶಿಕ್ಷಣ ಮಾಧ್ಯಮ ಆಗಬೇಕು ಎಂದು ಎತ್ತರದ ಧ್ವನಿಯಲ್ಲಿ ಮಾತನಾಡುತ್ತಿರುವ ಕೇಂದ್ರ ಸರ್ಕಾರ ಅದಕ್ಕೆ ಸಂಬಂಧಿಸಿದಂತೆ ಏನು ಕ್ರಮ ಕೈಗೊಂಡಿದೆ? ಇಲ್ಲವೇ ರಾಜ್ಯ ಸರ್ಕಾರವೇ ಈ ವಿಷಯದಲ್ಲಿ ಯಾವುದೇ ಕ್ರಮ ಕೈಗೊಳ್ಳದೆ ನಿರ್ಲಿಪ್ತತೆಯಿಂದಿದೆಯೇ? ಈ ಪ್ರಶ್ನೆಗೆ ಸರ್ಕಾರವೇ ಉತ್ತರಿಸಬೇಕು.

೧೮೯೩ರ ವರೆಗೂ ಪ್ರೌಢಶಾಲೆಗಳಲ್ಲಿ ಪದವೀಧರ ಶಿಕ್ಷಕರೇ ಕನ್ನಡವನ್ನು ಬೋಧಿಸುತ್ತಿದ್ದರು. ಆದರೆ ಅವರಿಗೆ ಕನ್ನಡ ಸಾಹಿತ್ಯ ಮತ್ತು ಭಾಷೆಗಳಲ್ಲಿ ಆಳವಾದ ಜ್ಞಾನ ಇಲ್ಲದಿದ್ದುದರಿಂದ ವಿದ್ಯಾರ್ಥಿಗಳ ಭಾಷಾಜ್ಞಾನವನ್ನು ಉತ್ತಮಪಡಿಸಿ ಅವರಲ್ಲಿ ಸಾಹಿತ್ಯಾಭಿರುಚಿ ಮೊಳಕೆಯೊಡೆಯುವಂತೆ ಮಾಡುವ ಗುರಿ ಸಾಧಿಸುವುದರಲ್ಲಿ ವಿಫಲರಾಗಿದ್ದರು. ಇದೇ ಕಾಲದಲ್ಲಿ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ, ಮಂಗಳೂರಿನಲ್ಲಿ ಕರ್ನಾಟಕ ಭಾಷಾ ಸಂಜೀವಿನಿ, ಮೈಸೂರಿನಲ್ಲಿ ಕರ್ನಾಟಕ ಭಾಷೋಜ್ಜೀವಿನಿ ಸಭೆಗಳು ಅಸ್ತಿತ್ವದಲ್ಲಿದ್ದು ಕನ್ನಡ ಭಾಷೆಯ ಉನ್ನತ ವ್ಯಾಸಂಗಕ್ಕಾಗಿ ಶ್ರಮಿಸುತ್ತಿದ್ದುವು. ಈ ಯೋಜನೆಯ ಅಂಗವಾಗಿ ಪ್ರೌಢಶಾಲೆಯಲ್ಲಿ ಕನ್ನಡ ಭಾಷೆಯನ್ನು ಸಮರ್ಥವಾಗಿ ಬೋಧಿಸಲು ಕನ್ನಡ ಭಾಷಾ ಶಿಕ್ಷಕರನ್ನು ತಯಾರುಮಾಡಲು ಮೈಸೂರಿನ ಕರ್ನಾಟಕ ಭಾಷೋಜ್ಜೀವಿನಿ ಸಭೆ ೧೮೯೩ರಲ್ಲಿ ಪ್ರಪ್ರಥಮವಾಗಿ 'ಕನ್ನಡ ಪಂಡಿತ ಪರೀಕ್ಷೆ' ನಡೆಸಿತು. ಈ ನಿರ್ಧಾರಕ್ಕೆ ಮಹಾರಾಜರ ಪ್ರೋತ್ಸಾಹವೂ ಇತ್ತು. ಏನೇ ಇರಲಿ ಭಾಷೋಜ್ಜೀವಿನಿ ಸಭೆ ನಡೆಸಿದ ಪಂಡಿತ ಪರೀಕ್ಷೆ ಕರ್ನಾಟಕದಲ್ಲಿ ಪ್ರೌಢ ಶಾಲೆಗಳಲ್ಲಿ ಕನ್ನಡ ಭಾಷಾ ಶಿಕ್ಷಕರನ್ನು ತಯಾರಿಸಲು ಇಟ್ಟ ಮೊದಲ ಹೆಜ್ಜೆ. ಕರ್ನಾಟಕದ ಶಿಕ್ಷಣ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು. ೧೮೯೪ ರಿಂದ ಸರ್ಕಾರವೇ ಅಂದರೆ ಶಿಕ್ಷಣ ಇಲಾಖೆ ಈ ಪರೀಕ್ಷೆ ನಡೆಸುವ ಜವಾಬ್ದಾರಿಯನ್ನು ವಹಿಸಿಕೊಂಡಿತು.

ಪಂಡಿತ ಪರೀಕ್ಷೆ ಕಬ್ಬಿಣದ ಕಡಲೆಯಾಗಿತ್ತು. ಅಧ್ಯಯನದ ಅವಧಿ ನಾಲ್ಕು ವರ್ಷಗಳು. ದೇಶೀಯ ಉಪಾಧ್ಯಾಯರ ಪರೀಕ್ಷೆಯಲ್ಲಿ ಉತ್ತೀರ್ಣರಾದವರು (ವಿ.ಟಿ.ಸಿ.) ಮತ್ತು ಸಂಸ್ಕೃತ ಮಹಾ ಪಾಠಶಾಲೆಯ ಪಂಡಿತ ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಕನ್ನಡ ಪಂಡಿತ ತರಗತಿಗಳಿಗೆ ಪ್ರವೇಶ ಪಡೆಯಲು ಅರ್ಹರಾಗಿದ್ದರು.

ಪಂಡಿತ ಪರೀಕ್ಷೆಯಲ್ಲಿ ಮೂರು ಭಾಗಗಳಿದ್ದುವು. ಒಟ್ಟು ಹತ್ತು ಪ್ರಶ್ನೆ ಪತ್ರಿಕೆಗಳಿದ್ದವು. ಕನ್ನಡ ಕಾವ್ಯ ಗ್ರಂಥ, ಸಂಸ್ಕೃತ ಕಾವ್ಯ ಗ್ರಂಥ, ಕನ್ನಡ ವ್ಯಾಕರಣ ಮತ್ತು ಅನುವಾದ ವಿಷಯವೂ ಇತ್ತು. ಇವುಗಳ ಜೊತೆಗೆ ಗದ್ಯ ರೂಪದ ಕನ್ನಡ ಕವಿತೆಗಳು ಮತ್ತು ಕಂಠಪಾಠದ ಪತ್ರಿಕೆಗಳೂ ಇದ್ದುವು. ಈ ಹತ್ತು ಪತ್ರಿಕೆಗಳಿಗೆ ಒಟ್ಟು ೧೧೨೦ ಅಂಕಗಳು ನಿಗದಿಯಾಗಿದ್ದು ಎರಡು ವರ್ಷಕ್ಕೊಮ್ಮೆ ಪರೀಕ್ಷೆಗಳು ನಡೆಯುತ್ತಿದ್ದವು.

೧೯೩೪ ರಲ್ಲಿ ಅಂದಿನ ಅಗತ್ಯಕ್ಕನುಗುಣವಾಗಿ ಪಂಡಿತ ಪರೀಕ್ಷೆಯ ಪಠ್ಯ ವಸ್ತು ಪರಿಷ್ಕಾರವಾಯಿತು. ಪಂಡಿತ ತರಗತಿಗಳ ಮಧ್ಯಮ ಪರೀಕ್ಷೆಗೆ ಕನ್ನಡ ವ್ಯಾಕರಣ, ಕನ್ನಡ ಛಂದಸ್ಸು ಮತ್ತು ಅಲಂಕಾರ, ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಪ್ರಬಂಧ ಮತ್ತು ಕನ್ನಡ ಗದ್ಯ, ಪದ್ಯ ಮತ್ತು ನಾಟಕ ಒಟ್ಟು ಏಳು ಪತ್ರಿಕೆಗಳು; ಸಂಸ್ಕೃತದಲ್ಲಿ ಸಂಸ್ಕೃತ ವ್ಯಾಕರಣ, ಭಾಷಾಂತರ, ಗದ್ಯ, ಪದ್ಯ ಮತ್ತು ನಾಟಕಗಳನ್ನೊಳಗೊಂಡ ಐದು ಪತ್ರಿಕೆಗಳು ಒಟ್ಟು ೧೨ ಪತ್ರಿಕೆಗಳಿಗೆ ಸಿದ್ಧರಾಗಬೇಕಾಗಿತ್ತು. ಪಂಡಿತ ಪರೀಕ್ಷೆಯ ಉತ್ತಮ (ಅಂತಿಮ) ಪರೀಕ್ಷೆಗೆ ಕನ್ನಡದಲ್ಲಿ ಏಳು ಪತ್ರಿಕೆಗಳಿಗೆ ಮತ್ತು ಸಂಸ್ಕೃತದಲ್ಲಿ ಏಳು ಪತ್ರಿಕೆಗಳಿಗೆ ಸಿದ್ಧರಾಗಬೇಕಾಗಿತ್ತು.

ಇಲ್ಲಿ ತರಬೇತು ಪಡೆದ ಕನ್ನಡ ಭಾಷಾ ಶಿಕ್ಷಕರು ವಿಶ್ವವಿದ್ಯಾಲಯದ ಖ್ಯಾತ ಪ್ರಾಧ್ಯಾಪಕರುಗಳಾದ ದಿವಂಗತ ತೀ.ನಂ.ಶ್ರೀ. ಡೊ.ಲ. ನರಸಿಂಹಾಚಾರ್ ಮತ್ತು ವಿಶ್ರಾಂತ ಕುಲಪತಿ ದೇ.ಜ.ಗೌ. ರವರ ಮೆಚ್ಚುಗೆಯನ್ನು ಪಡೆದಿದ್ದಾರೆ. ಶಾಸ್ತ್ರ ವಿಷಯಗಳಲ್ಲಿ ಅವರ ಪಾಂಡಿತ್ಯ ಉತ್ತಮ ಎಂದು ಹೇಳಿದ್ದಾರೆ. ಆದರೆ ಒಂದು ಲೋಪವಿದ್ದುದೂ ಕಾಣುತ್ತಿತ್ತು. ಅದು 'ಪಂಡಿತರಿಗೆ ಆಳವಿದೆ: ಹರವಿಲ್ಲ' ಎಂಬುದು. ಈ ಲೋಪವನ್ನು ಹೋಗಲಾಡಿಸಿ ಪಂಡಿತ ತರಗತಿಗಳಲ್ಲಿ ಅಧ್ಯಯನ ಮಾಡುವವರಿಗೆ ವಿಶ್ವ ಸಾಹಿತ್ಯದಲ್ಲಿ ಬೆಳೆದು ನಿಂತಿರುವ ಆಧುನಿಕ ಮನೋಭಾವವನ್ನು ಮೂಡಿಸಿ ಅವರು ತಮ್ಮ ಜ್ಞಾನದ ಆಳದ ಜೊತೆಗೆ ವಿಸ್ತಾರವನ್ನೂ ಪಡೆದುಕೊಳ್ಳುವಂತೆ ಮಾಡುವ ಉದ್ದೇಶದಿಂದ ಈ ತರಗತಿಗಳ ಅಧ್ಯಯನ ಕ್ರಮವನ್ನು ಪರಿಷ್ಕರಿಸಿ ಅದಕ್ಕೆ ಹೊಸ ಚೈತನ್ಯ ತುಂಬಲು ಆಗ ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದ ಡಾ. ಹಾ.ಮಾ. ನಾಯಕರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನನ್ನ ಸಲಹೆಯ ಮೇರೆಗೆ ೧೯೭೦ರಷ್ಟು ಹಿಂದೆಯೇ ಸರ್ಕಾರ ರಚಿಸಿತು. ಈ ಸಮಿತಿಯ ಕಾರ್ಯದಲ್ಲಿ ನೆರವು ನೀಡಿ ಹಿಂದಿ ವಿದ್ವಾನ್ ಮತ್ತು ಉರ್ದು ಮುನ್ಷಿಪರೀಕ್ಷೆಗಳ ಪಠ್ಯಕ್ರಮವನ್ನೂ ಪರಿಷ್ಕರಿಸುವುದಕ್ಕೆ ತಜ್ಞರನ್ನೊಳಗೊಂಡ ಉಪಸಮಿತಿಗಳಿದ್ದುವು. ಪ್ರಧಾನ ಸಮಿತಿ ಮತ್ತು ಉಪಸಮಿತಿಗಳು ಸಭೆ ಸೇರಿ ಈ ವಿಷಯಗಳ ಪಠ್ಯಕ್ರಮ ಹೇಗಿರಬೇಕು, ಅವುಗಳ ಉದ್ದೇಶಗಳೇನು ಮತ್ತು ಪರೀಕ್ಷೆಗಳನ್ನು ಹೇಗೆ ನಡೆಸಬೇಕೆಂಬ ಬಗ್ಗೆ ಒಮ್ಮತ ನಿರ್ಧಾರ ಕೈಗೊಂಡು ಸರ್ಕಾರಕ್ಕೆ ವರದಿ ಒಪ್ಪಿಸಿದುವು.

ಪಂಡಿತ ತರಗತಿಗಳಲ್ಲಿ ಅಧ್ಯಯನ ಮಾಡುವವರಿಗೆ ಆಧುನಿಕ ಮನೋಭಾವ ಮೂಡಿಸಿ ಅವರ ಜ್ಞಾನದ ಆಳಕ್ಕೆ ವಿಸ್ತಾರವನ್ನು ಒದಗಿಸುವ ಉದ್ದೇಶದಿಂದ ಅವರ ಪಠ್ಯಕ್ರಮದ ಪರಿಷ್ಕಾರ ಮಾಡಲು ರಚಿಸಲಾದ ಸಮಿತಿಗಳು ಸರ್ಕಾರಕ್ಕೆ ವರದಿ ಒಪ್ಪಿಸಿದವು. ಈ ವರದಿಯ ಅಂಶಗಳು:

೧. ಪ್ರೌಢಶಾಲೆಗಳಲ್ಲಿ ಕನ್ನಡ, ಹಿಂದಿ, ಉರ್ದು (ಪರ್ಷಿಯನ್, ಅರಾಬಿಕ್) ಬೋಧಿಸಲು ಅಧ್ಯಾಪಕರಾಗುವವರಿಗೆ ಶಿಕ್ಷಣ ನೀಡುವುದು.

೨. ಈಗ ವಿಶ್ವವಿದ್ಯಾಲಯಗಳಲ್ಲಿ ಈ ಭಾಷೆಗಳನ್ನು ಪದವಿ ಮಟ್ಟದಲ್ಲಿ ಐಚ್ಛಿಕ

ವಿಷಯವಾಗಿ ಬೋಧಿಸುತ್ತಿದ್ದು ಈ ವಿಷಯಗಳನ್ನು ಆ ಹಂತದಲ್ಲಿ ಅಭ್ಯಸಿಸಿದವರು ಪ್ರೌಢಶಾಲೆಗಳಲ್ಲಿ ಈ ವಿಷಯಗಳನ್ನು ಬೋಧಿಸುತ್ತಿದ್ದರೂ ಭಾಷೆ ಮತ್ತು ಸಾಹಿತ್ಯಗಳಲ್ಲಿ ವಿಶೇಷ ತರಬೇತಿ ನೀಡುವುದು ಈ ತರಗತಿಗಳ ಉದ್ದೇಶ. ಪದವಿ ಹಂತದಲ್ಲಿ ಒಂದೇ ವಿಷಯದಲ್ಲಿ ವಿಶೇಷ ಶಿಕ್ಷಣ ಇರುವುದಿಲ್ಲ. ಆದರೆ ಈ ತರಗತಿಗಳಲ್ಲಿ ಭಾಷೆ ಮತ್ತು ಸಾಹಿತ್ಯಗಳ ಅಧ್ಯಯನವನ್ನೇ ಪ್ರಧಾನವಾಗಿ ಪರಿಗಣಿಸಲಾಗಿದೆ.

೩. ಒಂದೇ ಭಾಷೆ, ಸಾಹಿತ್ಯಗಳ ಶಿಕ್ಷಣದ ಜೊತೆಗೆ ಇತರ ಎರಡು ಭಾಷೆಗಳ ಪರಿಚಯವಾದರೂ ಅಭ್ಯರ್ಥಿಗಳಿಗೆ ದೊರೆಯುವಂತೆ ಪಠ್ಯಕ್ರಮವನ್ನು ರೂಪಿಸಿದೆ. ಇದು ಅಭ್ಯರ್ಥಿಗಳ ಅಧ್ಯಯನ ದೃಷ್ಟಿ ವಿಶಾಲಗೊಂಡು ಅವರು ಸಾಹಿತ್ಯವನ್ನು ತೌಲನಿಕವಾಗಿ ನೋಡಲು ಸಹಾಯ ಮಾಡುವುದು.

೪. ಇದುವರೆಗಿನ ಪಠ್ಯಕ್ರಮದಲ್ಲಿ ಕೇವಲ ಪ್ರಾಚೀನ ಸಾಹಿತ್ಯದ ಅಧ್ಯಯನಕ್ಕೆ ಮಹತ್ವಕೊಟ್ಟಿತ್ತು. ಪರಿಷ್ಕೃತ ಪಠ್ಯಕ್ರಮ ಆ ಲೋಪವನ್ನು ನಿವಾರಿಸಿ ಸಮಕಾಲೀನ ಸಾಹಿತ್ಯದ ಅಧ್ಯಯನಕ್ಕೂ ಅವಕಾಶ ಮಾಡಿಕೊಟ್ಟಿರುವುದು ಹೊಸಕಾಲದ ಅಗತ್ಯಕ್ಕೆ ಅನುಗುಣವಾಗಿದೆ. ಈ ಅಧ್ಯಯನದ ಅವಧಿ ಐದು ವರ್ಷ. ಈ ಅವಧಿಯಲ್ಲಿ ಅವರು ಒಂದು ಭಾಷೆ ಮತ್ತು ಅದರ ಸಾಹಿತ್ಯದ ಆಳವಾದ ಪರಿಚಯ ಮಾಡಿಕೊಳ್ಳುವುದರಿಂದ ಅವರು ಪ್ರೌಢಶಾಲೆಗಳಲ್ಲಿ ಉಪಯುಕ್ತ ಅಧ್ಯಾಪಕರಾಗುವರು.

ಈ ತರಗತಿಗಳಿಗೆ ರೂಪಿಸಿರುವ ಪಠ್ಯಕ್ರಮ ಪರಿಶೀಲಿಸಿದರೆ ಬಹುಶಃ ಆಯಾಯಾ ವಿಷಯಗಳಲ್ಲಿ ಸ್ನಾತಕೋತ್ತರ ತರಗತಿಗಳಿಗೆ ರೂಪಿಸಿರುವ ವಿಷಯಗಳ ವ್ಯಾಪ್ತಿಯನ್ನೂ ಮೀರಿದೆ. ಆ ಹಂತಕ್ಕಿಂತ ಆಳವಾದ ಮತ್ತು ಹರವಿರುವ ಅಧ್ಯಯನವನ್ನು ಈ ಅಭ್ಯರ್ಥಿಗಳಿಂದ ನಿರೀಕ್ಷಿಸಿದ್ದೇವೆ ಎಂದು ನಿಸ್ಸಂಕೋಚವಾಗಿ ಹೇಳಬಹುದು.

ಡಾ. ಹಾ.ಮಾ. ನಾಯಕರ ನೇತೃತ್ವದ ಸಮಿತಿ ಸಿದ್ಧಪಡಿಸಿದ್ದ ಪರಿಷ್ಕೃತ ಪಠ್ಯಕ್ರಮವನ್ನು ಅಧ್ಯಯನದ ಅವಧಿಯನ್ನು ಐದು ವರ್ಷದಿಂದ ನಾಲ್ಕು ವರ್ಷಕ್ಕೆ ಇಳಿಸುವ ಪ್ರಯತ್ನದಲ್ಲಿ ಅಧಿಕಾರಿಯೊಬ್ಬರ ಅಧ್ಯಕ್ಷತೆಯಲ್ಲಿ ರಚಿಸಿದ್ದ ಸಮಿತಿ ನಾಯಕ ಅವರ ಸಮಿತಿ ಸಿದ್ಧಪಡಿಸಿದ್ದ ಪರಿಷ್ಕೃತ ಪಠ್ಯಕ್ರಮವನ್ನೇ ಒಪ್ಪಿಕೊಂಡು ಅನುಷ್ಠಾನಕ್ಕೆ ತರಬೇಕು. ಐದು ವರ್ಷಗಳ ಅವಧಿ ಹೆಚ್ಚಾಯಿತೆಂದು ಸರ್ಕಾರ ಭಾವಿಸುವುದಾದರೆ ಅದೇ ಸಮಿತಿಯನ್ನು ಪಠ್ಯಕ್ರಮವನ್ನು ಪುನರ್‌ರಚಿಸುವಂತೆ ಕೋರಬಹುದು. ಶಾಲಾ ಹಂತದಲ್ಲಿ ಭಾಷಾ ಶಿಕ್ಷಣದ ಉದ್ದೇಶ ಸಾಧಿಸಬೇಕಾದರೆ ಭಾಷೆಯನ್ನು ಬೋಧಿಸುವ ಶಿಕ್ಷಕರೂ ಸಮರ್ಥರಾಗಿರಬೇಕಲ್ಲವೇ? ಅಂತಹ ಶಿಕ್ಷಕರನ್ನು ತಯಾರಿಸಿ ಪ್ರೌಢಶಾಲೆಗಳಲ್ಲಿ ಭಾಷಾ ಶಿಕ್ಷಣ ಸಮರ್ಪಕವಾಗಿ ನಡೆಯುವಂತೆ ಮಾಡುವುದು ಸರ್ಕಾರದ ಮತ್ತು ಶಿಕ್ಷಣ ಇಲಾಖೆಯ ಪ್ರಥಮ ಕರ್ತವ್ಯವಾಗಿದೆ. ಬೇರಾವುದೇ ವಿಷಯವನ್ನು ಕಡೆಗಣಿಸಬಹುದು. ಆದರೆ ಇದನ್ನು ಕಡೆಗಣಿಸಿದರೆ ಇಡೀ ಶಿಕ್ಷಣ ವ್ಯವಸ್ಥೆಯೇ ಕುಸಿಯುತ್ತದೆ.

ಪಂಡಿತ ತರಗತಿಗೆ ಪ್ರವೇಶ ಪಡೆಯಲು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ

ಉತ್ತೀರ್ಣರಾಗಿ ಶಿಕ್ಷಕರ ತರಬೇತು (ಟಿ.ಸಿ.ಹೆಚ್) ಪಡೆದಿರಬೇಕು. ಆಯ್ಕೆ ಪರೀಕ್ಷೆಯ ಮೂಲಕ ಶಿಕ್ಷಕರನ್ನು ಆಯ್ಕೆ ಮಾಡಿ ಇಲಾಖೆ ಸೇವಾನಿಯೋಗದ ಮೇಲೆ ಅವರನ್ನು ಈ ಶಿಕ್ಷಣ ಪಡೆಯಲು ಪೂರ್ಣ ವೇತನ ಕೊಟ್ಟು ಕಳುಹಿಸುತ್ತಾದರೂ, ಖಾಸಗಿಯವರಿಗೂ ಪ್ರವೇಶಾವಕಾಶ ಇತ್ತು. ೧೯೭೦ರ ವರೆಗೂ ಪ್ರೌಢಶಾಲೆಗಳಲ್ಲಿ ತೆರವಾದ ಭಾಷಾ ಶಿಕ್ಷಕರ ಹುದ್ದೆಗಳನ್ನು ಕನ್ನಡ ಪಂಡಿತ, ಹಿಂದಿ ವಿದ್ವಾನ್ ಮತ್ತು ಉರ್ದು ಮುನ್ಷಿಪರೀಕ್ಷೆಗಳಲ್ಲಿ ಉತ್ತೀರ್ಣರಾದವರಿಗೆ ಪ್ರೌಢಶಾಲಾ ಭಾಷಾ ಶಿಕ್ಷಕರಾಗಿ ಬಡ್ತಿಕೊಟ್ಟು ಶೇಕಡ ೭೫ ಹುದ್ದೆಗಳನ್ನು ತುಂಬುತ್ತಿದ್ದರು. ಉಳಿದ ಶೇಕಡ ೨೫ ರಷ್ಟು ಹುದ್ದೆಗಳನ್ನು ನೇರ ಆಯ್ಕೆಯ ಮೂಲಕ ಪದವಿ ಹಂತದಲ್ಲಿ ಈ ಭಾಷೆಗಳನ್ನು ಐಚ್ಛಿಕ ವಿಷಯವಾಗಿ ಅಧ್ಯಯನ ಮಾಡಿದ್ದ ಪದವೀಧರರನ್ನು ನೇಮಕ ಮಾಡುವ ಕ್ರಮ ಇತ್ತು. ಭಾಷಾ ಶಿಕ್ಷಕರ ಪದವೀಧರ ಶಿಕ್ಷಕರಿಗೆ ದೊರೆಯುತ್ತಿದ್ದ ಬಡ್ತಿಗಳಿಂದ ವಂಚಿತರಾಗಿ ಭಾಷಾ ಶಿಕ್ಷಕರಾಗಿಯೇ ನಿವೃತ್ತರಾಗುತ್ತಿದ್ದರು. ಒಂದು ರೀತಿಯಲ್ಲಿ ಅವರು ಪ್ರೌಢ ಶಾಲೆಗಳಲ್ಲಿ ಪಂಚಮರಂತಿದ್ದರು. ೧೯೭೯ರ ವೇಳೆಗೆ ಭಾಷಾ ಶಿಕ್ಷಕರು ತಮ್ಮ ಸ್ಥಿತಿಗತಿಗಳನ್ನು ಅರ್ಥಮಾಡಿಕೊಂಡು ಎಚ್ಚರಗೊಂಡರು. ನಾವೂ ಪದವೀಧರ ಶಿಕ್ಷಕರಿಗೆ ಸಮಾನರು, ಅವರಿಗೆ ದೊರಕುವ ಎಲ್ಲಾ ಸೌಲಭ್ಯಗಳೂ ನಮಗೂ ದೊರಕಬೇಕು ಎಂದು ಸಂಘಟಿತರಾಗಿ ಸರ್ಕಾರವನ್ನು ಆಗ್ರಹಪಡಿಸಲು ಪ್ರಾರಂಭಿಸಿದರು. ೧೯೭೯ರಲ್ಲಿ ಕನ್ನಡ ಭಾಷಾಶಿಕ್ಷಕರ ಪರಿಷತ್ತು ಅಸ್ತಿತ್ವಕ್ಕೆ ಬಂದಿತು. ಪರಿಷತ್ತಿನ ಹೋರಾಟದ ಫಲವಾಗಿ ಸರಕಾರಕ್ಕೆ ಅವರ ಸಮಸ್ಯೆಗಳು ಮನದಟ್ಟಾಗಿ ಅವುಗಳನ್ನು ಬಗೆಹರಿಸಲು ಒಪ್ಪಿಕೊಂಡಿತು. ಅದರಂತೆ ಭಾಷಾ ಶಿಕ್ಷಕರೂ ಕೂಡ ಬಿ.ಎಡ್. ತರಬೇತು ಪಡೆಯುವುದು ಕಡ್ಡಾಯವಾಯಿತು. ಅದುವರೆಗೆ ಭಾಷಾ ಶಿಕ್ಷಕರಿಗೂ ಪದವೀಧರ ಶಿಕ್ಷಕರಿಗೂ ಇದ್ದ ತಾರತಮ್ಯ ಹೋಯಿತು. ಇದರ ಫಲವಾಗಿ ಮೊಟ್ಟಮೊದಲ ಬಾರಿಗೆ ಕನ್ನಡ ಪಂಡಿತರು, ಉರ್ದು ಮುನ್ಷಿಗಳು ಮತ್ತು ಹಿಂದಿ ವಿದ್ವಾಂಸರು ಡೆಪ್ಯುಟೇಷನ್ ಆಧಾರದ ಮೇಲೆ ಬಿ.ಎಡ್. ಮಾಡಲು ಸರ್ಕಾರ ನಿರ್ಧರಿಸಿತು.

ಭಾಷಾ ಶಿಕ್ಷಕರ ಹೋರಾಟ ಅಲ್ಲಿಗೆ ಮುಗಿಯಲಿಲ್ಲ. ಪ್ರೌಢಶಾಲಾ ಶಿಕ್ಷಕರಾಗಿ ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತಂದು ಭಾಷಾ ಶಿಕ್ಷಕರ ನೇಮಕ ಮಾಡುವಾಗ ಕನ್ನಡ ಪಂಡಿತ, ಹಿಂದಿ ವಿದ್ವಾನ್ ಮತ್ತು ಉರ್ದು ಮುನ್ಷಿ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರಿಗೆ ಆದ್ಯತೆ ಕೊಡಬೇಕೆಂದು ಪರಿಷತ್ತಿನ ಆಗ್ರಹಪೂರ್ವಕ ಒತ್ತಾಯ.

ಈ ವಿಷಯ ಸರ್ಕಾರದ ಹಂತದಲ್ಲಿ ಅನೇಕ ಸಾರಿ ಚರ್ಚೆಯಾಗಿ ಶ್ರೀಯುತ ಎಂ. ಚಂದ್ರಶೇಖರ್ ಅವರು ಶಿಕ್ಷಣ ಸಚಿವರಾಗಿದ್ದಾಗ ಅವರಿಂದ ಇದಕ್ಕೆ ಸಂಬಂಧಿಸಿದಂತೆ ಭರವಸೆಯೂ ದೊರೆತು, ಅಂದು ಶಿಕ್ಷಣ ಕಾರ್ಯದರ್ಶಿಗಳಾಗಿದ್ದ ಶ್ರೀ ಎಸ್.ಕೆ. ದಾಸ್‌ರವರು ಒಂದೆರಡು ವಾರದಲ್ಲಿ ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರುವುದಾಗಿ ಹೇಳಿದ್ದರು. ಆದರೆ ಕಳೆದ ಎರಡು ದಶಕಗಳಿಂದಲೂ ಈ ವಿಷಯ ನೆನೆಗುದಿಯಲ್ಲಿದೆ.

ಬೋಧನೆ ಪರಿಣಾಕಾರಿಯಾಗಬೇಕಾದರೆ ಶಿಕ್ಷಕರು ತಾವು ಬೋಧಿಸುವ ವಿಷಯಗಳಲ್ಲಿ ಸಾಕಷ್ಟು ಜ್ಞಾನ ಪಡೆದಿರಬೇಕೆಂಬುದು ಸರ್ವರೂ ಒಪ್ಪುವ ಸತ್ಯ. ವಿಷಯ

ಜ್ಞಾನ ಇಲ್ಲದೆ ಬರಿಯ ಬೋಧನಾ ಪದ್ಧತಿಯ ಅರಿವಿನಿಂದ ಏನೂ ಮಾಡಲಾಗುವುದಿಲ್ಲ. ಕಳೆದ ವರ್ಷ ಸರ್ಕಾರ ಬಿ.ಎಡ್. ತರಬೇತಿ ಅವಧಿಯಲ್ಲಿ ಕನ್ನಡವನ್ನು ಪದವಿ ಹಂತದಲ್ಲಿ ಐಚ್ಛಿಕ ವಿಷಯವಾಗಿ ಅಧ್ಯಯನ ಮಾಡದೆ ಕನ್ನಡ ಭಾಷಾ ಬೋಧನೆಯನ್ನು ಒಂದು ವಿಷಯವಾಗಿ ಆಯ್ಕೆ ಮಾಡಿಕೊಂಡಿದ್ದವರನ್ನು ಕನ್ನಡ ಶಿಕ್ಷಕರನ್ನಾಗಿ ಆಯ್ಕೆಮಾಡಿದೆ ಎಂಬ ಅಂಶ ಗಮನಕ್ಕೆ ಬಂದಿದೆ.

ಪ್ರೌಢಶಾಲೆಗಳಲ್ಲಿ ಖಾಲಿ ಬೀಳುವ ಹುದ್ದೆಗಳನ್ನು ವಿಷಯವಾರು ನೊಂದಾಯಿಸಿಕೊಂಡು ಅದರಂತೆಯೇ ನೇಮಕಮಾಡಿಕೊಳ್ಳಲು ನಿರ್ಧರಿಸಬೇಕು. ಅಂದರೆ ಇಂಗ್ಲಿಷು, ಕನ್ನಡ, ಉರ್ದು, ಹಿಂದಿ, ಇತಿಹಾಸ, ಭೂಗೋಳ, ಪೌರನೀತಿ, ಗಣಿತ ಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ, ಪ್ರಾಣಿ ಶಾಸ್ತ್ರ, ಸಸ್ಯಶಾಸ್ತ್ರಗಳನ್ನು ಪದವಿ ಹಂತದಲ್ಲಿ ಅಧ್ಯಯನ ಮಾಡಿರುವ ಅಭ್ಯರ್ಥಿಗಳು ಮಾತ್ರ ಬಿ.ಎಡ್. ತರಗತಿಗಳಿಗೆ ಪ್ರವೇಶ ಪಡೆಯಲು ಅರ್ಹರು ಮತ್ತು ಶಿಕ್ಷಕರಾಗಲು ಅರ್ಹರು. ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ನೇಮಕಾತಿ ನಿಯಮಗಳಲ್ಲಿ ಕನ್ನಡ ಪಂಡಿತ, ಹಿಂದಿ ವಿದ್ವಾನ್ ಮತ್ತು ಉರ್ದು ಮುನ್ಷಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಬಿ.ಎಡ್. ತರಬೇತು ಪಡೆದಿರುವವರಿಗೆ ಆದ್ಯತೆ ಕೊಡಬೇಕು. ಅಂತಹ ಅಭ್ಯರ್ಥಿಗಳು ಅಗತ್ಯಸಂಖ್ಯೆಯಲ್ಲಿ ದೊರೆಯದಿದ್ದಾಗ ಮಾತ್ರ ಪದವಿ ಹಂತದಲ್ಲಿ ಈ ಭಾಷೆಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆಯ್ಕೆಮಾಡಿಕೊಂಡು ಅಧ್ಯಯನ ಮಾಡಿರುವವರನ್ನು ನೇಮಕ ಮಾಡಿಕೊಳ್ಳಬೇಕು.



# ಕನ್ನಡ ಪತ್ರಿಕೋದ್ಯಮಕ್ಕೆ ೧೫೦ ವರ್ಷ

ಬಿ. ಎ. ಶ್ರೀಧರ

---

ಕನ್ನಡ ಪತ್ರಿಕೋದ್ಯಮದ ಇತಿಹಾಸದಲ್ಲಿ ೧೯೯೩ ಒಂದು ಮುಖ್ಯ ಮೈಲಿಗಲ್ಲು. ಹರ್ಮನ್ ಮೊಗ್ಲಿಂಗ್‌ರು ೧೮೪೩ರಲ್ಲಿ 'ಮಂಗಳೂರು ಸಮಾಚಾರ' ಎನ್ನುವ ಕನ್ನಡದ ಮೊದಲ ಪತ್ರಿಕೆಯನ್ನು ಆರಂಭಿಸಿ ಈ ವರ್ಷಕ್ಕೆ ೧೫೦ ವರ್ಷಗಳು ತುಂಬುತ್ತವೆ.

ಕನ್ನಡ ಪತ್ರಿಕೋದ್ಯಮಕ್ಕೆ ೧೫೦ ವರ್ಷಗಳು ತುಂಬಿದ ಸಂದರ್ಭದಲ್ಲಿ ನಾಡಿನ ಅನೇಕ ಪತ್ರಿಕೆಗಳು ಲೇಖನಗಳನ್ನು ಪ್ರಕಟಿಸಿವೆ. ಪತ್ರಿಕಾ ಅಕಾಡೆಮಿ ಐದು ವರ್ಷಗಳ ಹಿಂದೆಯೇ ಕನ್ನಡ ಪತ್ರಿಕೋದ್ಯಮಕ್ಕೆ ೧೪೫ ವರ್ಷಗಳು ತುಂಬಿದ ಬಗ್ಗೆ ಹಬ್ಬವನ್ನಾಚರಿಸಿ ಸಂಭ್ರಮಿಸಿದೆ. ಪತ್ರಿಕೋದ್ಯಮದ ಇತಿಹಾಸದಲ್ಲಿ ೧೫೦ ವರ್ಷಗಳು ಬಹಳ ಮಹತ್ವದ ದಿನಗಳು. ಇಲ್ಲಿಯವರೆಗೆ ಕನ್ನಡ ಪತ್ರಿಕೋದ್ಯಮದ ಬಗ್ಗೆ ಪ್ರಕಟವಾಗಿರುವ ಬಹುಪಾಲು ಲೇಖನಗಳು ಪತ್ರಿಕೋದ್ಯಮದ ಬೆಳವಣಿಗೆಯನ್ನು ಇತಿಹಾಸದ ದೃಷ್ಟಿಯಿಂದ ನೋಡಿವೆಯೇ ಹೊರತು ಅದರ ಹಲವು ವರ್ಷಗಳ ಪ್ರವೃತ್ತಿಗಳ ಮತ್ತು ಅದರ ಮೇಲೆ ರಾಜಕೀಯ, ಸಾಮಾಜಿಕ ಪ್ರಭಾವಗಳ ಬಗ್ಗೆ ಹೆಚ್ಚಿನ ಅಧ್ಯಯನ ನಡೆದಿಲ್ಲ. ಕನ್ನಡ ಪತ್ರಿಕೋದ್ಯಮದ ಅಧ್ಯಯನದಲ್ಲಿ ಇದೊಂದು ದೊಡ್ಡ ಕೊರತೆಯಾಗಿಯೇ ಉಳಿದಿದೆ.

ಆದುದರಿಂದ ಈ ಸಂದರ್ಭದಲ್ಲಿ ಕನ್ನಡ ಪತ್ರಿಕೋದ್ಯಮದ ಇತಿಹಾಸದ ಬಗ್ಗೆ ಅಥವಾ ಅದರ ಬೆಳವಣಿಗೆಗೆ ಕಾರಣರಾದ ಮಹನೀಯರುಗಳ ಬಗ್ಗೆ ಮತ್ತೊಂದು ಲೇಖನ ಬರೆಯುವ ಬದಲು ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗೆ ಹೊಂದಿಕೊಂಡಂತೆ ಕನ್ನಡ ಪತ್ರಿಕೋದ್ಯಮದ ಸ್ಥಾನವನ್ನು ತಿಳಿಯುವ ಪ್ರಯತ್ನವನ್ನು ನಾನು ಇಲ್ಲಿ ಮಾಡಿದ್ದೇನೆ.

ವಿಶಾಲ ಮೈಸೂರು ರಾಜ್ಯ ಸ್ಥಾಪನೆಯೊಂದಿಗೆ ಬೇರೆ ಬೇರೆ ರಾಜ್ಯಗಳಲ್ಲಿ ಹರಿದು ಹಂಚಿ ಹೋಗಿದ್ದ ಕನ್ನಡ ಮಾತೃಭಾಷೆಯಾಗುಳ್ಳ ಅನೇಕ ಪ್ರದೇಶಗಳು ಒಂದೇ ಆಡಳಿತದಡಿಯಲ್ಲಿ ಬರುವಂತಾಯಿತು. ಹಾಗೆ ಸ್ಥಾಪಿತವಾದ ರಾಜ್ಯದಲ್ಲಿ ಹಾಲು-ಜೇನಿನ ಹೊಳೆ ಹರಿಯುತ್ತದೆ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಹೊಸಯುಗ ಆರಂಭವಾಗುತ್ತದೆ. ಭಾಷೆ ಹಾಗೂ ಪತ್ರಿಕೋದ್ಯಮ ಬೆಳವಣಿಗೆಗೆ ತಕ್ಕುದಾದ ವಾತಾವರಣ ನಿರ್ಮಾಣವಾಗಿ ಅವು ಹುಲುಸಾಗಿ ಬೆಳೆಯುತ್ತದೆ, ಎನ್ನುವುದು ಎಲ್ಲರ ಆಶಯವಾಗಿತ್ತು. ಆದರೆ, ನಾಲ್ಕು ದಶಕಗಳು ಕಳೆದ ನಂತರವೂ ಆ ಆಸೆಗಳು

ಕೈಗೂಡಿಲ್ಲ. ಅಂದಿನಿಂದ ಇಲ್ಲಿಯವರೆಗೆ ಕಾವೇರಿ, ಕಬಿನಿ, ತುಂಗೆ, ಕೃಷ್ಣಗಳಲ್ಲಿ ಬಹಳಷ್ಟು ರಾಜಕೀಯದ ನೀರು ಹರಿದು ಹೋಗಿದೆ. ಆದರೆ, ಹಾಲುಜೇನಿನ ಹೊಳೆಯಾಗಲಿ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಕ್ರಾಂತಿಯಾಗಲಿ ಅಥವಾ ಭಾಷೆ ಹಾಗೂ ಪತ್ರಿಕೋದ್ಯಮದಲ್ಲಿ ಉನ್ನತಿಯಾಗಲಿ ಕಂಡು ಬಂದಿಲ್ಲ.

ಭೂಭಾಗ ಮತ್ತು ಜನಸಂಖ್ಯೆಯ ದೃಷ್ಟಿಯಿಂದ ಭಾರತದ ಎಂಟನೆಯ ದೊಡ್ಡ ರಾಜ್ಯವಾದ ಕರ್ನಾಟಕದಲ್ಲಿ ಪತ್ರಿಕೋದ್ಯಮದ ಬೆಳವಣಿಗೆ ಬೆರಗುಗೊಳಿಸುವುದಿಲ್ಲ. ಉಳಿದ ಸೋದರ ಭಾಷೆಯ ಪತ್ರಿಕೋದ್ಯಮದ ಜೊತೆ ಕನ್ನಡ ಪತ್ರಿಕೋದ್ಯಮದ ಹೋಲಿಕೆ ಪೇಲವವಾಗುತ್ತದೆ. ನಮಗಿಂತಲೂ ಪ್ರಾದೇಶಿಕವಾಗಿ ಪುಟ್ಟದಾದ ಕೇರಳದಲ್ಲಿ ಪತ್ರಿಕೆಗಳ ಪ್ರಸಾರ ಸಂಖ್ಯೆ ಹತ್ತಾರು ಲಕ್ಷಗಳಿದ್ದರೆ ನಮ್ಮ ಪತ್ರಿಕೆಗಳ ಪ್ರಸಾರ ಸಂಖ್ಯೆ ನಾಚಿಕೆ ಪಡುವಷ್ಟು ಕಡಿಮೆಯಾಗಿದೆ. ಕನ್ನಡದ ಅನೇಕ ಪತ್ರಿಕೆಗಳಿಗೆ ತಮ್ಮದೇ ಆದ ಗುಣವೈಶಿಷ್ಟ್ಯಗಳಿಲ್ಲ. ಪತ್ರಿಕೆಗಳಲ್ಲಿ ವೈವಿಧ್ಯತೆಯಿಲ್ಲ. ಸುದ್ದಿಯ ಗ್ರಹಿಕೆ ಮತ್ತು ಮಂಡನೆಯಲ್ಲಿ ಹೊಸತನವಿಲ್ಲ. ವಿನ್ಯಾಸ ಮತ್ತು ಹೊರರೂಪದಲ್ಲಿ ಆಕರ್ಷಣೆಯಿಲ್ಲ. ಪತ್ರಿಕೋದ್ಯಮಕ್ಕೊಂದು ಬೇರೆ ಭಾಷೆಯಿದೆ ಎನ್ನುವುದೇ ನಮಗಿನ್ನೂ ತಿಳಿದಂತಿಲ್ಲ. ಜನಸಾಮಾನ್ಯನಿಗೆ ಅರ್ಥವಾಗುವ ಆಡುಭಾಷೆಯನ್ನು ಬಳಸಿ ಸುದ್ದಿ ನೀಡುವ ಕಲೆ ಅವುಗಳಿಗಿನ್ನೂ ಕರಗತವಾಗಿಲ್ಲ. ಹೀಗೆ, ಕನ್ನಡ ಪತ್ರಿಕೆಗಳ ಮಿತಿಗಳನ್ನು ಪಟ್ಟಿ ಮಾಡುತ್ತಾ ಹೋಗುವುದಾದರೆ ಅದಕ್ಕೆ ಕೊನೆಯೇ ಇಲ್ಲದಿರಬಹುದು.

ಕನ್ನಡ ಪತ್ರಿಕೋದ್ಯಮ ಏಕೆ ನಿರೀಕ್ಷಿಸಿದ ಗತಿಯಲ್ಲಿ ಗಾತ್ರ ಮತ್ತು ಗುಣಗಳೆರಡರಲ್ಲೂ ಬೆಳೆದಿಲ್ಲ ಎನ್ನುವುದನ್ನು ವಿಶ್ಲೇಷಿಸುವ ಮೊದಲು ಕನ್ನಡ ಪತ್ರಿಕೋದ್ಯಮ ಮತ್ತು ಕರ್ನಾಟಕ ಸಮಾಜದ ವಾಸ್ತವಿಕ ಪರಿಸ್ಥಿತಿಗೆ ಕಾರಣವಾದ ರಾಜಕೀಯ ಹಾಗೂ ಸಾಮಾಜಿಕ ಕಾರಣಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುವುದು ಅಗತ್ಯವೆನಿಸುತ್ತದೆ.

ಈ ರೀತಿಯ ದೃಷ್ಟಿಕೋನ ವಿಶ್ಲೇಷಣೆಯ ಕ್ಷೇತ್ರವನ್ನು ವಿಸ್ತರಿಸುತ್ತದೆ. ಮತ್ತು ಪ್ರತಿಯೊಂದು ಮಹತ್ವದ ಸಂಗತಿಯನ್ನೂ ಅದರ ಸಾಮಾಜಿಕ ಹಿನ್ನೆಲೆಗಳೊಂದಿಗೆ ಸಂಭವನೀಯ ಕಾರಣಗಳನ್ನೂ ನೀಡುವಂತೆ ಪ್ರೇರೇಪಿಸುತ್ತದೆ. ಆದರೆ, ಈ ಲೇಖನದ ಚೌಕಟ್ಟಿನೊಳಗೆ ಅಷ್ಟೊಂದು ಆಳವಾದ ವಿಶ್ಲೇಷಣೆಗೆ ಮಿತಿಯಿರುವುದರಿಂದ, ಕನ್ನಡ ಪತ್ರಿಕೋದ್ಯಮವನ್ನು ರಾಜಕೀಯ ಒತ್ತಾಸೆಯ ವ್ಯವಸ್ಥೆಗೆ ಸಂಬಂಧಿಸಿದಂತೆ ವಿಶ್ಲೇಷಿಸಿ ಪ್ರಸ್ತುತ ಇರುವ ಪ್ರವೃತ್ತಿಗಳಿಗೆ ರಾಜಕೀಯ ಬೆಳವಣಿಗೆಗಳು ಹೇಗೆ ಕಾರಣ ಎನ್ನುವ ದೃಷ್ಟಿಯಿಂದ ನೋಡಲಾಗಿದೆ.

ಕರ್ನಾಟಕದ ರಾಜಕೀಯ ಇತಿಹಾಸವನ್ನು ಅವಲೋಕಿಸಿದಾಗ ಸ್ವಾತಂತ್ರ್ಯಾನಂತರ ಜನತಾಪಕ್ಷ ಆಡಳಿತದಲ್ಲಿದ್ದ ಅವಧಿಯನ್ನು ಬಿಟ್ಟರೆ, ಇಲ್ಲಿ ಕಾಂಗ್ರೆಸ್ ಪಕ್ಷದ್ದೇ ಏಕಸ್ವಾಮ್ಯತೆ. ವಿರೋಧ ಪಕ್ಷಗಳ ಸಂಘಟನೆಯಲ್ಲಿನ ತೊಡಕು ಮತ್ತು ತತ್ವವನ್ನು ಆಧರಿಸಿದ ಪಕ್ಷಗಳು ಕೆಳಸ್ತರದವರೆಗೆ ಹಬ್ಬಿ ಜನಪ್ರಿಯವಾಗದಿರುವುದೂ ಕರ್ನಾಟಕದಲ್ಲಿ

ಕಾಂಗ್ರೆಸ್ ಏಕಸ್ವಾಮ್ಯತೆಯನ್ನು ಉಳಿಸಿಕೊಳ್ಳಲು ಕಾರಣವಾಗಿದೆ. ಇದರಿಂದಾಗಿ ಪತ್ರಿಕೋದ್ಯಮದ ಪಾತ್ರ ತುಂಬಾ ಸೀಮಿತವಾಗಿ ಹೋಗಿದೆ. ಅದು ರಾಜಕೀಯ ಸಂದೇಶಗಳ ಸಾಮ್ಯ ದ್ವಿಪ್ರತಿ ಯಂತ್ರವಾಗಿ ಹೋಗಿದೆ. ಹಾಗಾಗಿ ಪತ್ರಿಕೋದ್ಯಮ ನಿಶ್ಚೇಷ್ಟವಾಗಿದೆ. ಬಲವಾಗಿ ಬೆಳೆದು ಇಡೀ ಸಮಾಜವನ್ನು ಪ್ರಚೋದಿಸುವ ಶಕ್ತಿಯನ್ನೇ ಕಳೆದುಕೊಂಡಿದೆ.

ನೆರೆ ರಾಜ್ಯಗಳಾದ ಕೇರಳ, ತಮಿಳುನಾಡು ಮತ್ತು ಆಂಧ್ರಗಳಲ್ಲಿ ಬಲವಾದ ವಿರೋಧ ಪಕ್ಷಗಳಿರುವುದರಿಂದ ಅಲ್ಲಿ ಒಂದು ರೀತಿಯ ಸವಾಲಿದೆ. ಸದಾ ಸಂಘರ್ಷಣೆಯಿದೆ. ಆದರೆ, ಕರ್ನಾಟಕ ರಾಜಕೀಯ ಸ್ಥಿತಿಯಿಂದಾಗಿ ಪತ್ರಿಕೋದ್ಯಮದಲ್ಲೂ ಸ್ಪರ್ಧಾತ್ಮಕ ಬೆಳವಣಿಗೆಗಳಾಗಲು ಅಥವಾ ಪ್ರಸಾರವನ್ನು ಹೆಚ್ಚಿಸಿಕೊಳ್ಳುವ ಅವಶ್ಯಕತೆಗಳು ಉದ್ಭವವಾಗುವುದೇ ಇಲ್ಲ. ಆದ್ದರಿಂದ ಮಿತಿಯಾದ ಪ್ರಸಾರ ಮತ್ತು ಯಥಾಸ್ಥಿತಿ ಪ್ರವೃತ್ತಿಯಿಂದಾಗಿ ಕನ್ನಡ ಪತ್ರಿಕೋದ್ಯಮ ಮಡುಕಟ್ಟಿಹೋಗಿದೆ. ಎಲ್ಲ ಸಂದರ್ಭಗಳಲ್ಲಿಯೂ ರಾಜಕೀಯ ಸಂಘರ್ಷಣೆ, ಚಟುವಟಿಕೆಗಳು ಮತ್ತು ಸಾಮಾಜಿಕ ಚಳುವಳಿಗಳು ಪತ್ರಿಕೋದ್ಯಮದ ಬೆಳವಣಿಗೆಗೆ ಸಹಕಾರಿಯಾಗುತ್ತವೆ. ತಡವಾಗಿ ಕನ್ನಡಿಗರು ಎಚ್ಚೆದ್ದು ಭಾಗವಹಿಸಿದ ಮತ್ತು ಬೇರೆ ರಾಜ್ಯಗಳಿಗೆ ಹೋಲಿಸಿದರೆ ಕಡಿಮೆ ಅವಧಿಯವರೆಗಿದ್ದ ಸ್ವಾತಂತ್ರ್ಯ ಚಳವಳಿಯ ನಂತರ ಯಾವುದೇ ಬಗೆಯ ಪ್ರಮುಖ ಸಾಮಾಜಿಕ ಚಳವಳಿಗಳನ್ನೇ ರಾಜ್ಯ ಕಂಡಿಲ್ಲ. (ರೈತ ಚಳವಳಿಯಾಗಲಿ, ಗೋಕಾಕ್ ಚಳವಳಿಯೆಂದು ಖ್ಯಾತವಾದ ಭಾಷಾ ಚಳವಳಿಯಾಗಲಿ ಬಹಳ ಸಮಯದವರೆಗೆ ಹೋರಾಟವಾಗಿ ನಿಲ್ಲಲಿಲ್ಲ.)

ರಾಜ್ಯ ಸರ್ಕಾರದ ಸ್ವರೂಪ ಕೇಂದ್ರ ಸರ್ಕಾರದ ಸ್ವರೂಪದೊಂದಿಗೆ ಸಮೀಕರಣಗೊಳ್ಳುತ್ತದೆ. ಇದರಿಂದಾಗಿ ರಾಜ್ಯದಲ್ಲಿ ಕನ್ನಡ ಪತ್ರಿಕೋದ್ಯಮಕ್ಕಿಂತ ಆಂಗ್ಲ ಪತ್ರಿಕೋದ್ಯಮ ಹೆಚ್ಚು ಪ್ರಾಮುಖ್ಯತೆ ಪಡೆಯುತ್ತಿದೆ ಎನ್ನಬಹುದು. ''ಎಲ್ಲ ಅಸ್ಥಿರ ಸಮಾಜಗಳಲ್ಲೂ ಹೊರಜಗತ್ತಿನ ಬಗ್ಗೆ ಹೊಸ ಅರಿವು ಮತ್ತು ನವರಾಷ್ಟ್ರೀಯ ಸ್ವಪ್ರಜ್ಞೆಯೊಂದಿಗೇ ಪತ್ರಿಕೋದ್ಯಮ ಕೂಡ ಅಭಿವೃದ್ಧಿಗೊಳ್ಳುತ್ತದೆ'' ಎನ್ನುತ್ತಾನೆ ಪತ್ರಿಕೋದ್ಯಮ ಪಂಡಿತ, ಹರ್ಬಟ್ ಪ್ಯಾಸಿನ್. ತುರ್ತು ಪರಿಸ್ಥಿತಿಯ ಸಮಯದಲ್ಲಿ ಮತ್ತು ಅದರ ನಂತರ ಕಾಂಗ್ರೆಸ್‌ನ ಏಕಸ್ವಾಮ್ಯತೆಗೆ ಬಲವಾದ ವಿರೋಧ ಕಂಡು ಬಂತು. ಆಗ ಕನ್ನಡ ಪತ್ರಿಕೋದ್ಯಮ ತನ್ನ ಹಳಸಲು ಮೌಲ್ಯಗಳಲ್ಲಿ ಆಮೂಲಾಗ್ರ ಬದಲಾವಣೆಯಾಗಬೇಕೆಂದು ತೀವ್ರವಾದ ಪ್ರಯತ್ನಕ್ಕಿಳಿಯಿತು. ತನ್ನ ಪ್ರಭಾವ ಕ್ಷೇತ್ರವನ್ನು ವಿಸ್ತರಿಸಿಕೊಳ್ಳಬೇಕೆಂಬ ಅರಿವು ಉಂಟಾದ್ದರಿಂದ ಓದುಗನ ಬಗ್ಗೆ ಆಸಕ್ತಿವಹಿಸಿ ಹೆಚ್ಚು ಜವಾಬ್ದಾರಿಯುತವಾಯಿತು. ಇದರಿಂದಾಗಿ ಹೊಂದಾಣಿಕೆಯ ಹೊಸ ಸಂದರ್ಭದಲ್ಲಿ ತನ್ನನ್ನು ತಾನೇ ವಿಮರ್ಶಿಸಿಕೊಳ್ಳುವ ಪರಿಣಾಮಗಳು ಕಾಣಿಸಿಕೊಂಡವು.

ಕನ್ನಡ ಪತ್ರಿಕೋದ್ಯಮವನ್ನು ಕುಂಠಿತಗೊಳಿಸುತ್ತಿರುವ ಇನ್ನೊಂದು ಅಂಶವೆಂದರೆ ಅದು ವಾಣಿಜ್ಯ ಉದ್ದಿಮೆಯಾಗಿ ಬಲಗೊಳ್ಳದಿರುವುದು. ಪ್ರಮುಖ ಕನ್ನಡ ಪತ್ರಿಕೆಗಳು

ಇಂಗ್ಲಿಷ್ ಪತ್ರಿಕೆಗಳ ' ಸೋದರಿ' ಪತ್ರಿಕೆಗಳಾಗಿ ಪ್ರಕಟಗೊಳ್ಳುತ್ತಿವೆ. 'ಸೋದರ' ಇಂಗ್ಲಿಷ್ ಪತ್ರಿಕೆಗಳು ಲಾಭದ ಹೆಚ್ಚು ಭಾಗವನ್ನು ತಾನೇ ಬಳಸಿಕೊಳ್ಳುವುದರಿಂದ ಅವು ಯಶಸ್ವಿ ವಾಣಿಜ್ಯ ಸಂಸ್ಥೆಗಳಾಗಿ ರೂಪುಗೊಂಡಿವೆ. ಈ ಸೋದರ ಮತ್ತು ಸೋದರಿ ಪತ್ರಿಕೆಗಳು ಒಂದೇ ವ್ಯವಸ್ಥಾಪಕ ವರ್ಗದಡಿ ಬಂದರೆ ಹಣವನ್ನು ಬದಲಾಯಿಸಿಕೊಳ್ಳಲು ಉತ್ತಮ ಅವಕಾಶವಿರುತ್ತದೆ. ಇದರಿಂದ ಅಪರೋಕ್ಷವಾಗಿ ಸಾಕಷ್ಟು ವಿಷಯ ಮತ್ತು ನಿಪುಣತೆ ದೊರಕಿದಂತಾಗುತ್ತದೆ. ಸಂಸ್ಥೆಯನ್ನು ಕಟ್ಟುವ ಹೊಣೆ ಇಂಗ್ಲಿಷ್ ಸೋದರ ಪತ್ರಿಕೆಯ ಮೇಲಿದ್ದರೆ, ಸೋದರಿ ಕನ್ನಡ ಪತ್ರಿಕೆ ತನ್ನ ದಿನನಿತ್ಯದ ನಿರ್ವಹಣೆಗೆ ಅದನ್ನು ನೇರವಾಗಿ ಅವಲಂಬಿಸಿರುತ್ತದೆ. ಇಂತಹ ಆಂತರಿಕ ಸಂಸ್ಥೆಯ ಕ್ರಿಯಾಶಕ್ತಿಯ ಪರಿಣಾಮವೆಂದರೆ ಇಂಗ್ಲಿಷ್ ಪತ್ರಿಕೋದ್ಯಮದ ಮೇಲೆ ಅವಲಂಬಿತ ಸಂಬಂಧ ಹೊಂದಿರುವ ಕನ್ನಡ ಪತ್ರಿಕೋದ್ಯಮ ನೆಲೆಗೊಳ್ಳಲು ಹೆಣಗಾಡಬೇಕಾಗುತ್ತದೆ. ಇಂತಹ ಪ್ರವೃತ್ತಿ ಬೇರೆ ಭಾಷಾ ಪತ್ರಿಕೆಗಳಲ್ಲಿ ಅಷ್ಟಾಗಿ ಕಾಣಿಸುವುದಿಲ್ಲ.

ಕನ್ನಡ ಪತ್ರಿಕೆಗಳಿಗೆ ಜಾಹೀರಾತಿನಿಂದ ಬರುವ ಆದಾಯ ಬಹಳ ಕಡಿಮೆ. ಇದರಿಂದಾಗಿಯೇ ಅದು ಇಂಗ್ಲಿಷ್ ಭಾಷಾ ಸೋದರ ಪತ್ರಿಕೆಗಳ ಮೇಲೆ ಅವಲಂಬಿತವಾಗಿರುವುದು. ಜಾಹೀರಾತಿಗೆ ನೀಡುವ ದರ ಮಾತ್ರ ಕಡಿಮೆಯಲ್ಲ. ಅವುಗಳ ಸಂಖ್ಯೆ ಕೂಡ ಕಡಿಮೆಯಿರುತ್ತದೆ. ಕಡಿಮೆ ಬಂಡವಾಳದಿಂದಾಗಿ ಮಾರುಕಟ್ಟೆಯಿದ್ದರೂ ಸಹ ಪ್ರಸಾರ ಸಂಖ್ಯೆಯನ್ನು ವೃದ್ಧಿಪಡಿಸುವುದು ಕಷ್ಟವಾಗುತ್ತದೆ. ಆದ್ದರಿಂದ ಆರ್ಥಿಕ ಮಟ್ಟವನ್ನು ಗಮನದಲ್ಲಿಟ್ಟುಕೊಂಡ ಪತ್ರಿಕೆಗಳ ಪ್ರಕಟಣೆ ಹಾಗೂ ಪ್ರಸಾರ ಕಡಿಮೆಯಾಗುತ್ತದೆ.

ಕನ್ನಡ ಪತ್ರಿಕೋದ್ಯಮದಲ್ಲಿ ಅಸಹ್ಯವಾದ ಅಪಕ್ವ ಏಕಸ್ವಾಮ್ಯತೆಯಿದೆ. ಸಣ್ಣ ಸುದ್ದಿ ಪತ್ರಿಕೆಗಳ ಜೊತೆ ದೊಡ್ಡ ದೊಡ್ಡ ಪತ್ರಿಕೆಗಳನ್ನು ಹೋಲಿಸಿ ನೋಡಿದಾಗ ಅಪಕ್ವ ಏಕಸ್ವಾಮ್ಯತೆಯ ನಿಜವಾದ ಗುಣ ಮತ್ತು ವಿರೋಧಿ ವ್ಯಾಪಾರೀ ಉದ್ಯಮಗಳಲ್ಲಿ ಬಂಡವಾಳ ಹೂಡಿಕೆಗಳು ಕಾಣದಿರುವ ಬಗ್ಗೆ ಸರಿಯಾದ ವಿವರಣೆ ಕೊಡಲು ಸಾಧ್ಯವಾಗುತ್ತದೆ. ದೇಶದ ಬೇರೆ ಯಾವುದೇ ರಾಜ್ಯಕ್ಕೆ ಹೋಲಿಸಿ ನೋಡಿದರೂ ಕರ್ನಾಟಕ ಸಣ್ಣ ಸುದ್ದಿ ಪತ್ರಿಕೆಗಳ ಸಂಖ್ಯೆಯಲ್ಲಿ ಮೊದಲ ಸ್ಥಾನ ಗಳಿಸುತ್ತದೆ. ಇಲ್ಲಿ ಸಣ್ಣ ಪತ್ರಿಕೆಗಳ ಪ್ರಕಟಣೆಗೆ ಅವಕಾಶಗಳು ಹೆಚ್ಚಾಗಿವೆ. ಈ ಸಣ್ಣ ಪತ್ರಿಕೆಗಳ ಪ್ರಸಾರದಲ್ಲಿ ಒಂದು ಆಸಕ್ತಿಯುತ ಅಂಶ ತಿಳಿದು ಬರುತ್ತದೆ. ಅದೆಂದರೆ, ರಾಜ್ಯದ ಕೆಲವು ನಗರಗಳಲ್ಲಿ ಪ್ರಕಟವಾಗುವ ಪತ್ರಿಕೆಗಳು, ರಾಜ್ಯಮಟ್ಟದಲ್ಲಿ ಪ್ರಕಟವಾಗುವ ಕನ್ನಡ ಪತ್ರಿಕೆಗಳಿಗಿಂತ ಆ ಪ್ರದೇಶದಲ್ಲಿ ಹೆಚ್ಚು ಪ್ರಸಾರ ಹೊಂದಿವೆ. ಇದು ಕನ್ನಡ ಪತ್ರಿಕೋದ್ಯಮದಲ್ಲಿ ಮಾತ್ರ ಕಂಡು ಬರುವ ಒಂದು ವಿಶಿಷ್ಟ ಬೆಳವಣಿಗೆ. ಇದು ಅಪಕ್ವ ಏಕಸ್ವಾಮ್ಯತೆಯ ಪತ್ರಿಕೋದ್ಯಮ ತನ್ನ ಮೇಲೆ ತಾನೇ ಹೇರಿಕೊಂಡ ಮಿತಿಗಳಿಂದಾಗಿ ಉಂಟಾದ ಪರಿಣಾಮ.

ಸಾಂಪ್ರದಾಯಿಕ ನೆಲೆಯಿಂದ ರಾಜಕೀಯದ ನೆಲೆಯತ್ತ ತಿರುವು ಪಡೆಯುವಲ್ಲಿ ಕನ್ನಡ ಪತ್ರಿಕೋದ್ಯಮ ಹಲವು ಸಮಸ್ಯೆಗಳನ್ನು ಎದುರಿಸುತ್ತಿದೆ. ಆದರೆ ತಮಿಳುನಾಡು,

ಆಂಧ್ರಪ್ರದೇಶ ಮತ್ತು ಕೇರಳಗಳಲ್ಲಿ ರಾಜಕೀಯ ಪಕ್ಷಗಳ ಚಟುವಟಿಕೆಗಳು, ಚಳವಳಿಗಳು ಇಂತಹ ಸಾಹಸದ ಕೆಲಸಗಳಿಗೆ ಒತ್ತಾಸೆಯಾಗಿ ನಿಲ್ಲುತ್ತವೆ. ಆದರೆ, ಕರ್ನಾಟಕದಲ್ಲಿ ಅಂತಹ ರಾಜಕೀಯ ಸ್ವಚ್ಛಗುಣ ಇನ್ನೂ ಉಂಟಾಗಿಲ್ಲ. ಇದನ್ನು ಗಮನಿಸಿಯೇ ಇರಬಹುದು ಹರ್ಬರ್ಟ್ ಪ್ಯಾಸಿನ್ ಈ ರೀತಿ ಹೇಳುತ್ತಾನೆ. ''ಆಧುನೀಕರಣದ ಹಂತದಲ್ಲಿ ರಾಜಕೀಯ ಮತ್ತು ಸಾಮಾಜಿಕ ಮಾರ್ಪಾಡು ಹಾಗೂ ಪತ್ರಿಕೋದ್ಯಮದ ನಡುವೆ ಹತ್ತಿರದ ಸಂಬಂಧವಿರುವುದನ್ನು ನಾವು ಕಾಣುತ್ತೇವೆ.''



## ಮಹಾಮೂರ್ತಿಗೆ
## ಮಹಾಮಜ್ಜನ



ಹನ್ನೆರಡು ವರ್ಷಗಳಿಗೊಮ್ಮೆ ಕರ್ನಾಟಕದ ಹಾಸನ ಜಿಲ್ಲೆಯ ಶ್ರವಣಬೆಳಗೊಳದ ಬೃಹತ್ ಗೊಮ್ಮಟೇಶ್ವರನಿಗೆ ನಡೆಯುವ ಮಹಾಮಸ್ತಕಾಭಿಷೇಕ ರಾಷ್ಟ್ರಾದ್ಯಂತ ಜೈನ ಧರ್ಮೀಯರನ್ನು ಆಕರ್ಷಿಸುವ ಧಾರ್ಮಿಕ ಉತ್ಸವವಾಗಿರುವುದರ ಜೊತೆಗೆ ರಾಷ್ಟ್ರೀಯ ಉತ್ಸವವಾಗಿ ಪರಿಣಮಿಸಿದೆ.

ಒಂದು ಸಾವಿರ ವರ್ಷಕ್ಕೂ ಹಿಂದೆ (ಕ್ರಿ. ಶ. ೯೮೧ ಮಾರ್ಚಿ ೧೩) ಶ್ರವಣಬೆಳಗೊಳದ ವಿಂಧ್ಯಗಿರಿಯ ಮೇಲೆ ಪ್ರತಿಷ್ಠಾಪನೆಗೊಂಡ ಭಗವಾನ್ ಬಾಹುಬಲಿಯ ಈ ವಿಗ್ರಹ ಜಗತ್ತಿನ ಎತ್ತರವಾದ ಏಕಶಿಲಾ ವಿಗ್ರಹಗಳಲ್ಲೇ ಅತ್ಯಪೂರ್ವ ಎಂದು ಪರಿಗಣಿಸಲ್ಪಟ್ಟಿದೆ. ವಿಂಧ್ಯಗಿರಿಯ ಎತ್ತರವೇ ಸುಮಾರು ೫೦೦ ಅಡಿಗಳಿಷ್ಟಿದ್ದು ಅದರ ಮೇಲೆ ಪ್ರತಿಷ್ಠಾಪಿಸಿರುವ ಬಾಹುಬಲಿ ವಿಗ್ರಹದ ಎತ್ತರ ೫೮ ಅಡಿಗಳಾಗಿವೆ. ನಂತರ ೧೪೩೨ ಕಾರ್ಕಳದಲ್ಲಿ (೪೨ ಅಡಿ ಎತ್ತರ), ೧೬೦೪ರಲ್ಲಿ ವೇಣೂರಿನಲ್ಲಿ (೩೫ ಅಡಿ ಎತ್ತರ). ಧರ್ಮಸ್ಥಳದಲ್ಲಿ (೩೯ ಅಡಿ ಎತ್ತರ) ಗೊಮ್ಮಟೇಶ್ವರ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ.

ಬಾಹುಬಲಿ ಪ್ರಥಮ ಜೈನತೀರ್ಥಂಕರ ವೃಷಭನಾಥರ ದ್ವಿತೀಯ ಪುತ್ರ. ತನ್ನ ಹಿರಿಯ ಸಹೋದರ ಭರತ ಚಕ್ರವರ್ತಿಯೊಡನೆ ಧರ್ಮಯುದ್ಧ ಮಾಡಿ ವಿಜಯಿಯಾದ

ಮರುಕ್ಷಣದಲ್ಲೇ ಎಲ್ಲವನ್ನೂ ತ್ಯಾಗಮಾಡಿ, ತಪಸ್ವಿಯಾದ ಎಂದುಇತಿಹಾಸ ತಿಳಿಸುತ್ತದೆ. ದಿಗಂಬರ ಮುನಿಯಾಗಿ ಘೋರ ತಪಸ್ಸು ಮಾಡಿದ ಭಗವಾನ್ ಬಾಹುಬಲಿಯ ಭವ್ಯಮೂರ್ತಿಯನ್ನು ಶ್ರವಣಬೆಳಗೊಳದಲ್ಲಿ ಪ್ರತಿಷ್ಠಾಪಿಸಿದ ಕೀರ್ತಿ ಗಂಗರಾಜ ಚಾವುಂಡರಾಯನಿಗೆ ಸಲ್ಲುತ್ತದೆ.

ಗೊಮ್ಮಟೇಶ್ವರ ವಿಗ್ರಹ ಸ್ಥಾಪನೆಯಾಗಿ ೧೯೮೧ನೇ ವರ್ಷಕ್ಕೆ ಸಾವಿರವರ್ಷ ಪೂರ್ಣಗೊಂಡಿದ್ದರಿಂದ ಸಹಸ್ರಾಬ್ಧಿ ಉತ್ಸವವನ್ನು ೧೯೮೧ ನೇ ಫೆಬ್ರವರಿ ೨೨ ರಂದು ಸಂಭ್ರಮದಿಂದ ಆಚರಿಸಲಾಯಿತು. ಸಾಂಪ್ರದಾಯಿಕ ೧೦೦೮ ಕಳಶಗಳಿಂದ ಅಭಿಷೇಕಕ್ಕೆ ಮುನ್ನ ಶತಮಾನಕ್ಕೊಂದರಂತೆ ಪೂರ್ಣಗೊಂಡ ಹತ್ತು ಶತಮಾನಗಳ ಸಂಕೇತವಾಗಿ ಅಂದು ಹತ್ತು ವಿಶೇಷ ಕಲಶಗಳಿಂದ ಬಾಹುಬಲಿಗೆ ಅಭಿಷೇಕ ಮಾಡಲಾಯಿತು. ಆದರೆ ತೀರ ಅಪರೂಪದ ಈ ಧಾರ್ಮಿಕ ಉತ್ಸವ ವೀಕ್ಷಣೆಗೆ ಶ್ರವಣಬೆಳಗೊಳದಲ್ಲಿ ಆ ಐತಿಹಾಸಿಕ ದಿನದಂದು ಸೇರಿದ್ದವರ ಸಂಖ್ಯೆ ಮೂರು ಲಕ್ಷವನ್ನು ಮೀರಿತ್ತು.

ಫೆಬ್ರುವರಿ ೨೧, ೧೯೮೧ ರಂದು ಅಂದರೆ ಮಹಾಮಸ್ತಕಾಭಿಷೇಕಕ್ಕೆ ಒಂದು ದಿನ ಮುಂಚಿತವಾಗಿ ಆಗಮಿಸಿದ್ದ ಅಂದಿನ ಪ್ರಧಾನಿ ಇಂದಿರಾಗಾಂಧಿ ಅವರು ಹೆಲಿಕಾಪ್ಟರ್‌ನಲ್ಲಿ ಕುಳಿತು ಭಗವಾನ್ ಬಾಹುಬಲಿಯ ನೆತ್ತಿಯ ಮೇಲೆ ಪುಷ್ಪವೃಷ್ಟಿಯ ಮೂಲಕ 'ಅಭಿಷೇಕ' ಮಾಡಿ ನಮನ ಸಲ್ಲಿಸಿದರು. ನಂತರ ಶ್ರವಣಬೆಳಗೊಳ ಜೈನಮಠದ ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ ಅವರಿಗೆ ಬೆಳ್ಳಿಯ ತೆಂಗಿನಕಾಯಿ ಸಮರ್ಪಿಸಿದರು. ಭಕ್ತವೃಂದ ವಿವಿಧ ಮಂಗಳ ದ್ರವ್ಯಗಳಿಂದ ಅಭಿಷೇಕ ಮಾಡಿದಾಗ ಮೂರ್ತಿ ವಿವಿಧ ಬಣ್ಣಗಳಲ್ಲಿ ಕಂಗೊಳಿಸಿತ್ತು. ಪ್ರಥಮದಲ್ಲಿ ಜಲಾಭಿಷೇಕ, ನಂತರ ಎಳನೀರು, ಹಾಲು, ಕಬ್ಬಿನ ಹಾಲು, ಅರಿಶಿನ, ಚಂದನ ಹೀಗೆ ವಿವಿಧ ಬಗೆಯ ಅಭಿಷೇಕ. ಅಭಿಷೇಕಕ್ಕೆ ನೆತ್ತಿಯ ಮೇಲೆ ಹಾಲು ಹುಯ್ದಾಗ ಅಮೃತ ಶಿಲೆಯ ಪುತ್ಥಳಿಯಂತೆ, ಮೂರ್ತಿಯ ಮೇಲೆ ಅರಿಶಿನ ಧಾರೆಯಾಗಿ ಇಳಿದಾಗ ಅದು ಚಿನ್ನದ ಗೊಂಬೆಯಂತೆ ಕಂಡಿತು. ಶ್ರೀಗಂಧದ ಅಭಿಷೇಕವಾದಾಗ ನಸುಹಳದಿ ಬಣ್ಣ ಪಡೆದು ಶೋಭಾಯಮಾನವಾಗಿ ಕಣ್ಮನಗಳಿಗೆ ಆನಂದ ತಂದಿತ್ತು.

ಮೂರ್ತಿಯೇ ಬೃಹತ್ತಾಗಿರುವಾಗ, ಮಸ್ತಕಾಭಿಷೇಕಕ್ಕೆ ಬಳಸುವ ದ್ರವ್ಯಗಳ ಪ್ರಮಾಣವೂ ಬೃಹತ್ತಾಗಿರಬೇಕು. ಅಂದಾಜು ಸುಮಾರು ೫೦೦ ಎಳೆನೀರು, ೫೦೦ ಲೀಟರ್ ಹಾಲು, ೫೦೦ ಲೀಟರ್ ಕಬ್ಬಿನ ಹಾಲು ಮುಂತಾದುವನ್ನು ಬಳಸಲಾಗುತ್ತದೆ. ಆದರೆ ಬೆಟ್ಟದ ಮೇಲೆ ಸತತವಾಗಿ ಬಿಸಿಲು, ಮಳೆ ಗಾಳಿಯನ್ನು ಎದುರಿಸಿ ನಿಂತಿರುವ ಶಿಲಾಮೂರ್ತಿಗೆ ಕಾಲಕಾಲಕ್ಕೆ ಎಳನೀರು, ಹಾಲು -ಗಂಧ, ಮೊಸರು ಮುಂತಾದವುಗಳಿಂದ ಅಭಿಷೇಕ ಮಾಡುವುದು ಮೂಲತಃ ಧರ್ಮಾಚರಣೆ.

ಈ ಸಂದರ್ಭದಲ್ಲಿ ಲಕ್ಷಾಂತರ ಮಂದಿ ಭಕ್ತಾದಿಗಳು ಒಂದೆಡೆ ಸೇರುತ್ತಾರೆ ಎಂದರೆ ಅವರ ಕನಿಷ್ಠ ಅಗತ್ಯಗಳನ್ನು ಪೂರೈಸುವ ಜವಾಬ್ದಾರಿ ಸರ್ಕಾರದ ಮೇಲೆ ಇರುತ್ತದೆ. ೧೯೯೩ ರ ಮಹಾಮಜ್ಜನದ ಬಗ್ಗೆ ಮುಖ್ಯಮಂತ್ರಿ ವೀರಪ್ಪಮೊಯಿಲಿ ಅವರು ಹೇಳಿದ

ಪ್ರಕಾರ ರಾಜ್ಯ ಸರ್ಕಾರ ಸುಮಾರು ೧೨ ಕೋಟಿ ರೂಪಾಯಿ ಖರ್ಚು ಮಾಡುತ್ತದೆ. ಅದರಲ್ಲಿ ಶ್ರವಣಬೆಳಗೊಳ ಮತ್ತು ಸುತ್ತಮುತ್ತಲಿನ ಪ್ರದೇಶಗಳಿಗೆ ಕುಡಿಯುವ ನೀರು, ಒಳಚರಂಡಿ, ರಸ್ತೆ, ತರಕಾರಿ, ಮಾರುಕಟ್ಟೆ ಮುಂತಾದ ಶಾಶ್ವತ ಅಭಿವೃದ್ಧಿ ಕಾಮಗಾರಿಗಳ ವೆಚ್ಚವೇ ೯ ಕೋಟಿ ರೂ; ಶ್ರವಣಬೆಳಗೊಳ ಪುಟ್ಟ ಪಟ್ಟಣವಾಗಿದ್ದು, ಯಾತ್ರಾರ್ಥಿಗಳಿಗೆ ಸುತ್ತಮುತ್ತಲಿನ ನೀರು ಪೂರೈಸುವ ವ್ಯವಸ್ಥೆಯ ಲಾಭ ಸುಮಾರು ೧೮ ಗ್ರಾಮಗಳಿಗೆ ಶಾಶ್ವತ ಕುಡಿಯುವ ನೀರಿನ ವ್ಯವಸ್ಥೆಯ ರೂಪದಲ್ಲಿ ದೊರಕುತ್ತದೆ.

**ಹಿಂಸೆಯ ವಿರುದ್ಧ ಹೋರಾಟಕ್ಕೆ ಕರೆ**

''ಶೋಷಣೆ ಮತ್ತು ದಾರಿದ್ರ್ಯ ಅತಿದೊಡ್ಡ ಹಿಂಸೆ. ಮನುಕುಲ ಮಾಂಸಕ್ಕಾಗಿ ಪಶುಪಕ್ಷಿ ಮೀನುಗಳ ಹತ್ಯೆ ಮಾಡುವುದನ್ನು ನಿಲ್ಲಿಸಬೇಕು. ಮಾಂಸ ಸೇವನೆ ತ್ಯಾಜ್ಯ ಎಂಬ ಜೈನ ಮತದ ಸಂದೇಶವನ್ನು ಆಧುನಿಕ ವೈದ್ಯಕೀಯ ಸಂಶೋಧನೆಗಳೂ ಬೆಂಬಲಿಸಿವೆ. ಜೈನ ಧರ್ಮದ ಮೂಲತತ್ವ ಅಹಿಂಸೆಯನ್ನು ಸಮಾಜ ಅರ್ಥಪೂರ್ಣವಾಗಿ ಅಳವಡಿಸಿಕೊಳ್ಳಬೇಕು'' ಎಂದು ರಾಷ್ಟ್ರಪತಿ ಡಾ. ಶಂಕರ್‌ದಯಾಳ್ ಶರ್ಮಾ ಅವರು ಡಿಸೆಂಬರ್ ೩ ರಂದು ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರ ಮಹಾಮಸ್ತಕಾಭಿಷೇಕ ಉತ್ಸವವನ್ನು ಉದ್ಘಾಟಿಸಿ ಕರೆಯಿತ್ತರು. ಶ್ರೀಮತಿ ಶಂಕರದಯಾಳ ಶರ್ಮ ಅವರು ಉತ್ಸವದ ದೀಪ ಬೆಳಗಿಸಿದರು.

''ಗೊಮ್ಮಟೇಶ್ವರ ಭವ್ಯಮೂರ್ತಿ - ವಾಸ್ತುಶಿಲ್ಪ, ತಾಂತ್ರಿಕ ಕೌಶಲ್ಯದ ಜತೆಗೆ ಜೈನ ಸಂಪ್ರದಾಯದ ತತ್ವ, ದಾರ್ಶನಿಕತೆಯ ಪ್ರಾಚೀನತೆ ಮತ್ತು ಸರ್ವಕಾಲಿಕ ಮೌಲ್ಯಗಳ ಪ್ರತೀಕ. ಸಾವಿರ ವರ್ಷಗಳಿಂದ ಅದು ತಲೆಮಾರಿನಿಂದ ತಲೆಮಾರಿಗೆ ಸ್ಫೂರ್ತಿಯ ಚಿಲುಮೆ'' ಎಂದು ಹೇಳಿದ ಡಾ. ಶರ್ಮ ಅವರು ''ಅಹಿಂಸೆ ಎಂದರೆ ಕೇವಲ ದೈಹಿಕ ಹಿಂಸೆ ಆಗದಂತೆ ಮಾಡುವುದಷ್ಟೇ ಅಲ್ಲ, ಇತರರ ಭಾವನೆಗಳಿಗೆ ನೋವುಂಟು ಮಾಡಬಾರದು ಎಂಬ ಉದಾತ್ತ ಕಲ್ಪನೆ ಅದರಲ್ಲಿ ಅಡಗಿದೆ. ಅಹಿಂಸೆಯ ಪ್ರತಿಪಾದಕ ಗಾಂಧೀಜಿ ಕೂಡ ಪರಿಪೂರ್ಣ ಅಹಿಂಸೆ ಎಂದರೆ ದ್ವೇಷ ತೊರೆದು ಎಲ್ಲರ ಬಗ್ಗೆ ಸದ್ಭಾವನೆ ಬೆಳಸಿಕೊಳ್ಳಬೇಕು'' ಎಂದು ಹೇಳಿದ್ದಾರೆಂದು ವಿವರಿಸಿದರು.

''ಎಲ್ಲಾ ಧರ್ಮಗಳೂ ಶ್ರೇಷ್ಠ. ಧರ್ಮದ ಉದ್ದೇಶ ಒಗ್ಗೂಡಿಸುವುದೇ ಹೊರತು ಪ್ರತ್ಯೇಕಿಸುವುದಲ್ಲ. ಧರ್ಮಗಳ ನಡುವೆ ಸಂಘರ್ಷ ಸಲ್ಲ. ಧರ್ಮ ಮತ್ತು ಅಧರ್ಮದ ನಡುವೆ ಹೋರಾಟ ನಡೆಯುತ್ತದೆ. ಮಂದಿರ ಮತ್ತು ಮಸೀದಿ, ಪೂಜೆ ಮತ್ತು ನಮಾಜುಗಳ ನಡುವೆ ಭೇದವಿಲ್ಲ'' ಎಂದು ರಾಜ್ಯದ ರಾಜ್ಯಪಾಲ ಶ್ರೀ ಖುರ್ಷಿದ್ ಅಲಂಖಾನ್ ಅವರು ಹೇಳಿದರು.

''ಅನೇಕ ಉನ್ನತ ವಿಚಾರಗಳು ಹಾಗೂ ವಿಶ್ವಮಾನವ ಮೌಲ್ಯಗಳು ಪ್ರಾಕೃತ ಸಾಹಿತ್ಯದಲ್ಲಿ ಕಂಡು ಬರುತ್ತದೆ. ಇಂದು ಶ್ರವಣಬೆಳಗೊಳದಲ್ಲಿ ಉದ್ಘಾಟನೆಗೊಂಡ 'ಪ್ರಾಕೃತ ಭಾಷಾ ಅಧ್ಯಯನ ಕೇಂದ್ರ' ಜಾಗತಿಕ ಮಟ್ಟದಲ್ಲಿ ಹೆಸರು ಗಳಿಸಲಿ'' ಎಂದು ರಾಜ್ಯದ ಮುಖ್ಯಮಂತ್ರಿ ಶ್ರೀ ವೀರಪ್ಪ ಮೊಯಿಲಿ ಅವರು ಹಾರೈಸಿದರು.

ಈ ಸಂದರ್ಭದಲ್ಲಿ ಬೆಳಗೊಳದ ಜೈನ ಮಠಾಧಿಪತಿ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ, ರಾಜ್ಯ ಸಮಿತಿಯ ಕಾರ್ಯಾಧ್ಯಕ್ಷ, ಕಾನೂನು ಸಚಿವ ಹಾರನಹಳ್ಳಿ ರಾಮಸ್ವಾಮಿ, ಸ್ವಾಗತ ಸಮಿತಿಯ ಅಧ್ಯಕ್ಷ ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ಡಿ. ವೀರೇಂದ್ರ ಹೆಗ್ಗಡೆ, ರಾಷ್ಟ್ರೀಯ ಮಹೋತ್ಸವ ಸಮಿತಿ ಅಧ್ಯಕ್ಷ -ಉದ್ಯಮಿ ಸಾಹು ಅಶೋಕ್ ಕುಮಾರ್ ಜೈನ್, ಉತ್ಸವ ಸಮಿತಿಯ ಉಪಾಧ್ಯಕ್ಷ ಶ್ರೀ ಕೆ. ಪಿ. ಸುರೇಂದ್ರನಾಥ್ ಅವರು ಪಾಲ್ಗೊಂಡಿದ್ದರು. ಸಚಿವರಾದ ಶ್ರೀ ಕೆ. ಎಚ್. ರಂಗನಾಥ್, ಶ್ರೀ ಎನ್. ಹುಚ್ಚಮಾಸ್ತಿಗೌಡ, ರಾಜ್ಯ ಗೃಹ ಮಂಡಳಿಯ ಅಧ್ಯಕ್ಷ ಹೆಚ್. ಸಿ. ಶ್ರೀಕಂಠಯ್ಯ ಹಾಸನದ ಲೋಕಸಭಾ ಸದಸ್ಯ ಶ್ರೀ ಹೆಚ್. ಡಿ. ದೇವೇಗೌಡ, ಶ್ರವಣಬೆಳಗೊಳ ಕ್ಷೇತ್ರದ ಶಾಸಕ ಡಾ. ಎನ್. ಬಿ. ನಂಜಪ್ಪ ಮುಂತಾದ ಗಣ್ಯರು, ನಾಗರಿಕರು, ಭಕ್ತಾದಿಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

**ಗೊಮ್ಮಟನಿಗೆ ಹೂಮಳೆ**

ಸರ್ವಸಂಗ ಪರಿತ್ಯಾಗಿಯಾದ ಜಗತ್ತಿನ ಅತಿದೊಡ್ಡ ಶ್ರವಣಬೆಳಗೊಳದ ಏಕಶಿಲಾ ಪ್ರತಿಮೆಯಾದ ಬಾಹುಬಲಿಯ ಮೇಲೆ ಮುಗಿಲಿನಿಂದ ನವರತ್ನ ಖಚಿತ ಬೆಳ್ಳಿ ಬಂಗಾರದ ಹೂಮಳೆಗರೆದು ೧೯೯೩ ಡಿಸೆಂಬರ್ ೧೯ ರಂದು ಮೊದಲಾಗುವ ಮಹಾಮಜ್ಜನಕ್ಕೆ ಮುನ್ನ ಪ್ರಧಾನಿ ಪಿ. ವಿ. ನರಸಿಂಹರಾವ್ ಅವರು ಡಿಸೆಂಬರ್ ೧೮ ರಂದು ರಾಷ್ಟ್ರದ ಪರವಾಗಿ ಪುಷ್ಪಾರ್ಚನೆ ಸಲ್ಲಿಸಿದರು.

ದೆಹಲಿಯಿಂದ ವಾಯುಪಡೆ ಹೆಲಿಕಾಪ್ಟರಿನಲ್ಲಿ ಇಲ್ಲಿಗೆ ಆಗಮಿಸಿ ಆಗಸದಲ್ಲೇ ಮೂರು ಸುತ್ತು ಪ್ರದಕ್ಷಿಣೆ ಹಾಕಿ ಪೂಜೆ ಸಲ್ಲಿಸಿದ ಪ್ರಧಾನಿ ನಂತರ ನಡೆದ ಸಾರ್ವಜನಿಕ ಸಭೆಯಲ್ಲಿ ೧೯೮೧ ರಲ್ಲಿ ಇಂದಿರಾಗಾಂಧಿ ಅವರಿಗೆ ದೊರೆತ ಈ ಅದೃಷ್ಟ ತಮಗೂ ಇಂದು ೯೩ ರಲ್ಲಿ ಒದಗಿದ್ದಕ್ಕೆ ಸಂತಸ ವ್ಯಕ್ತಪಡಿಸಿದರು.

ಇಲ್ಲಿನ ಕಾಲೇಜು ಮೈದಾನದಲ್ಲಿ ಸಮಾರಂಭಕ್ಕೆಂದೇ ವಿಶೇಷವಾಗಿ ನಿರ್ಮಿಸಲಾಗಿದ್ದ ವೇದಿಕೆಯಲ್ಲಿ ಗುಂಡುನಿರೋಧಕ ಪರದೆಯ ಹಿಂದೆ ನಿಂತು ಮಾತನಾಡಿದ ಪ್ರಧಾನಿ ಅವರು, ಸುರಕ್ಷತೆಯ ಕಾರಣ ಯಾತ್ರಿ ನಿವಾಸದ ಉದ್ಘಾಟನೆಗೂ ಕೆಳಗಿಳಿಯಲಿಲ್ಲ. ವೇದಿಕೆಯ ಮೇಲಿಂದಲೇ ದಾರ ಎಳೆದು ಉದ್ಘಾಟನಾ ಫಲಕದ ತೆರೆ ಸರಿಸಿದರು.

ಧಾರ್ಮಿಕ ಕ್ಷೇತ್ರಗಳಿಗೆ ತಾವು ಭೇಟಿ ನೀಡುವುದನ್ನು 'ಪೆಟ್ರೋಲ್ ಖಾಲಿಯಾದಾಗ ಬಂಕ್‌ಗೆ ಹೋಗಿ ಪೆಟ್ರೋಲ್ ತುಂಬಿಸಿಕೊಂಡಂತೆ' ಎಂದು ಪ್ರಧಾನಿ ವರ್ಣಿಸಿದರು. ರೇಷ್ಮೆಯ ಜುಬ್ಬಾ, ಧೋತರ, ಪೇಟ ಧರಿಸಿದ್ದ ನರಸಿಂಹರಾವ್ ಅವರ ಹಿಂದಿಯ ಭಾಷಣ ಸಾರ್ವತ್ರಿಕ ಮೆಚ್ಚುಗೆಗೆ ಪಾತ್ರವಾಯಿತು. ಅವರಿಗೆ ಅಭೂತಪೂರ್ವ ಸ್ವಾಗತ ಸಿಕ್ಕಿತು.

ಹಿಂದಿ ಸಿನಿಮಾ ರಂಗದ ಪ್ರಸಿದ್ಧ ಸಂಗೀತ ನಿರ್ದೇಶಕ ರವೀಂದ್ರ ಜೈನ್, 'ಬಾಹುಬಲಿಯ ಪುಣ್ಯಕ್ಷೇತ್ರಕ್ಕೆ ಪ್ರಧಾನಿ ಅವರಿಗೆ ಸ್ವಾಗತ'ಎಂಬ ಭಾವಾರ್ಥದ ಗೀತೆ ಹಾಡಿ ಅದನ್ನು ಸ್ವಾಗತ ಗೀತೆಯಾಗಿ ಮಾರ್ಪಡಿಸಿದರು.

ವೇದಿಕೆಯ ಮೇಲೆ 'ಅಹಿಂಸೆಯ ಸುಖ, ತ್ಯಾಗದಿಂದ ಶಾಂತಿ' ಎಂಬ ಬಾಹುಬಲಿಯ ಸಂದೇಶ ಸಾರುವ ಭಿತ್ತಿಪತ್ರ ಕಟ್ಟಲಾಗಿತ್ತು. ಸಾರ್ವಜನಿಕ ಸಮಾರಂಭದ ಸ್ಥಳದಲ್ಲಿ ಪ್ರಧಾನಿ ನರಸಿಂಹರಾವ್ ಅವರ ಪ್ರತಿಕೃತಿ ನಿಲ್ಲಿಸಲಾಗಿತ್ತು. ವೇದಿಕೆಯ ಸುತ್ತಮುತ್ತ ಕಾಂಗ್ರೆಸ್ ಧ್ವಜಗಳು ಹಾರಾಡುತ್ತಿದ್ದವು.

**ವೈಭವದ ಮಹಾಮಜ್ಜನ**

ಅನನ್ಯ ಚೆಲುವು, ಅಲೌಕಿಕ ಕಾಂತಿಯ ಮಹಾತ್ಯಾಗಿ ಗೊಮ್ಮಟನ ಶಿಖರ ಸದೃಶ ವಿಗ್ರಹಕ್ಕೆ ಡಿಸೆಂಬರ್ ೧೯ ರಂದು ಕುಂಭ ಲಗ್ನದ ಸುಮುಹೂರ್ತದಲ್ಲಿ ವೈಭವದಿಂದ ೮೫ ನೇ ಮಹಾಮಜ್ಜನ ನೆರವೇರಿತು.

ಹಾಲು, ಅರಿಷಿಣ, ಕುಂಕುಮ, ಚಂದನಗಳ ಪವಿತ್ರಧಾರೆಯಲ್ಲಿ ಮಿಂದು ಸ್ನಿಗ್ಧ ಅರಳಿಸಿ ಕ್ಷಣಕ್ಷಣಕ್ಕೂ ನವೀನನಾಗಿ ನಿಂತ ಬಾಹುಬಲಿ ಸ್ವಾಮಿಯು ಲಕ್ಷಾಂತರ ಜನರಿಗೆ ಅವರವರ ಭಾವಭಕ್ತಿಗಳಿಗೆ ತಕ್ಕಂತೆ ದರ್ಶನ ನೀಡಿದ. ನೆತ್ತಿಯಿಂದ ಪಾದದವರೆಗೆ ಅಲೆ ಅಲೆಯಾಗಿ ಹರಿದ ಕ್ಷೀರ ಧಾರೆಯಲ್ಲಿ ಅಮೃತಶಿಲೆಯ ಮೂರ್ತಿಯಾಗಿ ತೋರಿ, ಅರಿಶಿಣ ಕುಂಕುಮದ ನೀರ ಧಾರೆಯಲ್ಲಿ ವರ್ಣರಂಜಿತವಾಗಿ ವಿರಾಜಿಸಿ, ಪರಿಮಳಭರಿತ ಚಂದನದ್ರವ್ಯ ಸ್ನಾನದೊಂದಿಗೆ ಚಂದನದ ಪ್ರತಿಮೆಯೇ ಆಗಿ ಕಂಗೊಳಿಸಿದ ಸುಂದರಾಂಗ ಬಾಹುಬಲಿ ನೋಡುಗರ ಕಣ್ಮನಗಳಲ್ಲಿ ಎಂದೂ ಅಳಿಯದ ಮುದ್ರೆ ಒತ್ತಿದ.

ಬಾಹುಬಲಿ ವಿಂಧ್ಯಗಿರಿಯಲ್ಲಿ ನೆಲೆ ನಿಂತಾಗಿನಿಂದಲೂ ಪ್ರತಿ ಹನ್ನೆರಡು ವರ್ಷಕ್ಕೊಮ್ಮೆ ಮಹಾಮಸ್ತಕಾಭಿಷೇಕ ನಡೆದಿದೆ. ವರುಷ ವರುಷಗಳಿಂದ ಕಾದಿದ್ದ ಆ ಅಮೃತ ಕ್ಷಣ ಬಂದಾಗ ವಿಂಧ್ಯಗಿರಿಯ ಮೇಲೆ ಸೇರಿದ್ದ ಭಕ್ತರಲ್ಲಿ ಮಿಂಚಿನ ಸಂಚಾರ. ಜೈನ ಪಂಡಿತರ ಮಂತ್ರಘೋಷಗಳ ನಡುವೆ ಗೊಮ್ಮಟಮೂರ್ತಿಯ ಮಸ್ತಕದ ಮೇಲಿಂದ ಪ್ರಥಮ ಮಂಗಲ ಕಲಶದ ನೀರು ಹರಿದು ಪಾದ ತಲುಪಿದಾಗ ಎಲ್ಲರಲ್ಲೂ ಧನ್ಯತೆಯ ಭಾವ.

ಶ್ರವಣಬೆಳಗೊಳದ ಜೈನ ಮಠಾಧೀಶ ಕರ್ಮಯೋಗಿ ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳ ನೇತೃತ್ವದಲ್ಲಿ ನಡೆದ ಈ ಮಹಾಮಸ್ತಕಾಭಿಷೇಕದಲ್ಲಿ ಪ್ರಥಮ ಮಂಗಲ ಕಲಶವನ್ನು ಅಭಿಷೇಕ ಮಾಡುವ ಭಾಗ್ಯ ದೆಹಲಿಯ ಉದ್ಯಮಿ ಸುಧೀರ್ ಕುಮಾರ್ ಜೈನ್ ಅವರದಾಯಿತು. ದೆಹಲಿಯ ಸುರೇಶ್ ಚಂದ್ ಜೈನ್, ಕಲ್ಕತ್ತಾದ ರತನ್‌ಲಾಲ್‌ಜಿ ಗಂಗ್ವಾಲ್ ಹಾಗೂ ದೆಹಲಿಯ ನಂದಕಿಶೋರ್ ಜೈನ್ ದ್ವಿತೀಯ ಹಾಗೂ ತೃತೀಯ ಕಲಶಗಳ ಅಭಿಷೇಕ ಮಾಡಿದರು. ಈ ಮುನ್ನ ಗೊಮ್ಮಟನ ಪಾದದ ಬಳಿ ೧೦೦೮ ಕಲಶಗಳನ್ನು ವರ್ಧಮಾನ ಸಾಗರಜೀ ಮಹಾರಾಜ ಮುನಿಸಂಘ ಹಾಗೂ ಆರ್ಯಕಾಮಾತೆಯವರ ಸಮಕ್ಷಮದಲ್ಲಿ ಪೂಜಿಸಲಾಯಿತು.

ಗೊಮ್ಮಟನ ಪದತಲದಲ್ಲಿ ಚಿನ್ನದ ಮೆರುಗಿನ ಬೆಳ್ಳಿಯ ಕಲಶ, ಬೆಳ್ಳಿ, ತಾಮ್ರ ಹಾಗೂ ಕಂಚಿನ ಕಲಶಗಳನ್ನು ಸಾಲಾಗಿ ಜೋಡಿಸಿದ್ದು ಮನಮೋಹಕವಾಗಿತ್ತು. ಕಲಶಗಳ ಜೊತೆಗಿದ್ದ ವೀಳ್ಯದೆಲೆಗಳು ಅನಂತರ ಬಾಹುಬಲಿಯ ವಿಗ್ರಹದ ಮೇಲೆ ನಲಿದವು.

ವಿಂಧ್ಯಗಿರಿಯ ನೆತ್ತಿಯ ಮೇಲೆ ಅಂದು ಇಡೀ ಭಾರತ ಪ್ರತ್ಯಕ್ಷವಾಗಿತ್ತು. ಕನ್ಯಾಕುಮಾರಿಯಿಂದ ಪೂರ್ವದ ತುದಿಯ ಅಸ್ಸಾಂ ಮೇಘಾಲಯಗಳವರೆಗೆ ಎಲ್ಲೆಡೆಯಿಂದ ಬಂದ ಭಕ್ತರು, ಅರಿಷಿಣ ಇಲ್ಲವೇ ಶ್ವೇತ ವಸ್ತ್ರಧರಿಸಿ 'ಭಗವಾನ್ ಬಾಹುಬಲಿಕಿ ಜೈ' ಎಂಬ ಘೋಷಣೆಯೊಂದಿಗೆ ಮಹಾಮಜ್ಜನದ ಪವಿತ್ರ ಕಾರ್ಯದಲ್ಲೂ ಕೈಗೂಡಿಸಿದರು. ಬೆಟ್ಟದ ಕೆಳಗೆ ಸೇರಿದ್ದ ಸಹಸ್ರಾರು ಜನರೂ ಸ್ವತಃ ಈ ಅಪೂರ್ವ ಮಹಾಮಜ್ಜನವನ್ನು ಕಾಣಲಾಗದಿದ್ದರೂ ಮನದಲ್ಲೇ ಬಾಹುಬಲಿಯ ದಿವ್ಯಮೂರ್ತಿಯನ್ನು ಸಾಕ್ಷಾತ್ಕರಿಸಿಕೊಂಡಿದ್ದರು.

ರತ್ನ ಕಲಶ, ಸುವರ್ಣ ಕಲಶ, ಮಹಾರಜತ ಕಲಶ ಇತ್ಯಾದಿಯಾಗಿ ಹೆಸರಿಸಿದ ೧೦೦೮ ಕಲಶಗಳ ಸುಗಂಧ ಜಲದ ಅಭಿಷೇಕದ ನಂತರ ಕಬ್ಬಿನ ಹಾಲಿನ ಅಭಿಷೇಕ ಮಾಡಲಾಯಿತು. ಮಳೆಗಾಳಿಗೆ ಎದೆಯೊಡ್ಡಿ ನಿಂತ ಏಕಶಿಲೆಯ ವಿಗ್ರಹ ನಸುಹಸಿರುಬಣ್ಣಕ್ಕೆ ತಿರುಗಿತು. ಬೆಟ್ಟದ ತುಂಬಾ ಕಬ್ಬಿನ ಹಾಲಿನ ಕಂಪು ಪಸರಿಸಿತು.

ಅನಂತರ ಹಾಲಿನ ಅಭಿಷೇಕ, ಧುಮ್ಮಿಕ್ಕಿದ ನೊರೆಹಾಲು ಎದೆ, ಭುಜಗಳ ಮೇಲೆ ತೆರೆ ತೆರೆಯಾಗಿ ಇಳಿಯುತ್ತಿದ್ದಂತೆ ೫೮ ಅಡಿಯ ಎತ್ತರ ಗೊಮ್ಮಟ ವಿಗ್ರಹ 'ಶ್ವೇತ ವಸ್ತ್ರದಾರಿಯಾಗಿ'ರಾರಾಜಿಸಿತು. ಹರಿದ ಹಾಲಿನ ಹೊನಲು ವಿಗ್ರಹದ ಪಾದಗಳ ಸಮೀಪ ಪುಟ್ಟ ಕೊಳವಾಗಿ ನೀರ ಜೊತೆ ಬೆರೆತು ಮೂರ್ತಿಯನ್ನು ಪ್ರತಿಬಿಂಬಿಸಿತು.

ಬಾಹುಬಲಿಗೆ ಕಂದು ಬಣ್ಣ ತಂದಿತ್ತ ಕಲಶಚೂರ್ಣದ ಅಭಿಷೇಕ, ಇದರ ಬೆನ್ನಲ್ಲೇ ಅಕ್ಕಿ ಹಿಟ್ಟು ಮೊದಲಾದವು ಬೆರೆತ ಶ್ವೇತ ಚೂರ್ಣದ ಅಭಿಷೇಕ ಗಾಳಿಗೆ ಹಾರಿದ ಹಿಟ್ಟಿನ ಮೋಡ ಮುಸುಕಿ ಗೊಮ್ಮಟ ಅರೆಕ್ಷಣ ಭಕ್ತರ ಕಣ್ತಪ್ಪಿಸಿದ. ನಂತರ ಸುಗಂಧ ಚೂರ್ಣ ಗೊಮ್ಮಟನ ಮಜ್ಜನಕ್ಕೆ ಸುಗಂಧ ತಂದಿತು.

ಅರಿಶಿಣ ದ್ರವ್ಯದ ಅಭಿಷೇಕ ಮೊದಲಾಗುತ್ತಿದ್ದಂತೆ ವಿಗ್ರಹ ಬಂಗಾರ ವರ್ಣದಿಂದ ಹೊಳೆಯಿತು. ಪ್ರಮಾಣಬದ್ಧ ಅಂಗಸೌಷ್ಟವ, ದೈವೀಕ ಸೌಂದರ್ಯದ ಗೊಮ್ಮಟನಿಗೆ ಬಂಗಾರದ ಮೆರಗು ನೀಡಿದ ಅರಿಷಿಣ ಸ್ನಾನ ಕೊನೆಗೊಳ್ಳುತ್ತಿದ್ದಂತೆ ಚಂದನದ ನೀರು ಗೊಮ್ಮಟನ ಮೇಲೆ ಧುಮುಕಿ ವಾತಾವರಣದಲ್ಲಿ ಚಂದನ ಹೊಮ್ಮಿತು.

ವಿವಿಧ ದ್ರವ್ಯಗಳ ಮಂಗಲಸ್ನಾನದ ನಂತರ ಬಾಹುಬಲಿಗೆ ಪುಷ್ಪ ಪತ್ರೆಗಳ ಮಜ್ಜನ, ಪುಸ್ತಕದ ಮೇಲಿಂದ ಸುರಿದ ಬುಟ್ಟಿಗಟ್ಟಲೆ ಸುಗಂಧರಾಜ, ಸೇವಂತಿಗೆ, ಗುಲಾಬಿ, ತುಳಸೀದಳ ಹೂಮಳೆಯ ದೃಶ್ಯ ಸೃಷ್ಟಿಸಿದವು.

ಕಡೆಯ ಕಲಶವಾದ ಪೂರ್ಣ ಕುಂಭದ ಅಭಿಷೇಕವನ್ನು ಔರಂಗಬಾದ್‌ನ ಉದ್ಯಮಿ ಜಿ.ಯು. ಜೈನ್ ಅವರ ಕುಟುಂಬದವರು ನೆರವೇರಿಸಿದರು. ಧರ್ಮಸ್ಥಳದ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆ ಅವರು ಚಾರುಕೀರ್ತಿ ಭಟ್ಟಾರಕರೊಡನೆ ಕಲಶಾಭಿಷೇಕ ಮಾಡಿದರು. ರಾಜಸ್ತಾನದ ಮೋತಿಲಾಲ್ ಮೂರ್ಖಿಂಡ್, ಸ್ಥಳೀಯ ಅರ್ಚಕ ರತ್ನರಾಜ್ ಸೇರಿದಂತೆ ೩೨ ಜನ ಅರ್ಚಕರು ಧಾರ್ಮಿಕ ವಿಧಿಗಳಲ್ಲಿ ಸ್ವಾಮೀಜಿ ಅವರೊಡನೆ ಸಹಕರಿಸಿದರು.

ಸಚಿವರಾದ ಹಾರನಹಳ್ಳಿ ರಾಮಸ್ವಾಮಿ, ಗೋಪಿನಾಥ ಸಾಂಡ್ರಾ ಅವರೂ ಅಭಿಷೇಕ ಮಾಡಿದರು.

ಮುಖ್ಯಮಂತ್ರಿ ವೀರಪ್ಪಮೊಯಿಲಿ, ಕೇಂದ್ರ ಕೃಷಿ ಸಚಿವ ಬಲರಾಂ ಜಾಖಡ್, ಜಗದೀಶ್ ಟೈಟ್ಲರ್ ಮುಂತಾದ ಗಣ್ಯರೂ ಈ ಅಪೂರ್ವ ದೃಶ್ಯವನ್ನು ವೀಕ್ಷಿಸಿದರು. ಬೆಳಗಿನ ಜಾವದಿಂದಲೇ ನಾಡಿನ ಎಲ್ಲೆಡೆಗಳಿಂದ ಯಾತ್ರಿಕರ ಮಹಾಪೂರ ಶ್ರವಣಬೆಳಗೊಳದ ಕಡೆಗೆ ಹರಿದು ಬರುತ್ತಿತ್ತು. ರೈಲು, ಬಸ್ಸು, ಟೆಂಪೋ, ಮೆಟಡಾರ್ ಮುಂತಾದ ವಾಹನಗಳ ಜೊತೆಗೆ ಎತ್ತಿನ ಗಾಡಿಗಳಲ್ಲಿ ಕೂಡ ಮಹಾನ್ ವೈರಾಗ್ಯ ಮೂರ್ತಿಯ ಮಹಾನ್ ಮಜ್ಜನ ವೀಕ್ಷಿಸಲು ಬಂದ ಲಕ್ಷಾಂತರ ಜನರ ಹೆಜ್ಜೆ ಹಾಗೂ ದೃಷ್ಟಿ ಬಾಹುಬಲಿಯ ವಿಗ್ರಹವಿರುವ ವಿಂಧ್ಯಗಿರಿ ಮೇಲೆ. ಎಲ್ಲರ ಬಾಯಲ್ಲಿ 'ಬೋಲೋ ಭಗವಾನ್ ಬಾಹುಬಲಿ ಕಿ ಜೈ' ಎಂಬ ಜೈಕಾರ.

ಗುಜರಾತ್, ರಾಜಸ್ಥಾನ್, ದೆಹಲಿ ಮತ್ತಿತರ ಕಡೆಗಳಿಂದ ದಕ್ಷಿಣದ ಎಲ್ಲ ರಾಜ್ಯಗಳಿಂದ ಬಂದ ಯಾತ್ರಿಕರು, ಪ್ರವಾಸಿಗರು, ವಿದೇಶಗಳಿಂದ ಬಂದ ಪತ್ರಕರ್ತರು, ಪ್ರವಾಸಿಗರು, ಛಾಯಾಚಿತ್ರಗ್ರಾಹಕರು, ಪ್ರವಾಸಿ ಬರಹಗಾರರು, ಕುತೂಹಲ ಕಾತರಗಳೊಂದಿಗೆ ಶ್ರವಣಬೆಳಗೊಳಕ್ಕೆ ಪ್ರಯಾಣ ಬೆಳೆಸಿದ್ದರು.

ಚಂದ್ರಗಿರಿ ಮೇಲೆ ಕುಳಿತ ಸಹಸ್ರಾರು ಜನರು ವಿಂಧ್ಯಗಿರಿಯ ಮೇಲೆ ನಡೆದ ಮಹಾಮಜ್ಜನ ವೀಕ್ಷಿಸಿದರು. ಶ್ರವಣಬೆಳಗೊಳದ ಬೀದಿ ಹಾಗೂ ಬೆಂಗಳೂರು ರಸ್ತೆಯಲ್ಲಿ ಸಹಸ್ರಾರು ಜನರು ನಿಂತು ವೀಕ್ಷಿಸಿದರು.

ಅಕ್ಕಪಕ್ಕದ ಬಂಡೆಗಲ್ಲು, ದೊಡ್ಡ ಮರಗಳ ಮೇಲೆ ನಿಂತು, ಕೂತು ವೀಕ್ಷಿಸಿದವರು ಹಲವರು. ಸುಮಾರು ೧೫೦ ಕ್ಲೋಸ್ ಸರ್ಕೀಟ್ ಟಿ. ವಿ. ಸೆಟ್ಟುಗಳನ್ನು ಶ್ರವಣಬೆಳಗೊಳದ ವಿವಿಧೆಡೆ ಇಟ್ಟಿದ್ದರಿಂದ ಬೆಟ್ಟ ಏರಲಾಗದವರು ಮಸ್ತಕಾಭಿಷೇಕ ವೀಕ್ಷಿಸಲು ಸಾಧ್ಯವಾಯಿತು.

ಗೊಮ್ಮಟದ ವಿಗ್ರಹದ ಮುಂಭಾಗದ ವೇದಿಕೆಯ ಮೇಲೆ ವಿಶೇಷ ಆಹ್ವಾನಿತರಿಗೆ, ಮಾಧ್ಯಮದವರಿಗೆ ಹಾಗೂ ಕಳಶಗಳನ್ನು ಮುಂದಾಗಿಯೇ ಕೊಂಡವರಿಗೆ ಕುಳಿತುಕೊಳ್ಳಲು ಅವಕಾಶ ಕಲ್ಪಿಸಲಾಗಿತ್ತು. ಇಲ್ಲಿ ವಿಶೇಷ ಆಹ್ವಾನಿತರು, ಕಾಷಾಯ ವಸನಧಾರಿಗಳು, ಶ್ವೇತ ವಸನಧಾರಿಗಳು, ನಾಡಿನ ನಾಲ್ಕು ನಿಟ್ಟಿನಿಂದ ಬಂದ ಪ್ರವಾಸಿಗರು, ಯಾತ್ರಿಕರು ಆಸೀನರಾಗಿದ್ದರು.

**ಅಹಿಂಸೆ ಸಂದೇಶ**

''ಅಹಿಂಸೆಯಿಂದ ಸುಖ, ತ್ಯಾಗದಿಂದ ಶಾಂತಿ ಎಂಬ ಭಗವಾನ್ ಬಾಹುಬಲಿಯ ಸಂದೇಶ ವಿಶ್ವವ್ಯಾಪ್ತಿಯಾಗಬೇಕು'' ಎಂದು ಶ್ರವಣಬೆಳಗೊಳದ ಜೈನ ಮಠಾಧೀಶ ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳು ಡಿಸೆಂಬರ್ ೧೯ ರಂದು ಭಕ್ತಾದಿಗಳಿಗೆ ಕರೆಯಿತ್ತರು. ಮಹಾಮಸ್ತಕಾಭಿಷೇಕ ನಡೆಯುತ್ತಿದ್ದಂತೆ ತಮ್ಮನ್ನು ಭೇಟಿ ಮಾಡಿದ ವರದಿಗಾರರೊಂದಿಗೆ ಮಾತನಾಡಿದ ಸ್ವಾಮೀಜೀ ''ಬಾಹುಬಲಿಯ ಅಮರ

ಸಂದೇಶಗಳನ್ನು ಜನತೆ ತಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕು'' ಎಂದು ಆಶಿಸಿದರು.

ಅಭಿಷೇಕದ ವೀಕ್ಷಣೆಗೆ ಕಟ್ಟಿದ ಅಟ್ಟಣಿಗೆಯ ಮೇಲೆಯೇ ಪತ್ರಕರ್ತರೊಂದಿಗೆ ಮಾತನಾಡಿದ ಧರ್ಮಸ್ಥಳದ ಧರ್ಮಾಧಿಕಾರಿ ವೀರೇಂದ್ರಹೆಗ್ಗಡೆ ಅವರು ''ಉತ್ತರ ಭಾರತದಲ್ಲಿ ಕುಂಭಮೇಳ ರಾಷ್ಟ್ರೀಯ ಹಬ್ಬವಾಗಿರುವಂತೆಯೇ ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕ ದಕ್ಷಿಣದ ಬಹುದೊಡ್ಡ ಉತ್ಸವ. ದೇಶದ ಮೂಲೆ ಮೂಲೆಗಳಿಂದ ಇದಕ್ಕಾಗಿ ಜನ ಆಗಮಿಸಿದ್ದಾರೆ'' ಎಂದು ತಿಳಿಸಿದರು.

*ಸಂಗ್ರಹ : ಸಂಪಾದಕ - 'ಪ್ರಜಾವಾಣಿ ಯಿಂದ*



# ಭಾಗ — ೪

## ಸಂಕೀರ್ಣ

* ಅಕಾಡೆಮಿಗಳು ಮತ್ತು ಸಾಹಿತ್ಯ ಪರಿಷತ್ತು
* ಕನ್ನಡ ಅಭಿವೃದ್ಧಿ ಪ್ರಾಧಿಕಾರ
* ಕೇಂದ್ರ ಸಾಹಿತ್ಯ ಕಾಡೆಮಿ ಅಧ್ಯಕ್ಷರ ಆಯ್ಕೆ
* ಪುಸ್ತಕ ಪ್ರಾಧಿಕಾರ ಅಧ್ಯಕ್ಷರ ನೇಮಕ
* ಹೊರನಾಡ ಕನ್ನಡಿಗರ ಚಟುವಟಿಕೆ
* ಅಗಲಿದ ಗಣ್ಯರು

# ಅಖಿಲ ಭಾರತ ೬೨ನೆಯ ಕನ್ನಡ ಸಾಹಿತ್ಯ ಸಮ್ಮೇಳನ ,ಕೊಪ್ಪಳ

*ಸಮ್ಮೇಳನಾಧ್ಯಕ್ಷ ಡಾ. ಸಿಂಪಿ ಲಿಂಗಣ್ಣ ಅವರ ಆಶಯ ಭಾಷಣದ ಆಯ್ದ ಭಾಗ*

---

ತನ್ನಂಗೆ ನೋಡಿದರ ಭಿನ್ನಿಲ್ಲ ಭೇದಿಲ್ಲ
ತನ್ನಂಗ ತನ್ನ ಮಗಳಂಗ ನೋಡಿದರ
ಕಣ್ಣ ಮುಂದಾದ ಕೈಲಾಸ !



ಗರತಿಯ ಹಾಡಿನ ಈ ತ್ರಿಪದಿ ನನ್ನ ಮಟ್ಟಿಗೆ ಸಂಸಾರವೇದವಾಗಿದೆ. ನನ್ನ ಜೀವದ ಜೀವಾಳವಾಗಿದೆ. ಇಂಥ ನೂರೂರು ತ್ರಿಪದಿಗಳ ಸವಿಯನ್ನು ಸವಿಯುತ್ತ ಬಂದ ನಾನು ಮೂಲತಃ ಜಾನಪದ ಜೀವಿಯೇ ಆಗಿದ್ದೇನೆ.

ಕರ್ನಾಟಕದ ಒಂದು ಮೂಲೆಯ ಹಳ್ಳಿಯಾದ ಚಡಚಣದಲ್ಲಿ ಕುಳಿತು ನನಗೆ ತಿಳಿದ ರೀತಿಯಲ್ಲಿ ಸಾಹಿತ್ಯ ರಚನೆ ಮಾಡುತ್ತ ಬಂದ ಜಾನಪದ ಜೀವಿಯಾದ ನನ್ನನ್ನು ಕೊಪ್ಪಳದಲ್ಲಿ ನಡೆಯುತ್ತಿರುವ ಅಖಿಲ ಭಾರತ ೬೨ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನೆಂದು ಸಮಸ್ತ ಕನ್ನಡಿಗರು ಓಲಯಿಸಿದ್ದಕ್ಕೆ ನನ್ನ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ನಾಡು ನುಡಿಗಳ ನನ್ನ ಎಲ್ಲ ಚಟುವಟಿಕೆಗಳಲ್ಲಿ ಸಹಭಾಗಿಗಳಾಗಿದ್ದ ಹಲಸಂಗಿ ಗೆಳೆಯರ ಗುಂಪಿನ ನನ್ನ ಹಿರಿಯಣ್ಣ ಮಧುರಚೆನ್ನ, ಕಾಪಸೆ ರೇವಪ್ಪ, ಪಿ. ಧೂಲಾ ಇವರಿಗೂ ಈ ಗೌರವದಲ್ಲಿ ಪಾಲು ಸಲ್ಲುತ್ತದೆಂದು ನಾನು ವಿನಮ್ರವಾಗಿ ಹೇಳಬಯಸುತ್ತೇನೆ. ಅದರಂತೆ ನನ್ನ ಸಾಹಿತ್ಯಕೃಷಿಗೆ ಕಾಲ ಕಾಲಕ್ಕೆ ಪ್ರೇರಣೆಯನ್ನೀಯುತ್ತ ಬಂದ ಆಲೂರು ವೆಂಕಟರಾಯರು, ಬೇಂದ್ರೆ, ಮಾಸ್ತಿ, ಗೋಕಾಕ, ಮುಗಳಿ, ಎನ್ಕೆ, ಹಳಕಟ್ಟಿ, ಹರ್ಡೇಕರ ಮಂಜಪ್ಪನವರನ್ನು ನಾನಿಲ್ಲಿ ನೆನಸದೆ ಇರಲಾರೆ.

ಈ ಶತಮಾನದ ಮೂರನೆಯ ದಶಕದಲ್ಲಿ ಹಲಸಂಗಿಯಲ್ಲಿ ಕಾವ್ಯರ್ಷಿ ಮಧುರಚೆನ್ನರ ನೇತೃತ್ವದಲ್ಲಿ ಕಾಪಸೆ ರೇವಪ್ಪ, ನಾನು ಹಾಗೂ ಪಿ. ಧೂಲಾರನ್ನೊಳಗೊಂಡ ಗೆಳೆಯರ ಗುಂಪೊಂದು ನಿರ್ಮಾಣಗೊಂಡಿತು. ಈ ಗುಂಪಿನ

ಸದಸ್ಯರಾದ ನಾವೆಲ್ಲ ಆದರ್ಶವಾದಿಗಳಾಗಿದ್ದೆವು. ಖಾದಿ, ಬ್ರಹ್ಮಚರ್ಯ ಪಾಲನೆಗಳು ನಮ್ಮ ತಲೆಯಲ್ಲೆಲ್ಲ ತುಂಬಿದ್ದವು. ನಾಡಹಬ್ಬದ ಸಂದರ್ಭದಲ್ಲಿ ನಗರ ಸಂಕೀರ್ತನೆಯ ಮೂಲಕ ನಾಡುನುಡಿಗಳ ಕುರಿತು ಜಾಗೃತಿಯನ್ನುಂಟು ಮಾಡಲು ನಾವೆಲ್ಲ ಪ್ರಯತ್ನಿಸಿದೆವು. ಗರತಿಯ ಹಾಡು, ಮಲ್ಲಿಗೆ ದಂಡೆಗಳಲ್ಲಿ ಸೇರ್ಪಡೆಯಾದ ಜನಪದ ಗೀತಗಳ ಸಂಗ್ರಹ ಕಾರ್ಯದಲ್ಲಿ ನಾವು ತೊಡಗಿದ್ದೆವು. ವಾಚಾನಾಲಯದ ಸ್ಥಾಪನೆಯ ಮೂಲಕ ಜನರಲ್ಲಿ ವಾಚಾನಾಭಿರುಚಿ ಹುಟ್ಟಿಸಲು ಪ್ರಯತ್ನಿಸಿದಂತೆ, ನಾಟಕಗಳ ರಚನೆ, ಪ್ರದರ್ಶನಗಳ ಮೂಲಕ ಜನಸಾಮಾನ್ಯರ ನಡುವೆ ಸಾಂಸ್ಕೃತಿಕ ವಾತಾವರಣ ಬೆಳೆಸಲು ಯತ್ನಿಸಿದೆವು. ಮಹಾತ್ಮ ಗಾಂಧೀಜಿ, ವಿವೇಕಾನಂದ, ರಾಮಕೃಷ್ಣ ಪರಮಹಂಸ, ಶ್ರೀ ಅರವಿಂದರಂಥ ಮಹಾಪುರುಷರಿಂದ ಪ್ರಭಾವಿತರಾದ ನಾವು ಹಲಸಂಗಿಯಲ್ಲಿ ರಾಮಕೃಷ್ಣ ಪರಮಹಂಸರ ಶತಮಾನೋತ್ಸವವನ್ನು ಆಚರಿಸಿದೆವು. ಶ್ರೀ ಅರವಿಂದ ಮಂಡಲವನ್ನು ಸ್ಥಾಪಿಸಿ ಶ್ರೀ ಅರವಿಂದರ ಸಾಹಿತ್ಯ ಸಂದೇಶಗಳನ್ನೂ ವಿಜಾಪುರ ಜಿಲ್ಲೆಯ ತುಂಬೆಲ್ಲ ಹರಡಿದೆವು. ನಮ್ಮ ಹಲಸಂಗಿ ಗೆಳೆಯರ ಗುಂಪು ಬೇಂದ್ರೆಯವರ ನೇತೃತ್ವದ ಧಾರವಾಡದ ಗೆಳೆಯರ ಗುಂಪಿನೊಂದಿಗೆ ನೇರವಾದ ಸಂಪರ್ಕವನ್ನೂ ಬೆಳೆಸಿತು. ನಮ್ಮ ಈ ಎಲ್ಲ ಸಾಮಾಜಿಕ, ಸಾಂಸ್ಕೃತಿಕ, ಆಧ್ಯಾತ್ಮಿಕ ಚಟುವಟಿಕೆಗಳಿಗೆಲ್ಲ ಬೇಂದ್ರೆ, ಗೋಕಾಕ, ಮುಗಳಿ, ಕಾರಂತರು ಪ್ರೋತ್ಸಾಹಿಸುತ್ತ ಬಂದರು. ಜನಪದ ಸಾಹಿತ್ಯ ಪ್ರೇಮ, ರಾಷ್ಟ್ರೀಯತೆ, ಸಂಸ್ಕೃತಿ ಸಂವರ್ಧನೆ ಹಾಗೂ ಆಧ್ಯಾತ್ಮದ ಹಂಬಲಗಳ ಹಲಸಂಗಿ ಗೆಳೆಯರ ಗುಂಪಿನ ಮುಖ್ಯ ಆದರ್ಶಗಳಾಗಿದ್ದವೆಂಬ ವಿಷಯ ಈಗ ಇತಿಹಾಸದ ಒಂದು ಭಾಗವೇ ಆಗಿದೆ.

ಹಲಸಂಗಿ ಗೆಳೆಯರಲ್ಲಿ ಒಬ್ಬನಾದ ನಾನು ಹಳೆಯ ತಲೆಮಾರಿನ ಸಾಹಿತಿ. ಹಿರಿಯ ಸಾಹಿತಿಯೆಂಬ ಹಮ್ಮು ನನ್ನಲ್ಲಿಲ್ಲ. ಬಹಳವಾದರೆ ನಾನೊಬ್ಬ ಸಾಹಿತ್ಯದ ಸೇವಕ. ನಾನು ಸುತ್ತಲೂ ನೋಡಿ, ಕೇಳಿ ತಿಳಿದು ಅನುಭವಿಸಿದ್ದನ್ನು ಜ್ಞಾನ ಪಿಪಾಸೆಯಿಂದ ಓದಿ ಅರಗಿಸಿಕೊಂಡಿದ್ದನ್ನು ನನ್ನ ನೂರು ಪುಸ್ತಕಗಳಲ್ಲಿ ಆದಷ್ಟು ಮಾರ್ಮಿಕವಾಗಿ ಹೇಳಲು ಪ್ರಯತ್ನಿಸಿದ್ದೇನೆ. ಗಳಗನಾಥರಿಂದ ಸ್ಫೂರ್ತಿಯನ್ನು ಪಡೆದ ನಾನು ವೃತ್ತಿಯಿಂದ ಪ್ರಾಥಮಿಕ ಶಾಲಾ ಶಿಕ್ಷಕನಾಗಿ, ಪ್ರವೃತ್ತಿಯಿಂದ ಸಾಹಿತಿಯಾಗಿ ನಾನೇ ಪ್ರಕಟಿಸಿದ ಪುಸ್ತಕಗಳನ್ನು ಊರೂರಿಗೆ ಹೊತ್ತುಕೊಂಡು ಹೋಗಿ ಮಾರಾಟ ಮಾಡಿದ ದುರ್ದೈವೀ ಪುಸ್ತಕ ಮಾರಾಟಗಾರನೂ ಆಗಿದ್ದೇನೆ. ಇಂಥ ಒಬ್ಬ ಸಾಮಾನ್ಯ ಸಾಹಿತ್ಯ ಸೇವಕನನ್ನು ತಿರುಳ್ಗನ್ನಡದ ಭಾಗವಾದ ಕೊಪ್ಪಳ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನೆಂದು ಆಯ್ಕೆಮಾಡಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರ, ಕಾರ್ಯಕಾರಿ ಸಮಿತಿಯ ಸಕಲ ಸದಸ್ಯರ ವಿಶ್ವಾಸಕ್ಕೆ ನಾನು ಋಣಿಯಾಗಿದ್ದೇನೆ. ಇಂತಹ ಬೃಹತ್ಪ್ರಮಾಣದ ಸಮ್ಮೇಳನವನ್ನು ಹೊತ್ತು ನಿತ್ತರಿಸುತ್ತಿರುವ ಇಲ್ಲಿನ ಸ್ವಾಗತ ಸಮಿತಿಯ ಅಧ್ಯಕ್ಷರು ಮತ್ತು ಇಲ್ಲಿನ ಎಲ್ಲಾ ಮಹಾಜನರಿಗೂ ನನ್ನ ಅಭಿನಂದನೆಗಳು.

ಸುಮಾರು ಅರವತ್ತು ಅರವತ್ತೈದು ವರ್ಷಗಳ ಕಾಲದ ನನ್ನ ದೀರ್ಘ ಸಾಹಿತ್ಯ ಸೇವೆಯ ಅವಧಿಯಲ್ಲಿ ನಾನು ಸ್ವಾತಂತ್ರ್ಯಪೂರ್ವದ ರಸಿಕ ಜೀವನವನ್ನು

ಅನುಭವಿಸಿದಂತೆ ಸ್ವಾತಂತ್ರ್ಯೋತ್ತರ ಕಾಲದ ಅರಾಜಕತೆಯ ಭ್ರಷ್ಟ ರಾಜಕಾರಣದ ಬಿಸಿಯನ್ನೂ ತಗುಲಿಸಿಕೊಂಡಿದ್ದೇನೆ. ಹೀಗಾಗಿ ನಾನು ರಚಿಸಿದ ಸಾಹಿತ್ಯದಲ್ಲಿ ಹಳೆಯ ತಲೆಮಾರಿನ ಹಳ್ಳಿಯ ರಸಿಕ ಜೀವನದ ಚಿತ್ರಗಳು ಕೂಡಿದಂತೆ ಇಂದಿನ ಹಳ್ಳಿಗಳ ಕುರಿತ ಕಟುವಿಡಂಬನೆಯೂ ಸೇರಿದೆ.

ನನ್ನ ಮಟ್ಟಿಗೆ ಜೀವನ ಬೇರೆ ಅಲ್ಲ; ಸಾಹಿತ್ಯ ಬೇರೆ ಅಲ್ಲ. ಅವು ಎರಡೂ ಕೈ ಹಿಡಿದುಕೊಂಡೇ ಸಾಗಿವೆ. ನಾನು ಎರಡು ವರ್ಷದವನಿದ್ದಾಗ ನನ್ನ ಹಡೆದವ್ವ ಎದೆದುಂಬಿ ಹಾಡಿದ ಲಲ್ಲೆ ನುಡಿ -

ಕರಿ ಅಂಗಿ ಕಸೂತಿ ತಲೆ ತುಂಬ ಜಾವೂಳ
ಅಂಗಳದಾಗ ನವಿಲಾಟ! ಅದಕಿಂತ
ಲಿಂಗಯ್ಯನಾಟ ಬಲುಮಾಟ

ಹೀಗೆ ನಾನು ಹಳ್ಳಿಯಲ್ಲಿ ಸಾಹಿತ್ಯವನ್ನು ಅಭ್ಯಸಿಸಿದ್ದು ವಿಶ್ವವೆಂಬ ವಿಶ್ವವಿದ್ಯಾಲಯದಲ್ಲಿ. ಮುಂದೆ ರಾಮತೀರ್ಥ ಸ್ವಾಮಿಗಳ ಉಪನ್ಯಾಸಗಳು ವಿಷಯವನ್ನು ಆಕರ್ಷಕವಾಗಿ ಹೇಳುವ ಕಲೆಯನ್ನು ಕಲಿಸಿದವು. ನಂತರ ನನ್ನ ಕೈಗೆ ವಿವೇಕಾನಂದರ ಸಾಹಿತ್ಯ ಸಿಕ್ಕಿತು. ರಾಮತೀರ್ಥರ ಸಾಹಿತ್ಯ ನನ್ನ ಹೃದಯವನ್ನರಳಿಸಿದರೆ, ವಿವೇಕಾನಂದರ ಸಾಹಿತ್ಯ ನನ್ನ ಬುದ್ಧಿಯನ್ನು ಕೆರಳಿಸಿತು. ಶರಣರ ವಚನದ ಸತ್ವವು ನನ್ನನ್ನು ಶ್ರೀ ಅರವಿಂದರ ಪೂರ್ಣಯೋಗದ ಅಗಸೆಗೆ ಒಯ್ದು ನಿಲ್ಲಿಸಿತು. ಒಂದು ಕಡೆ ಹಳ್ಳಿಯ ಜೀವನ ನನ್ನ ಸಾಹಿತ್ಯದ ಮೂಲವಸ್ತುವಾದಂತೆ ಭಾರತದ ವಿಶ್ವದ ಮಹಾಪುರುಷರ ಜೀವನ ದರ್ಶನ ನನ್ನ ಸಾಹಿತ್ಯದಲ್ಲಿ ಜಾನಪದ ವಸ್ತು ಭಾಷೆಗಳ ಸೊಗಡು ಕಂಡಂತೆ ಆಧ್ಯಾತ್ಮಿಕ ವಿಚಾರದ ಪ್ರತಿಷ್ಠೆಯೂ ಕಂಡಿತೆಂದರೆ ಆಶ್ಚರ್ಯವೇನಲ್ಲ. ನನ್ನ ದೃಷ್ಟಿಯಲ್ಲಿ ಸಾಹಿತ್ಯದ ಪ್ರಯೋಜನವಿರುವುದು - ಅದು ಕೊಡುವ ಶುದ್ಧ ಆನಂದದಲ್ಲಿ. ಯಾವ ಸಾಹಿತ್ಯ ಮನುಷ್ಯನನ್ನು ಕೆಲ ಕ್ಷಣಗಳ ಮಟ್ಟಿಗಾದರೂ ಆತನ ರಾಗ ದ್ವೇಷಗಳ ಮಟ್ಟದಿಂದ ಎತ್ತಿ ಮಹಾಮಾನವನನ್ನಾಗಿ ಮಾಡಲು ಪ್ರಯತ್ನಿಸುವದೋ ಆ ಸಾಹಿತ್ಯವೇ ನನ್ನ ದೃಷ್ಟಿಯಲ್ಲಿ ಉಚ್ಚ ಸಾಹಿತ್ಯವಾಗಿದೆ.

ಹೈದರಾಬಾದವು ಭಾಗ್ಯನಗರವೆನಿಸುವ ಕಾಲಕ್ಕಿಂತ ಮುಂಚಿನಿಂದಲೂ ಕೊಪ್ಪಳ ಗ್ರಾಮವು ಕೊಪಣ ನಗರವೆನಿಸಿತ್ತು. ಕವಿರಾಜಮಾರ್ಗದಂಥ ಪ್ರಾಚೀನ ಲಕ್ಷಣ ಗ್ರಂಥದಲ್ಲಿ ಕೊಪ್ಪಳ ಗ್ರಾಮವು ಮಹಾಕೊಪಣ ನಗರವೆನಿಸಿತ್ತು. ಅದೊಂದು ತಿರುಳ್ಗನ್ನಡ ನಾಡಿನ ಕೇಂದ್ರವೇ ಆಗಿತ್ತೆಂದು ತಿಳಿಯುತ್ತದೆ.

ಕನ್ನಡಿಗರಿಗೆ ಇರುವುದು ಒಂದೇ ಕುಲ, ಅದು ಕನ್ನಡ ಕುಲ ಎಂದು ನಿಜಗುಣ ಶಿವಯೋಗಿಗಳೂ ಚೆನ್ನಬಸವಣ್ಣನವರೂ ಸ್ಪಷ್ಟವಾಗಿಯೇ ಹೇಳಿದ್ದಾರೆ. ಈ ಮಾತು ತತ್ತ್ವಕ್ಕಾಗಿ ಮಾತ್ರ ಹೇಳಿದ್ದಲ್ಲ. ಹೊಯ್ಸಳ, ಬಲ್ಲಾಳರ ಹಾಗೂ ವಿಜಯನಗರದ ರಾಯರ ಆಡಳಿತದಲ್ಲಿ ಇದರರಿವು ಇತ್ತೆಂದು ಹೇಳಲಾಗುತ್ತದೆ. ಮರಾಠರು, ಮಹಮ್ಮದೀಯರು, ಆಂಗ್ಲರು ಕನ್ನಾಡಿನಲ್ಲಿ ಆಳ್ವಿಕೆ ಮಾಡಿದ್ದರೂ ನಾಡಿನ ಪಕ್ಷಿಪ್ರಾಣಿಗಳಿಗೂ ತಿಳಿಯಬಲ್ಲ ಸಂಜ್ಞೆಯೆಂದರೆ ಕನ್ನಡವೇ ಆಗಿತ್ತೆಂಬುದನ್ನು ಗಮನಿಸಬೇಕು.

ಕರ್ನಾಟಕ ರಾಜ್ಯ ಸ್ಥಾಪನೆಯಾಗಿ ಮೂವತ್ತಾರು ವರ್ಷಗಳು ದಾಟಿದರೂ ಆಡಳಿತದ ಕಡೆ ಪ್ರತಿಷ್ಠಾಪನೆಯಾಗಲೇ ಇಲ್ಲ. ಎಲ್ಲಿಯವರೆಗೆ ರಾಜ್ಯ ಸರ್ಕಾರ ತನ್ನ ಚುನಾವಣಾ ನೀತಿಯಲ್ಲಿ ಅಲ್ಪಸಂಖ್ಯಾತರ ಓಲೈಸುವ ನೀತಿಯನ್ನು ಬಿಟ್ಟುಕೊಟ್ಟು ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಲು ಬದ್ಧವಾಗುವದಿಲ್ಲವೋ. ಎಲ್ಲಿಯವರೆಗೆ ಕನ್ನಡದಲ್ಲಿ ಕಲಿತವರಿಗೆ ಮಾತ್ರ ಉದ್ಯೋಗವೆಂದು ತನ್ನ ಸೇವಾ ನಿಯಮದಲ್ಲಿ ಸಾರುವುದಿಲ್ಲವೋ. ಎಲ್ಲಿಯವರೆಗೆ ಕಛೇರಿಗಳಿಂದ ಇಂಗ್ಲಿಷ್ ಬೆರಳಚ್ಚು ಯಂತ್ರಗಳನ್ನು ವಾಪಸು ತೆಗೆದುಕೊಂಡು ಕನ್ನಡ ಬೆರಳಚ್ಚು ಯಂತ್ರಗಳನ್ನು ಒದಗಿಸುವದಿಲ್ಲವೋ ಅಲ್ಲಿಯವರೆಗೆ ತಾಲ್ಲೂಕಾ ಮಟ್ಟದಿಂದ ಹಿಡಿದು ರಾಜ್ಯ ಮಟ್ಟದವರೆಗೆ ಕನ್ನಡ ಆಡಳಿತ ಭಾಷೆಯಾಗದು. ಕನ್ನಡ ಕಾವಲು ಸಮಿತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಎಷ್ಟು ಹೋರಾಟ ಮಾಡಿದರೂ ಕನ್ನಡ ಆಡಳಿತ ಭಾಷೆಯಾಗದು. ಎಲ್ಲಿಯವರೆಗೆ ಅಧಿಕಾರಿಗಳು ಇಂಗ್ಲಿಷ್ ವ್ಯಾಮೋಹದ ಹುಚ್ಚು ಬಿಡುವುದಿಲ್ಲವೋ ಅಲ್ಲಿಯವರೆಗೆ, ಕರ್ನಾಟಕದಲ್ಲಿ ಕನ್ನಡ ಆಡಳಿತ ಭಾಷೆಯಾಗುವುದು ಕನಸಿನ ಮಾತು. ಜನಸಾಮಾನ್ಯರ ಭಾಷೆಯಾದ ಕನ್ನಡ ಆಡಳಿತ ಭಾಷೆಯಾದಾಗಲೇ ಇಲ್ಲಿಯ ಜನರಿಗೆ ನ್ಯಾಯ ದೊರೆಯಲು ಸಾಧ್ಯವೆನ್ನುವ ಸಾಮಾನ್ಯ ತಿಳುವಳಿಕೆ ನಮ್ಮ ದಪ್ಪ ಚರ್ಮದ ಸರಕಾರಗಳಿಗೆ ಎಂದು ಬರುತ್ತದೋ? ಸಂಪೂರ್ಣ ಜನಜಾಗೃತಿಯೊಂದೇ ಇಂಥ ನಿಸ್ಸೀಮ ಉಪೇಕ್ಷೆಗೆ ಮದ್ದೆಂದು ಕಾಣುತ್ತದೆ.

ಶಾಲೆಕಾಲೇಜುಗಳಲ್ಲಿ ಕನ್ನಡ ಮಾಧ್ಯಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ಇನ್ನೂ ದೊರೆತಿಲ್ಲ. ಸರಕಾರಕ್ಕೊಂದು ದೃಢವಾದ ಬಿಗುವಿನ ನೀತಿಯಿರದಿದ್ದರಿಂದ ಇಂಗ್ಲಿಷ್ ಮಾಧ್ಯಮದ ಶಾಲೆಗಳು ನಾಯಿಕೊಡೆಗಳಂತೆ ಬೆಳೆಯುತ್ತಿವೆ. ಎಲ್ಲಿಯವರೆಗೆ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಮಾತ್ರ ಉದ್ಯೋಗಾವಕಾಶವೆಂದು ಸರಕಾರ ಸಾರುವುದಿಲ್ಲವೋ ಅಲ್ಲಿಯವರೆಗೆ ಕನ್ನಡ ಮಾಧ್ಯಮ ಕರ್ನಾಟಕದ ಶಾಲೆ ಕಾಲೇಜುಗಳಲ್ಲಿ ವಿಜೃಂಭಿಸುವುದಿಲ್ಲ. ದುರ್ದೈವದಿಂದ ಕನ್ನಡ ಮಾಧ್ಯಮಕ್ಕೆ ಅಲ್ಪಸಂಖ್ಯಾತರ ಅಡೆತಡೆಯೂ ಉಂಟು. ಎಲ್ಲಿಯವರೆಗೆ ಅಲ್ಪಸಂಖ್ಯಾತರು ಕನ್ನಡವನ್ನು ಕಲಿತು ರಾಜ್ಯದ ಮುಖ್ಯವಾಹಿನಿಯಲ್ಲಿ ಒಂದಾಗಿ ಹೋಗುವುದಿಲ್ಲವೋ ಅಲ್ಲಿಯವರೆಗೆ ಅವರ ಪ್ರಗತಿಯೂ ಸಾಧ್ಯವಾಗುವುದಿಲ್ಲ. ಅದರಂತೆ ಸರಕಾರ ಕೂಡ ಅಲ್ಪಸಂಖ್ಯಾತರನ್ನು ಓಲೈಸುವುದರ ಬದಲಾಗಿ ಸರ್ವರ ಹಿತದ ದೃಷ್ಟಿಯಿಂದ ಶಾಲೆ ಕಾಲೇಜುಗಳ ಮಟ್ಟದಲ್ಲಿ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಕನ್ನಡಕ್ಕೆ ಪ್ರಥಮ ಸ್ಥಾನ ಕೊಡಲು ಮುಂದಾಗಬೇಕು.

ಇಂದಿನ ನಮ್ಮ ಶಿಕ್ಷಣ ಸ್ಮರಣಶಕ್ತಿಯನ್ನು ಮಾತ್ರ ವರ್ಧಿಸುತ್ತಿದೆ. ಮನಸ್ಸಿನ ಇತರ ಮೂರು ಶಕ್ತಿಗಳನ್ನು ಅದು ಅಲಕ್ಷಿಸಿದೆ. ಅವು ಯಾವುವೆಂದರೆ - ವಿಚಾರ ಮಾಡುವ ಶಕ್ತಿ. ಭೂಮಿತಿ, ತರ್ಕಶಾಸ್ತ್ರ, ರಾಜ್ಯಶಾಸ್ತ್ರಗಳಿಂದ ಬೆಳವಣಿಗೆಯಾದರೆ. ಭಾಷಾ ಅಧ್ಯಯನದಿಂದ ಅಭಿವ್ಯಕ್ತಿಯ ಶಕ್ತಿ ಬೆಳೆಯುತ್ತದೆ. ತೌಲನಿಕ ಶಕ್ತಿ ಇತಿಹಾಸದ ಅಧ್ಯಯನದಿಂದ ಪ್ರಾಪ್ತವಾಗುತ್ತದೆ. ನಮ್ಮ ಜನಾಂಗದ ವೈಚಾರಿಕಾ ಶಕ್ತಿಯನ್ನು ಬೆಳೆಸುವುದರ ಕಡೆಗೆ ನಮ್ಮ ಶಿಕ್ಷಣ ಇಂದು ಲಕ್ಷ್ಯವಹಿಸಬೇಕಾಗಿದೆ .

ನಮ್ಮ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಶಾಲೆಗಳ ಪಠ್ಯಪುಸ್ತಕಗಳು ಸಮರ್ಪಕವಾಗಿಲ್ಲವೆಂದೇ ಹೇಳಬೇಕಾಗುತ್ತದೆ. ಅದಕ್ಕಾಗಿ ಮೊಟ್ಟಮೊದಲು ನಮ್ಮ ಭಾಷಾ ವಿಷಯಕ್ಕೆ ಸಂಬಂಧಿಸಿದ ಪಠ್ಯಪುಸ್ತಕಗಳ ಪರಿಷ್ಕರಣವೂ ಅವಶ್ಯವೆನಿಸುತ್ತದೆ. ನಮ್ಮ ನೆರೆ ರಾಜ್ಯವಾದ ಮಹಾರಾಷ್ಟ್ರವು ಪ್ರಕಟಿಸಿರುವ ಕನ್ನಡ ಪಠ್ಯಪುಸ್ತಕದೊಳಗಿನ ಪಾಠಗಳು, ಕವಿತೆಗಳು ಸಂಪಾದಕರಿಂದ ಬರೆಯಲ್ಪಡದೆ ನಾಡಿನ ಖ್ಯಾತ ಲೇಖಕರ ಕವಿಗಳ ಪುಸ್ತಕಗಳಿಂದ ಆಯ್ಕೆಯಾಗಿರುವುದರಿಂದ ಅವು ಮಕ್ಕಳಲ್ಲಿ ಸಾಹಿತ್ಯಾಭಿರುಚಿಯನ್ನು ಹುಟ್ಟಿಸಲು ಸಮರ್ಥವಾಗಿವೆ. ಇದರ ಜೊತೆಗೆ ಪಠ್ಯಕ್ಕೆ ಸಂಬಂಧಿಸಿದ ಪ್ರಶ್ನೆಗಳು, ವ್ಯಾಕರಣದ ಅಂಶಗಳನ್ನೊಳಗೊಂಡ ಕರಡುಪ್ರತಿಯ ನೂರು ಪ್ರತಿಗಳನ್ನು ನಾಡಿನ ಶಿಕ್ಷಣ ತಜ್ಞರಿಗೆ ಕಳಿಸುತ್ತಾರೆ. ಅವರಿಂದ ಬಂದ ಸೂಚನೆಗಳ ಬೆಳಕಿನಲ್ಲಿ ತಿದ್ದುಪಡಿ ಮಾಡಿದ ನಂತರ ಪಠ್ಯಪುಸ್ತಕ ಸಿದ್ಧವಾಗುತ್ತದೆ. ಈ ವ್ಯವಸ್ಥೆ ನಮ್ಮಲ್ಲಿಯೂ ಬರಬೇಕೆಂದು ಆಶಿಸುತ್ತೇನೆ.

ನನ್ನ ತಿಳುವಳಿಕೆಯ ಪ್ರಕಾರ ಕನ್ನಡ ಸಾಹಿತ್ಯದಲ್ಲಿ ಜನಪದ ಸಾಹಿತ್ಯ ಮತ್ತು ವಚನ ಸಾಹಿತ್ಯಗಳು ವಿಶ್ವ ಸಾಹಿತ್ಯಕ್ಕೆ ಘನವಾದ ಕಾಣಿಕೆ ಕೊಟ್ಟಿವೆ. ಈ ಸಂದರ್ಭದಲ್ಲಿ ಆಧುನಿಕ ಶಿಷ್ಟ ಸಾಹಿತ್ಯವೂ ಕೂಡ ಉತ್ತುಂಗ ಶಿಖರ ಮುಟ್ಟಿದ್ದನ್ನು ನಾನು ಮರೆತಿಲ್ಲ. ಪ್ರಥಮ ಹಂತದಲ್ಲಿ ಇಂದು ನಮ್ಮ ಮಕ್ಕಳಲ್ಲಿ ಗರತಿಯ ಹಾಡಿನ ತ್ರಿಪದಿಗಳಲ್ಲಿ, ವಚನಕಾರರ ವಚನಗಳಲ್ಲಿ ಆಸಕ್ತಿಯನ್ನು ಹುಟ್ಟಿಸುವ ಪ್ರಯತ್ನ ಮಾಡಬೇಕು. ಇಂದಿನ ನಮ್ಮ ರೇಡಿಯೋ, ಟಿ. ವಿ, ಕೆಸೆಟ್ಟು, ಸಿನೆಮಾಗಳು ತಮ್ಮ ಕೆಟ್ಟ ಕೆಟ್ಟ ಸಂಗೀತ ದೃಶ್ಯಗಳ ಮೂಲಕ ಲೈಂಗಿಕ ಹಾಗೂ ಹಿಂಸೆಯ ಸಂಸ್ಕೃತಿಯನ್ನೇ ಎಲ್ಲೆಡೆಗೆ ಹರಡಿವೆ. ಅವುಗಳ ದುಷ್ಪರಿಣಾಮವನ್ನು ಕಳೆದೊಗೆಯಲು ನಾವಿಂದು ಸಿದ್ಧರಾಗಬೇಕು. ಗರತಿಯ ತ್ರಿಪದಿಗಳು ಗಾಯಿತ್ರಿ ಮಂತ್ರಗಳಿದ್ದಂತೆ. ವಚನಗಳೋ ಮನದ ಕಿಲ್ಬಿಷಗಳನ್ನು ಕಳೆಯಬಲ್ಲ, ಜೀವನಕ್ಕೆ ಹಿರಿದಾದ ಧ್ಯೇಯಗಳನ್ನು ತುಂಬಬಲ್ಲ ಕನ್ನಡದ ಉಪನಿಷತ್ತುಗಳಾಗಿವೆ.

ರಾಜ್ಯ ಸರಕಾರ ಪುಸ್ತಕ ಪ್ರಾಧಿಕಾರವನ್ನು ಅನುಷ್ಠಾನಕ್ಕೆ ತರಬೇಕು. ಅದರಿಂದ ಒಳ್ಳೆಯ ಅಭಿರುಚಿಯ ಪುಸ್ತಕಗಳು ಜನರ ಕೈಗೆ ತಲುಪುತ್ತವೆ. ಕನಿಷ್ಠ ಜಿಲ್ಲೆಗೆ ಒಂದು ಅಥವಾ ಎರಡರಂತೆ ಪುಸ್ತಕಗಳ ಶಾಶ್ವತ ಮಳಿಗೆಗಳನ್ನು ತೆರೆಯಬೇಕು. ಅಲ್ಲಿ ಕರ್ನಾಟಕದ ಯಾವುದೇ ಮೂಲೆಯಲ್ಲಿ ಪ್ರಕಟವಾದ ಪುಸ್ತಕಗಳು ಲಭ್ಯವಾಗುವ ವ್ಯವಸ್ಥೆ ಮಾಡಬೇಕು. ಇಂದು ಓದಬೇಕು, ತಿಳಿದುಕೊಳ್ಳಬೇಕು ಎನ್ನುವ ವಾಚಕರು ಸಾಕಷ್ಟಿದ್ದಾರೆ. ಆದರೆ ಅವರಿಗೆ ಯಾವ ಊರಿಗೆ ಹೋದರೂ, ಬೆಂಗಳೂರಿನಂಥ ಪಟ್ಟಣಕ್ಕೆ ಹೋದರೂ ಬೇಕಾದ ಪುಸ್ತಕಗಳು ಸಿಗುವುದಿಲ್ಲ. ಅದಕ್ಕಾಗಿ ಸರಕಾರ ಪುಸ್ತಕ ಮಳಿಗೆಗಳಲ್ಲಿಯೇ ಪುಸ್ತಕ ಪ್ರದರ್ಶನ ನಡೆಯುವಂತಾಗಬೇಕು.

ಇಂದು ಸರಕಾರ ಜನಪ್ರಿಯತೆ ಗಳಿಕೆಯ ಹೆಸರಿನಲ್ಲಿ ಸತ್ವವಿಲ್ಲದ ನೂರಾರು ಯೋಜನೆಗಳನ್ನು ಹಮ್ಮಿಕೊಂಡಿದೆ. ಆದರೆ ಸಾಹಿತ್ಯ ಸಂಸ್ಕೃತಿಗಳಿಗಾಗಿ ಹಣ ಖರ್ಚು ಮಾಡುವುದಕ್ಕೆ ಮೀನ-ಮೇಷ ಮಾಡುತ್ತದೆ. ಅದಕ್ಕಾಗಿ ಸರಕಾರ ಕಡಿಮೆ ಬೆಲೆಯಲ್ಲಿ

ವರ್ಷಕ್ಕೆ ಕನಿಷ್ಠ ನೂರು ಪುಸ್ತಕಗಳನ್ನಾದರೂ ಪ್ರಕಟಿಸುವ ಯೋಜನೆ ಹಾಕಿಕೊಳ್ಳಬೇಕು. ಅವು ಸುಲಭ ಬೆಲೆಯಲ್ಲಿ ಎಲ್ಲರಿಗೂ ಸಿಗುವಂತಾಗಬೇಕು. ಕನಿಷ್ಠ ಮೂರು ವರ್ಷಗಳ ಅವಧಿಗಾಗಿ ಎಲ್ಲ ಭಾಗಗಳಿಂದ ಕೂಡಿದ ಸಾಹಿತ್ಯ ತಜ್ಞರ ಸಮಿತಿಯನ್ನು ನಿಯಮಿಸಿ ಒಳ್ಳೆಯ ಪುಸ್ತಕಗಳ ಆಯ್ಕೆ ಮಾಡುವ ಕ್ರಮ ಕೈಕೊಳ್ಳಬೇಕು. ಆ ವರ್ಷದ ಪ್ರಥಮ ಆವೃತ್ತಿಯ ನೂರು ಪುಸ್ತಕಗಳ ಜೊತೆಗೆ ಹಳೆಯ ತಲೆಮಾರಿನ ಈಗ ಅಲಭ್ಯವಿರುವ ಕನಿಷ್ಠ ೫೦ ಪುಸ್ತಕಗಳ ಮುದ್ರಣದ ವ್ಯವಸ್ಥೆಯನ್ನು ಸರಕಾರ ಕೈಕೊಳ್ಳಬೇಕು.

ಆಧುನಿಕ ಕನ್ನಡ ಸಾಹಿತ್ಯಕ್ಕೆ ಈಗ ಕನಿಷ್ಠ ನೂರು ವರ್ಷಗಳಾದವು. ಅದಕ್ಕಾಗಿ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿಯ ಸಾಧನೆಯನ್ನು ಬಿಂಬಿಸುವ 'ಶತಮಾನದ ಸಾಹಿತ್ಯ ಚರಿತ್ರೆ'ಯ ಸಂಪುಟಗಳನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ, ಸಾಹಿತ್ಯ ಪರಿಷತ್ತು, ಕನ್ನಡ ವಿಶ್ವವಿದ್ಯಾಲಯಗಳು ಸಂಯುಕ್ತವಾಗಿ ಪ್ರಕಟಿಸುವ ಯೋಜನೆ ಹಾಕಿಕೊಳ್ಳಬೇಕು.

ಹಳ್ಳಿಗಳಲ್ಲಿ ಹಿಂದಿನ ತಲೆಮಾರಿನ ವೃತ್ತಿಗಳೆಲ್ಲ ಕಣ್ಮರೆಯಾಗಿವೆ. ಆ ವೃತ್ತಿಗಳಿಗೆ ಸಂಬಂಧಿಸಿದ ಶಬ್ದಕೋಶಗಳ ರಚನೆಯ ಅವಶ್ಯಕತೆ ಇದೆ. ಅದಕ್ಕಾಗಿ ಈ ಎಲ್ಲ ಸಂಸ್ಥೆಗಳು ಒಂದೆಡೆ ಕೂಡಿ ಎಲ್ಲ ವೃತ್ತಿಗಳಿಗೇ ಮೀಸಲಾದ ಶಬ್ದಕೋಶಗಳ ಪ್ರಕಟನೆಗೆ ಮುಂದಾಗಬೇಕು. ಅದರಂತೆ ವಾಕ್ ಸಂಪ್ರದಾಯಗಳು ಆಡುನುಡಿಗಳು, ಪಡೆನುಡಿಗಳು, ನುಡಿಗಟ್ಟುಗಳು -ಇವುಗಳನ್ನೊಳಗೊಂಡ ಶಬ್ದಕೋಶಗಳೂ ನಿರ್ಮಾಣಗೊಳ್ಳಬೇಕು.

ಈಗ ಕನ್ನಡ ವಿಶ್ವವಿದ್ಯಾಲಯದವರು ಕೈಗೆತ್ತಿಕೊಂಡಿರುವ ಹೊಸಪೇಟೆ ತಾಲ್ಲೂಕಿನ ಹಳ್ಳಿಗಳ ಸಾಂಸ್ಕೃತಿಕ ಅಧ್ಯಯನದಂತೆ ನಾಡಿನ ಎಲ್ಲ ತಾಲ್ಲೂಕುಗಳಿಗೆ ಸಂಬಂಧಿಸಿದ ಹಳ್ಳಿಗಳ ಸಾಂಸ್ಕೃತಿಕ ಅಧ್ಯಯನ ತುಂಬ ವ್ಯಾಪಕವಾಗಿ ನಡೆಯಬೇಕು. ಅಧ್ಯಯನದ ನಂತರ ತಾಲ್ಲೂಕಿನ ಸಾಂಸ್ಕೃತಿಕ ಇತಿಹಾಸವನ್ನು ಬಿಂಬಿಸುವ ಈ ಪುಸ್ತಕಗಳ ಪ್ರಕಟಣೆಯೂ ಏರ್ಪಾಡಾಗಬೇಕು.

ಕನ್ನಡ ಸಾಹಿತ್ಯದ ಮೇರುಕೃತಿಗಳನ್ನು ಇಂಗ್ಲಿಷಿಗೆ ಹಾಗೂ ಇತರ ಭಾರತೀಯ ಭಾಷೆಗಳಿಗೆ ಅನುವಾದಿಸುವ ಒಂದು ಮಹಾಯೋಜನೆಯನ್ನು ಕನ್ನಡ ವಿಶ್ವವಿದ್ಯಾಲಯ, ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ ಸಾಹಿತ್ಯ ಪರಿಷತ್ತು ಸಂಯುಕ್ತವಾಗಿ ರೂಪಿಸಬೇಕು. ಹಾಗಾದಾಗ ಮಾತ್ರ ಕನ್ನಡ ಸಾಹಿತ್ಯದ ಶ್ರೇಷ್ಠತೆ ಎಲ್ಲಕಡೆಗೆ ಹರಡುತ್ತದೆ. ಅದರಂತೆ ವಿವಿಧ ಭಾಷೆಗಳಲ್ಲಿ ಪ್ರಕಟವಾಗುತ್ತಿರುವ ಜ್ಞಾನ ವಿಜ್ಞಾನದ ಮಹತ್ವದ ಗ್ರಂಥಗಳನ್ನು ಕನ್ನಡಕ್ಕೆ ತರುವ ಪ್ರಯತ್ನವನ್ನೂ ಮಾಡಬೇಕು. ವಿಚಾರ ಸಾಹಿತ್ಯದ ಸಂವರ್ಧನೆಗೆ ಹೆಚ್ಚಿನ ಒತ್ತು ಕೊಡಬೇಕು.



## ಡಾ. ಸಿಂಪಿಲಿಂಗಣ್ಣನವರ ಜೀವನ ಹಾಗೂ ಸಾಧನೆ

*ವೀರೇಂದ್ರ ಸಿಂಪಿ*

---

ಈ ಶತಮಾನದ ಮಹತ್ವದ ಕನ್ನಡ ಲೇಖಕರಲ್ಲಿ ಒಬ್ಬರಾದ ಡಾ. ಸಿಂಪಿ ಲಿಂಗಣ್ಣ ೧೧. ೨. ೧೯೦೫ ರಂದು ವಿಜಾಪುರ ಜಿಲ್ಲೆಯ ಚಡಚಣದಲ್ಲಿ ಹುಟ್ಟಿದರು. ನೇಕಾರಿಕೆ ಅವರ ಕುಟುಂಬದ ಉದ್ಯೋಗವಾಗಿತ್ತು. ಕನ್ನಡ ಏಳನೆಯ ವರ್ಗದವರೆಗೆ ಮಾತ್ರ ಶಿಕ್ಷಣ ಪಡೆದ ಅವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಮೂವತ್ತೈದು ವರ್ಷಗಳ ಸೇವೆ ಸಲ್ಲಿಸಿ ಆದರ್ಶ ಶಿಕ್ಷಕರೆಂದು ರಾಷ್ಟ್ರೀಯ ಪ್ರಶಸ್ತಿ ಪಡೆದರು. ಜನಪದ ಸಾಹಿತ್ಯ ಕಲೆಗಳ ಮೇಲಿನ ಪ್ರೀತಿಯನ್ನು ತಮ್ಮ ಬಡಕುಂಟುಂಬದಿಂದಲೇ ಬಳುವಳಿಯಾಗಿ ಪಡೆದ ಅವರು ಕ್ರಮೇಣ ಜಾನಪದ ದಿಗ್ಗಜರಾಗಿ ಬೆಳೆದ ವಿಷಯ ನಾಡಿಗೆಲ್ಲ ಗೊತ್ತು. ಹಲಸಂಗಿಯ ಗೆಳೆಯರ ಗುಂಪಿನ ಮಧುರಚೆನ್ನ, ಕಾಪಸೆರೇವಪ್ಪ, ಪಿ. ಧೂಲಾ ಇವರ ಜೊತೆಗೂಡಿ ಜನಪದ ಗೀತೆಗಳ ಅಪ್ರತಿಮ ಸಂಕಲನಗಳಾದ 'ಗರತಿಯ ಹಾಡು', 'ಮಲ್ಲಿಗೆ ದಂಡೆ', 'ಜೀವನಸಂಗೀತ'ಗಳ ಪ್ರಕಟನೆಯ ಮೂಲಕ ಕನ್ನಡ ಜನಪದ ಸಾಹಿತ್ಯದ ಆದ್ಯ ಸಂಗ್ರಾಹಕರಲ್ಲಿ ಒಬ್ಬರೆನಿಸಿದರು. ಈ ಶತಮಾನದ ಇಪ್ಪತ್ತರ ದಶಕದಲ್ಲಿ ಚಡಚಣದಲ್ಲಿ 'ವಾಗ್ವಿಲಾಸ'ವೆಂಬ ಎಂಟುನೂರು ಪುಸ್ತಕಗಳ ಸಂಗ್ರಹವುಳ್ಳ ವಾಚನಾಲಯ, 'ಮದ್ದು' ಎಂಬ ಕೈಬರಹದ ಕವನಗಳಿಗೇ ಮೀಸಲಾದ ಪತ್ರಿಕೆಯ ಸ್ಥಾಪನೆ, ಅಸ್ಪೃಶ್ಯ ನಿವಾರಣೆಯ ವಸ್ತುವನ್ನೊಳಗೊಂಡ 'ಮರೆಮುಚ್ಚಂಕ' ನಾಟಕ ರಚನೆ ಪ್ರಯೋಗಗಳ ಮೂಲಕ ಜನಜಾಗೃತಿಯನ್ನುಂಟು ಮಾಡಿದರು. ಸಿಂಪಿಯವರ ಪ್ರಥಮ ಪ್ರೀತಿ ನಾಟಕವಾಗಿತ್ತೆಂದರೆ ಆಶ್ಚರ್ಯವಾಗುತ್ತದೆ. ಜನಜೀವನ, ಭಕ್ತಿರಹಸ್ಯ, ಬುದ್ಧದೇವ, ಚಂಡಾಳ ಚೌಕಡಿ - ಮೊದಲಾದ ಐದಂಕಿನ ನಾಟಕಗಳನ್ನು ರಚಿಸಿ ರಂಗಭೂಮಿಯ ಮೇಲೆ ತಂದರು. ರಾಷ್ಟ್ರೀಯತೆಯನ್ನು ಪ್ರಚೋದಿಸುವ 'ರಾಷ್ಟ್ರೀಯ ಮಹಾಪುರುಷರು' - ದೇಶ ಭಕ್ತಿಯ ಕಥೆಗಳನ್ನು ಪ್ರಕಟಿಸಿದರು. ಗಾಂಧೀಜಿಯವರ ಪ್ರಭಾವಕ್ಕೊಳಗಾದ ಅವರು ದೇಶ ಭಕ್ತಿಯನ್ನು ಸ್ಫುರಿಸುವ ಲಾವಣಿಗಳನ್ನು ಕಟ್ಟಿಹಾಡಿದರು. ಚರಕದ ಮೇಲೆ ನೂಲನ್ನು ನೂತರು. ಸ್ವತಃ ಖಾದೀಧಾರಿಗಳಾದರು. ಮುಂದೆ ಮೂವತ್ತರ ದಶಕದಲ್ಲಿ ಹಲಸಂಗಿಯಲ್ಲಿ ಶಾಲಾ ಶಿಕ್ಷಕರಾಗಿ ಕಾರ್ಯ ಮಾಡುತ್ತಾ ಮಧುರಚೆನ್ನರ ಜೊತೆಗೂಡಿ ಗಣೇಶ ಚತುರ್ಥಿ, ನಾಡಹಬ್ಬ, ನಗರ ಸಂಕೀರ್ತನೆ, ನಾಡಿನ ಖ್ಯಾತ ಸಾಹಿತಿಗಳಾದ ಬೇಂದ್ರೆ, ಗೋಕಾಕ, ಮುಗಳಿ, ಕಾರಂತರ ಭಾಷಣ ಕಾರ್ಯಕ್ರಮ, ನಾಟಕಗಳ ಪ್ರಯೋಗ, ರಾಮಕೃಷ್ಣ ಪರಮಹಂಸರ ಶತಮಾನೋತ್ಸವಗಳ ಆಚರಣೆಯ ಮೂಲಕ ಕಗ್ಗಳ್ಳಿಯಾದ ಹಲಸಂಗಿಯನ್ನು ಕರ್ನಾಟಕದ ಸಾಂಸ್ಕೃತಿಕ ಕೇಂದ್ರಗಳಲ್ಲಿ ಒಂದನ್ನಾಗಿ ಮಾರ್ಪಡಿಸಿದರು.

ನಾಲ್ವತ್ತರ ದಶಕದಲ್ಲಿ ಹಲಸಂಗಿಯಲ್ಲಿ ಸ್ಥಾಪಿಸಿದ ಶ್ರೀ ಅರವಿಂದ ಮಂಡಲದ ಮೂಲಕ ಶ್ರೀ ಅರವಿಂದರ ಪ್ರಭಾವವನ್ನು ವಿಜಾಪುರ ಜಿಲ್ಲೆಯ ಹಳ್ಳಿ ಪಟ್ಟಣಗಳಲ್ಲೆಲ್ಲ ವಿಸ್ತರಿಸಿದರು. ನಂತರದ ನಾಲ್ಕು ಐದು ದಶಕಗಳಲ್ಲಿ ಚಡಚಣದಲ್ಲಿ ಶ್ರೀ ಅರವಿಂದ ಗ್ರಂಥಾಲಯವೆಂಬ ಪ್ರಕಾಶನ ಸಂಸ್ಥೆಯ ಮೂಲಕ ವರ್ಷಕ್ಕೆ ನಾಲ್ಕು ಪುಸ್ತಕಗಳಂತೆ ತಮ್ಮ ಹಾಗೂ ಇತರ ಸಾಹಿತಿಗಳ ಎಂಬತ್ತು ಪುಸ್ತಕಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸಿ ಉತ್ತರ ಕರ್ನಾಟಕದ ಊರೂರಿಗೆ ಹೊತ್ತು ಕೊಂಡೊಯ್ದು ಮಾರಾಟ ಮಾಡಿ ಜನರಲ್ಲಿ ಸಾಹಿತ್ಯಾಭಿರುಚಿಯನ್ನು ಹುಟ್ಟಿಸಿದರು. ಅನುಭವ ಸಮೃದ್ಧಿಯ ಉತ್ತಮ ಸೃಜನಶೀಲ ಸಾಹಿತಿಗಳಾಗಿದ್ದ ಅವರು ತಮ್ಮ ಆರು ಗ್ರಂಥಗಳಿಗಾಗಿ ಕರ್ನಾಟಕ ರಾಜ್ಯ ಸರ್ಕಾರದ, ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನಗಳನ್ನು ಪಡೆದರು. (ಸ್ವರ್ಗದೋಲೆಗಳು, ಗರತಿಯ ಬಾಳು, ಜನಾಂಗದ ಜೀವಾಳ, ಶ್ರುತಾಶ್ರುತ, ನಾಟ್ಯ ಸಾಧನೆ, ನೂರಗಡಿಗೆ ಒಂದು ಬಡಿಗೆ - ಇವೇ ಅವರ ಬಹುಮಾನಿತ ಕೃತಿಗಳು.) ೧೯೮೯ರಲ್ಲಿ ಅವರಿಗೆ ಗುಲಬರ್ಗಾ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿಯನ್ನಿತ್ತು ಗೌರವಿಸಿತು. ೧೯೯೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಗೌರವ ಸದಸ್ಯತ್ವವನ್ನು ಕೊಟ್ಟಿತಲ್ಲದೆ ೧೯೯೩ ರಲ್ಲಿ ಕೊಪ್ಪಳದಲ್ಲಿ ಜರುಗಿದ ೬೨ ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠವನ್ನು ಕೊಟ್ಟು ಗೌರವಿಸಿತು. ಅದರಂತೆ ೧೯೯೦ರಲ್ಲಿ ಎಂ. ಎಸ್. ವೀಲಿಯವರು ಸಿಂಪಿಯವರ ಬದುಕು ಬರಹ ಕುರಿತು ಮಹಾಪ್ರಬಂಧವನ್ನು ಪ್ರಕಟಿಸಿದರು. ೧೯೯೨ ರಲ್ಲಿ ಮುದ್ದೇಬಿಹಾಳದ ಮಾತೋಶ್ರೀ ಪ್ರಕಾಶನ ಸಂಸ್ಥೆ 'ಸಿಂಪಿಯ ಮುತ್ತು' ಎಂಬ ಅಭಿನಂದನ ಗ್ರಂಥವನ್ನು ಪ್ರಕಟಿಸಿತು.

ಉತ್ತರ ಕರ್ನಾಟಕದ ಜನಪದ ಸಾಹಿತ್ಯಕಲೆಗಳನ್ನೆಲ್ಲ ಮೈಗೂಡಿಸಿಕೊಂಡ ಲಿಂಗಣ್ಣನವರು ಕನ್ನಡ ಜಾನಪದ ಸಂಪತ್ತಿನ ವಿಶ್ವಕೋಶವೆನಿಸಿದ್ದಾರೆ. 'ಗರತಿಯ ಬಾಳು', 'ಜನಾಂಗದ ಜೀವಾಳ', 'ಹೆಡಿಗೆ ಜಾತ್ರೆ', 'ಗರತಿಯ ಬಾಳ ಸಂಹಿತೆ' ಪುಸ್ತಕಗಳ ಮೂಲಕ ಜನಪದ ಸಾಹಿತ್ಯ ಸೌಂದರ್ಯವನ್ನು ಅದರಲ್ಲಿ ಹುದುಗಿದ ಜೀವನ ಶ್ರದ್ಧೆ ರಸಿಕತೆಗಳನ್ನು ಎತ್ತಿ ತೋರಿಸಿದ ಸಿಂಪಿಯವರು ಜನಪದ ಸಾಹಿತ್ಯ ವಿಮರ್ಶಕ ಸಂಶೋಧಕರಲ್ಲಿ ಮಹತ್ವದ ಸ್ಥಾನ ಪಡೆದಿದ್ದರು.

ಹಳ್ಳಿಯಲ್ಲಿ ಹುಟ್ಟಿ ಅಲ್ಲಿಯೇ ತಮ್ಮ ಇಡಿಯ ಜೀವನ ಕಳೆದ ಸಿಂಪಿ ಅವರು ತಮ್ಮ ಸಾಹಿತ್ಯದಲ್ಲಿ ಗೊರೂರರಂತೆ ಹಳ್ಳಿಯ ಜೀವನದ ಯಥಾರ್ಥ ಹಾಗೂ ದಟ್ಟ ಚಿತ್ರಣವನ್ನು ಒದಗಿಸಿದರು. ಹಿಂದಿನ ತಲೆಮಾರಿನ ಹಳ್ಳಿಯ ವಿವಾಹ ಮುಂತಾದ ಕೌಟುಂಬಿಕ ಆಚರಣೆಗಳ ಜೊತೆಗೆ ಸಾಮೂಹಿಕ ಆಚರಣೆಗಳಾದ ಕುಸ್ತಿ, ಪಂದ್ಯಾಟ, ಹಬ್ಬ, ಜಾತ್ರೆ, ಉತ್ಸವಗಳನ್ನು ತಮ್ಮ ವಿಶಿಷ್ಟವಾದ ಜಾನಪದ ಸೊಗಡಿನ ಭಾಷೆಯಲ್ಲಿ ಹಿಡಿದಿರಿಸಿದ ಅವರು ಗ್ರಾಮೀಣ ಸಂಸ್ಕೃತಿಯ ಪ್ರಬುದ್ಧ ಲೇಖಕರಾಗಿದ್ದರು. ಡಾ. ಸಿಂಪಿಯವರು ಅನುಭಾವಿಗಳಾಗಿದ್ದಂತೆ ಹಾಸ್ಯಯೋಗಿಗಳೂ ಆಗಿದ್ದರು. ಹಳ್ಳಿಯ ಜೀವನದ ಅಸಂಗತತೆ ಅವರ ಸಹಜ, ತಿಳಿಹಾಸ್ಯದ ಮೂಲವಾಗಿತ್ತು.

ಕನ್ನಡದ ಶ್ರೇಷ್ಠ ಪ್ರಬಂಧಕಾರರಲ್ಲಿ ಒಬ್ಬರಾದ ಡಾ. ಸಿಂಪಿಯವರು ಕನ್ನಡ ಸಂಸ್ಕೃತಿ

ಸಾಹಿತ್ಯ, ಭಾರತದ ಇತಿಹಾಸ, ಜನಪದ ಜೀವನ, ಕಲೆ, ವಿಚಾರ, ಯೋಗ, ಆಧ್ಯಾತ್ಮಗಳ ಕುರಿತು ಹದಿನೈದು ಪ್ರಬಂಧಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವರ ಪ್ರಬಂಧ ಸಂಕಲನಗಳಲ್ಲೆಲ್ಲ ಭಾವಭಾಷೆಗಳ ಉನ್ನತ ಸಾಮರಸ್ಯ ಕಂಡುಬರುವಂತೆ, ಜಾನಪದ ನಿಷ್ಠೆ, ವೈಚಾರಿಕ ಪ್ರತಿಷ್ಠೆ, ಗಟ್ಟಿಯಾದ ಸಾಮಾನ್ಯಜ್ಞಾನ (Robust Commonsense)ಗಳನ್ನೂ ಕಾಣಬಹುದು. ತಮ್ಮ ಜೀವನದ ಹಾಗೂ ತಮ್ಮ ಸುತ್ತಲಿನ ಪರಿಸರದ ಸೂಕ್ಷ್ಮಾವಲೋಕನ ಮಾಡಿಕೊಂಡ ಅವರು ಮಧುರಚೆನ್ನ, ಬೇಂದ್ರೆಯವರನ್ನೊಳಗೊಂಡಂತೆ ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗಾಂಧೀಜಿ, ಟ್ಯಾಗೋರ, ಶ್ರೀ ಅರವಿಂದರು, ಶ್ರೀ ಮಾತೆಯವರು - ಇವರ ಕುರಿತು ಜೀವನಚರಿತ್ರೆಗಳನ್ನು ಬರೆದಿದ್ದಾರೆ. ಈ ಜೀವನಚರಿತ್ರೆಗಳಲ್ಲಿ ಆಯಾ ಮಹಾಪುರುಷರ ಜೀವನದ ಬಾಹ್ಯ ಘಟನೆಗಳ ನಿರೂಪಣೆಯ ಜೊತೆಗೆ ಅವರ ಆಂತರಂಗಿಕ ಜೀವನದ ವಿಕಾಸವೂ ಅಡಕವಾಗಿದೆ. ಅವರ ವ್ಯಕ್ತಿತ್ವ ದರ್ಶನ, ತತ್ವ ಸಂದೇಶಗಳ ಒಳನೋಟವೂ ದೊರೆಯುತ್ತದೆ. ಸ್ವಾಮಿ ವಿವೇಕಾನಂದರ ಸಮಕಾಲೀನ ಸಂತರಾದ ರಾಮತೀರ್ಥರ ಜೀವನ ಚರಿತ್ರೆಯೊಂದಿಗೆ ರಾಮತೀರ್ಥರ ಸಾಹಿತ್ಯವನ್ನು ಕನ್ನಡಿಗರಿಗೆ ಒದಗಿಸಿದ್ದಾರೆ. ಕರ್ನಾಟಕದಲ್ಲಿ ಶ್ರೀ ಅರವಿಂದರ, ಶ್ರೀಮಾತೆಯವರ ಪ್ರಮುಖ ಅನುಯಾಯಿಗಳಲ್ಲಿ ಒಬ್ಬರಾಗಿದ್ದ ಡಾ. ಸಿಂಪಿಯವರು ಅವರ (ಶ್ರೀ ಅರವಿಂದರ, ಶ್ರೀಮಾತೆಯವರ) ಕುರಿತು ಉತ್ಕೃಷ್ಟ ಜೀವನ ಚರಿತ್ರಗಳನ್ನು ಬರೆದಿದ್ದಾರಲ್ಲದೆ ಶ್ರೀ ಅರವಿಂದರ ಸಾಹಿತ್ಯವನ್ನು ಕನ್ನಡಕ್ಕೆ ತಂದಿದ್ದಾರೆ. ಮಕ್ಕಳಿಗಾಗಿ ಹಾಗೂ ನವಸಾಕ್ಷರರಿಗಾಗಿ - ಸುಲಭ ಶೈಲಿಯಲ್ಲಿ ಒಳ್ಳೆಯ ಜೀವನದ ತತ್ವಗಳನ್ನು ಅರಹುವ ಚಿಕ್ಕ ಹೊತ್ತಿಗೆಗಳನ್ನೂ ಪ್ರಕಟಿಸಿದ್ದಾರೆ.

ಡಾ. ಸಿಂಪಿಲಿಂಗಣ್ಣನವರು ಆಧುನಿಕ ಕನ್ನಡದ ಗದ್ಯನಿರ್ಮಾಪಕರಲ್ಲಿ ಒಬ್ಬರಾಗಿದ್ದಾರೆ. ಅವರು ಬಳಸುವ ಭಾಷೆ ನಿರಾಡಂಬರದ ಸರಳಭಾಷೆ. ಒಮ್ಮೊಮ್ಮೆ ಅದು ಕಾವ್ಯಗಂಧಿಯೂ ಆಗುವುದುಂಟು. ಅವರ ಗದ್ಯದಲ್ಲಿ ಜನಸಾಮಾನ್ಯರ ಬಳಕೆಮಾತು, ಗಾದೆಗಳ ಪಡೆನುಡಿಗಳ ಹೇರಳ ಉದಾಹರಣೆಗಳನ್ನು ಕಾಣಬಹುದು. ರಾಷ್ಟ್ರೀಯತೆಯ ಪ್ರಚೋದನೆ ಅವರ ಸಾಹಿತ್ಯದ ಉಸಿರಾಗಿದ್ದಂತೆ ಆಧ್ಯಾತ್ಮಿಕತೆ, ವೈಚಾರಿಕತೆ ಜೀವನ ಪ್ರೀತಿಗಳು ಅವರ ಸಾಹಿತ್ಯದ ಪ್ರಮುಖ ಲಕ್ಷಣಗಳಾಗಿವೆ. ಅರವತ್ತೆರಡನೆ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದ ಸಿಂಪಿ ಲಿಂಗಣ್ಣನವರು ೫.೫.೯೩ ರಂದು ನಿಧನರಾದರು.



## ಕನ್ನಡ ಸಾಹಿತ್ಯ ಪರಿಷತ್ತು

*ಎಸ್. ಶ್ರೀನಿವಾಸನ್*

ಕನ್ನಡ ಸಾಹಿತ್ಯ, ಸಂಸ್ಕೃತಿಯ ಅಭಿವೃದ್ಧಿಯನ್ನು ಮೂಲ ಉದ್ದೇಶವಾಗಿರಿಸಿ ಕೊಂಡಿರುವ ಕನ್ನಡ ಸಾಹಿತ್ಯ ಪರಿಷತ್ತು ೧೯೧೫ನೇ ಇಸವಿಯಲ್ಲಿ ಸ್ಥಾಪನೆಗೊಂಡಿದೆ. ಮೌಲಿಕ ಗ್ರಂಥಗಳ ಪ್ರಕಟಣೆ, ನಿಯತಕಾಲಿಕೆಗಳಾದ 'ಕನ್ನಡ ನುಡಿ', 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ' ಪ್ರಕಟಣೆ, ಸಾಹಿತ್ಯ ಸಮ್ಮೇಳನಗಳು, ವಿಚಾರ ಸಂಕಿರಣಗಳು ಮುಂತಾದವು ಪರಿಷತ್ತಿನ ಪ್ರಧಾನ ಕಾರ್ಯಚಟುವಟಿಕೆಗಳು.

### ಅಖಿಲ ಭಾರತ ೬೨ ನೇ ಕನ್ನಡ ಸಾಹಿತ್ಯ ಸಮ್ಮೇಳನ

೧೯೯೩ ಫೆಬ್ರವರಿ ೧೧, ೧೨, ೧೩ ರಂದು ರಾಯಚೂರು ಜಿಲ್ಲೆಯ ಕೊಪ್ಪಳದಲ್ಲಿ ಅಖಿಲ ಭಾರತ ೬೨ ನೇ ಕನ್ನಡ ಸಾಹಿತ್ಯ ಸಮ್ಮೇಳನವು ನಡೆಯಿತು. ನಾಡಿನ ಮುಖ್ಯಮಂತ್ರಿಗಳಿಂದ ಉದ್ಘಾಟನೆಗೊಂಡ ಸಮ್ಮೇಳನದ ಅಧ್ಯಕ್ಷತೆಯನ್ನು ಡಾ. ಸಿಂಪಿಲಿಂಗಣ್ಣ ಅವರು ವಹಿಸಿದ್ದರು. ಒಟ್ಟು ಎಂಟು ಗೋಷ್ಠಿಗಳು ನಡೆದವು.

೧. ಕೊಪ್ಪಳ ಪ್ರದೇಶದ ಸಾಂಸ್ಕೃತಿಕ ಮಹತ್ವ ೨. ಕನ್ನಡ ಸಾಹಿತ್ಯ-ಜನಪರನಿಲುವುಗಳು
೩. ಕರ್ನಾಟಕದ ಪ್ರಚಲಿತ ಸಮಸ್ಯೆಗಳು ೪. ಆಧುನಿಕ ಸಾಹಿತ್ಯ-ವೈಚಾರಿಕತೆ
೫. ಜನಶಿಕ್ಷಣ-ಸಮೂಹ ಮಾಧ್ಯಮಗಳು ೬. ಸಂಕೀರ್ಣ
೭. ಹೊಸಶೋಧಗಳು ೮. ಕವಿಗೋಷ್ಠಿ

ವಿವಿಧ ಸಾಂಸ್ಕೃತಿಕ ವಿಷಯಗಳನ್ನು ಕುರಿತು ನಡೆದ 'ಸಾಹಿತ್ಯ ಸಂವಾದ ಗೋಷ್ಠಿ' ಸಾಹಿತ್ಯಾಸಕ್ತರ ಮನ್ನಣೆಗೆ ಪಾತ್ರವಾಯಿತು. ಇದೇ ಮೊದಲಬಾರಿಗೆ ನಡೆದ 'ಗೀತ-ಸಂಗೀತ' ಕಾರ್ಯಕ್ರಮ (ಗೀತ ರಚಿಸಿದ ಕವಿಗಳೇ ಸ್ವತಃ ಓದುವ ಗೀತೆಯನ್ನು ನಂತರ ಪ್ರಸಿದ್ಧ ಸುಗಮಸಂಗೀತ ಕಲಾವಿದರು ಪಕ್ಕವಾದ್ಯಗಳೊಡನೆ ಹಾಡುವುದು) ಅಪಾರ ಜನಪ್ರಿಯತೆ ಗಳಿಸಿತು. ಪ್ರತಿದಿನ ಸಾಯಂಕಾಲ ಸಾಂಸ್ಕೃತಿಕ ಕಾರ್ಯಕ್ರಮಗಳ ವ್ಯವಸ್ಥೆ ಆಗಿತ್ತು.

### ರಾಜ್ಯ ಮಟ್ಟದ ಸಮಾವೇಶ

೧೯೯೩ ನವೆಂಬರ್ ೨೭ ಹಾಗೂ ೨೮ ರಂದು ರಾಜ್ಯ ಮಟ್ಟದ 'ನಾಟಕ ಸಾಹಿತ್ಯ

ಸಮಾವೇಶ'ವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರದಲ್ಲಿ ವ್ಯವಸ್ಥೆಗೊಳಿಸಲಾಗಿತ್ತು. ಡಾ. ಚಂದ್ರಶೇಖರ ಕಂಬಾರರು ಸರ್ವಾಧ್ಯಕ್ಷರಾಗಿದ್ದರು. 'ಜನಪದ ಸಾಹಿತ್ಯ', 'ಆಧುನಿಕ ನಾಟಕ ಸಾಹಿತ್ಯ', 'ನಾಟಕ ಸಾಹಿತ್ಯದ ಪ್ರಕಾರಗಳು', 'ನಾಟಕ ಸಾಹಿತ್ಯ ಪ್ರಯೋಗ -ಸವಾಲುಗಳು' ಎಂಬ ವಿಷಯಗಳ ಬಗೆಗೆ ಗೋಷ್ಠಿ ಏರ್ಪಾಟಾಗಿತ್ತು. ಸಮಾವೇಶದ ಸರ್ವಾಧ್ಯಕ್ಷರ ಭಾಷಣದಲ್ಲಿ ಪ್ರಸ್ತಾಪವಾದ 'ಕನ್ನಡ ರಂಗಭೂಮಿಗೆ ಒಂದು ಪರಂಪರೆ ಇಲ್ಲ'' ಎಂಬ ಅಂಶವನ್ನು ಎತ್ತಿಕೊಂಡು ನಡೆದ ಗಹನವಾದ ಗಂಭೀರ ಚರ್ಚೆಯಲ್ಲಿ ಪ್ರಸಿದ್ಧ ರಂಗಕರ್ತರು ಭಾಗವಹಿಸಿದ್ದರು.

೧೯೯೩ ಡಿಸೆಂಬರ್ ೧೧ ಮತ್ತು ೧೨ ರಂದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣದಲ್ಲಿ ' ಮಕ್ಕಳ ಸಾಹಿತ್ಯ ಸಮಾವೇಶ' ನಡೆಯಿತು. ಶ್ರೀ ಸಿಸು ಸಂಗಮೇಶ ಅವರು ಸರ್ವಾಧ್ಯಕ್ಷರಾಗಿದ್ದರು. ನಡೆದ ನಾಲ್ಕು ಗೋಷ್ಠಿಗಳಲ್ಲಿ ಅರ್ಥಪೂರ್ಣ ಚರ್ಚೆ ನಡೆಯಿತು.

**ಜಿಲ್ಲಾ ಹಾಗೂ ತಾಲ್ಲೂಕು ಸಾಹಿತ್ಯ ಸಮ್ಮೇಳನಗಳು**

ವಿಜಾಪುರ, ಮೈಸೂರು, ಶಿವಮೊಗ್ಗ, ಚಿಕ್ಕಮಗಳೂರು, ಕೋಲಾರ, ಬಳ್ಳಾರಿ ಜಿಲ್ಲಾ ಸಾಹಿತ್ಯ ಸಮ್ಮೇಳನಗಳಲ್ಲದೆ ೨೨ ತಾಲ್ಲೂಕು ಸಾಹಿತ್ಯ ಸಮ್ಮೇಳನಗಳು ಜರುಗಿವೆ. ಅಖಿಲ ಭಾರತ ಸಾಹಿತ್ಯ ಸಮ್ಮೇಳನಗಳನ್ನು ನೆನಪಿಗೆ ತರುವಂತಹ ರೀತಿಯಲ್ಲಿ ಏರ್ಪಡಿಸಲಾಗಿದ್ದ ಈ ಸಮ್ಮೇಳನಗಳ ವೆಚ್ಚವನ್ನು ಸ್ಥಳೀಯ ಸಂಪನ್ಮೂಲಗಳಿಂದಲೇ ಭರಿಸಿದುದು ಗಮನಾರ್ಹ ಅಂಶ. ೧೯. ೬. ೯೩ ರಂದು ಹೇಮಾವತಿ (ಮಡಕಶಿರಾ)ಯಲ್ಲಿ ನಡೆದ ಕರ್ನಾಟಕ ಆಂಧ್ರಪ್ರದೇಶ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳನ ಹಾಗೂ ೯.೫.೯೩ ರಂದು ತುಮಕೂರಿನಲ್ಲಿ ವ್ಯವಸ್ಥೆಗೊಳಿಸಲಾಗಿದ್ದ ತುಮಕೂರು ಜಿಲ್ಲಾಮಹಿಳಾ ಸಾಹಿತ್ಯ ಸಮ್ಮೇಳನ ಇವು ವೈಶಿಷ್ಟ್ಯಪೂರ್ಣವಾದಂಥವು.

**ಸಂಶೋಧನಾ ಉಪನ್ಯಾಸಗಳು**

ಪರಿಷತ್ತಿನಲ್ಲಿ ಪ್ರತಿತಿಂಗಳ ಕೊನೆಯ ಗುರುವಾರ ತಪ್ಪದೇ ನಡೆಯುತ್ತಿರುವ ಸಂಶೋಧನಾ ವಿಶೇಷ ಉಪನ್ಯಾಸಗಳು, ಸಾಹಿತ್ಯ ಹಾಗೂ ಸಂಶೋಧನಾಸಕ್ತರ ಮುನ್ನಡೆಗೆ ಪಾತ್ರವಾಗಿವೆ. ೧೯೯೩ ರಲ್ಲಿ ೧೨ ಉಪನ್ಯಾಸಗಳು ನಡೆದಿವೆ.

**ಕಮ್ಮಟಗಳು**

೧೬. ೧. ೯೩ ರಿಂದ ೨೦. ೧. ೯೩ ರ ವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಮೂಲ್ಕಿಯಲ್ಲಿ 'ಮಕ್ಕಳ ಸಾಹಿತ್ಯ ರಚನಾ ಕಮ್ಮಟ' ನಡೆಯಿತು. ಒಟ್ಟು ಹದಿನಾರು ಅಭ್ಯರ್ಥಿಗಳು ಪಾಲ್ಗೊಂಡಿದ್ದರು. ಕಮ್ಮಟದ ಸಂದರ್ಭದಲ್ಲೇ ಶಿಬಿರಾರ್ಥಿಗಳಿಂದ ರಚಿತವಾದ ಸಾಹಿತ್ಯವನ್ನು ಪುಸ್ತಕ ರೂಪದಲ್ಲಿ - ಶಿಶು ಗೀತೆಗಳು, ಪುಟಾಣಿ ಕತೆಗಳು, ಪ್ರವಾಸಕಥನ ಹಾಗೂ ಸಾಹಸ ಕಾದಂಬರಿ ಹೀಗೆ ನಾಲ್ಕು ಭಾಗಗಳಲ್ಲಿ ಪ್ರಕಟಿಸಲಾಗಿದೆ.

೩. ೩. ೯೩ ರಿಂದ ೮. ೩. ೯೩ರ ವರೆಗೆ ವಿಜಾಪುರ ಜಿಲ್ಲೆ ಸಮೀರವಾಡಿಯಲ್ಲಿ

'ನಾಟಕ ರಚನಾ ಕಮ್ಮಟ' ವನ್ನು ಏರ್ಪಡಿಸಲಾಗಿತ್ತು. ೧೮ ಮಂದಿ ಲೇಖಕರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಶಿಬಿರಾರ್ಥಿಗಳು ರಚಿಸಿದ ನಾಟಕಗಳಲ್ಲಿ ಆರನ್ನು ಆಯ್ಕೆ ಮಾಡಿ 'ಆರು ನಾಟಕಗಳು' ಎಂಬ ಹೆಸರಿನಲ್ಲಿ ಪರಿಷತ್ತು ಪ್ರಕಟಿಸಿದೆ.

**ನಿಘಂಟು ಬಿಡುಗಡೆ**

ಪರಿಷತ್ತಿನ ಹೆಮ್ಮೆಯ ಪ್ರಕಟಣೆ ಕನ್ನಡ ಕನ್ನಡ ನಿಘಂಟಿನ ೭ನೇ ಸಂಪುಟವನ್ನು ೨೦.೧೧. ೯೩ ರಂದು ಮುಖ್ಯಮಂತ್ರಿ ಶ್ರೀ ವೀರಪ್ಪಮೊಯಿಲಿ ಅವರು ಬಿಡುಗಡೆ ಮಾಡಿದರು.

**ಗೌರವ ಸದಸ್ಯತ್ವ**

ಪರಿಷತ್ತಿನ ಅತ್ಯುತ್ಕೃಷ್ಟ 'ಗೌರವ ಸದಸ್ಯತ್ವ'ವನ್ನು ೨೧. ೩. ೧೯೯೩ ರಂದು ಬಳ್ಳಾರಿಯಲ್ಲಿ ನಡೆದ ಸಮಾರಂಭದಲ್ಲಿ ಡಾ. ಪು. ತಿ. ನರಸಿಂಹಾಚಾರ್, ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿ, ಹಾಗೂ ಡಾ. ವಿ.ಕೃ. ಗೋಕಾಕ್ (ಮರಣೋತ್ತರ) ಅವರಿಗೆ ನೀಡಲಾಯಿತು. ಗೌರವ ಸದಸ್ಯತ್ವ ಪಡೆದ ಇವರ ಸಮಗ್ರ ಕೃತಿಗಳ ವಾಚಿಕೆಗಳಾದ 'ನವಿಲುಗರಿ', 'ವ್ಯಾಕರಣತೀರ್ಥ', 'ಸಿಂಧುಶ್ರೀ' ಇವುಗಳನ್ನು ಪ್ರಕಟಿಸಲಾಗಿದೆ.

**ದತ್ತಿನಿಧಿ ಕಾರ್ಯಕ್ರಮಗಳು/ಉಪನ್ಯಾಸಗಳು**

ನಾಡಿನ ಹಾಗೂ ಹೊರನಾಡಿನ ಅಭಿಮಾನಿಗಳು ವಿವಿಧ ರೀತಿಯ ಸಾಹಿತ್ಯಕ ಕಾರ್ಯಕ್ರಮಗಳನ್ನು ನಡೆಸಲು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದತ್ತಿನಿಧಿ ಸ್ಥಾಪಿಸಿದ್ದಾರೆ. ಇದರಿಂದ ದಾನಿಗಳ ಅಭಿಲಾಷೆಯಂತೆ ೭೫ಕ್ಕೂ ಹೆಚ್ಚು ವೈವಿಧ್ಯಮಯ ಕಾರ್ಯಕ್ರಮಗಳನ್ನು - ಉಪನ್ಯಾಸಗಳು, ಸ್ಪರ್ಧೆಗಳು, ಹಾಡುಗಾರಿಕೆ, ಸಾಂಸ್ಕೃತಿಕ ಕಾರ್ಯಕ್ರಮಗಳು - ನಾಡಿನಾದ್ಯಂತ ಏರ್ಪಡಿಸಲಾಗಿದೆ.

**ಕಾವ್ಯಕಾವೇರಿ - ಧ್ವನಿಸುರಳಿ**

ನಮ್ಮ ನಾಡಿನ ಪ್ರಸಿದ್ಧ ಸುಗಮ ಸಂಗೀತ ಕಲಾವಿದರ ನೆರವಿನಿಂದ ಪ್ರತಿತಿಂಗಳ ಮೊದಲನೇ ತಾರೀಖು ಪರಿಷತ್ತಿನ ಸಭಾಂಗಣದಲ್ಲಿ ಕನ್ನಡ ಗೀತೆಗಳ ಕಾರ್ಯಕ್ರಮ 'ಕಾವ್ಯ ಕಾವೇರಿ'ಯನ್ನು ಏರ್ಪಡಿಸಲಾಗುತ್ತಿದೆ. ಇದು ಬಹು ಜನಪ್ರಿಯವಾಗಿದೆ. ಡಿಸೆಂಬರ್ ೧. ೧೯೯೩ ರಂದು ಕನ್ನಡದ ಪ್ರಸಿದ್ಧ ಕವಿಗಳ ಕನ್ನಡ ಗೀತೆಗಳನ್ನು ನಾಡಿನ ಎಲ್ಲ ಜನರಿಗೆ ಪರಿಚಯಗೊಳಿಸಿ ಜನಪ್ರಿಯಗೊಳಿಸುವ ದೃಷ್ಟಿಯಿಂದ ಪ್ರಸಿದ್ಧ ಸುಗಮಸಂಗೀತ ಕಲಾವಿದರು ಹಾಡಿರುವ ಧ್ವನಿಸುರುಳಿ 'ಹಚ್ಚೇವು ಕನ್ನಡದ ದೀಪ'ವನ್ನು ಪರಿಷತ್ತು ಸಿದ್ಧಪಡಿಸಿ ಬಿಡುಗಡೆಗೊಳಿಸಿದೆ.

*ರಂಗಸ್ಪರ್ಧೆ* : ೨೧. ೧. ೯೩ ರಿಂದ ೩. ೨. ೯೩ ರ ವರೆಗೆ ಅಂತರಕಾಲೇಜು ರಂಗಸ್ಪರ್ಧೆಗಳನ್ನು ನಡೆಸಲಾಯಿತು. ರಂಗಭೂಮಿಗೆ ಸಂಬಂಧಿಸಿದ ವಿವಿಧ ವಿಭಾಗಗಳಲ್ಲಿ ತೊಡಗಿಸಿಕೊಳ್ಳಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವುದು ಈ ಕಾರ್ಯಕ್ರಮದ ಉದ್ದೇಶ.

*ಸಾಹಿತ್ಯ ಪರೀಕ್ಷೆಗಳು :* ೧೯೪೦ ನೇ ಇಸವಿಯಿಂದ ನಡೆದುಕೊಂಡು ಬರುತ್ತಿರುವ ಕನ್ನಡ ಕಾವ, ಜಾಣ, ರತ್ನ ಪರೀಕ್ಷೆಗಳ ಜೊತೆಗೆ ಈ ಸಾಲಿನಲ್ಲಿ 'ಕನ್ನಡ ಪ್ರವೇಶ'ಪರೀಕ್ಷೆಯನ್ನೂ ೯. ೧. ೯೩ ರಿಂದ ೧೨. ೧. ೯೩ರ ವರೆಗೆ ನಾಡಿನಾದ್ಯಂತ ಹಲವಾರು ಕೇಂದ್ರಗಳಲ್ಲಿ ನಡೆಸಲಾಗಿದೆ. ಇದರ ಜೊತೆಗೆ ಪ್ರತಿವರ್ಷದಂತೆ ಶಾಸನಶಾಸ್ತ್ರ ತರಗತಿ ಹಾಗೂ ಬೆರಳಚ್ಚು, ಶೀಘ್ರಲಿಪಿ ತರಗತಿಗಳನ್ನು ನಡೆಸಲಾಗಿದೆ.

*ವಿಚಾರ ಸಂಕಿರಣಗಳು :* ೨೯. ೮. ೧೯೯೩ ರಂದು ಮಧುರಚೆನ್ನರ ಸಂಸ್ಮರಣೆ ಹಾಗೂ ವಿಚಾರ ಸಂಕಿರಣ ೨೬. ೧. ೯೩ ರಂದು ಎಂ. ಆರ್. ಶ್ರೀ ಬದುಕು ಬರಹ ವಿಚಾರ ಸಂಕಿರಣ ಹಾಗೂ ೨೬. ೧. ೯೩ ರಂದು ಡಾ. ದ. ರಾ. ಬೇಂದ್ರೆ ಸಂಸ್ಮರಣೆ, ೮.೧. ೯೩ ರಂದು ಶಿ. ಶಿ. ಬಸವನಾಳ ಜನ್ಮಶತಾಬ್ಧಿ ಕಾರ್ಯಕ್ರಮವನ್ನು ಪರಿಷತ್ತಿನಲ್ಲಿ ಏರ್ಪಡಿಸಲಾಗಿತ್ತು.

*ಸನ್ಮಾನ ಕಾರ್ಯಕ್ರಮಗಳು :* ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಆಯ್ಕೆಯಾದ ಡಾ. ಯು. ಆರ್. ಅನಂತಮೂರ್ತಿ ಅವರನ್ನು ೧೦. ३. ೯೩ ರಂದು ಪರಿಷತ್ತಿನಲ್ಲಿ ಸನ್ಮಾನಿಸಲಾಯಿತು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಾದ ಶ್ರೀ ಸು. ರಂ. ಎಕ್ಕುಂಡಿ ಅವರನ್ನು ೨೩. ೪. ೯೩ ರಂದು ಪರಿಷತ್ತಿನಲ್ಲಿ ಗೌರವಿಸಿ ಅಭಿನಂದನೆ ಸಲ್ಲಿಸಲಾಯಿತು. ೧೭. ೫. ೧೯೯೩ ರಂದು ಡಾ. ಯು. ಆರ್. ರಾವ್ ಹಾಗೂ ಡಾ. ರಾಜಾರಾಮಣ್ಣ ಅವರನ್ನು ಪರಿಷತ್ತಿನಲ್ಲಿ ಸನ್ಮಾನಿಸಲಾಯಿತು.

*ಶಾಲೆಯಿಂದ ಶಾಲೆಗೆ :* ಶಾಲಾ ಮಕ್ಕಳಿಗೆ ಕನ್ನಡ ಸಾಹಿತ್ಯದ ಹಾಗೂ ಸಾಹಿತಿಗಳ ಪರಿಚಯ ಮಾಡಿಕೊಡುವ ಸಾಹಿತ್ಯ ಪ್ರಸಾರ ಕಾರ್ಯಕ್ರಮವನ್ನು ನಾಡಿನ ಬೇರೆ ಬೇರೆ ಜಿಲ್ಲೆಗಳ ಎರಡು ಸಾವಿರಕ್ಕೂ ಮಿಕ್ಕು ಶಾಲೆಗಳಲ್ಲಿ ನಡೆಸಲಾಗಿದೆ. ಅಲ್ಲದೇ ಈ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ರಸಪ್ರಶ್ನೆ, ಉಪಾಧ್ಯಾಯರಿಗೆ ಕನ್ನಡ ಭಾಷಾ ಬೋಧನ ಶಿಬಿರಗಳು, ಸಾಹಿತ್ಯೋಪನ್ಯಾಸ, ಜನಕಲಾಪ್ರದರ್ಶನಗಳನ್ನೂ ಏರ್ಪಡಿಸಲಾಗಿತ್ತು.

*ಇತರೆ ಕಾರ್ಯಕ್ರಮಗಳು :* ೧೫. ೫. ೯೩ ರಂದು ಪರಿಷತ್ತಿನ ಸ್ಥಾಪನಾ ದಿನಾಚರಣೆಯ ಪ್ರಯುಕ್ತ ಸಾಹಿತಿಗಳು, ಕಾರ್ಯಕರ್ತರು, ಅಭಿಮಾನಿಗಳ ಸಭೆ ಕರೆದು 'ಪರಿಷತ್ತಿನ ಮುಂದಿನ ಕಾರ್ಯಯೋಜನೆಗಳು ಏನಿರಬೇಕು 'ಎಂಬ ಬಗ್ಗೆ ಮುಕ್ತ ಸಂವಾದ ಕಾರ್ಯಕ್ರಮವನ್ನು ಏರ್ಪಡಿಸಿತ್ತು.

೧೧.೭.೯೩ ರಂದು ಬೆಂಗಳೂರಿನ ವಿಜಯನಗರ ಬಡಾವಣೆಯಲ್ಲಿ ಅಮೃತನಿಧಿ ಸಂಗ್ರಹಕ್ಕೆ ಪಾದಯಾತ್ರೆ ಮಾಡಲಾಯಿತು. ೧. ೧೧. ೯೩ ರಂದು ಮನೆಮನೆಗೆ ಪುಸ್ತಕ ಪಾದಯಾತ್ರೆ ಹಾಗೂ ಪುಸ್ತಕ ಪ್ರದರ್ಶನದಲ್ಲಿ ಪರಿಷತ್ತೂ ಸಹ ಭಾಗವಹಿಸಿತ್ತು.



# ಕರ್ನಾಟಕ ಲಲಿತಕಲಾ ಅಕಾಡೆಮಿ

*ಕೆ. ಮುಕುಂದನ್*

---

**ಕಲಾಕೃತಿಗಳ ಪ್ರದರ್ಶನ**

ಅಕಾಡೆಮಿಯು ಪ್ರಸಕ್ತ ಸಾಲಿನಲ್ಲಿ ಕಲಾಪ್ರದರ್ಶನದಿಂದ ಖರೀದಿಸಿದ ಕಲಾಕೃತಿಗಳ ಕಲಾಪ್ರದರ್ಶನವನ್ನು ೬.೧.೧೯೯೩ ರಿಂದ ೯.೧.೧೯೯೩ರ ವರೆಗೆ ತುಮಕೂರು ನಗರದಲ್ಲಿ ಏರ್ಪಡಿಸಿತ್ತು. ಮೂರು ದಿನಗಳ ಕಾಲ ಸಂಜೆ ಚಿತ್ರಕಲೆ, ಶಿಲ್ಪಕಲೆ ಕುರಿತ ವಿಡಿಯೋ ಚಿತ್ರ ಪ್ರದರ್ಶನ ಹಾಗೂ ಸಂಚಾರಿ ಕಲಾ ಪ್ರದರ್ಶನ ಮತ್ತು ಅಕಾಡೆಮಿಯ ಕಲಾ ಪುಸ್ತಕಗಳ ಮಾರಾಟ ವ್ಯವಸ್ಥೆ ಮಾಡಲಾಗಿತ್ತು; ಇದೇ ಕಲಾಪ್ರದರ್ಶನವನ್ನು ಧಾರವಾಡದ ವಿದ್ಯಾವರ್ಧಕ ಸಂಘದಲ್ಲಿ ೨೪.೨.೧೯೯೩ ರಿಂದ ೨೬.೨.೧೯೯೩ರ ವರೆಗೆ ಏರ್ಪಡಿಸಲಾಗಿತ್ತು. ಪ್ರಥಮಬಾರಿಗೆ ಕಲಾಗ್ರಂಥಗಳಿಗೆ ಬಹುಮಾನ ನೀಡಲಾಯಿತು.

ರಾಜ್ಯದ ಹೆಸರಾಂತ ಹಿರಿಯ ಕಲಾವಿದರ ಕಲಾ ಪ್ರದರ್ಶನವನ್ನು ಬೆಳಗಾವಿಯ ಐ.ಎಂ.ಎ. ಹಾಲ್ ಸಭಾಂಗಣದಲ್ಲಿ ೨೦.೨.೧೯೯೩ ರಿಂದ ೨೨.೨.೧೯೯೩ರ ವರೆಗೆ ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ಅಕಾಡೆಮಿಯ ಸಂಚಾರಿ ಕಲಾಪ್ರದರ್ಶನದ ಮತ್ತು ಪುಸ್ತಕಗಳ ಮಾರಾಟ ವ್ಯವಸ್ಥೆ ಹಾಗೂ ಚಿತ್ರ, ಶಿಲ್ಪಕಲೆ ಕುರಿತ ವಿಡಿಯೋ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು.

'ಪ್ರಿಂಟ್ಸ್ ಟುಡೇ' 'ಅಖಿಲ ಭಾರತ ಕಲಾಪ್ರದರ್ಶನ'ವನ್ನು ೪.೬.೧೯೯೩ ರಿಂದ ೧೮.೬.೧೯೯೩ರ ವರೆಗೆ ಬೆಂಗಳೂರಿನ ವೆಂಕಟಪ್ಪ ಚಿತ್ರಶಾಲೆಯಲ್ಲಿ ಏರ್ಪಡಿಸಲಾಗಿತ್ತು. ಈ ಕಲಾಪ್ರದರ್ಶನಕ್ಕೆ ರಾಷ್ಟ್ರದ ವಿವಿಧ ರಾಜ್ಯಗಳಿಂದ ಗ್ರಾಫಿಕ್ ಕಲಾವಿದರು ತಮ್ಮ ಕೃತಿಗಳನ್ನು ಕಳುಹಿಸಿಕೊಟ್ಟಿದ್ದರು. ರಾಷ್ಟ್ರದ ಹೆಸರಾಂತ ಗ್ರಾಫಿಕ್ ಕಲಾವಿದರನ್ನು ವಿಶೇಷ ಆಹ್ವಾನಿತರಾಗಿ ಆಹ್ವಾನಿಸಲಾಗಿತ್ತು. ಐದು ಉತ್ತಮ ಗ್ರಾಫಿಕ್ ಕೃತಿಗಳನ್ನು ಬಹುಮಾನಕ್ಕಾಗಿ ಆಯ್ಕೆ ಮಾಡಿ ತಲಾ ೫,೦೦೦.೦೦ ರೂ.ಗಳನ್ನು ನೀಡಲಾಯಿತು.

ಅಕಾಡೆಮಿ ಮತ್ತು ಚಿತ್ರದುರ್ಗಾ ಜಿಲ್ಲಾ ಕ್ರಾಫ್ಟ್ ಕೌನ್ಸಿಲ್ ಸಂಯುಕ್ತ ಆಶ್ರಯದಲ್ಲಿ ಅಕಾಡೆಮಿ ತನ್ನ ಸಂಗ್ರಹಗಳ ಕಲಾಕೃತಿಗಳ ಪ್ರದರ್ಶನವನ್ನು ೧೬.೮.೧೯೯೩ರಿಂದ ೧೮.೮.೧೯೯೩ರ ವರೆಗೆ ದಾವಣಗೆರೆಯ ಆರ್.ಹೆಚ್. ಛತ್ರದಲ್ಲಿ ಏರ್ಪಡಿಸಿತ್ತು.

ಫೆಡರೇಷನ್ ಆಫ್ ಇಂಡಿಯನ್ ಫೋಟೋಗ್ರಫಿ ಹಾಗೂ ಅಕಾಡೆಮಿ

ಸಂಯುಕ್ತವಾಗಿ ಲಲಿತಕಲೆಯಂತೆ ಛಾಯಾಚಿತ್ರ ಪ್ರದರ್ಶನ ಮತ್ತು ವರ್ಣಚಿತ್ರಗಳ ತೌಲನಿಕ ಪ್ರದರ್ಶನವನ್ನು ೬ನೇ ಸೆಪ್ಟೆಂಬರ್ ೯೩ ರಂದು ಬೆಂಗಳೂರಿನ ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ಮೂರು ದಿನಗಳ ಕಾಲ ಏರ್ಪಡಿಸಿತ್ತು. ಈ ಸಂದರ್ಭದಲ್ಲಿ ಅಕಾಡೆಮಿ ಸಂಗ್ರಹದಿಂದ ಕಲಾವಿದರ ಭಾವಚಿತ್ರ ಮತ್ತು ಪ್ರಕೃತಿ ಚಿತ್ರಗಳು ಹಾಗೂ ಛಾಯಾಚಿತ್ರಗಳು ಮತ್ತು ಅವುಗಳಿಂದ ಸ್ಫೂರ್ತಿ ಪಡೆದ ವರ್ಣಚಿತ್ರಗಳನ್ನು ಪ್ರದರ್ಶಿಸಲಾಯಿತು.

ಅಕಾಡೆಮಿಯು ಪ್ರಪ್ರಥಮ ಬಾರಿಗೆ ಅಖಿಲ ಭಾರತ ಛಾಯಾಚಿತ್ರ ಪ್ರದರ್ಶನವನ್ನು ೭.೧೧.೧೯೯೩ರಿಂದ ೧೧.೧೧.೧೯೯೩ರ ವರೆಗೆ ಮೈಸೂರಿನಲ್ಲಿ ಏರ್ಪಡಿಸಿತ್ತು. ಈ ಛಾಯಾಚಿತ್ರ ಪ್ರದರ್ಶನದಲ್ಲಿ ನೈಸರ್ಗಿಕ ಸನ್ನಿವೇಶಗಳು, ಪ್ರಾಣಿಜಗತ್ತು ಹಾಗೂ ಭಾವಚಿತ್ರಗಳ ಕಪ್ಪು ಬಿಳುಪು ಹಾಗೂ ವರ್ಣದ ಛಾಯಾ ಚಿತ್ರಗಳು ಮೈಸೂರಿನ ಜನರನ್ನು ತುಂಬಾ ಆಕರ್ಷಿಸಿದವು. ೩.೧೨.೧೯೯೩ ರಿಂದ ೬.೧೨.೧೯೯೩ರ ವರೆಗೆ ಗುಲ್ಬರ್ಗಾದ ಐಡಿಯಲ್ ಫೈನ್ ಆರ್ಟ್ ಸೊಸೈಟಿಯ ಸಹಕಾರದಿಂದ ಇದೇ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು.

ಅಕಾಡೆಮಿಯು ೨೩ನೇ ವಾರ್ಷಿಕ ಕಲಾಪ್ರದರ್ಶನವನ್ನು ಧಾರವಾಡದಲ್ಲಿ ೧೮.೧೧.೧೯೯೩ ರಿಂದ ೨೨.೧೧.೧೯೯೩ರ ವರೆಗೆ ಏರ್ಪಡಿಸಿತ್ತು. ಈ ಕಲಾಪ್ರದರ್ಶನಕ್ಕೆ ರಾಜ್ಯದ ೪೦೧ ಕಲಾವಿದರು ೬೩೬ ಕೃತಿಗಳನ್ನು ಕಳುಹಿಸಿದ್ದು, ಅವುಗಳಲ್ಲಿ ೧೧೮ ಕಲಾಕೃತಿಗಳನ್ನು ಪ್ರದರ್ಶನಕ್ಕೆ ಆಯ್ಕೆ ಮಾಡಿತ್ತು. ಹಾಗೂ ಅವುಗಳಲ್ಲಿ ಐದು ಉತ್ತಮ ಕಲಾಕೃತಿಗಳಿಗೆ ಬಹುಮಾನ ನೀಡಲಾಗಿತ್ತು. ಅಕಾಡೆಮಿಯು ಇಂತಹ ವಾರ್ಷಿಕ ಕಲಾಪ್ರದರ್ಶನವನ್ನು ಪ್ರಥಮ ಬಾರಿಗೆ ಈ ಭಾಗದಲ್ಲಿ ಏರ್ಪಡಿಸಿದುದಕ್ಕೆ ಜನ ಮತ್ತು ಕಲಾವಿದರಿಂದ ಮೆಚ್ಚುಗೆಯ ಮಾತುಗಳು ವ್ಯಕ್ತವಾದುವು.

ಅಕಾಡೆಮಿ ಮತ್ತು ಹಿಮಾಚಲ ಕಲೆ, ಸಂಸ್ಕೃತಿ ಮತ್ತು ಭಾಷಾ ಅಕಾಡೆಮಿ ಅವರ ಸಹಯೋಗದೊಂದಿಗೆ ಬೆಂಗಳೂರಿನ ವೆಂಕಟಪ್ಪ ಕಲಾ ಶಾಲೆಯಲ್ಲಿ ಡಿಸೆಂಬರ್ ೨೦ ರಿಂದ ೨೩ರವರೆಗೆ 'ಹಿಮಾಚಲ ಪ್ರದೇಶ ಕಲಾವಿದರ ಕಲಾಕೃತಿಗಳ ಪ್ರದರ್ಶನ'ವನ್ನು ಏರ್ಪಡಿಸಲಾಗಿತ್ತು. ಕಲಾ ಪ್ರದರ್ಶನದಲ್ಲಿ ಸಮಕಾಲೀನ ಕೃತಿಗಳೊಂದಿಗೆ ಸಂಗ್ರಹ ಚಿಕಣಿ ಚಿತ್ರಗಳನ್ನು ಪ್ರದರ್ಶಿಸಲಾಗಿತ್ತು. ಈ ಚಿತ್ರಗಳು ಕಲಾವಿದರನ್ನು ಮತ್ತು ಜನರನ್ನು ಆಕರ್ಷಿಸಿದವು.

**ಕಲಾಶಿಬಿರಗಳು**

ರಾಜ್ಯದ ವಿವಿಧ ಸಾಂಪ್ರದಾಯಿಕ ಕಲೆಗಳ ಬಗ್ಗೆ ಶಿಬಿರವನ್ನು ಹೊನ್ನಾವರದ ಸಂತ ಆಂತೋನಿ ಪ್ರೌಢಶಾಲೆಯ ಆವರಣದಲ್ಲಿ ೧.೮.೧೯೯೩ ರಿಂದ ೭.೮.೧೯೯೩ರ ವರೆಗೆ ಏರ್ಪಡಿಸಲಾಗಿತ್ತು.

ಮಡಿಕೇರಿಯ ಸುಂದರ, ಸೊಬಗಿನ ಪ್ರಕೃತಿ ಮಡಿಲಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಪ್ರಥಮ ಬಾರಿಗೆ, ೭.೫.೧೯೯೩ ರಿಂದ ೧೧.೫.೧೯೯೩ರ ವರೆಗೆ 'ಪ್ರಕೃತಿ

ಚಿತ್ರ ಮತ್ತು ಭಾವಚಿತ್ರ ಕಲಾಶಿಬಿರ'ವನ್ನು ಹಮ್ಮಿಕೊಳ್ಳಲಾಗಿತ್ತು. ಸಮಕಾಲೀನ ಕಲಾ ಸಂದರ್ಭದಲ್ಲಿ ನಶಿಸಿ ಹೋಗುತ್ತಿರುವ ಪರಂಪರೆಯೊಂದನ್ನು ಪುನರುಜ್ಜೀವನ ಮಾಡುವಲ್ಲಿ ಈ ಶಿಬಿರ ಸಹಕಾರಿಯಾಯಿತು.

ಅಕಾಡೆಮಿಯು ಶ್ರೀರಂಗಪಟ್ಟಣ. ಕಾವೇರಿ ನದೀ ತೀರದಲ್ಲಿ ಹೋಟೆಲ್ ಮಯೂರ ರಿವರ್ ವ್ಯೂ ಆವರಣದಲ್ಲಿ ೪.೭.೧೯೯೩ ರಿಂದ ೧೧.೭.೧೯೯೩ರ ವರೆಗೆ ಅಖಿಲ ಭಾರತ ಚಿತ್ರಕಲಾವಿದರ ಶಿಬಿರವನ್ನು ಏರ್ಪಡಿಸಿತ್ತು. ಕಾವೇರಿ ತೀರದ ಪ್ರಶಾಂತ ವಾತಾವರಣ ಮತ್ತು ಕಲಾತ್ಮಕ ಪರಿಸರದಲ್ಲಿ ಭಾಗವಹಿಸಿದ್ದ ರಾಜ್ಯದ ಕಲಾವಿದರು. ಜಲವರ್ಣ ಹಾಗೂ ತೈಲವರ್ಣದಲ್ಲಿ ತಮ್ಮ ಸೃಜನಶೀಲತೆಯನ್ನು ಕಲಾಕೃತಿಗಳ ಮೂಲಕ ವ್ಯಕ್ತಪಡಿಸಿದರು. ಶಿಬಿರದ ಸಮಯದಲ್ಲಿ ಪ್ರತಿ ದಿನ ಸಂಜೆ ಕಲಾವಿದರೊಂದಿಗೆ ಚರ್ಚೆ ಮತ್ತು ಸ್ಲೈಡುಗಳ ಪ್ರದರ್ಶನವಿತ್ತು.

**ಕಲಾಪುಸ್ತಕಗಳ ಪ್ರಕಟಣೆ**

ಅಕಾಡೆಮಿಯು ಪ್ರಕಟಿಸಿರುವ ಹನ್ನೆರಡು ಕಲಾ ಪುಸ್ತಕಗಳ ಬಿಡುಗಡೆ ಸಮಾರಂಭವು ೧೧.೬.೧೯೯೩ ರಂದು ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ನಡೆಯಿತು.

ಚಿತ್ರಕಲಾ ಪ್ರಪಂಚ - ಅ. ಲ. ನರಸಿಂಹನ್
- ಎನ್. ಮರಿಶಾಮಾಚಾರ್

ರಾಷ್ಟ್ರ ಪ್ರಶಸ್ತಿ ಪಡೆದ ಕಲಾವಿದರು - ಡಾ. ಬಿ.ಕೆ. ಹಿರೇಮಠ ಮತ್ತು
- ಎನ್. ಮರಿಶಾಮಾಚಾರ್

ಸಂತ ಕಲಾವಿದ ಶುಭರಾಯರು - ಎನ್. ಮರಿಶಾಮಾಚಾರ್

ಕಾವಿಕಲೆ - ಕೃಷ್ಣಾನಂದ ಕಾಮತ್

ಭಾರತದ ದೃಶ್ಯ ಕಲಾವಿದರು - ಎನ್. ಮರಿಶಾಮಾಚಾರ್

ಕರ್ನಾಟಕದ ಕಲಾವಿದರ ಚಿತ್ರ ಸಂಪುಟಗಳು (ಒಟ್ಟು ೪ ಸಂಪುಟಗಳು)

ಕನ್ನಾಳ ಕಲೆ - ಆರ್. ಹೆಚ್. ಕುಲಕರ್ಣಿ

ತಮಿಳುನಾಡಿನಲ್ಲಿ ಚಿತ್ರಕಲೆ - ಅ. ಲ. ನರಸಿಂಹನ್

ನಮ್ಮಕಲೆಯ ನವಮುಖಿಗಳು - ಸಂ. ಬಿ. ವಿ. ಕೆ. ಶಾಸ್ತ್ರಿ

**ಪ್ರಶಸ್ತಿಗಳು ಮತ್ತು ನೆರವು**

೨೦.೧.೧೯೯೩ ರಂದು ಶಿವಮೊಗ್ಗದಲ್ಲಿ ನಡೆದ ಸಮಾರಂಭದಲ್ಲಿ ಅಕಾಡೆಮಿಯು ತನ್ನ ಹಿಂದಿನ ಸಾಲಿನ ಒಟ್ಟು ೧೫ ಕಲಾವಿದರುಗಳಿಗೆ ಪ್ರಶಸ್ತಿ ನೀಡಿ ಗೌರವಿಸಿತು ಸಂದರ್ಭಕ್ಕೆ ಅನುಗುಣವಾಗಿ ಪ್ರಶಸ್ತಿ ವಿಜೇತ ಕಲಾವಿದರ ಕಲಾಕೃತಿಗಳ ಪ್ರದರ್ಶನವನ್ನು ವ್ಯವಸ್ಥೆ ಮಾಡಲಾಗಿತ್ತು. ಅಲ್ಲದೆ. ಕಲಾಸಂಗ್ರಹದಲ್ಲಿನ ಆರಿಸಿದ ಕಲಾಕೃತಿಗಳನ್ನು ಸಂಚಾರಿ ಕಲಾಪ್ರದರ್ಶನ ವಾಹನದಲ್ಲಿ ಏರ್ಪಡಿಸಲಾಗಿತ್ತು.

ಪ್ರತಿ ವರ್ಷದಂತೆ ಈ ವರ್ಷವೂ ಕರ್ನಾಟಕದ ಒಳಗೆ ಹಾಗೂ ಹೊರಗಡೆ ಅಭ್ಯಾಸ ಮಾಡುತ್ತಿರುವ ಕಲಾ ವಿದ್ಯಾರ್ಥಿಗಳಿಗೆ ಶಿಷ್ಯವೇತನವನ್ನು ನೀಡಲಾಗಿದೆ. ರಾಜ್ಯದ ಹೊರಗೆ ಮತ್ತು ಒಳಗೆ ಏಕವ್ಯಕ್ತಿ ಮತ್ತು ಸಮೂಹ ಕಲಾ ಪ್ರದರ್ಶನವನ್ನು ಏರ್ಪಡಿಸಲು ಧನಸಹಾಯ ನೀಡಲಾಗಿದೆ. ಆಸಕ್ತ ಕಲಾವಿದರುಗಳಿಗೆ ವೈದ್ಯಕೀಯ ನೆರವನ್ನು ನೀಡಲಾಗಿದೆ. ಸಂಘ ಸಂಸ್ಥೆಗಳಿಗೆ ಧನಸಹಾಯವನ್ನು ನೀಡಿ ಕಲಾಭಿವೃದ್ಧಿಗೆ ನೆರವು ಕೊಡಲಾಗಿದೆ. ೯೩ನೇ ಸಾಲಿಗಾಗಿ ಶ್ರೀಯುತರಾದ ವಿ.ಆರ್.ಶೆಟ್ಟಿ, ಎಸ್.ಪಿ. ಅಂಚನ್, ಎಂ. ರಾಮನರಸಯ್ಯ, ಶಂಕರೇಗೌಡ ಬೆಟ್ಟದೂರು, ಶ್ರೀಮತಿ ಎಂ.ಜೆ. ಕಮಲಾಕ್ಷಿ ಈ ಐದು ಜನ ಕಲಾವಿದರಿಗೆ ಅಕಾಡೆಮಿಯ ಪ್ರಶಸ್ತಿಗಳನ್ನು ನೀಡಲಾಗಿದೆ. ಕರ್ನಾಟಕದಾದ್ಯಂತ ೪೦ ಕಡೆ ಇರುವ ಭಿತ್ತಿಚಿತ್ರಗಳ ವಿಡಿಯೋ ಚಿತ್ರೀಕರಣ, ಪಾರದರ್ಶಿಕೆ ಹಾಗೂ ಛಾಯಾಚಿತ್ರಗಳನ್ನು ಮಾಡಲಾಗಿದೆ. ಖ್ಯಾತ ಕಲಾವಿದ ಡಾ. ಕೆ.ಕೆ. ಹೆಬ್ಬಾರ್ ಅವರ ಬಗ್ಗೆ ಒಂದು ವಿಡಿಯೋ ಚಿತ್ರವನ್ನೂ ಚಿತ್ರೀಕರಿಸಲಾಗಿದೆ.



# ಕರ್ನಾಟಕ ಸಂಗೀತ ಮತ್ತು ನೃತ್ಯ ಅಕಾಡೆಮಿ

*ದುರ್ಗಾ ಸಿ. ಆವರ್ತಿ*

---

ನಾಡಿನ ಸಂಗೀತ ನೃತ್ಯಗಳ ವಿಕಸನ ಹಾಗೂ ಸೃಜನಶೀಲತೆಗಾಗಿಯೇ ಕೆಲಸ ನಿರ್ವಹಿಸುತ್ತಿರುವ ಸಂಗೀತ ನೃತ್ಯ ಅಕಾಡೆಮಿ ೧೯೯೩ರ ಸಾಲಿನಲ್ಲಿ ನಾಡಿನಾದ್ಯಂತ ಅನೇಕ ಚಟುವಟಿಕೆಗಳನ್ನು ನಡೆಸುವುದರ ಮೂಲಕ ತನ್ನ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿದೆ.

**ಸಂಗೀತ ನೃತ್ಯೋತ್ಸವ**

ದಿನಾಂಕ ೨೫.೨.೯೩ ರಿಂದ ೨೮.೨.೯೩ ರವರೆಗೆ ಶಿವಮೊಗ್ಗ ಜಿಲ್ಲೆ ಇಕ್ಕೇರಿಯ ಅಘೋರೇಶ್ವರ ದೇವಸ್ಥಾನದಲ್ಲಿ ರಾಷ್ಟ್ರೀಯ ಮಟ್ಟದ ಸಂಗೀತ ನೃತ್ಯೋತ್ಸವವನ್ನು ನಡೆಸಲಾಯಿತು.

ಗದುಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮದ ಸಹಕಾರದೊಂದಿಗೆ ಜನವರಿ ೧೦, ೧೧ ರಂದು ಗದುಗಿನಲ್ಲಿ ಹಿಂದೂಸ್ಥಾನಿ ಸಂಗೀತ ಘರಾಣೆಗಳ ಉತ್ಸವವನ್ನು ನಡೆಸಲಾಯಿತು. ಶಿವಮೊಗ್ಗ, ಸೊರಬ, ಸಿರಸಿ, ತೀರ್ಥಹಳ್ಳಿ, ಕುಕ್ಕೆ ಸುಬ್ರಮಣ್ಯ, ಗದಗ್, ಬೆಂಗಳೂರು, ಧಾರವಾಡ, ಮೈಸೂರು, ಮುಳಬಾಗಿಲುಗಳಲ್ಲಿ ಜಿಲ್ಲಾಮಟ್ಟದ ಸಂಗೀತ ನೃತ್ಯೋತ್ಸವವನ್ನು ಏರ್ಪಡಿಸಲಾಗಿತ್ತು.

**ವಿಚಾರ ಸಂಕಿರಣ**

ಗದುಗಿನ ಘರಾಣೆ ಉತ್ಸವದ ಸಂದರ್ಭದಲ್ಲಿ ಸಂಗೀತ-ನೃತ್ಯಗಳಿಗೆ ಸಂಬಂಧಿಸಿದಂತೆ ಅರ್ಥಪೂರ್ಣ ವಿಚಾರ ಸಂಕಿರಣವೊಂದನ್ನು ನಡೆಸಲಾಯಿತು. ಅಕಾಡೆಮಿಯ ಸದಸ್ಯರಾದ ಪಂ. ವೆಂಕಟೇಶ್ ಕುಮಾರ್, ಪಂ. ಪಂಚಾಕ್ಷರಿ ಸ್ವಾಮಿ, ಮತ್ತಿಗಟ್ಟಿ, ಡಾ.ಎಂ. ಸೂರ್ಯಪ್ರಸಾದ್ ಅವರುಗಳು ಈ ಕಾರ್ಯಕ್ರಮದ ಸಂಚಾಲಕರಾಗಿ ಕಾರ್ಯ ನಿರ್ವಹಿಸಿದರು. ಸಮಾರೋಪ ಸಮಾರಂಭದಲ್ಲಿ ಶ್ರೀ ತೋಂಟದಾರ್ಯ ಜಗದ್ಗುರು ಮಹಾಸ್ವಾಮಿಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಡಾ.ಎಸ್.ಎಂ. ವೃಷಭೇಂದ್ರಸ್ವಾಮಿ ಅಧ್ಯಕ್ಷತೆ ವಹಿಸಿದ್ದರು.

ಪಂಡಿತ ವಿನಾಯಕ ತೊರವಿ, ಡಾ.ಬಿಂದು ಮಾಧವ ಪಾಠಕ್, ಸದಾನಂದ ಕನವಳ್ಳಿ, ಡಾ.ನಾಗರಾಜರಾವ್ ಹವಾಲ್ದಾರ್ ವಿವಿಧ ಘರಾಣೆಗಳ ಬಗ್ಗೆ ಪ್ರಬಂಧಗಳನ್ನು

ಮಂಡಿಸಿದರು. ಎಂ. ಪುಟ್ಟರಾಜ ಗವಾಯಿಗಳು. ಎಸ್.ಎಮ್. ಚಂದ್ರಶೇಖರ್, ಎನ್.ಕೆ. ಕುಲಕರ್ಣಿ, ಡಾ. ಎಸ್. ವೃಷಭೇಂದ್ರ ಸ್ವಾಮಿಗಳು ಈ ವಿಚಾರ ಸಂಕಿರಣದ ಅಧ್ಯಕ್ಷರಾಗಿ ಭಾಗವಹಿಸಿದ್ದರು.

**ವಿಡಿಯೋ ಚಿತ್ರೋತ್ಸವ**

೧೯೯೩ನೇ ಆಗಸ್ಟ್ ೧೭ ರಿಂದ ೨೩ ರವರೆಗೆ ಸಂಗೀತ-ನೃತ್ಯ ಅಕಾಡೆಮಿ ಹಾಗೂ ಲಲಿತ ಕಲಾ ಅಕಾಡೆಮಿಯ ಸಹಯೋಗದೊಂದಿಗೆ ಕಲೆ, ಸಂಗೀತ, ನೃತ್ಯ-ವಿಡಿಯೋ ಚಿತ್ರೋತ್ಸವ ಸಪ್ತಾಹವನ್ನು ಏರ್ಪಡಿಸಿತ್ತು. ಬೆಂಗಳೂರು ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ನಡೆದ ಉದ್ಘಾಟನೆಯನ್ನು ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರಾದ ಗಿರೀಶ್‌ಕಾರ್ನಾಡ್ ಅವರು ಉದ್ಘಾಟಿಸಿದರು. ಕನ್ನಡ ಸಂಸ್ಕೃತಿ ಇಲಾಖೆಯ ಕಮೀಷನರ್ ಡಾ. ಪಿ. ಎಸ್. ರಾಮಾನುಜಂ ಅವರು ಭಾಗವಹಿಸಿದ್ದರು. ಒಂದುವಾರ ನಡೆದ ಈ ಸಪ್ತಾಹಕ್ಕೆ ನೂರಾರು ಸಂಖ್ಯೆಯಲ್ಲಿ ಅಭಿಮಾನಿಗಳು ಆಗಮಿಸಿ ಪ್ರಯೋಜನ ಪಡೆದರು.

**ಕನಕ-ಪುರಂದರ ಪ್ರಶಸ್ತಿ ಪ್ರಧಾನ**

ಕರ್ನಾಟಕ ಸರ್ಕಾರವು ಘೋಷಣೆ ಮಾಡಿದ 'ಕನಕ- ಪುರಂದರ' ಪ್ರಶಸ್ತಿಯ ಸಮಾರಂಭವು ಮೈಸೂರಿನ ಕಲಾಭವನದಲ್ಲಿ ಅತ್ಯಂತ ವೈಭವ ಪೂರಿತವಾಗಿ ನಡೆಯಿತು. ಮಾನ್ಯ ಮುಖ್ಯಮಂತ್ರಿಗಳಾದ ವೀರಪ್ಪಮೊಯಿಲಿ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಂತ್ರಿಗಳಾದ ಮಾನ್ಯ ಶ್ರೀ ಹೆಚ್. ವಿಶ್ವನಾಥ್ ಅವರು ಉಪಸ್ಥಿತರಿದ್ದರು. ಕನ್ನಡ ನಾಡಿನ ಹಿರಿಯ ವಿದ್ವಾಂಸರಾದ ಕರ್ನಾಟಕ ಕಲಾತಿಲಕ ಶ್ರೀ ತಿಟ್ಟೆ ಕೃಷ್ಣ ಅಯ್ಯಂಗಾರ್ ಅವರಿಗೆ ಪ್ರಪ್ರಥಮವಾಗಿ ಈ ಪ್ರಶಸ್ತಿಯನ್ನು ನೀಡಲಾಯಿತು. ಮೇಲ್ಕಂಡ ಪ್ರಶಸ್ತಿಯ ಆಯ್ಕೆ ಸಮಿತಿ ಅಧ್ಯಕ್ಷರಾದ ಡಾ. ಗಂಗೂಬಾಯಿ ಹಾನಗಲ್ ಹಾಗೂ ಸದಸ್ಯರುಗಳಾದ ಮಾಯಾರಾವ್, ಪಂ. ಆರ್.ವಿ. ಶೇಷಾದ್ರಿ ಗವಾಯಿ, ಡಾ. ವಿ. ದೊರೆಸ್ವಾಮಿ ಅಯ್ಯಂಗಾರ್ ಅವರುಗಳು ಸಭೆಯಲ್ಲಿ ಭಾಗವಹಿಸಿದ್ದರು.

೧೯೯೨-೯೩ನೇ ಸಾಲಿನ ಗಮಕ ಕಲಾ ಪ್ರಶಸ್ತಿಯನ್ನು ಕೋಲಾರದ ಶ್ರೀ ವೆಂಕಟಪ್ಪನವರಿಗೆ ನೀಡಲಾಯಿತು.



## ಕನ್ನಡ ಅಭಿವೃದ್ಧಿ ಪ್ರಾಧಿಕಾರ

*ಎಂ. ಜಯಕುಮಾರ್*

ಕರ್ನಾಟಕ ಸರ್ಕಾರದ ಭಾಷಾನೀತಿಗೆ ಸಂಬಂಧಿಸಿದ ಆದೇಶಗಳು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ಬಂದಿವೆಯೇ ಎಂಬುದನ್ನು ಪರಿಶೀಲಿಸಿ ಸಲಹೆ ಸೂಚನೆಗಳನ್ನು ನೀಡುವ ಹಾಗೂ ಸರ್ಕಾರ ಈಗಾಗಲೇ ಒಪ್ಪಿಕೊಂಡಿರುವ ಡಾ.ಸರೋಜಿನಿ ಮಹಿಷಿ ಸಮಿತಿ ವರದಿ ಶಿಫಾರಸ್ಸುಗಳನ್ನು ಪರಿಣಾಮಕಾರಿಯಾಗಿ ಕಾರ್ಯಾಚರಣೆಗೆ ತರುವ ಉದ್ದೇಶದಿಂದ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಸ್ಥಾಪಿತವಾಗಿದೆ.

ಈ ಎರಡು ಕಾರ್ಯಗಳು ನಿರಂತರ ನಿರೀಕ್ಷಣೆ ಹಾಗೂ ತಪಾಸಣೆ ಮೂಲಕ ಆಗುವಂತಹವು. ಈ ಉದ್ದೇಶಗಳಿಗಾಗಿ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಒಂದು ವಿಸ್ತೃತವಾದ ಕಾರ್ಯಯೋಜನೆಯನ್ನು ಹಾಕಿಕೊಂಡು ಅವುಗಳನ್ನು ಅನುಷ್ಠಾನಕ್ಕೆ ತರುತ್ತಿದೆ.

**ಡಾ. ಸರೋಜಿನಿ ಮಹಿಷಿ ಸಮಿತಿ ವರದಿ ಶಿಫಾರಸ್ಸುಗಳ ಅನುಷ್ಠಾನ**

೧. ೧೯೯೬ನೇ ಸಾಲಿನ ಜನವರಿ ತಿಂಗಳ ಮೊದಲ ವಾರದಲ್ಲಿ ಡಾ. ಸರೋಜಿನಿ ಮಹಿಷಿ ಸಮಿತಿ ವರದಿಯ ಶಿಫಾರಸ್ಸುಗಳನ್ನು ಅನುಷ್ಠಾನಕ್ಕೆ ತರಲು ಜವಾಬ್ದಾರಿ ವಹಿಸಲಾಗಿರುವ ಕಾರ್ಮಿಕ ಇಲಾಖೆ, ಉದ್ಯೋಗ ಮತ್ತು ತರಬೇತಿ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಲೋಕೋಪಯೋಗಿ ಮತ್ತು ಕಾಡಾ ಇಲಾಖೆ, ಸಾಂಖ್ಯಿಕ ಹಣಕಾಸು ಮತ್ತು ಸಾಂಖ್ಯಿಕ ಇಲಾಖೆ, ಕಾನೂನು ಮತ್ತು ಕಂದಾಯ ಇಲಾಖೆ, ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅಧಿಕಾರಿಗಳೊಂದಿಗೆ ಪ್ರತ್ಯೇಕವಾಗಿ ಸಭೆ ನಡೆಸಿ ಇದುವರೆಗೆ ಅವರು ಕೈಗೊಂಡಿರುವ ಕ್ರಮಗಳನ್ನು ಪರಿಶೀಲಿಸಲಾಗಿದೆ.

೨. ಸರ್ಕಾರದ ಉದಾರ ನೀತಿಗೆ ಅನುಗುಣವಾಗಿ ರಾಜ್ಯದಲ್ಲಿ ಹೆಚ್ಚಲಿರುವ ಕೈಗಾರಿಕೋದ್ಯಮಗಳಿಗೆ ಅಗತ್ಯವಾದ ಸಿಬ್ಬಂದಿಯು ಕರ್ನಾಟಕದಲ್ಲಿಯೇ ದೊರಕುವಂತೆ ಮಾಡಲು ಸೂಕ್ತ ತಾಂತ್ರಿಕ ಶಿಕ್ಷಣದ ಕೋರ್ಸ್‌ಗಳನ್ನು ಪ್ರಾರಂಭಿಸಬೇಕೆಂದು ವೃತ್ತಿ ಶಿಕ್ಷಣ ನಿರ್ದೇಶಕರಿಗೆ ಸೂಚಿಸಲಾಗಿದೆ ಮತ್ತು ತರಬೇತಿಯನ್ನು ಕನ್ನಡದಲ್ಲೇ ನೀಡಬೇಕೆಂದು ಅದಕ್ಕೆ ಬೇಕಾದ ಪಠ್ಯಕ್ರಮವನ್ನು ಕನ್ನಡದಲ್ಲೇ ತಯಾರಿಸಬೇಕೆಂದು ತಿಳಿಸಲಾಗಿದೆ.



ಕನ್ನಡ ಪ್ರಾಧಿಕಾರದ ಅಧ್ಯಕ್ಷ ಶ್ರೀ ಜಿ. ನಾರಾಯಣರು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿ ಶ್ರೀ ಲಿನ್ ಅವರ ಜೊತೆ ಆಡಳಿತದಲ್ಲಿ ಕನ್ನಡದ ಅನುಷ್ಠಾನದ ಬಗ್ಗೆ ಸಮಾಲೋಚನೆ

೩. ಪತ್ರಿಕೆಗಳಲ್ಲಿ ಬರುವ ಉದ್ಯೋಗ ಜಾಹಿರಾತುಗಳನ್ನು ಗಮನಿಸಿ ಜಾಹಿರಾತು ನೀಡುತ್ತಿರುವ ಸಂಸ್ಥೆಗಳಿಗೆ ತಪ್ಪದೆ ಕನ್ನಡಿಗರನ್ನು ನೇಮಿಸಿಕೊಳ್ಳಬೇಕೆಂದು ಮತ್ತು ನೇಮಕಾತಿ ಆದ ನಂತರ ಪ್ರಾಧಿಕಾರಕ್ಕೆ ತಿಳಿಸಬೇಕೆಂದು ಸೂಚನೆಗಳನ್ನು ನೀಡಲಾಗುತ್ತಿದೆ.

**ಆಕರ ಸಾಹಿತ್ಯ ತಯಾರಿಕೆ, ಪ್ರಕಟಣೆ, ಪ್ರಚಾರ**

೧. ಆಡಳಿತ ಕನ್ನಡ ಅನುಷ್ಠಾನ - ಆದೇಶಗಳ ಸಂಕಲನ.

೨. ಡಾ. ಸರೋಜಿನಿ ಮಹಿಷಿ ಸಮಿತಿ ವರದಿ ಶಿಫಾರಸ್ಸುಗಳ ಅನುಷ್ಠಾನ - ಆದೇಶಗಳ ಸಂಕಲನ.

೩. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯಯೋಜನೆ ಎಂಬ ಕಿರುಮಡಿಕೆ.

೪. ಕನ್ನಡ ಜಾಗೃತಿ ವರ್ಷದ ರೂಪುರೇಷೆಗಳು ಎಂಬ ಕಿರುಮಡಿಕೆ.

೫. ಕರ್ನಾಟಕ ಸರ್ಕಾರದ ಅಧಿಕಾರಿ ಹಾಗೂ ನೌಕರ ಬಂಧುಗಳಲ್ಲಿ ಮನವಿ ಎಂಬ ಕಿರುಮಡಿಕೆ.

೬. ಆಡಳಿತದಲ್ಲಿ ಕನ್ನಡ ಅನುಷ್ಠಾನ, ಡಾ. ಸರೋಜಿನಿ ಮಹಿಷಿ ಸಮಿತಿ ವರದಿ ಶಿಫಾರಸ್ಸುಗಳ ಅನುಷ್ಠಾನ ಹಾಗೂ ಕರ್ನಾಟಕದಲ್ಲಿ ಸಾರ್ವತ್ರಿಕವಾಗಿ ಕನ್ನಡ ವಾತಾವರಣ ನಿರ್ಮಾಣವಾಗಲು ಪೂರಕವಾಗುವ ಘೋಷವಾಕ್ಯಗಳನ್ನು ಒಳಗೊಂಡ ಏಳು ಬಗೆಯ ಭಿತ್ತಿ ಪತ್ರಗಳು.

೭. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರಕಟಿಸಿರುವ ಸಂಕ್ಷಿಪ್ತ ಆಡಳಿತ ಪದಕೋಶ ಮತ್ತು ಮಾದರಿ ಕಛೇರಿ ಕೈಪಿಡಿ ಇವುಗಳ ಮರುಮುದ್ರಣ.

೮. ತನಿಖಾ ಕೈಪಿಡಿ.

೯. ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ, ಆರ್ಥಿಕ ಸಂಹಿತೆ, ಸಾದಿಲ್ವಾರು ವೆಚ್ಚದ ಕೈಪಿಡಿ, ಖಜಾನೆ ಕೈಪಿಡಿ, ಬಜೆಟ್ ಕೈಪಿಡಿ, ಇವುಗಳ ಇಂದಿನವರೆಗಿನ ತಿದ್ದುಪಡಿ ಒಳಗೊಂಡ ಆವೃತ್ತಿಯನ್ನು ಮುದ್ರಿಸಿ ಎಲ್ಲ ಕಛೇರಿಗಳಿಗೂ ಹಂಚಲಾಗುತ್ತಿದೆ.

೧೦. ಆಡಳಿತ ಕನ್ನಡ ಹಾಗೂ ಡಾ. ಸರೋಜಿನಿ ಮಹಿಷಿ ವರದಿ ಕುರಿತ ಕಾರ್ಯಕ್ರಮ, ಆದೇಶಗಳು, ಸಭೆಗಳ ಮಾಹಿತಿ ಒಳಗೊಂಡ 'ಕನ್ನಡ ಜಾಗೃತಿ' ಎಂಬ ದ್ವೈಮಾಸಿಕ ಪತ್ರಿಕೆಯನ್ನು ಆಂತರಿಕ ಪ್ರಸಾರಕ್ಕಾಗಿ ಹೊರತರಲಾಗುತ್ತಿದೆ.

೧೧. ಪ್ರತಿಯೊಂದು ಇಲಾಖೆಯ ಇಲಾಖಾ ಕೈಪಿಡಿ ತಯಾರಿಸಲಾಗುತ್ತಿದೆ.

**ಕನ್ನಡ ಬೆರಳಚ್ಚು ಯಂತ್ರ, ಕನ್ನಡ ಎಲೆಕ್ಟ್ರಾನಿಕ್ ಬೆರಳಚ್ಚು ಯಂತ್ರ ಹಾಗೂ ಕಂಪ್ಯೂಟರ್‌ನಲ್ಲಿ ಕನ್ನಡ**

೧. ಕನ್ನಡ ಬೆರಳಚ್ಚು ಯಂತ್ರ ಸಾಕಷ್ಟು ಇಲ್ಲ ಎಂಬುದು ಅನೇಕ ಕಛೇರಿಗಳಿಂದ ಕೇಳಿ ಬರುತ್ತಿರುವ ದೂರು. ಇದಕ್ಕಾಗಿ ಸಾಕಷ್ಟು ಸಂಖ್ಯೆಯಲ್ಲಿ ಕನ್ನಡ ಬೆರಳಚ್ಚು ಯಂತ್ರಗಳನ್ನು ಮುದ್ರಣಾಲಯ ಇಲಾಖೆ ಮುಖಾಂತರ ಹಂತ ಹಂತವಾಗಿ ಕೊಂಡು ಕಛೇರಿಗಳಿಗೆ ಪೂರೈಸಲಾಗುತ್ತಿದೆ.

೨. ಎಲೆಕ್ಟ್ರಾನಿಕ್ ಬೆರಳಚ್ಚು ಯಂತ್ರ ಹಾಗೂ ಕಂಪ್ಯೂಟರ್‌ಗಳಲ್ಲಿ ಇಂಗ್ಲಿಷ್ ಡೈಸಿವ್ಹೀಲ್ ಹಾಗೂ ಸಾಫ್ಟ್‌ವೇರ್ ಮಾತ್ರ ಲಭ್ಯವಿದ್ದ ಕಾರಣದಿಂದ ಕಛೇರಿಗಳಲ್ಲಿ ಇಂಗ್ಲಿಷು ಮತ್ತೆ ವ್ಯಾಪಕವಾಗಿ ಬಳಕೆಗೆ ಬರುತ್ತಿರುವುದನ್ನು ಕಂಡು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಕನ್ನಡ ಡೈಸಿವ್ಹೀಲ್ ಯಂತ್ರ ಹಾಗೂ ಕನ್ನಡ ಸಾಫ್ಟ್‌ವೇರ್‌ಗಳ ಅಭಿವೃದ್ಧಿಗೆ ತೀವ್ರ ಗಮನ ನೀಡಿದೆ. ಎಲೆಕ್ಟ್ರಾನಿಕ್ ಬೆರಳಚ್ಚು ಯಂತ್ರದ ಡೈಸಿವ್ಹೀಲ್‌ಗೆ ಅಗತ್ಯವಾದ ಅಕ್ಷರ ರೂಪವನ್ನು ನಿರ್ಧರಿಸಿ ಈ ಸಂಬಂಧ ಸರ್ಕಾರವು ಆದೇಶ ಹೊರಡಿಸಿದೆ ಹಾಗೂ ತಯಾರಕ ಸಂಸ್ಥೆಗಳು ಈ ಆಧಾರದ ಮೇಲೆ ಕನ್ನಡ ಡೈಸಿವ್ಹೀಲ್‌ಗಳನ್ನು ಸಿದ್ಧಪಡಿಸುತ್ತಿವೆ.

೩. ಕಂಪ್ಯೂಟರ್‌ನಲ್ಲಿ ಈಗ ಇಂಗ್ಲಿಷ್‌ನಲ್ಲಿ ನಿರ್ವಹಿಸಲಾಗುತ್ತಿರುವ ಎಲ್ಲ

ಕೆಲಸವನ್ನು ಕನ್ನಡದಲ್ಲಿ ನಿರ್ವಹಿಸಲು ಸಾಧ್ಯವಾಗುವಂತಹ ಅನೇಕ ಸಾಫ್ಟ್‌ವೇರ್‌ಗಳು ಸಿದ್ಧಗೊಳ್ಳುತ್ತಿವೆ. ಈ ಬಗ್ಗೆ ಸಿ-ಡ್ಯಾಕ್, ಆಪಲ್ ಸಾಫ್ಟ್, ಎಸ್.ಆರ್.ಜಿ., ಇನ್‌ಫೊನೈಟ್, ಸಲ್ಯೂಷನ್ಸ್, ಕಂಪ್ಯೂಟರೆಕ್ಸ್ ಮುಂತಾದ ಸಂಸ್ಥೆಗಳೊಡನೆ ಸಭೆ ನಡೆಸಲಾಗಿದೆ. ಹಾಗೂ ಇದರ ಫಲವಾಗಿ ಪದಸಂಸ್ಕರಣ, ಡಿ-ಬೇಸ್, ಲೋಟಸ್, ಡಿ.ಟಿ.ಪಿ. ಮುಂತಾದ ಕಾರ್ಯನಿರ್ವಹಿಸಬಲ್ಲ ಕನ್ನಡ ಸಾಫ್ಟ್‌ವೇರ್‌ಗಳು ಸಿದ್ಧವಾಗಿವೆ. ಈ ಬಗ್ಗೆ ಸರಕು ಖರೀದಿ ಇಲಾಖೆ ದರ ನಿಗದಿಪಡಿಸುತ್ತದೆ.

೪. ಕರ್ನಾಟಕದಲ್ಲಿಯೇ ಕನ್ನಡ ಬೆರಳಚ್ಚು ಯಂತ್ರಗಳನ್ನು ತಯಾರಿಸಬೇಕೆಂದು ಹಾಗೂ ಸಾಹಿತಿಗಳು, ಪತ್ರಕರ್ತರು, ಗ್ರಾಮಾಂತರ ವಾಣಿಜ್ಯ ವಿದ್ಯಾ ಸಂಸ್ಥೆಗಳು ಮುಂತಾದವರಿಗೆ ರಿಯಾಯಿತಿ ದರದಲ್ಲಿ ಕನ್ನಡ ಬೆರಳಚ್ಚು ಯಂತ್ರ ಒದಗಿಸಬೇಕೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗಿದೆ.

**ಭೇಟಿ ಮತ್ತು ತಪಾಸಣೆ**

೧. ಆಡಳಿತದಲ್ಲಿ ಕನ್ನಡ ಎಷ್ಟರ ಮಟ್ಟಿಗೆ ಜಾರಿಯಾಗುತ್ತಿದೆ ಎಂಬುದನ್ನು ಪ್ರಾಧಿಕಾರವು ನಿಯತವಾಗಿ ರಾಜ್ಯ ಸರ್ಕಾರಿ ಕಛೇರಿಗಳು ಮತ್ತು ರಾಜ್ಯ ಸರ್ಕಾರದ ಉದ್ಯಮಗಳಿಗೆ ಭೇಟಿ ನೀಡಿ ಪರಿಶೀಲಿಸುತ್ತಿದೆ. ಈ ಸಂಬಂಧದಲ್ಲಿ ೧೯೯೩ನೇ ಸಾಲಿನಲ್ಲಿ ದಕ್ಷಿಣ ಕನ್ನಡ, ಕೊಡಗು, ಕೋಲಾರ, ಮೈಸೂರು, ಮಂಡ್ಯ, ಬೆಂಗಳೂರು ಗ್ರಾಮಾಂತರ ಮತ್ತು ನಗರ ಜಿಲ್ಲೆ, ಬಿಜಾಪುರ, ಬೆಳಗಾವಿ, ಧಾರವಾಡ ಜಿಲ್ಲೆಗಳಿಗೆ ಭೇಟಿ ನೀಡಿ ಸುಮಾರು ೮೦ ಕಛೇರಿಗಳ ತಪಾಸಣೆ ನಡೆಸಿ ಕನ್ನಡದ ಬಳಕೆಯನ್ನು ಪರಿಶೀಲಿಸಲಾಗಿದೆ. ಇದಲ್ಲದೆ ಅರಣ್ಯ ಇಲಾಖೆ, ಮುನಿರಾಬಾದ್‌ನ ನೀರಾವರಿ ಇಲಾಖೆ, ಬೆಂಗಳೂರು ಮಹಾನಗರ ಪಾಲಿಕೆ, ಮತ್ತಿತರ ಕಛೇರಿಗಳಿಗೆ ಭೇಟಿ ನೀಡಿ ಕನ್ನಡದ ಬಳಕೆಯನ್ನು ಪರಿಶೀಲಿಸಲಾಗುತ್ತಿದೆ.

೨. ಸರ್ಕಾರದ ೬೮ ಉದ್ಯಮಗಳು ಹಾಗೂ ಸಚಿವಾಲಯದ ೨೦ ಇಲಾಖೆಗಳ ಕಾರ್ಯದರ್ಶಿಗಳು ಮತ್ತು ೧೦೪ ಇಲಾಖಾ ಮುಖ್ಯಸ್ಥರ ಸಭೆಗಳನ್ನು ಕರೆದು ಕನ್ನಡ ಅನುಷ್ಠಾನದ ಪರಿಶೀಲನೆಯನ್ನು ನಡೆಸಲಾಗಿದೆ.

೩. ಸಚಿವಾಲಯದ ಪ್ರತಿ ಇಲಾಖೆಗಳಲ್ಲಿ ಅಧೀನ ಕಾರ್ಯದರ್ಶಿ ಶಾಖಾಧಿಕಾರಿ ಮತ್ತು ಇಬ್ಬರು ಸಹಾಯಕರು, ಇಲಾಖಾ ಮುಖ್ಯಸ್ಥರ ಕಛೇರಿ, ವಿಭಾಗ ಮಟ್ಟದ ಮತ್ತು ಜಿಲ್ಲಾಮಟ್ಟದ ಕಛೇರಿಗಳಲ್ಲಿ 'ಎ' ಗುಂಪಿನ ಅಥವಾ 'ಬಿ' ಗುಂಪಿನ ಅಧಿಕಾರಿಯೊಬ್ಬರು ಮತ್ತು ಇಬ್ಬರು ಸಹಾಯಕರು, ಉಪವಿಭಾಗ ಮತ್ತು ತಾಲ್ಲೂಕು ಮಟ್ಟದ ಕಛೇರಿಗಳಲ್ಲಿ 'ಬಿ' ಗುಂಪಿನ ಅಧಿಕಾರಿ ಮತ್ತು ಇಬ್ಬರು ಸಹಾಯಕರು - ಇವರನ್ನೊಳಗೊಂಡ ತನಿಖಾ ತಂಡವನ್ನು ರಚಿಸಲಾಗಿದೆ.

ಈ ತಂಡದ ಅಧಿಕಾರಿ ಮತ್ತು ನೌಕರರು ಪ್ರತಿಯೊಂದು ಇಲಾಖೆಗೂ ಭೇಟಿ ಕೊಟ್ಟು ಆಡಳಿತ ಕನ್ನಡ ಮತ್ತು ಡಾ. ಸರೋಜಿನಿ ಮಹಿಷಿ ಸಮಿತಿ ವರದಿ ಅನುಷ್ಠಾನ ಎಷ್ಟರ ಮಟ್ಟಿಗೆ ಕಾರ್ಯಗತವಾಗಿದೆ ಎಂಬುದನ್ನು ನಿಯತಕಾಲಿಕವಾಗಿ ತನಿಖೆ ಮಾಡಿ ತನಿಖಾ ವರದಿಯನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ಕಳುಹಿಸಿಕೊಡುತ್ತಿದ್ದಾರೆ.

**ತ್ರಿಭಾಷಾ ಸೂತ್ರದಂತೆ ಕನ್ನಡದ ಬಳಕೆ**

೧. ಈ ಸಂಬಂಧದಲ್ಲಿ, ಕರ್ನಾಟಕದಲ್ಲಿರುವ ಬ್ಯಾಂಕುಗಳ ಹಿರಿಯ ಅಧಿಕಾರಿಗಳ ಸಭೆ ಹಾಗೂ ಬ್ಯಾಂಕುಗಳ ಕನ್ನಡ ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳ ಸಭೆಗಳನ್ನು ಕರೆದು ತ್ರಿಭಾಷಾ ಸೂತ್ರದಂತೆ ಕನ್ನಡದ ಬಳಕೆಯನ್ನು ಕುರಿತು ಸೂಕ್ತ ಸೂಚನೆಗಳನ್ನು ನೀಡಲಾಗಿದೆ.

೨. ಕೇಂದ್ರ ಸರ್ಕಾರದ ಮತ್ತು ರಾಜ್ಯ ಸರ್ಕಾರದ ಉದ್ಯಮಗಳ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳ ಸಭೆಯನ್ನು ಕರೆದು ತ್ರಿಭಾಷಾ ಸೂತ್ರದಂತೆ ಕನ್ನಡದ ಬಳಕೆ ಹಾಗೂ ಕನ್ನಡ ಜಾಗೃತಿ ವರ್ಷದಲ್ಲಿ ಹಮ್ಮಿಕೊಳ್ಳಬೇಕಾದ ಕಾರ್ಯಕ್ರಮಗಳನ್ನು ಕುರಿತು ಸೂಚನೆ ನೀಡಲಾಗಿದೆ.

೩. ಅಂಗಡಿ, ವಾಣಿಜ್ಯ ಸಂಸ್ಥೆಗಳ ನಾಮಫಲಕಗಳು ಮತ್ತು ಜಾಹಿರಾತು ಫಲಕಗಳಲ್ಲಿ ಕನ್ನಡದ ಬಳಕೆ ಕುರಿತು ಕಾರ್ಮಿಕ ಇಲಾಖೆ ಆಯುಕ್ತರು ಹಾಗೂ ನಗರಪಾಲಿಕೆ ಆಯುಕ್ತರುಗಳೊಂದಿಗೆ ಸಮಾಲೋಚಿಸಲಾಗಿದೆ.

**ಸರ್ಕಾರಕ್ಕೆ ಮಾಡಿರುವ ಪ್ರಮುಖ ಶಿಫಾರಸ್ಸುಗಳು**

೧. ಆಡಳಿತದಲ್ಲಿ ಕನ್ನಡವನ್ನು ಎಲ್ಲ ಹಂತದಲ್ಲಿ ಯಶಸ್ವಿಯಾಗಿ ಜಾರಿಗೆ ತರುವ ಸಲುವಾಗಿ ಸರ್ಕಾರದಲ್ಲಿ ಖಾಲಿ ಇರುವ ಎಲ್ಲ ಬೆರಳಚ್ಚುಗಾರರ ಹಾಗೂ ಶೀಘ್ರಲಿಪಿಗಾರರ ಹುದ್ದೆಗಳನ್ನು ಶೀಘ್ರವೇ ಭರ್ತಿ ಮಾಡಬೇಕೆಂದು ಶಿಫಾರಸ್ಸು ಮಾಡಲಾಗಿದೆ.

೨. ಡಾ. ಸರೋಜಿನಿ ಮಹಿಷಿ ಸಮಿತಿ ವರದಿ ಶಿಫಾರಸ್ಸಿನಂತೆ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕಡ್ಡಾಯವಾಗಿ ಒಂದು ಕನ್ನಡ ಭಾಷಾ ಪರೀಕ್ಷೆಯನ್ನು ನಿಗದಿಪಡಿಸುವುದು.

೩. ಸರ್ಕಾರಿ ಅಧಿಕಾರಿಗಳ ರಹಸ್ಯ ವರದಿಯಲ್ಲಿ ``ಉದ್ಯೋಗಿಗೆ ಕನ್ನಡ ಅನುಷ್ಠಾನದಲ್ಲಿರುವ ಆಸಕ್ತಿ'' ಎಂಬುದನ್ನು ಒಂದು ಗುಣಾತ್ಮಕ ಅಂಶವಾಗಿ ಸೇರಿಸುವುದು.

೪. ಕನ್ನಡಿಗರಿಗೆ ಉದ್ಯೋಗಗಳಲ್ಲಿ ಆದ್ಯತೆ ದೊರಕುವಂತೆ ಸರ್ಕಾರಿ ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿದ್ದುಪಡಿ ಮಾಡುವುದು.

**ಇತರೆ**

೧. ಬೆಂಗಳೂರಿನಿಂದ ಮದ್ರಾಸಿಗೆ ವರ್ಗಾವಣೆ ಆಗುತ್ತಿದ್ದ ಕೇಂದ್ರ ಸರ್ಕಾರದ ಸ್ಟಾಫ್ ಸೆಲೆಕ್ಷನ್ ಕಮಿಷನ್ ಕಛೇರಿ ಬೆಂಗಳೂರಿನಲ್ಲೇ ಉಳಿಯುವಂತೆ ಸಕಾಲದಲ್ಲಿ ಕ್ರಮ ಕೈಗೊಳ್ಳಲಾಗಿದೆ.

೨. ಪ್ರೌಢಶಾಲಾ ಶಿಕ್ಷಣದಲ್ಲಿ ೯ನೇ ತರಗತಿಗೆ ನಿಗದಿಪಡಿಸಿರುವ ಭಾಷಾ ಬೋಧನೆಯ ನೀತಿಯನ್ನೇ ೧೦ನೇ ತರಗತಿಗೂ ವಿಸ್ತರಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗಿದೆ. ಈ ಸಂಬಂಧದಲ್ಲಿ ೨೮.೧.೯೪ರಂದು ಸರ್ಕಾರ ಆದೇಶ ಹೊರಡಿಸಿದೆ. ಪ್ರಾಧಿಕಾರದ ಶಿಫಾರಸ್ಸನ್ನು ಒಪ್ಪಲಾಗಿದೆ.

೩. ಕನ್ನಡ ರತ್ನಕೋಶದ ಮರುಮುದ್ರಣ.

ಕನ್ನಡ ಸಾಹಿತ್ಯ ಪರಿಷತ್ತು ಹಿಂದೆ ಪ್ರಕಟಿಸಿದ್ದ ''ಕನ್ನಡ ರತ್ನಕೋಶ'' ವನ್ನು ಮರುಮುದ್ರಣ ಮಾಡುವ ಬಗ್ಗೆ ಸರ್ಕಾರದಿಂದ ಆದೇಶ ಪಡೆಯಲಾಗಿದ್ದು ಸರ್ಕಾರಿ ಮುದ್ರಣಾಲಯದಿಂದ ಮುದ್ರಿಸಿ ಪ್ರಕಟಿಸಿದೆ.

**ಕನ್ನಡ ಅಬಿವೃದ್ಧಿ ಪ್ರಾಧಿಕಾರ ಮಂಡಲಿ**

| | |
|---|---|
| ಶ್ರೀ ಜಿ. ನಾರಾಯಣ, | - ಅಧ್ಯಕ್ಷರು |
| ಡಾ. ಸಿದ್ಧಯ್ಯ ಪುರಾಣಿಕ | - ಸದಸ್ಯರು |
| ಡಾ. ಹಾ.ಮಾ. ನಾಯಕ | - ಸದಸ್ಯರು |
| ಪ್ರೊ. ಎಸ್.ಎಸ್. ಒಡೆಯರ್ | - ಸದಸ್ಯರು |
| ಶ್ರೀ ಬಿ. ಎಂ. ಇದಿನಬ್ಬ | - ಸದಸ್ಯರು |
| ಶ್ರೀ ಶಿವಶರಣಪ್ಪ ಸಾಲಿ | - ಸದಸ್ಯರು |
| ಶ್ರೀಮತಿ ಬಿ.ಟಿ. ಲಲಿತಾ ನಾಯಕ್ | - ಸದಸ್ಯರು |
| ಗೊ. ರು. ಚನ್ನಬಸಪ್ಪ | - ಸದಸ್ಯರು |
| ಡಾ. ಸಿದ್ದಲಿಂಗಯ್ಯ | - ಸದಸ್ಯರು |
| ಬರಗೂರು ರಾಮಚಂದ್ರಪ್ಪ | - ಸದಸ್ಯರು |
| ಶ್ರೀ ಬಿ. ಜವರಯ್ಯ | - ಸದಸ್ಯರು |

## ಕನ್ನಡ ಜಾಗೃತಿ ವರ್ಷ – ೧೯೯೩

'ಬಾರಿಸು ಕನ್ನಡ ಡಿಂಡಿಮವ - ಓ ಕರ್ನಾಟಕ ಹೃದಯ ಶಿವ': ಕುವೆಂಪು

ಸುಗಮ ಆಡಳಿತಕ್ಕೆ ಭಾಷೆ ಪ್ರಮುಖ ಸಾಧನ. ಜನಭಾಷೆಯಲ್ಲಿ ಆಡಳಿತ ನಡೆಸುವುದು ಪ್ರಜಾಪ್ರಭುತ್ವದ ಯಶಸ್ಸು. ಹಾಗೂ ಅಭಿವೃದ್ಧಿಗೆ ಪೂರಕ. ರಾಜ್ಯದಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಅನುಷ್ಠಾನಕ್ಕೆ ತರಲು ಸರ್ಕಾರದ ಪ್ರಯತ್ನ.

ಕನ್ನಡದ ಬಳಕೆಯನ್ನು ತೀವ್ರಗೊಳಿಸಲು ಹಾಗೂ ಕನ್ನಡ ಭಾಷೆಯ ಬಗ್ಗೆ ಜನಮನದಲ್ಲಿ ಜಾಗೃತಿ ಮೂಡಿಸಲು ೧೯೯೩-೯೪ನ್ನು ಸರ್ಕಾರ 'ಕನ್ನಡ ಜಾಗೃತಿ ವರ್ಷ'ವೆಂದು ಘೋಷಿಸಿ ಇದರ ತೀವ್ರ ಅನುಷ್ಠಾನಕ್ಕೆ ಹಲವಾರು ಕಾರ್ಯಕ್ರಮಗಳನ್ನು ಸಿದ್ಧಗೊಳಿಸಿ ಜಾರಿಗೆ ತರಲಾಗುತ್ತಿದೆ.

ರಾಜ್ಯದಲ್ಲಿ ಗ್ರಾಮ ಪಂಚಾಯಿತಿಯಿಂದ ಮೊದಲ್ಗೊಂಡು ವಿಧಾನಸೌಧದವರೆಗೂ ಎಲ್ಲಾ ಹಂತಗಳಲ್ಲಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಜಾರಿಗೆ ತರಲು ಸಮರ್ಪಕ ಕಾರ್ಯಕ್ರಮ.

ದೇಶದಲ್ಲಿಯೇ ಪ್ರಥಮವಾಗಿ ಕರ್ನಾಟಕ ಸರ್ಕಾರ ಕನ್ನಡದ ಅಭಿವೃದ್ಧಿಯನ್ನೇ ಮೂಲ ಉದ್ದೇಶವಾಗಿಟ್ಟುಕೊಂಡು ಅದಕ್ಕಾಗಿ ಪ್ರತ್ಯೇಕ ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯವನ್ನು ಪ್ರಾರಂಭಿಸಿದೆ.

ಆಂಗ್ಲ ಭಾಷೆಯ ಮೇಲಿನ ವ್ಯಾಮೋಹ ಹೋಗಲಾಡಿಸಲು ಪ್ರತಿ ವಿಧಾನಸಭಾ ಕ್ಷೇತ್ರದಲ್ಲಿ ಒಂದು ಕನ್ನಡ ಮಾದರಿ ಶಾಲೆಯ ಪ್ರಾರಂಭಕ್ಕಾಗಿ ಕ್ರಮ.

ಗಡಿನಾಡಿನಲ್ಲಿರುವ ಕನ್ನಡ ಮಾಧ್ಯಮ ಶಾಲೆಗಳಲ್ಲಿ ಪ್ರತಿ ವರ್ಷ ಪೀಠೋಪಕರಣ ಮತ್ತು ಇತರ ಅಗತ್ಯ ಪರಿಕರಗಳ ಖರೀದಿಗೆ ಅನುದಾನ ನೀಡಿಕೆ.

ರಾಜ್ಯದ ತಾಂತ್ರಿಕ ಮತ್ತು ವೃತ್ತಿಪರ ಕಾಲೇಜುಗಳಲ್ಲಿ ಕನ್ನಡಿಗರಿಗೆ ಆದ್ಯತೆ.

ಹಿಂದುಳಿದ ಮತ್ತು ಕೊಳಚೆ ಪ್ರದೇಶಗಳಲ್ಲಿ ಕನ್ನಡ ಶಿಶುವಿಹಾರಗಳ ಪ್ರಾರಂಭಕ್ಕೆ ಕ್ರಮ.

ವೃತ್ತಿನಿರತರಿಗೆ(ವೈದ್ಯರು, ವಕೀಲರು ಮುಂತಾದವರು) ಕನ್ನಡ ಬೆರಳಚ್ಚು ಯಂತ್ರ ಖರೀದಿಸಲು ರೂ. ೧,೦೦೦ ಸಹಾಯಧನ

ರಾಜ್ಯದ ಎಲ್ಲಾ ಖಾಸಗಿ ಅಂಗಡಿ - ಸಂಸ್ಥೆಗಳ ನಾಮಫಲಕಗಳು ಕನ್ನಡದಲ್ಲೇ ಇರುವಂತೆ ನಿಯಮ.

ಕನ್ನಡದಲ್ಲಿ ವಿಜ್ಞಾನ ಮತ್ತು ವೈಚಾರಿಕ ಸಾಹಿತ್ಯ ಬೆಳವಣಿಗೆಗೆ ಯೋಜನೆ.

ಕನ್ನಡ ಸಾಹಿತ್ಯಪರಿಷತ್ತಿಗೆ ಈಗ ನೀಡುತ್ತಿರುವ ರೂ. ೧೭ ಲಕ್ಷ ಅನುದಾನವನ್ನು ೩೭ ಲಕ್ಷ ರೂ. ಗಳಿಗೆ ಹೆಚ್ಚಿಸಲಾಗಿದೆ. ಸಾಹಿತ್ಯ ಸಮ್ಮೇಳನಾಧ್ಯಕ್ಷರಿಗೆ ಹಾಗೂ ಸಚಿವರಿಗೆ ಸಿಗುವ ಶಿಷ್ಟಾಚಾರದ ಬಳಕೆ.

ಒಂದು ವರ್ಷದಲ್ಲಿ ಪ್ರಕಟವಾಗುವ ಎಲ್ಲಾ ಕನ್ನಡ ಪುಸ್ತಕಗಳ ಸಮರ್ಪಕ ವಿತರಣೆಗಾಗಿ ಸೂಕ್ತ ಕಾರ್ಯ ಯೋಜನೆ. ಕನ್ನಡ ಪುಸ್ತಕಗಳ ಖರೀದಿ ಮತ್ತು ಮಾರಾಟವನ್ನು ಜನಾಂದೋಲನ್ನಾಗಿ ಪರಿವರ್ತಿಸಲು ಯೋಜನೆ.

ಪುಸ್ತಕ ಪ್ರಾಧಿಕಾರದ ಸ್ಥಾಪನೆ.

ಕನಕ, ಪುರಂದರ ಹಾಗೂ ಪಂಪ ಪ್ರಶಸ್ತಿಗಳನ್ನು ಪುರಸ್ಕೃತರಿಗೆ ಆಯಾ ವರ್ಷದಲ್ಲೇ ನೀಡಲು ಕ್ರಮ.

ಕನ್ನಡಿಗರಿಗೆ ಕೇಂದ್ರ ಮತ್ತು ರಾಜ್ಯ ಉದ್ಯಮಗಳಲ್ಲಿ ವ್ಯಾಪಕ ಉದ್ಯೋಗಾವಕಾಶ ಒದಗಿಸುವ ಸಂಬಂಧದಲ್ಲಿ ಡಾ. ಸರೋಜಿನಿ ಮಹಿಷಿ ಸಮಿತಿ ವರದಿಯ ಅನುಷ್ಠಾನ. ಕನ್ನಡದ ಹಿರಿಮೆ ಸದಾ ವಿಜೃಂಭಿಸಬೇಕೆಂಬುದೇ ಸರ್ಕಾರದ ಮಹದಾಶಯ.



# ಕೇಂದ್ರ ಸಾಹಿತ್ಯ ಅಕಾಡೆಮಿ

## ಯು.ಆರ್. ಅನಂತಮೂರ್ತಿ

*ಟಿ.ಪಿ. ಅಶೋಕ*

ಸುಪ್ರಸಿದ್ಧ ಕನ್ನಡ ಲೇಖಕರಾದ ಡಾ. ಯು.ಆರ್. ಅನಂತಮೂರ್ತಿ ಅವರು ಕರ್ನಾಟಕದ ಆಚೆಗೂ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದ್ದಾರೆ; ಅಪಾರ ಮನ್ನಣೆ, ಗೌರವಗಳನ್ನು ಗಳಿಸಿಕೊಂಡಿದ್ದಾರೆ. ಅವರ ಮೂಲ ಕನ್ನಡ ಕೃತಿಗಳ ಅನುವಾದಗಳು ದೇಶ ವಿದೇಶಗಳ ಹಲವು ಪ್ರತಿಷ್ಠಿತ ವಿಶ್ವವಿದ್ಯಾಲಯಗಳಲ್ಲಿ ಪಠ್ಯ ಪುಸ್ತಕಗಳಾಗಿವೆ. ಅನಂತಮೂರ್ತಿ ಅವರು ದೇಶ ವಿದೇಶಗಳ ಹಲವು ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರಾಗಿ, ಸಂದರ್ಶಕ ಪ್ರಾಧ್ಯಾಪಕರಾಗಿ ಕೆಲಸ ಮಾಡಿದ್ದಾರೆ. ಕೇರಳದ ಮಹಾತ್ಮಗಾಂಧಿ ವಿಶ್ವವಿದ್ಯಾಲಯದ ಕುಲಪತಿಗಳಾಗಿ, ದೆಹಲಿಯ ನ್ಯಾಷನಲ್ ಬುಕ್ ಟ್ರಸ್ಟಿನ ಅಧ್ಯಕ್ಷರಾಗಿ ಆ ಸಂಸ್ಥೆಗಳನ್ನು ಅರ್ಥಪೂರ್ಣವಾಗಿ ಬೆಳೆಸಿದ್ದಾರೆ. ಈಚೆಗೆ ಅವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಬಹುಮತದಿಂದ ಆಯ್ಕೆಯಾಗಿ ಹಲವು ದಾಖಲೆಗಳನ್ನು ಸೃಷ್ಟಿಸಿದ್ದಾರೆ. ಸಾಮಾನ್ಯವಾಗಿ ಅಕಾಡೆಮಿಯ ಹಿಂದಿನ ಉಪಾಧ್ಯಕ್ಷರು ಮುಂದಿನ ಅಧ್ಯಕ್ಷರಾಗಿ ಚುನಾಯಿತರಾಗುತ್ತಿದ್ದರು. ಆದರೆ ಅನಂತಮೂರ್ತಿಯವರು ನೇರವಾಗಿ ಅಧ್ಯಕ್ಷರಾಗಿಯೇ ಚುನಾಯಿಸಲ್ಪಟ್ಟರು. ಇನ್ನೊಂದು ಕುತೂಹಲದ ಸಂಗತಿ ಎಂದರೆ ಸಾಮಾನ್ಯವಾಗಿ ಅಕಾಡೆಮಿಯ ಉಪಾಧ್ಯಕ್ಷರು, ಅಧ್ಯಕ್ಷರು ಅಕಾಡೆಮಿ ಪ್ರಶಸ್ತಿ ಪಡೆದವರಾಗಿದ್ದಾರೆ. ಆದರೆ ಅನಂತಮೂರ್ತಿ ಅವರಿಗೆ ಈವರೆಗೆ ಕೆಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿಲ್ಲದಿದ್ದರೂ ದೇಶದ ಎಲ್ಲ ಭಾಷೆಗಳ ಲೇಖಕರು ಶ್ರೀಯುತರನ್ನು ಬಹುಮತದಿಂದ ತಮ್ಮ ಅಧ್ಯಕ್ಷರನ್ನಾಗಿ ಆರಿಸಿಕೊಂಡರು. ಹೀಗೆ ತಮ್ಮ ಬರೆಹಗಳು, ಅನುವಾದಗಳು ಮತ್ತು ಭಾಷಣಗಳಿಂದಲೇ ಅನಂತಮೂರ್ತಿ ಅವರು ಬೇರೆ ಭಾಷೆಗಳ ಧೀಮಂತರನ್ನು ಆಕರ್ಷಿಸಿ ಅರ್ಹ ಮನ್ನಣೆ ಗೌರವಗಳನ್ನು ಗಳಿಸಿಕೊಂಡರು. ಒಂದು ಭಾರತೀಯ ಭಾಷೆಯಲ್ಲಿ ಬರೆಯುತ್ತಿರುವ ' ಲೇಖಕನೊಬ್ಬ' ಹೀಗೆ ತನ್ನ ಬರೆವಣಿಗೆಯ ಬಲದಿಂದಲೇ ರಾಷ್ಟ್ರೀಯ, ಅಂತರಾಷ್ಟ್ರೀಯ ಮನ್ನಣೆ ಪಡೆಯುವುದು ನಿಜಕ್ಕೂ ದೊಡ್ಡ ಸಂಗತಿಯೇ ಸರಿ.

ಕನ್ನಡ ಲೇಖಕರೊಬ್ಬರು ದೇಶದ ಅತ್ಯುಚ್ಚ ಸಾಹಿತ್ಯಕ ಸಂಸ್ಥೆಯ ಅಧ್ಯಕ್ಷ ಪದವಿಯನ್ನು ಅಲಂಕರಿಸುತ್ತಿರುವುದು ಇದು ಎರಡನೆಯ ಬಾರಿ. ಹಿಂದೆ ವಿ.ಕೃ. ಗೋಕಾಕರಿಗೆ ಈ ಗೌರವ ಲಭಿಸಿತ್ತು. ( ಹಾಗೆಯೇ ಗಿರೀಶ ಕಾರ್ನಾಡರು ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದುದನ್ನೂ ಕೆ.ಕೆ. ಹೆಬ್ಬಾರರು ಕೇಂದ್ರ ಲಲಿತ ಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದುದನ್ನೂ ಇಲ್ಲಿ ಸ್ಮರಿಸಿಕೊಳ್ಳಬಹುದು.) ಆದರೆ ಅನಂತಮೂರ್ತಿ ಅವರು ಒಂದು ವಿಶೇಷ ಸಂದರ್ಭದಲ್ಲಿ ಅಧ್ಯಕ್ಷರಾಗಿ ಆಯ್ಕೆಯಾಗಿರುವುದನ್ನು ಇಲ್ಲಿ ಅವಶ್ಯ ಗಮನಿಸಬೇಕು. ಸಂಗೀತನಾಟಕ ಅಕಾಡೆಮಿ ಮತ್ತು ಲಲಿತಕಲಾ ಅಕಾಡೆಮಿ ಅಧ್ಯಕ್ಷರನ್ನು ರಾಷ್ಟ್ರಪತಿಗಳು ನಾಮಕರಣ ಮಾಡುತ್ತಾರೆ. ಸಾಹಿತ್ಯ ಅಕಾಡೆಮಿ ಅಧ್ಯಕ್ಷರು ಸರ್ವಸದಸ್ಯ ಮಂಡಳಿಯಿಂದ ನೇರವಾಗಿ ಚುನಾಯಿತರಾಗುತ್ತಾರೆ. ಈ ಅಕಾಡೆಮಿಗಳ ಕಾರ್ಯಸ್ವರೂಪವನ್ನು ಅಭ್ಯಾಸ ಮಾಡಿ ಸಾಹಿತ್ಯ ಅಕಾಡೆಮಿ ಅಧ್ಯಕ್ಷರೂ ರಾಷ್ಟ್ರಪತಿಗಳಿಂದ ನಾಮಕರಣಗೊಳ್ಳಬೇಕೆಂಬ ಶಿಫಾರಸ್ಸನ್ನು ಹಕ್ಸರ್ ಕಮಿಟಿ ಮಾಡಿತ್ತು. ಇದು ಮಾನವಸಂಪನ್ಮೂಲ ಇಲಾಖೆಗೂ ಒಪ್ಪಿಗೆಯಾಗಿತ್ತು. ಆದರೆ ಹೆಚ್ಚಿನ ಸಂಖ್ಯೆಯ ಲೇಖಕರು ನಾಮಕರಣ ಪದ್ಧತಿಯನ್ನು ವಿರೋಧಿಸಿ ಚುನಾವಣೆಯನ್ನು ಸಮರ್ಥಿಸಿಕೊಂಡರು. ತನ್ಮೂಲಕ ತಮ್ಮ ಘನತೆ, ಸ್ವಾತಂತ್ರ್ಯಗಳನ್ನೂ ಪ್ರಜಾಪ್ರಭುತ್ವವನ್ನೂ ಎತ್ತಿ ಹಿಡಿದರು. ಸಾಹಿತ್ಯ ಅಕಾಡೆಮಿಯ ಸರ್ವಸದಸ್ಯರ ಮಂಡಳಿ ತನ್ನ ಸಾರ್ವಭೌಮತ್ವವನ್ನು ಪುನರ್‌ಸ್ಥಾಪಿಸಿಕೊಂಡಿತು. ಸ್ವತಃ ಅನಂತಮೂರ್ತಿಯವರು ಭಾರತೀಯ ಲೇಖಕರ ಇಂಥ ಆತ್ಮವಿಶ್ವಾಸ ಮತ್ತು ಸ್ವಾಭಿಮಾನಗಳ ಪ್ರತಿನಿಧಿ ಎಂಬುದು ಮುಖ್ಯವಾದ ಸಂಗತಿ.

ಅನಂತಮೂರ್ತಿಯವರ ಬೌದ್ಧಿಕ ಜೀವನವನ್ನು ಉದ್ದಕ್ಕೂ ಗಮನಿಸಿಕೊಂಡು ಬಂದಿರುವವರಿಗೆ ಶ್ರೀಯುತರು ಭಾರತೀಯ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ಮೊದಲಿನಿಂದಲೂ ಎಂಥ ಕಾಳಜಿ, ಧೋರಣೆಗಳನ್ನು ಇಟ್ಟುಕೊಂಡಿದ್ದಾರೆಂಬುದು ಸ್ಪಷ್ಟ. ವಸಾಹತೀಕರಣದ ಸ್ವರೂಪ ಮತ್ತು ಪರಿಣಾಮಗಳ ಬಗ್ಗೆ ಅವರು ಚರ್ಚೆಗಳನ್ನು ಎತ್ತುತ್ತಾ ಬಂದಿದ್ದಾರೆ. ಇಂಗ್ಲಿಷನ್ನು ಕುರುಡಾಗಿ ವಿರೋಧಿಸುವುದಿಲ್ಲ, ಆದರೆ ಇಂದು ಇಂಗ್ಲಿಷ್ ಕೇವಲ ಒಂದು ಭಾಷೆಯಾಗಿ ಉಳಿದಿಲ್ಲ. ಅದು ಕೆಲವೊಂದು ಶಕ್ತಿಗಳನ್ನು, ಮೌಲ್ಯಗಳನ್ನು ಪ್ರತಿನಿಧಿಸುತ್ತಿದೆ. ಹಾಗಾಗಿ ಪ್ರಸ್ತುತ ಭಾರತೀಯ ಸಾಂಸ್ಕೃತಿಕ ಸನ್ನಿವೇಶದಲ್ಲಿ, ಭಾರತೀಯ ಭಾಷೆಗಳ ಎದುರಿನಲ್ಲಿ ಇಂಗ್ಲಿಷಿನ ಸ್ಥಾನಮಾನ ಏನಿರಬೇಕೆಂಬುದನ್ನು ಮತ್ತೆ ಮತ್ತೆ ಸ್ಪಷ್ಟಪಡಿಸಿಕೊಳ್ಳಬೇಕಾಗಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹಿಂದಿಯು ಇಂಗ್ಲಿಷಿನಂತೆ ಮತ್ತೊಂದು ಶಕ್ತಿಯಾಗಿ ಬೆಳೆಯುತ್ತಿದೆಯೆ ಎಂಬ ಪ್ರಶ್ನೆಗಳೂ ಕೇಳಿ ಬಂದಿವೆ. ಹಾಗಾಗಿ ಹಿಂದಿ ಮತ್ತು ಇತರ ದೇಶೀ ಭಾಷೆಗಳ ಸ್ಥಾನಮಾನಗಳ ಸ್ವರೂಪವನ್ನೂ ಪುನರ್‌ಪರಿಶೀಲನೆಗೆ ಒಳಪಡಿಸಬೇಕಾಗಿದೆ. ಅನಂತಮೂರ್ತಿಯವರು ತಮ್ಮ ಬೌದ್ಧಿಕ ಜೀವನದುದ್ದಕ್ಕೂ ಕನ್ನಡದಲ್ಲಿಯೇ ಸಾಹಿತ್ಯ ರಚನೆ ಮಾಡುತ್ತಾ ಬಂದಿದ್ದಾರೆ. ಅಷ್ಟೇ ಅಲ್ಲ ಕನ್ನಡ ಸಾಹಿತ್ಯದ ಬಗ್ಗೆ ಕರ್ನಾಟಕದ ಹೊರಗಡೆಯೂ ವ್ಯಾಪಕವಾಗಿ ಮಾತನಾಡಿದ್ದಾರೆ. ಒಳಗಿನ ವಿಮರ್ಶಕರಾಗಿ ಮತ್ತು ಹೊರಗೆ ಕನ್ನಡದ ಸಾಂಸ್ಕೃತಿಕ ರಾಯಭಾರಿ ಎಂಬಂತೆ ಕೆಲಸ ಮಾಡಿದ್ದಾರೆ. ದೀರ್ಘಕಾಲ

ಇಂಗ್ಲಿಷ್ ಪ್ರಾಧ್ಯಾಪಕ ವೃತ್ತಿಯಲ್ಲಿ ಅವರು ಇದ್ದರು. ಆಗಲೂ ಅವರು ಒತ್ತು ನೀಡುತ್ತಿದ್ದುದು ಇಂಗ್ಲಿಷಿಗಲ್ಲ, ನಮ್ಮ ಸಾಂಸ್ಕೃತಿಕ ನೆಲೆಗಳಿಗೆ. ಅಂದರೆ ಕನ್ನಡನಾಡಿನ ಒಂದು ಮೂಲೆಯಲ್ಲಿ ಬದುಕುತ್ತಿರುವ ನಮಗೆ ಇಂಗ್ಲಿಷ್ ಭಾಷೆ, ಸಾಹಿತ್ಯಗಳು ಪ್ರಸ್ತುತವಾಗುವ, ಪ್ರಸ್ತುತವಾಗಬೇಕಾದ ನೆಲೆಗಳಿಗೆ. ಇಂಗ್ಲೆಂಡಿನ ಅಥವಾ ಅಮೆರಿಕ, ಆಸ್ಟ್ರೇಲಿಯದ ವಿದ್ಯಾರ್ಥಿಯೊಬ್ಬ ಇಂಗ್ಲಿಷ್ ಸಾಹಿತ್ಯ ಅಭ್ಯಸಿಸುವ ಹಿಂದಿನ ಅಗತ್ಯಗಳಿಗೂ ಭಾರತೀಯ ವಿದ್ಯಾರ್ಥಿಯೊಬ್ಬನ ಅಗತ್ಯಗಳಿಗೂ ಇರುವ ನಿರ್ಣಾಯಕ ವ್ಯತ್ಯಾಸಗಳ ಬಗ್ಗೆ ಅನಂತಮೂರ್ತಿ ಮೊದಲಿನಿಂದ ಒತ್ತುಕೊಟ್ಟು ಮಾತನಾಡಿದ್ದಾರೆ. ಇಂಗ್ಲಿಷ್ ವಿರೋಧಿಯಲ್ಲದ ಕನ್ನಡ ಪ್ರೇಮಿಯಾಗಿ ಅನಂತಮೂರ್ತಿಯವರು ತೆಗೆದುಕೊಂಡಿರುವ ಸಂಕೀರ್ಣ ನಿಲುವುಗಳು 'ನಮ್ಮ' ಮತ್ತು 'ಇತರ' ಗಳ ಸಂಬಂಧ ಹೇಗಿರಬೇಕೆಂಬುದರ ಮಹತ್ತ್ವದ ಸೂಚನೆಗಳೂ ಆಗಿವೆ. ''ಇಂಗ್ಲಿಷ್ ಬ್ರಾಹ್ಮಣ, ಕನ್ನಡ ಶೂದ್ರ'' ಎಂಬ ಅನಂತಮೂರ್ತಿಯವರ ಕಾಲುಶತಮಾನದ ಹಿಂದಿನ ಲೇಖನ ಈ ಹೊತ್ತಿಗೂ ಪ್ರಸ್ತುತವಾಗಿದೆ.

ದೇಸೀ ಭಾಷೆ, ಸಾಹಿತ್ಯಗಳಿಗೂ ಇಂಗ್ಲಿಷ್ ಭಾಷೆ, ಸಾಹಿತ್ಯಗಳಿಗೂ ಇರಬೇಕಾದ ಸಂಬಂಧಗಳ ಬಗ್ಗೆ ಹಾಗೂ ಈ ಸಂಬಂಧಗಳ ಸ್ವರೂಪವನ್ನು ನಿರ್ಧರಿಸುವ ಹಕ್ಕು ನಮಗೇ ಇರಬೇಕೆಂಬ ಬಗ್ಗೆ ಅನಂತಮೂರ್ತಿಯವರು ಮತ್ತೆ ಮತ್ತೆ ಮಾತನಾಡಿದ್ದಾರಷ್ಟೆ. ಪರ್ಯಾಯವಾಗಿ ಇದು ದೇಶ- ವಿದೇಶಗಳ, ಸಂಸ್ಕೃತಿ-ಸಂಸ್ಕೃತಿಗಳ, ಬೇರೆ ಬೇರೆ ಆಶೋತ್ತರಗಳ ಮತ್ತು ರಾಜ್ಯಶಕ್ತಿಗಳ ನಡುವಣ ಇರಬೇಕಾದ ಸಂಬಂಧದ ಸ್ವರೂಪದ ಚಿಂತನೆಯೂ ಆಗಿದೆ ಎಂಬುದನ್ನು ಬಿಡಿಸಿಹೇಳಬೇಕಾಗಿಲ್ಲ. ವಿಕೇಂದ್ರೀಕರಣಕ್ಕೆ ಬದ್ಧರಾದ ಓರ್ವ ಸಮಾಜವಾದಿಯಾಗಿ, ಕಟ್ಟಾ ಪ್ರಜಾಪ್ರಭುತ್ವವಾದಿಯಾಗಿ ಅನಂತಮೂರ್ತಿಯವರು ಮನುಷ್ಯ ಸಂಸ್ಕೃತಿಯ ಎಲ್ಲ ಸ್ತರಗಳನ್ನೂ ಸಮಾನವಾಗಿ ಮತ್ತು ಅವುಗಳ ಅನನ್ಯತೆಯಲ್ಲಿ ಗೌರವಿಸಬೇಕಾದ ಅಗತ್ಯವನ್ನು ಪ್ರತಿಪಾದಿಸುತ್ತ ಬಂದಿದ್ದಾರೆ. ಕನ್ನಡದ ಸಂದರ್ಭದಲ್ಲಿ ಮಾಡುತ್ತಿದ್ದ ಇಂಥ ಚಿಂತನೆಗಳನ್ನು ಅನಂತಮೂರ್ತಿಯವರು ಕಳೆದ ಕೆಲವು ವರುಷಗಳಿಂದ ಒಟ್ಟು ಭಾರತೀಯ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಸಂದರ್ಭಗಳಿಗೆ ವಿಸ್ತರಿಸಿಕೊಂಡಿದ್ದಾರೆ. ಭಾರತವನ್ನು ಒಂದು ಏಕ, ಘನಾಕೃತಿಯಾಗಿ ಪರಿಭಾವಿಸದೆ ಅದರ ಬಹುಮುಖೀ ಸ್ವರೂಪದ ಬಗ್ಗೆ ಒತ್ತುಕೊಟ್ಟಿದ್ದಾರೆ. ಹಲವು ಚಿಕ್ಕ ಚಿಕ್ಕ ಅನನ್ಯ ಘಟಕಗಳ ಒಂದು ಸಾವಯವ ಸಮುಚ್ಚಯವಾಗಿ ಭಾರತ ದೇಶ ಮತ್ತು ಸಂಸ್ಕೃತಿಗಳನ್ನು ವಿಶ್ಲೇಷಿಸುತ್ತಿದ್ದಾರೆ. ಹಾಗಾಗಿ ಎಲ್ಲ ಬಗೆಯ ಕೇಂದ್ರೀಕರಣವನ್ನು ವಿರೋಧಿಸಿ ಪರಸ್ಪರ ಸಹಕಾರ, ಸಹಬಾಳ್ವೆಗಳ ಅನಿವಾರ್ಯತೆಯನ್ನು ಪ್ರತಿಪಾದಿಸುತ್ತಿದ್ದಾರೆ. ಭಾರತವೆಂಬ ಸಾರ್ವಭೌಮ ಒಕ್ಕೂಟದ ಒಳಗೆ ಇರುವ ಹಲವು ರಾಜ್ಯಗಳ, ಪ್ರದೇಶಗಳ, ಬುಡಕಟ್ಟುಗಳ, ಭಾಷೆ-ಸಾಹಿತ್ಯ-ಸಂಸ್ಕೃತಿ - ಧರ್ಮಗಳ ನಡುವೆ ಏರ್ಪಡಬೇಕಾದ ಅರ್ಥಪೂರ್ಣ ಕೊಡುಕೊಳ್ಳುವಿಕೆಯ ಸಂಬಂಧಗಳ ಸ್ವರೂಪದ ಬಗ್ಗೆ ಚಿಂತಿಸುತ್ತಿದ್ದಾರೆ.

ವಸಾಹತುಶಾಹಿ ಆಳ್ವಿಕೆಯ ಪ್ರಭಾವದಿಂದಾಗಿ ಯುರೋಪು, ಅಮೆರಿಕಗಳು ನಮಗೆ

ಇಂದು ಭಾರತದ ಇತರ ಪ್ರದೇಶಗಳಿಗಿಂತ ಹಲವು ನೆಲೆಗಳಲ್ಲಿ ಆಕರ್ಷಕವಾಗಿವೆ. ಹಾಗಾಗಿ ಇತರ ಭಾರತೀಯ ಭಾಷೆ, ಸಾಹಿತ್ಯಗಳ ಅರಿವನ್ನು ಹಿಂದೆಂದಿಗಿಂತ ಹೆಚ್ಚಾಗಿ ಪಡೆದುಕೊಳ್ಳುವುದು ತೀರಾ ಅಗತ್ಯವಾಗಿದೆ. ಆಗ ಮಾತ್ರ ನಿಜವಾಗಿ ಭಾರತೀಯ ಐಕ್ಯತೆ, ಒಕ್ಕೂಟ ಎಂಬ ಪರಿಕಲ್ಪನೆಗಳು ಅರ್ಥಪೂರ್ಣವಾಗುವುದು. ಕನ್ನಡ ನಾಡಿನ ಒಬ್ಬನಿಗೆ ಮೂರನೇ ದರ್ಜೆಯ ವಿದೇಶೀ ಲೇಖಕನೊಬ್ಬನ ಕೃತಿಗಳ ಪರಿಚಯವಿದ್ದು ನೆರೆಯ ತೆಲುಗು, ಮರಾಠಿ ಭಾಷೆಗಳ ಮೊದಲ ದರ್ಜೆಯ ಬರಹಗಳ ಬಗ್ಗೆ ಸಂಪೂರ್ಣ ಅಜ್ಞಾನವಿರುವ ಪರಿಸ್ಥಿತಿ ಅಸಂಗತವಷ್ಟೇ ಅಲ್ಲ ಅವಮಾನಕಾರಿಯೂ ಹೌದು. ಇದು ಕೇವಲ ಭಾಷಾಜ್ಞಾನ ಅಥವಾ ಸಾಹಿತ್ಯಪರಿಚಯದ ವಿಷಯವಲ್ಲ. ಒಟ್ಟಾರೆ ನಿರ್ವಸಾಹತುಕರಣದ ಒಂದು ಪ್ರಯತ್ನವಾಗಿ, ನಮ್ಮೆಲ್ಲ ಸಾಂಸ್ಕೃತಿಕ ವ್ಯಕ್ತಿತ್ವ ಮತ್ತು ಹೊಸ ಸಾಮಾಜಿಕ ಅಸ್ತಿತ್ವದ ಹುಡುಕಾಟವಾಗಿ ಈ ಪ್ರಶ್ನೆಯನ್ನು ಗಮನಿಸಬೇಕು. ಅಖಿಲ ಭಾರತ ಮಟ್ಟದ ಸಂಸ್ಥೆಗಳನ್ನು, ಯೋಜನೆಗಳನ್ನು ಹೀಗೆ ಪುನರ್ ರೂಪಿಸಿಕೊಳ್ಳದಿದ್ದರೆ ಈಗಾಗಲೇ ಪ್ರಾರಂಭವಾಗಿರುವ ಉಗ್ರಗಾಮಿ, ಪ್ರತ್ಯೇಕತಾವಾದೀ ಚಳುವಳಿಗಳು ಇನ್ನಷ್ಟು ಬಲಗೊಳ್ಳುವುವು. ಇಂಥದೊಂದು ಪರಿಸ್ಥಿತಿಯಲ್ಲಿ ಅನಂತಮೂರ್ತಿಯವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಅಧಿಕಾರವಹಿಸಿಕೊಂಡಿದ್ದಾರೆ. ಹೊಸಕಾಲದ ಆಶೋತ್ತರಗಳನ್ನು ಸ್ವತಃ ಸೂಚಿಸುತ್ತಿರುವ ಅನಂತಮೂರ್ತಿ ಸಾಹಿತ್ಯ ಅಕಾಡೆಮಿಯನ್ನು ಅವುಗಳಿಗೆ ಅನುಗುಣವಾಗಿಯೇ ಮುನ್ನಡೆಸುವ ಸೂಚನೆಗಳನ್ನೂ ಈಗಾಗಲೇ ನೀಡಿದ್ದಾರೆ.





# ಪುಸ್ತಕ ಪ್ರಾಧಿಕಾರ

## ಎಲ್.ಎಸ್. ಶೇಷಗಿರಿರಾವ್

*ಕರೀಗೌಡ ಬೀಚನಹಳ್ಳಿ*

ಪ್ರೊ ಎಲ್.ಎಸ್. ಶೇಷಗಿರಿರಾವ್ ಅವರು ಕನ್ನಡದ ಪ್ರಖ್ಯಾತ ವಿಮರ್ಶಕರು. ಸುಮಾರು ನಲವತ್ತು ವರ್ಷಗಳ ಕಾಲ ಪ್ರಸಿದ್ಧ ಪ್ರಾಧ್ಯಾಪಕರಾಗಿದ್ದು ಬೆಂಗಳೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ಇಂಗ್ಲಿಷ್ ವಿಭಾಗದಿಂದ ನಿವೃತ್ತರಾದರು. 'ಗ್ರೀಕ್ ರಂಗಭೂಮಿ ಮತ್ತು ನಾಟಕ', 'ವಿಲಿಯಂ ಶೇಕ್ಸ್‌ಪಿಯರ್', 'ಫ್ರಾನ್ಜ್ ಕಾಫ್ಕ ', 'ಇಂಗ್ಲಿಷ್ ಭಾಷೆಯಲ್ಲಿ ಆಧುನಿಕ ಸಾಹಿತ್ಯ ವಿಮರ್ಶೆ', 'ಹೊಸಗನ್ನಡ ಸಾಹಿತ್ಯ' ಮೊದಲಾದ ಮಹತ್ವದ ಪುಸ್ತಕಗಳನ್ನು ಬರೆದಿದ್ದಾರೆ. ಕಿರಿಯರ ವಿಶ್ವಕೋಶ 'ಜ್ಞಾನಗಂಗೋತ್ರಿ'ಯ ಮೊದಲ ಎರಡು ಸಂಪುಟಗಳ ಸಂಪಾದಕರು. ಕನ್ನಡ ವಿಶ್ವವಿದ್ಯಾಲಯದ ಪ್ರಕಟಣೆ 'ಕಿರಿಯರ ಕರ್ನಾಟಕ'ದ ಪ್ರಧಾನ ಸಂಪಾದಕರು. ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ, ರಾಜ್ಯ ಪ್ರಶಸ್ತಿ ಮೊದಲಾಗಿ ಹಲವು ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಕರ್ನಾಟಕ ಸರ್ಕಾರವು ಆಗಸ್ಟ್ ೨, ೧೯೯೩ ರಂದು ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರನ್ನು ಪುಸ್ತಕ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಿಸಿತು. ಅದರ ಸದಸ್ಯರನ್ನಾಗಿ ಖ್ಯಾತ ಲೇಖಕರುಗಳಾದ ಶ್ರೀ ಚೆನ್ನವೀರ ಕಣವಿ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಪ್ರೊ. ಕೆ.ಎಸ್. ನಿಸಾರ್ ಅಹಮದ್, ಪ್ರೊ. ಎಂ.ಎಚ್. ಕೃಷ್ಣಯ್ಯ, ಡಾ. ಅರವಿಂದ ಮಾಲಗತ್ತಿ ಅವರುಗಳನ್ನು ನೇಮಿಸಿತು. ಅಕ್ಟೋಬರ್ ೨೦, ೯೩ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಪುಸ್ತಕ ಪ್ರಾಧಿಕಾರದ ಕಛೇರಿಯನ್ನು ಮುಖ್ಯಮಂತ್ರಿ ಶ್ರೀ ಎಂ.ವೀರಪ್ಪ ಮೊಯಿಲಿ ಅವರು ಉದ್ಘಾಟಿಸಿದರು. ಅಂದು ಮುಖ್ಯಮಂತ್ರಿಗಳು ಪ್ರಾಧಿಕಾರದ ಸ್ವರೂಪದ ಬಗ್ಗೆ ವ್ಯಕ್ತಪಡಿಸಿದ ಮಾತುಗಳು ಇವು:

''ಬಹುದಿನಗಳಿಂದ ನೆನೆಗುದಿಗೆ ಬಿದ್ದಿದ್ದ ಪ್ರಾಧಿಕಾರವು ರಚನೆಯಾಗಿ, ಅದರ ಕಛೇರಿ ಉದ್ಘಾಟನೆಯಾಗುತ್ತಿರುವುದು ಸಂತೋಷವೆನಿಸಿದೆ. ಪ್ರಾಯಶಃ ಪುಸ್ತಕ ಪ್ರಾಧಿಕಾರ

ದಂತಹ ವಿಶಿಷ್ಟ ಯೋಜನೆಯನ್ನು ರೂಪಿಸಿ ಅದನ್ನು ಕಾರ್ಯಗತ ಮಾಡುತ್ತಿರುವ ರಾಜ್ಯಗಳಲ್ಲಿ ಕರ್ನಾಟಕ ಮೊದಲನೆಯದೆಂಬುದು ನನ್ನ ಭಾವನೆ. ನಾನು ಒಬ್ಬ ಬರಹಗಾರನಾಗಿ, ನಿಮ್ಮಂಥ ಲೇಖಕರ ಸಹೋದ್ಯೋಗಿಯಾಗಿ, ಕನ್ನಡ ನಾಡಿನ ಸಂಸ್ಕೃತಿಯನ್ನು ಬೆಳಗಿಸುವ ಕೆಲಸ ಮಾಡುತ್ತಿದ್ದೇನೆ. ಸುಪ್ರಸಿದ್ಧ ವಿಮರ್ಶಕರಾದ ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರು ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿದ್ದಾರೆ. ಅವರು ಅನೇಕ ಪ್ರಸಿದ್ಧ ಪ್ರಕಾಶನ ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಕನ್ನಡದ ಅಮೂಲ್ಯ ಕೃತಿಯನ್ನು ಹೊರಬರುವಂತೆ ಮಾಡಿದವರು. ಪ್ರಕಾಶನ ಉದ್ಯಮವನ್ನು ಹೊರಗೂ ಒಳಗೂ ಚೆನ್ನಾಗಿ ಬಲ್ಲವರು. ಅವರ ಸರಳತೆ, ಸಜ್ಜನಿಕೆ ಹಾಗೂ ಶಕ್ತಿ ಸಾಮರ್ಥ್ಯಗಳ ಬಗ್ಗೆ ನನಗೆ ವಿಶ್ವಾಸವಿದೆ. ಪುಸ್ತಕ ಪ್ರಾಧಿಕಾರಕ್ಕೆ ಎಲ್.ಎಸ್. ಶೇಷಗಿರಿರಾವ್ ಅವರು ಭದ್ರ ತಳಪಾಯ ಹಾಕುತ್ತಾರೆಂದು ನಂಬಿದ್ದೇನೆ. ಪುಸ್ತಕ ಪ್ರಾಧಿಕಾರವು ಜನರಲ್ಲಿ ಪುಸ್ತಕಪ್ರೀತಿಯನ್ನು ಬೆಳೆಸಿ, ಕನ್ನಡದ ಪ್ರಕಾಶನ ಉದ್ಯಮಕ್ಕೆ ಮಾರ್ಗದರ್ಶಕವಾಗಬೇಕು. ಇನ್ನು ಮುಂದೆ ಸಾರ್ವಜನಿಕ ಗ್ರಂಥಾಲಯವಾಗಲಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಾಗಲಿ, ಶಿಕ್ಷಣ ಇಲಾಖೆಯಾಗಲಿ, ವಯಸ್ಕರ ಶಿಕ್ಷಣ ಇಲಾಖೆಯಾಗಲಿ, ಪುಸ್ತಕಗಳನ್ನು ಪುಸ್ತಕ ಪ್ರಾಧಿಕಾರದ ಮೂಲಕವೇ ಕೊಳ್ಳುವಂತೆ ಆಗಬೇಕು. ಪ್ರಾಧಿಕಾರವು ವರ್ಷದಲ್ಲಿ ಪ್ರಕಟವಾದ ಎಲ್ಲ ಕನ್ನಡ ಪುಸ್ತಕಗಳ ಮಾಹಿತಿಯನ್ನು ತರಿಸಿಕೊಂಡು, ಆಯಾಯಾ ಪುಸ್ತಕಗಳ ಮೌಲಿಕತೆಯನ್ನು ಗುರುತಿಸಿ, ಯಾವ ಪುಸ್ತಕದ ಎಷ್ಟು ಪ್ರತಿಗಳು ಯಾವ ಯಾವ ಗ್ರಂಥಾಲಯಗಳಲ್ಲಿರಬೇಕೆಂದು ಸಂಬಂಧಪಟ್ಟವರಿಗೆ ಶಿಫಾರಸ್ಸು ಮಾಡಬೇಕು. ಒಟ್ಟಿನಲ್ಲಿ ಕನ್ನಡದ ಯಾವುದೇ ಲೇಖಕನಿಗೆ, ತಾನು ಮುದ್ರಿಸಿದ ಪುಸ್ತಕದ ಒಂದು ಸಾವಿರ ಪ್ರತಿ ಒಂದೇ ವರ್ಷದಲ್ಲಿ ಮಾರಾಟವಾಗುತ್ತದೆಂಬ ಭಾವನೆ ಬೆಳೆಯುವಂತೆ ಪುಸ್ತಕ ಪ್ರಾಧಿಕಾರ ತನ್ನ ಕಾರ್ಯಾಚರಣೆ ಮಾಡಬೇಕು.''

ಆ ಸಮಾರಂಭದಲ್ಲಿ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ. ಎಲ್. ಎಸ್. ಶೇಷಗಿರಿರಾವ್ ಅವರು ಹೇಳಿದ ಮಾತುಗಳಿವು :

''ಕನ್ನಡ ಜನತೆಯ ಒಳಿತಿಗಾಗಿ ಸರ್ಕಾರವು ಕನ್ನಡ ಪುಸ್ತಕ ಪ್ರಾಧಿಕಾರವನ್ನು ರಚಿಸಿದೆ. ಈ ಪುಸ್ತಕ ಪ್ರಾಧಿಕಾರದ ರಚನೆಯಲ್ಲಿ ಸರ್ಕಾರದ ಉದ್ದೇಶ ಹೀಗಿದೆ: ಪ್ರಾಧಿಕಾರವು ಕನ್ನಡದಲ್ಲಿ ಲೇಖಕ- ಪ್ರಕಾಶ- ಓದುಗರ ನಡುವೆ ಗಾಢ ಸಂಬಂಧವನ್ನು ಏರ್ಪಡಿಸಿ, ಓದುಗರಲ್ಲಿ ಉತ್ತಮ ವಾಚನಾಭಿರುಚಿಯನ್ನು ಬೆಳೆಸಿ, ರಾಜ್ಯದಾದ್ಯಂತ ಓದುಗರಿಗೆ ಒಳ್ಳೆಯ ಪುಸ್ತಕಗಳು ಸುಲಭ ಬೆಲೆಯಲ್ಲಿ ದೊರಕಿಸುವಂಥ ಒಂದು ಸ್ವಾಯತ್ತ ಸಂಸ್ಥೆಯಾಗಿರತಕ್ಕದ್ದು. ಆ ಮೂಲಕ ಕನ್ನಡದಲ್ಲಿ ಪುಸ್ತಕೋದ್ಯಮವು ವ್ಯಾಪಕವಾಗಿ ಬೆಳೆಯುವಂತೆ ಮಾಡುವುದು. ಇದನ್ನು ಬೇರೆ ಮಾತುಗಳಲ್ಲಿ ಹೇಳುವುದಾದರೆ, ಕನ್ನಡ ಪುಸ್ತಕವನ್ನು ಬರೆಯುವ ಕೈಯಿಂದ - ಕೊಳ್ಳುವ ಕೈಗೆ ತಲುಪಿಸುವುದು ಪ್ರಾಧಿಕಾರದ ಕರ್ತವ್ಯವಾಗಿದೆ. ಕನ್ನಡ ಜನತೆಯು ಬೌದ್ಧಿಕ ಮತ್ತು ಸಾಂಸ್ಕೃತಿಕ ಮುನ್ನಡೆಯಾಗಬೇಕಾದರೆ, ಜನತೆಯ ಎಲ್ಲ ಅಗತ್ಯಗಳನ್ನು ಪೂರೈಸಲು ಪುಸ್ತಕಗಳು

ರಚನೆಯಾಗಬೇಕು, ಓದುಗರ ಕೈ ಸೇರಬೇಕು. ಕನ್ನಡ ಪುಸ್ತಕ ಪ್ರಾಧಿಕಾರವು ಕನ್ನಡ ನಾಡಿನ ಎಲ್ಲ ಪ್ರದೇಶಗಳ ಮತ್ತು ಎಲ್ಲ ವಿಭಾಗಗಳ ಜನತೆಯ ಸೇವೆಗೆ ಮುಡಿಪಾಗಿದೆ. ಇದು ಇಡೀ ಕರ್ನಾಟಕಕ್ಕೆ, ಸಮಸ್ತ ಕನ್ನಡ ಜನತೆಗೆ ಸೇರಿದ ಸಂಸ್ಥೆಯಾಗಿದೆ. ಪ್ರತಿ ವರ್ಷವು ಕನ್ನಡದಲ್ಲಿ ಒಂದೂವರೆ ಸಾವಿರದಷ್ಟು ಪುಸ್ತಕಗಳು ಪ್ರಕಟವಾಗುತ್ತವೆ. ಇವುಗಳಲ್ಲಿ ಅರ್ಧದಷ್ಟು ಮಾತ್ರ ನೆರವಿಗೆ ಅರ್ಹವಾಗಿರುತ್ತವೆ. ಕನ್ನಡ ಸಂಸ್ಕೃತಿ ಇಲಾಖೆಯ ಜನಪ್ರಿಯ ಪುಸ್ತಕ ಮಾಲೆ ಹಾಗೂ ವಿಜ್ಞಾನ ಪುಸ್ತಕ ಮಾಲೆಯ ಪ್ರಕಟಣೆಗಳು ಈಗ ಕನ್ನಡ ಪುಸ್ತಕ ಪ್ರಾಧಿಕಾರದ ಕಾರ್ಯವ್ಯಾಪ್ತಿಗೆ ಬರುತ್ತವೆ. ಇವುಗಳೊಂದಿಗೆ ಮಾನವಿಕ ಅಥವಾ ಸಾಮಾನ್ಯ ಪುಸ್ತಕ ಮಾಲೆ ಎಂಬ ಹೆಸರಿನಿಂದ, ವಿಜ್ಞಾನದಾಚೆಗಿನ ಕ್ಷೇತ್ರಗಳ ಪುಸ್ತಕಗಳನ್ನೂ ವಿಚಾರಸಾಹಿತ್ಯದ ಪುಸ್ತಕಗಳನ್ನೂ ಪ್ರಕಟಿಸುವ ಯೋಜನೆಯಿದೆ. ಪುಸ್ತಕ ಪ್ರಕಟಣೆ, ಪುಸ್ತಕ ಖರೀದಿ ಹಾಗೂ ವಿತರಣೆ. ಪುಸ್ತಕ ಪ್ರದರ್ಶನ, ಪುಸ್ತಕಗಳನ್ನು ಗ್ರಾಮಾಂತರ ಪ್ರದೇಶಗಳಿಗೆ ತಲುಪಿಸುವ ವ್ಯವಸ್ಥೆ ಹಾಗೂ ವಿಚಾರಸಂಕಿರಣಗಳಂಥ ಹಲವು ಕಾರ್ಯಗಳನ್ನು ಪುಸ್ತಕ ಪ್ರಾಧಿಕಾರವು ಮಾಡಬಯಸುತ್ತದೆ.''



# ಹೊರನಾಡ ಕನ್ನಡಿಗರ ಸಾಂಸ್ಕೃತಿಕ ಚಟುವಟಿಕೆ

ಮೋಹನ್ ಕುಂಟಾರ

ಒಂದು ಭಾಷೆಗೆ, ಒಂದು ಸಂಸ್ಕೃತಿಗೆ ಭೌಗೋಳಿಕವಾಗಿ ಎಲ್ಲೆಯನ್ನು ಗುರುತಿಸಬಹುದೇ ವಿನಃ ಸಾಂಸ್ಕೃತಿಕವಾಗಿ ಎಲ್ಲೆಯನ್ನು ಗುರುತಿಸುವುದು ಸಾಧ್ಯವಾಗಲಾರದು. ಹೀಗೆನ್ನುವಾಗ ಎಲ್ಲಿ ಕನ್ನಡಿಗರಿರುತ್ತಾರೋ ಅಲ್ಲೆಲ್ಲಾ ಅವರ ಸಂಸ್ಕೃತಿ, ಭಾಷೆ ಜೀವಂತವಾಗಿರುತ್ತದೆ. ಇದು ಎಲ್ಲಾ ಭಾಷೆ, ಸಂಸ್ಕೃತಿಗಳಿಗೂ ಅನ್ವಯಿಸುವ ಮಾತು. 'ಎಲ್ಲಾದರೂ ಇರು ಎಂತಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಕವಿವಾಣಿಯು ಕನ್ನಡಿಗರ ಮೈಮನಗಳಲ್ಲಿ ಸದಾ ನೆಲೆಸಿರುತ್ತದೆ. ಹಾಗಾದ್ದರಿಂದಲೇ ಪ್ರಪಂಚದೆಲ್ಲೆಡೆ ನೆಲೆಸಿರುವ ಕನ್ನಡಿಗರು ತಾವಿರುವ ಪ್ರದೇಶಗಳಲ್ಲಿ ಸಂಘಟಿತರಾಗಿ ತಮ್ಮ ನಾಡುನುಡಿಗಳ ಮೇಲಿನ ಅಭಿಮಾನ, ಗೌರವ, ಪ್ರೀತಿಯಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಿರುತ್ತಾರೆ. ಇದರಿಂದ ಕನ್ನಡ ಭಾಷೆಯು, ಸಂಸ್ಕೃತಿಯ ಕಂಪು ಪ್ರಪಂಚದೆಲ್ಲೆಡೆ ವ್ಯಾಪಿಸಿದೆ. ಪ್ರಸ್ತುತ ಲೇಖನದಲ್ಲಿ ೧೯೯೩ನೇ ವರ್ಷದ ಹೊರನಾಡಿನ ಕನ್ನಡ ಸಂಘ ಸಂಸ್ಥೆಗಳ ಸಾಂಸ್ಕೃತಿಕ ಚಟುವಟಿಕೆಗಳ ಅವಲೋಕನ ಮಾಡಲಾಗಿದೆ.

**ಕಾಸರಗೋಡು**

ಗಡಿನಾಡಾದ ಕಾಸರಗೋಡು ಕನ್ನಡದ ನೆಲೆ. ಆದರೆ ಭೌಗೋಳಿಕವಾಗಿ ಕರ್ನಾಟಕದ ಹೊರಗಿದೆ. ಅನ್ಯ ಭಾಷೆಯ ನೆಲದಲ್ಲಿ ನೆಲೆಸಿರುವ ಕನ್ನಡಿಗರು ಪರಸ್ಪರ ಭಾಷಾಭಿಮಾನದ ನೆಲೆಯಲ್ಲಾದರೂ ಒಂದುಗೂಡಬೇಕು. ಆದರೆ ಕನ್ನಡದ ನೆಲವಾಗಿದ್ದು ಅನ್ಯರಾಜ್ಯದಲ್ಲಿ ಸೇರಿಹೋದಾಗ ಅಲ್ಲಿನ ಜನ ತಮ್ಮ ಭಾಷೆ, ಸಂಸ್ಕೃತಿಯನ್ನು ಬಳಸಿಕೊಳ್ಳಲು ಹೆಣಗಾಡಬೇಕಾಗುತ್ತದೆ. ಅನ್ಯಭಾಷಿಗರ ಪ್ರಭಾವದ ವಿರುದ್ಧ ಹೋರಾಡುತ್ತಾ ತಮ್ಮ ಸಾಂಸ್ಕೃತಿಕ ನೆಲೆಯನ್ನು ಗಟ್ಟಿಗೊಳಿಸಿಕೊಳ್ಳಬೇಕಾಗುತ್ತದೆ. ಆದರೆ ಗಡಿನಾಡಾದ ಕಾಸರಗೋಡು ಕನ್ನಡದ ಕಸುವನ್ನು ಇನ್ನೂ ಉಳಿಸಿಕೊಂಡಿದೆ. ಕಾಸರಗೋಡಿನಲ್ಲಿ ಕನ್ನಡ ಭಾಷೆ, ಸಂಸ್ಕೃತಿಯ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸುವ, ಗ್ರಾಮಾಂತರ ಪ್ರದೇಶಗಳನ್ನೊಳಗೊಂಡು ಚಟುವಟಿಕೆಯಲ್ಲಿ ನಿರತವಾದ ಅನೇಕ ಕನ್ನಡ ಸಂಸ್ಥೆಗಳಿವೆ. ಹಳ್ಳಿ, ಹಳ್ಳಿಗೊಂದರಂತೆ ಯಕ್ಷಗಾನ ಸಂಘಗಳಿವೆ. ಊರ ಜಾತ್ರೆಗಳಲ್ಲಿ ಇವು ಪ್ರದರ್ಶನ ನೀಡಿ ಸುದ್ದಿ ಮಾಡುತ್ತವೆ. 'ಗಡಿನಾಡು', 'ಪ್ರತಿಸೂರ್ಯ', 'ಬಯ್ಯಮಲ್ಲಿಗೆ' ಮತ್ತು 'ಕಾಸರಗೋಡು ಸಮಾಚಾರ' ಎಂಬ ನಾಲ್ಕು ಕನ್ನಡ ಸಂಜೆ ದೈನಿಕಗಳು ಕಾಸರಗೋಡಿನಲ್ಲಿ ಪ್ರಕಟವಾಗುತ್ತವೆ.

ಕೇರಳಕ್ಕೆ ಸೇರಿ ಹೋದ ಕಾಸರಗೋಡನ್ನು ಮರಳಿ ಕರ್ನಾಟಕಕ್ಕೆ ಸೇರಿಸಬೇಕೆಂದು ಕಾಸರಗೋಡು ಕರ್ನಾಟಕ ಏಕೀಕರಣ ಸಮಿತಿ ನಿರಂತರ ಹೋರಾಟ ನಡೆಸುತ್ತಾ ಬಂದಿದೆ. ಕನ್ನಡವನ್ನು ಕುರಿತು ಕೇರಳ ಸರ್ಕಾರದ ಅವಗಣನೆಯನ್ನು ಪ್ರತಿಭಟಿಸಿ ಕರ್ನಾಟಕ ಸಮಿತಿಯು ಕಾಸರಗೋಡಿನ ಇತರ ಸಂಘ ಸಂಸ್ಥೆಗಳ ಸಹಕಾರದಿಂದ ೧೯೯೩ ನವೆಂಬರ್ ಒಂದರಂದು ಬೃಹತ್ ಮೆರವಣಿಗೆ ನಡೆಸಿ ಜಿಲ್ಲಾಧಿಕಾರಿ ಕಛೇರಿಯ ಮುಂದೆ ಧರಣಿ ನಡೆಸಿತು. ಲಲಿತಕಲಾ ಸದನ ವಿಭಾಗದ ಆಶ್ರಯದಲ್ಲಿ ವಸಂತೋತ್ಸವ, ಸಾಹಿತ್ಯೋತ್ಸವ, ನಾಡಹಬ್ಬ ಮತ್ತು ತಾಲೂಕಿನಾದ್ಯಂತ ಮೂವತ್ತಕ್ಕೂ ಹೆಚ್ಚುಕಡೆಗಳಲ್ಲಿ ಸ್ಥಳೀಯ ಸಂಘ ಸಂಸ್ಥೆಗಳ ಸಹಯೋಗದೊಂದಿಗೆ ನಾಡಹಬ್ಬವನ್ನು ವಿವಿಧ ಕಾರ್ಯಕ್ರಮಗಳೊಂದಿಗೆ ಆಚರಿಸಲಾಯಿತು. ಕನ್ನಡ ಜಾಗೃತಿಯ ಹಿನ್ನೆಲೆಯಲ್ಲಿ ಇದೊಂದು ಮಹತ್ತ್ವದ ಕಾರ್ಯಕ್ರಮವಾಗಿತ್ತು.

ಕಾಸರಗೋಡಿನ ಕನ್ನಡಿಗರ ಬಹುಕಾಲದ ಬೇಡಿಕೆಯಾಗಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಕಾಸರಗೋಡು ಘಟಕವನ್ನು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇದರ ಅಧ್ಯಕ್ಷ ಗೊ.ರು. ಚನ್ನಬಸಪ್ಪ ಅವರು ಜೂನ್ ೯ನೇ ತಾರೀಖಿನಂದು ಉದ್ಘಾಟಿಸಿದರು. ಇದು ನೂತನವಾಗಿ ಮಂಜೂರಾದ ಕೇರಳದ ಮೊದಲ ಘಟಕವಾಗಿದೆ. ಪೆರ್ಲ ಕೃಷ್ಣಭಟ್ಟರು ಇದರ ನೂತನ ಅಧ್ಯಕ್ಷರು. ತಿಂಗಳ ಕಾರ್ಯಕ್ರಮ ಎಂಬ ಯೋಜನೆಯಂತೆ ತಾಲೂಕಿನ ವಿವಿಧ ಕಡೆಗಳಲ್ಲಿ ವಿಚಾರ ಗೋಷ್ಠಿಗಳನ್ನು ಹಮ್ಮಿಕೊಳ್ಳಲಾಗಿತ್ತು. ಪೆರ್ಲ, ಮಂಜೇಶ್ವರ, ಕಾಸರಗೋಡು, ನೀರ್ಚಾಲು, ಮುಳ್ಳೇರಿಯಗಳಲ್ಲಿ ನಡೆದ ಈ ಗೋಷ್ಠಿಗಳಲ್ಲಿ ಗ್ರಾಮೀಣ ಪ್ರದೇಶದ ಅನೇಕರು ಭಾಗವಹಿಸಿದ್ದರು. ಈ ಎಲ್ಲಾ ಗೋಷ್ಠಿಗಳಲ್ಲೂ ಕಾಸರಗೋಡಿನ ಸಾಹಿತ್ಯ ಸಂಸ್ಕೃತಿಗೆ ಸೇವೆ ಸಲ್ಲಿಸಿದ ಹಿರಿಯರ ಸಂಸ್ಮರಣಾ ಕಾರ್ಯವೇ ಪ್ರಮುಖ ವಿಷಯವಾಗಿತ್ತು. ದತ್ತಿನಿಧಿ ಕಾರ್ಯಕ್ರಮವಾಗಿ ಕಾಸರಗೋಡಿನಲ್ಲಿ ಎರಡು ಉಪನ್ಯಾಸಗಳನ್ನು ವ್ಯವಸ್ಥೆ ಮಾಡಲಾಗಿತ್ತು. ವಿ.ಬಿ. ಮೊಳೆಯಾರ ಅವರು ವಿ. ಸೀ. ಬದುಕು ಬರಹ ಕುರಿತು ಮಾತನಾಡಿದರೆ ವಿ.ಬಿ. ಅರ್ತಿಕಜೆಯವರು ಕ.ವೆಂ.ರಾಘವಾಚಾರ್ಯರ ಬದುಕು ಬರಹ ಕುರಿತು ಉಪನ್ಯಾಸವಿತ್ತರು. ಪರಿಷತ್ತು ಹಮ್ಮಿಕೊಂಡ ಕಾರ್ಯಕ್ರಮಗಳಲ್ಲಿ ಅಮೃತ ಸೋಮೇಶ್ವರ, ಮುಳಿಯ ಮಹಾಬಲ ಭಟ್, ಹರಿದಾಸ ಶೇಣಿ ಗೋಪಾಲಕೃಷ್ಣ ಭಟ್, ನವಕಾನ ಶಂಕರನಾರಾಯಣ ಭಟ್, ಎಂ. ಮುಕುಂದ ಪ್ರಭು, ಶ್ರೀಮತಿ ಎಂ. ಮನೋರಮಾ ಭಟ್, ಕೆ.ಎಸ್. ಶರ್ಮಾ, ವಸಂತಕುಮಾರ್ ಪೆರ್ಲ, ಖಂಡಿಗೆ ಶಾಮ್‌ಭಟ್, ಕಯ್ಯಾರ ಕಿಞ್ಞಣ್ಣರೈ, ಮಟ್ಟಿ ರಾಧಾಕೃಷ್ಣರಾವ್, ಡಾ. ಪಿ. ಶ್ರೀಕೃಷ್ಣ ಭಟ್, ಶ್ರೀಶದೇವ ಪೂಜಿತ್ತಾಯ, ಅಂಚಿಮೂಲೆ ಗೋವಿಂದ ಭಟ್ ಮೊದಲಾದ ಗಣ್ಯರು ಭಾಗವಹಿಸಿದ್ದರು.

ಕಾಸರಗೋಡು ಸರಕಾರೀ ಕಾಲೇಜಿನ ಕನ್ನಡ ಸ್ನಾತಕೋತ್ತರ ಅಧ್ಯಯನ ಮತ್ತು ಸಂಶೋಧನಾ ವಿಭಾಗವು ಶೈಕ್ಷಣಿಕ ಕಾರ್ಯಕ್ರಮಗಳ ಜೊತೆಗೆ ದಿ. ಅಡಿಗರ ಕಾವ್ಯದ ಬಗ್ಗೆ ಸುಮತೀಂದ್ರ ನಾಡಿಗರಿಂದ ವಿಶೇಷೋಪನ್ಯಾಸ, ಡಿಸೆಂಬರ್ ತಿಂಗಳಲ್ಲಿ ಕರ್ನಾಟಕ

ಸಾಹಿತ್ಯ ಅಕಾಡೆಮಿಯ ನೆರವಿನೊಂದಿಗೆ ಕನ್ನಡ ನಾಟಕಗಳಲ್ಲಿ ಪೌರಾಣಿಕ ವಸ್ತು ವಿವೇಚನೆ ಕುರಿತು ವಿಚಾರ ಸಂಕಿರಣವನ್ನು ನಡೆಸಿಕೊಟ್ಟಿತು. ಡಾ. ಅರವಿಂದ ಮಾಲಗತ್ತಿ, ಪ್ರೊ. ಸಿದ್ದಲಿಂಗ ಪಟ್ಟಣಶೆಟ್ಟಿ, ಹೇಮಾ ಪಟ್ಟಣ ಶೆಟ್ಟಿ, ಕುಮಾರಸ್ವಾಮಿ ಮೊದಲಾದವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಕರ್ನಾಟಕ ಸಾಹಿತ್ಯ ಅಕಾಡೆಮಿಯ ವತಿಯಿಂದ ಪ್ರೊ. ಸುಮತೀಂದ್ರ ನಾಡಿಗರ ನಿರ್ದೇಶನದಲ್ಲಿ 'ಕವಿತೆ ಓದುವ ಬಗೆ' ಎಂಬ ರಾಜ್ಯಮಟ್ಟದ ಕಮ್ಮಟವೊಂದು ನಡೆದಿತ್ತು. ಸುಮಾರು ನಲವತ್ತು ಮಂದಿ ಶಿಬಿರಾರ್ಥಿಗಳು ಇದರಲ್ಲಿ ಭಾಗವಹಿಸಿದ್ದರು. ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನವು ಈ ವರ್ಷವೂ ಕಾಸರಗೋಡು ಪ್ರದೇಶದ ಕಲೆ, ಸಾಹಿತ್ಯ, ಸಂಸ್ಕೃತಿ, ಯಕ್ಷಗಾನ, ಶಿಕ್ಷಣ, ಸಂಗೀತ, ನೃತ್ಯ, ರಂಗಭೂಮಿ ಕುರಿತಂತೆ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಸಾಹಿತ್ಯ, ನಾಟಕ, ಸಂಶೋಧನೆಯ ವಿವಿಧ ಪ್ರಕಾರಗಳಲ್ಲಿ ಪ್ರಭುತ್ವವನ್ನು ಸಾಧಿಸಿದ ಟಿ. ಬೇಕಲ ರಾಮನಾಯಕರ ಕುರಿತು ವಿಚಾರಗೋಷ್ಠಿಯೊಂದನ್ನು ಪ್ರತಿಷ್ಠಾನ ಹಮ್ಮಿಕೊಂಡಿತ್ತು. ಅಲ್ಲದೆ 'ಬೇಕಲ ರಾಮನಾಯಕರ ನಾಡು ನುಡಿ' ಎಂಬ ಸ್ಮರಣ ಸಂಚಿಕೆಯನ್ನು ಪ್ರಕಟಿಸಿದೆ. ತೆಂಕು ತಿಟ್ಟಿನ ಯಕ್ಷಗಾನದಲ್ಲಿ ಅಪಾರ ಸಾಧನೆಗೈದ ಅಗ್ರಗಣ್ಯ ಕಲಾವಿದ ಶೇಣಿ ಗೋಪಾಲ ಕೃಷ್ಣಭಟ್ಟರಿಗೆ ಎಪ್ಪತ್ತೈದು ವರ್ಷ ತುಂಬಿದ್ದರಿಂದ ಕಾಸರಗೋಡಿನ ಪ್ರಮುಖ ಕನ್ನಡ ಪತ್ರಿಕಾ ಮಾರಾಟಗಾರರಾಗಿರುವ ಕೆ. ಶ್ರೀನಿವಾಸ ಭಕ್ತ ಅಂಡ್ ಸನ್ಸ್ ಸಂಸ್ಥೆಯ ಸಹೋದರರನ್ನು ಸನ್ಮಾನಿಸಲಾಗಿತ್ತು. ಕರ್ನಾಟಕ ಸಂಗೀತ ಕ್ಷೇತ್ರಕ್ಕೆ ಅಪಾರಸೇವೆ ಸಲ್ಲಿಸಿದ ದಿ. ಮಧೂರು ವಿಷ್ಣು ಕಲ್ಲೂರಾಯ ಅವರ ಕೊಡುಗೆ ಕುರಿತ ವಿಚಾರ ಗೋಷ್ಠಿಯನ್ನು ನಡೆಸಲಾಗಿತ್ತು. ಒಂಭತ್ತನೇ ರಾಷ್ಟ್ರೀಯ ಪುಸ್ತಕ ಸಪ್ತಾಹವನ್ನು ಆಚರಿಸಿ ಪುಸ್ತಕ ಪ್ರದರ್ಶನವನ್ನು ಏರ್ಪಡಿಸಿತ್ತು. ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇದರ ಕನ್ನಡ ಜಾಗೃತ ವರ್ಷದ ಯೋಜನೆಯನ್ವಯ ಪ್ರತಿಷ್ಠಾನದ ಸಹಯೋಗದೊಂದಿಗೆ ತಿರುವನಂತಪುರದಲ್ಲಿ ಕಾರ್ಯಕ್ರಮದ ವ್ಯವಸ್ಥೆ ಮಾಡಿತ್ತು. ಭಾಷೆ, ಸಂಸ್ಕೃತಿಯ ಅಭಿವೃದ್ಧಿಗಾಗಿ 'ಕನ್ನಡ ಜಾಗೃತಿ' ವರ್ಷಾಚರಣೆಯ ಈ ಕಾರ್ಯಕ್ರಮವನ್ನು ಸೆಕ್ರೆಟರಿಯೇಟ್‌ನ ಕಾನೂನು (ಭಾಷಾಂತರ) ವಿಭಾಗದ ಡಾ. ಬಿ.ವಿ. ಸತ್ಯನಾರಾಯಣ ಭಟ್ ಉದ್ಘಾಟಿಸಿದರು. ಪ್ರತಿಷ್ಠಾನವು ದಸರಾ ನಾಡಹಬ್ಬ ಸಮಿತಿಯ ಸಹಯೋಗದಲ್ಲಿ ಕನ್ನಡ ಸಾಹಿತ್ಯೋತ್ಸವ-೯೩ನ್ನು ಏರ್ಪಡಿಸಿತ್ತು. ಸಮಾರಂಭವನ್ನು ಕೇರಳ ಹೈಕೋರ್ಟ್‌ನ ನ್ಯಾಯವಾದಿ ಮಾಜಿ ಶಾಸಕ ಯು.ಪಿ. ಕುಣಿಕುಳ್ಳಾಯ ಉದ್ಘಾಟಿಸಿದರು. ಇದೇ ಅಲ್ಲದೆ ಪ್ರತಿಷ್ಠಾನವು ಕವಿಗೋಷ್ಠಿ, ವಿಚಾರ ಸಂಕಿರಣ ಇನ್ನಿತರ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರಾಯೋಜಿಸಿದೆ. ಪ್ರತಿಷ್ಠಾನವು ಉತ್ತಮ ಕನ್ನಡ ಗ್ರಂಥಭಂಡಾರವನ್ನು ಹೊಂದಿದ್ದು ಅಪೂರ್ವವಾದ ಸಾಹಿತ್ಯ ಕೃತಿಗಳು ದಾಖಲೆಯಾಗಿವೆ. ಕೆಲವು ಪ್ರಕಾಶನ ಸಂಸ್ಥೆಗಳು ಹಾಗೂ ಸಾಹಿತಿಗಳು ಈ ಗ್ರಂಥಭಂಡಾರಕ್ಕೆ ಪುಸ್ತಕಗಳ ದಾನ ನೀಡಿದ್ದಾರೆ.

ಕಾಸರಗೋಡು ತಾಲೂಕು ಕನ್ನಡ ಲೇಖಕರ ಸಂಘವು ಕಾಸರಗೋಡು, ಮಂಜೇಶ್ವರ,

ಬದಿಯಡ್ಕ ಮುಂತಾದೆಡೆಗಳಲ್ಲಿ ಸಾಹಿತ್ಯ ಗೋಷ್ಠಿಗಳ ವ್ಯವಸ್ಥೆ ಮಾಡಿತ್ತು. ನವ್ಯ ಸಾಹಿತ್ಯ ಸಂಘವು ಎ.ಕೆ. ರಾಮಾನುಜನ್ ಸಂಸ್ಮರಣೆ, ರಾಮಾನುಜನ್ ಕತೆಗಳ ಬಗ್ಗೆ ಚರ್ಚಾಗೋಷ್ಠಿಯನ್ನು ನಡೆಸಿಕೊಟ್ಟಿತ್ತು. ಇಲ್ಲಿನ ಮಹಿಳಾ ಸಂಘವು ಎಂದಿನ ಚಟುವಟಿಕೆಗಳ ಜೊತೆಗೆ ಉದ್ಯಾವರ ಮಾಧವಾಚಾರ್ಯ ಅವರೊಂದಿಗೆ ಸಾಹಿತ್ಯ ಸಂವಾದ ಕಾರ್ಯಕ್ರಮವನ್ನು ನಡೆಸಿತ್ತು. ಕಾಸರಗೋಡು ಸರಕಾರೀ ಕಾಲೇಜಿನ ಕನ್ನಡ ವಿದ್ಯಾರ್ಥಿಗಳ ಸ್ನೇಹರಂಗ, ಕೆಲವೊಂದು ಸಾಹಿತ್ಯಕ ಕಾರ್ಯಕ್ರಮಗಳ ಜೊತೆಗೆ 'ಕನ್ನಡ ಧ್ವನಿ' ಮುದ್ರಿತ ನಿಯತಕಾಲಿಕವನ್ನು ಪ್ರಕಾಶಿಸಿತ್ತು.

'ನಟನಾ ಕಾಸರಗೋಡು' ಮತ್ತು 'ಗಡಿನಾಡ ಕಲಾವಿದರು' ಈ ನಾಟಕ ತಂಡಗಳು ಕನ್ನಡ-ತುಳು ಭಾಷೆಯ ಕೆಲವು ಯಶಸ್ವಿ ನಾಟಕ ಪ್ರಯೋಗಗಳು, ನಾಟಕ ತರಬೇತಿ ವಿಚಾರಗೋಷ್ಠಿ ಇತ್ಯಾದಿಗಳಲ್ಲದೆ ಕೇರಳ ಸರಕಾರದ 'ಮಲಬಾರ್ ನಾಟಕೋತ್ಸವ' ದಲ್ಲಿ ಕನ್ನಡವನ್ನು ಪ್ರತಿನಿಧಿಸಿದ್ದುವು.

'ತಪಸ್ಯ' ಕಲಾ ಸಾಹಿತ್ಯ ವೇದಿಕೆ ಕಾಸರಗೋಡು ತೆಂಗಿನ ತೋಟವೊಂದರ ವಿಶಿಷ್ಟ ಪರಿಸರದಲ್ಲಿ ಅಷ್ಟಭಾಷಾ ಕವಿಗೋಷ್ಠಿ (ಕನ್ನಡ, ತುಳು, ಕೊಂಕಣಿ, ಮಲಯಾಳಂ, ಹವ್ಯಕ, ಇಂಗ್ಲಿಷ್, ಹಿಂದಿ, ಸಂಸ್ಕೃತ), ಶೇಣಿ ಗೋಪಾಲ ಕೃಷ್ಣ ಭಟ್ಟರ ನಿವಾಸದಲ್ಲಿ ವಿಶಿಷ್ಟ ರೀತಿಯಲ್ಲಿ ವನಮಹೋತ್ಸವ, ಸಂಸ್ಕೃತ ತರಗತಿ ಇತ್ಯಾದಿಗಳ ವ್ಯವಸ್ಥೆ ಮಾಡಿತ್ತು.

ಗೋವಿಂದ ಪೈ ಸ್ಮಾರಕ ಸಮಿತಿ ಮಂಜೇಶ್ವರ ಇದರ ಆಶ್ರಯದಲ್ಲಿ ಗೋವಿಂದ ಪೈ ಜನ್ಮದಿನಾಚರಣೆ, ಗೋವಿಂದ ಪೈಯವರ ಮನೆಯನ್ನು ಸಂಶೋಧನಾ ಕೇಂದ್ರ ವಾಗಿಸುವುದರ ಜೊತೆಗೆ ಗ್ರಂಥಭಂಡಾರದ ಉದ್ಘಾಟನೆ, ಇತ್ಯಾದಿಗಳ ಜೊತೆಗೆ ಕನ್ನಡ ಮಲೆಯಾಳ ಸಾಹಿತಿಗಳ ಮಿಲನವಾಗಿಸಿತ್ತು. ಕೇರಳ ಸರಕಾರ ಮತ್ತು ಸ್ಥಳೀಯ ಗೋವಿಂದ ಪೈ ಸ್ಮಾರಕ ಟ್ರಸ್ಟ್ ಜೊತೆ ಸೇರಿ ಗೋವಿಂದ ಪೈಗಳ ೧೧೦ ನೇ ಜನ್ಮ ದಿನದಂದು ಅವರ ಮನೆಯಲ್ಲಿ ವಿಚಾರಗೋಷ್ಠಿ, ಬಹುಭಾಷಾ ಕವಿಗೋಷ್ಠಿಗಳನ್ನು ಯೋಜಿಸಿತ್ತು. ಕೇರಳ ಸಾಹಿತ್ಯ ಪರಿಷತ್ ಅಧ್ಯಕ್ಷ ಸಿ. ಪಿ. ಶ್ರೀಧರನ್ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಸಿ. ರಾಘವನ್, ಕಯ್ಯಾರ ಕಿಞ್ಞಣ್ಣ ರೈ ಮೊದಲಾದವರು ಪೈ ಸಾಹಿತ್ಯದ ಬಗ್ಗೆ ಮಾತನಾಡಿದರು. ಮಂಜೇಶ್ವರ ಗೋವಿಂದ ಪೈ ಸ್ಮಾರಕ ಕಾಲೇಜಿನಲ್ಲಿ 'ಗಿಳಿವಿಂಡು' ಎಂಬ ನೂತನ ಸಾಹಿತ್ಯಕ ಸಾಂಸ್ಕೃತಿಕ ಸಂಘಟನೆ ಈ ವರ್ಷ ಕೊನೆಯ ವೇಳೆಗೆ ರೂಪುಗೊಂಡು, ಕವಿಗೋಷ್ಠಿ, ಸಾಹಿತ್ಯ ಸಂವಾದಗಳನ್ನು ನಡೆಸಿಕೊಟ್ಟಿದೆ.

ಬದಿಯಡ್ಕ ಸಾಹಿತ್ಯಸಂಘದ ಆಶ್ರಯದಲ್ಲಿ ದಿ. ಕಳ್ಳಿಗೆ ಮಹಾಬಲ ಭಂಡಾರಿಯವರ ಸಂಸ್ಮರಣೆ, ಕವಿಗೋಷ್ಠಿ, ಕನ್ನಡ ಜಾಗೃತ ವರ್ಷಾಚರಣೆಯ ಅಂಗವಾಗಿ ಗಡಿನಾಡಿನ ಕನ್ನಡ ಚಟುವಟಿಕೆಗಳನ್ನು ಕುರಿತು ವಿಚಾರಗೋಷ್ಠಿಯನ್ನು ನಡೆಸಲಾಗಿತ್ತು. ಕುಂಬಳೆ ಎಡೆನಾಡಿನ ಮಂಗಳ ಸಾಹಿತ್ಯ ವೇದಿಕೆಯು ಆಗಾಗ ಸಾಹಿತ್ಯ ಕೂಟಗಳನ್ನು ನಡೆಸಿದ್ದಲ್ಲದೆ, ದರ್ಪಣ ಎಂಬ ಸಾಹಿತ್ಯಕ ನಿಯತಕಾಲಿಕೆಯನ್ನು ಪ್ರಕಟಿಸಿತ್ತು. ಪೆರ್ಲರ ಸಾಹಿತ್ಯ ಸಂಘ,

ಉಳಿದ ತರುಣರ ಕಲಾವೃಂದ, ಶಿವಾಜಿ ಕಲಾಸಂಘ, ಯೇತಡ್ಕದ ಸಾಹಿತ್ಯ ವೇದಿಕೆ ೧೯೯೩ರಲ್ಲಿ ಸಾಕಷ್ಟು ಚಟುವಟಿಕೆಯಿಂದಿದ್ದವು.

೧೯೯೩ರಲ್ಲಿ ಕಾಸರಗೋಡಿನಲ್ಲಿ ಕೆಲವು ಪುಸ್ತಕಗಳು ಪ್ರಕಟವಾಗಿವೆ, ಮಂಕುತಿಮ್ಮನ ಕಗ್ಗದ ಇಂಗ್ಲಿಷ್ ಅನುವಾದ ''Thus song Mankutimma'' ಶ್ರೀ ರಾಧಾಕೃಷ್ಣ ಬೆಳ್ಳೂರು ಅವರು 'ಪುಂಡೂರು' ಪುಣಿಂಚತ್ತಾಯ ಮನೆತನದ ಚರಿತ್ರೆ, ಎಚ್. ಡಿ. ಬೋಳೀಗಾಂವರ್‌ರ 'ಹೆಸರಿಸದ ಬಸಿರುಗಳು' (ಕವನ ಸಂಕಲನ) ಪ್ರೊ. ವೇಣುಗೋಪಾಲ್ ಕಾಸರಗೋಡು ಅವರ 'ಯಮುರ್ಞಂಜ ರಾಮಚಂದ್ರ : ಒಂದು ಅಧ್ಯಯನ ', ವಿಠಲ ಗಟ್ಟಿ ಉಳಿಯಾವರ ಸಂಪಾದಕತ್ವದಲ್ಲಿ 'ಕನ್ನಡ ಕಾವ್ಯೋತ್ಸವ' (ಕವನ ಸಂಕಲನ) ಶಿವರಾಮ ಕಾಸರಗೋಡು ಅವರ ಸಂಪಾದಕತ್ವದಲ್ಲಿ 'ರಾಮರಾಯನಾಯಕರ ನಾಡು ನುಡಿ' ಇತ್ಯಾದಿ ಪುಸ್ತಕಗಳು ಪ್ರಕಾಶಗೊಂಡಿವೆ.

**ಮದರಾಸು**

ಮದರಾಸಿನಲ್ಲಿ ಅನೇಕ ಕನ್ನಡ ಸಂಘಟನೆಗಳಿದ್ದು ಅವು ಒಂದಲ್ಲ ಒಂದು ರೀತಿಯ ಕಾರ್ಯಕ್ರಮಗಳನ್ನು ನಡೆಸುತ್ತಿದ್ದು ಅಲ್ಲಿ ನೆಲೆಸಿರುವ ಕನ್ನಡಿಗರನ್ನು ಸಂಘಟಿಸುವಲ್ಲಿ ಯಶಸ್ವಿಯಾಗಿವೆ. 'ಅಯನಾವರಂ' ಕರ್ನಾಟಕ ಸಂಘದ ಆಶ್ರಯದಲ್ಲಿ ಪುರಂದರ ದಾಸರ ಜಯಂತಿ, ಶ್ರೀರಾಮನವಮಿ ಮಹೋತ್ಸವ, ವಿದ್ಯಾಗಣಪತಿ ಉತ್ಸವ, ಕನ್ನಡ ರಾಜ್ಯೋತ್ಸವಗಳನ್ನು ನಡೆಸಲಾಗಿತ್ತು. ಕರ್ನಾಟಕದ ಮಾನ್ಯ ಸಚಿವರುಗಳಾದ ಶ್ರೀ ಹಾರ್ನಹಳ್ಳಿ ರಾಮಸ್ವಾಮಿ, ಎಸ್.ಎಂ. ಯಾಹ್ಯ, ಎಚ್.ವಿಶ್ವನಾಥ, ಪಲಿಮಾರು ಮಠದ ವಿದ್ಯಾದೀಶ ತೀರ್ಥರು, ಸಂಗೀತ ಕಲಾನಿಧಿ ಶ್ರೀಮತಿ ಎಂ.ಎಸ್. ಸುಬ್ಬಲಕ್ಷ್ಮಿ ಮೊದಲಾದ ಗಣ್ಯರು ಸಂಘದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಅಲ್ಲದೆ ಸಂಘದ ರಾಜ್ಯೋತ್ಸವ ಸಂದರ್ಭದಲ್ಲಿ ಗಣ್ಯ ಪ್ರತಿಭಾವಂತ ಕನ್ನಡಿಗರಾದ ಡಾ. ಎಚ್.ನರಸಿಂಹಯ್ಯ, ಪಾ.ಶ. ಶ್ರೀನಿವಾಸ, ಶ್ರೀ ಕಲ್ಯಾಣಕುಮಾರ್, ಎಚ್. ಸೂರ್ಯನಾರಾಯಣ, ಶ್ರೀ ಎಸ್.ಎಸ್. ಪ್ರಸಾದ್ ಇವರನ್ನು ಸನ್ಮಾನಿಸಲಾಯಿತು. ಕು.ಅರುಣ ವೇಣುಗೋಪಾಲ್, ಲಕ್ಷ್ಮಿನಾರಾಯಣ ಮತ್ತು ದಿವಾಕರವರಿಗೆ ಪ್ರತಿಭಾ ಪ್ರೋತ್ಸಾಹ ಗೌರವವನ್ನು ನೀಡಲಾಯಿತು. ಬೆಂಗಳೂರು ಪ್ರಭಾತ್ ಕಲಾವಿದರಿಂದ ಸಿಂಡ್ರೆಲಾ ನೃತ್ಯ ನಾಟಕ, ಮದರಾಸಿ ರಂಗಚೇತನ ಕಲಾವಿದರಿಂದ 'ಅಸಲಿ-ನಕಲಿ' ನಾಟಕ, ಆರ್.ವಿ. ರಮಾಮಣಿ ಮತ್ತು ವೃಂದದವರಿಂದ ದಾಸರಕೀರ್ತನೆಗಳು, ಡಾ.ಸುಮಾಸುಧೀಂದ್ರ ಮತ್ತು ವೃಂದದವರಿಂದ ವೀಣಾವಾದನ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು.

ಮದರಾಸು ವಿಶ್ವವಿದ್ಯಾಲಯದಲ್ಲಿನ ಕನ್ನಡ ವಿಭಾಗದಲ್ಲಿ ಎಂ.ಎ. ಮತ್ತು ಪಿಎಚ್.ಡಿ. ಪದವಿಗಳಿಗಾಗಿ ಕರ್ನಾಟಕದ ವಿವಿಧೆಡೆಗಳಿಂದ ಬಂದ ವಿದ್ಯಾರ್ಥಿಗಳು ಅಭ್ಯಾಸ ನಡೆಸುತ್ತಿದ್ದಾರೆ. ಇವರ ಅಧ್ಯಯನಕ್ಕೆ ಪೂರಕವಾಗಿ ವಿದ್ವಾಂಸರನ್ನು ಆಹ್ವಾನಿಸಿ

ವಿಶೇಷ ಉಪನ್ಯಾಸಗಳ ವ್ಯವಸ್ಥೆಯನ್ನು ಕನ್ನಡ ವಿಭಾಗ ಮಾಡಿತ್ತು. ಕನ್ನಡ ಸ್ಥಿತಿಗತಿಗಳ ಬಗ್ಗೆ ಶ್ರೀ ಕೃ.ನಾ. ಮೂರ್ತಿ, ಅಡಿಗರ ಕಾವ್ಯದ ಬಗ್ಗೆ ಡಾ. ಲಕ್ಷ್ಮಿ ನಾರಾಯಣಭಟ್ಟ ಮಾತಾಡಿದರು. ಆರೂರು ಶ್ರೀನಿವಾಸ ಭಟ್ಟ ದತ್ತಿ ಉಪನ್ಯಾಸ ಮಾಲಿಕೆಯಲ್ಲಿ ಡಾ.ಪಾ.ಶ. ಶ್ರೀನಿವಾಸರಿಂದ ಕನ್ನಡ ತಮಿಳು ರಾಮಾಯಣಗಳ ಬಗ್ಗೆ ಉಪನ್ಯಾಸ ನಡೆಯಿತು. ವಿಭಾಗದ ವಿವಿಧ ಕಾರ್ಯಕ್ರಮಗಳಲ್ಲಿ ಡಾ. ಕಾಳೇಗೌಡ ನಾಗವಾರ, ವಿ. ಗೋಪಾಲಕೃಷ್ಣ, ಶ್ರೀ ಭಗವಾನ್ ಮೊದಲಾದ ಗಣ್ಯರು ಭಾಗವಹಿಸಿದ್ದರು. ಕನ್ನಡ ಎಂ.ಎ. ಪದವಿಗೆ ನೂರುವರ್ಷ ತುಂಬಿದ ಸಂದರ್ಭದಲ್ಲಿ ಮೊದಲ ಎಂ.ಎ. (೧೮೯೩) ಪದವೀಧರರಾದ ಆರ್. ನರಸಿಂಹಾಚಾರ್ಯರ ಸಂಸ್ಮರಣ ಕಾರ್ಯಕ್ರಮ ಏರ್ಪಡಿಸಲಾಗಿತ್ತು.

ಮದರಾಸು ಕನ್ನಡ ಬಳಗ, ಕನ್ನಡಿಗರ ಕೂಟ, ಐ.ಐ.ಟಿ. ಕನ್ನಡ ಸಾಂಸ್ಕೃತಿಕ ರಂಗ ಆವಡಿ, ನೈವೇಲಿಯ ಕನ್ನಡ ಸಂಘ, ಈ ಎಲ್ಲಾ ಸಂಘಟನೆಗಳ ನೇತೃತ್ವದಲ್ಲಿ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಕನ್ನಡ ಬಳಗವು ಪ್ರಕಟಿಸುವ 'ಲಹರಿ'ಮಾಸ ಪತ್ರಿಕೆಯು ಮದರಾಸಿನಲ್ಲಿ ನೆಲೆಸಿರುವ ಕನ್ನಡಿಗರ ಸಾಹಿತ್ಯ ಚಟುವಟಿಕೆಯ ಕುರುಹು.

**ಮಧುರೈ**

೧೯೬೦ ರಲ್ಲಿ ಆರಂಭವಾದ 'ಮಧುರೈ ಕರ್ನಾಟಕ ಸಂಘ'ವು ೧೯೯೩ರಲ್ಲೂ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಪುರಂದರ ದಾಸ ಜಯಂತಿ, ಕನ್ನಡ ರಾಜ್ಯೋತ್ಸವ ಮೊದಲಾದ ಕಾರ್ಯಕ್ರಮಗಳನ್ನು ಆಚರಿಸಿದ್ದು ಸಂಘದ ಸದಸ್ಯರಿಗಾಗಿ ಆಟೋಟ ಸ್ಪರ್ಧೆಗಳನ್ನು ಏರ್ಪಡಿಸಿತ್ತು. ಅಲ್ಲದೆ ಬೆಂಗಳೂರಿನ 'ಕಿನ್ನರ ನಂದನ' ಮತ್ತು 'ರಂಗಸಂಪದ' ತಂಡದವರಿಂದ ' ಊರಜಾತ್ರೆ' ಮತ್ತು 'ಮೂವತ್ತಾರು ಅಲ್ಲ ಅರವತ್ಮೂರು' ನಾಟಕ ಪ್ರದರ್ಶನವನ್ನು ವ್ಯವಸ್ಥೆ ಮಾಡಿತ್ತು.

**ಮುಂಬಯಿ**

ಮುಂಬಯಿ ಮಹಾನಗರದ ಯಾಂತ್ರಿಕ ಬದುಕಿನ ಮಧ್ಯೆಯೂ ಕನ್ನಡಿಗರು ಸಾಹಿತ್ಯಕ, ಸಂಗೀತ, ನಾಟಕ ಮೊದಲಾದ ಚಟುವಟಿಕೆಗಳನ್ನು ನಡೆಸುತ್ತಾ ಬಂದಿದ್ದಾರೆ. ಮುಂಬಯಿ ನಗರದಲ್ಲಿ ನೂರಕ್ಕೂ ಮಿಕ್ಕಿದ ಕನ್ನಡ ಸಂಘಟನೆಗಳು ಇವೆ. ಅದರಲ್ಲೂ ಶ್ರೀಮದ್ಭಾರತ ಮಂಡಳಿಗೆ ೧೧೬ ವರ್ಷಗಳ ಇತಿಹಾಸವಿದೆ. ಅದು ವರ್ಷಪೂರ್ತಿ ಒಂದಲ್ಲ ಒಂದು ಚಟುವಟಿಕೆಯಲ್ಲಿ ನಿರತವಾಗಿದೆ.

'ಮುಂಬಯಿ ಕರ್ನಾಟಕ ಸಂಘ'ವು ಆರಂಭವಾಗಿ ೧೯೯೩ಕ್ಕೆ ೬೦ ವರ್ಷಗಳಾದವು. ೧೯೩೩ ಜೂನ್ ೪ ರಂದು ಕರ್ನಾಟಕ ಸಂಘ ಗಿರಗಾಂವ್ ಪರಿಸರದಲ್ಲಿ ತನ್ನ ಚಟುವಟಿಕೆಯನ್ನು ಆರಂಭಿಸಿತು. ಮುಂದೆ ಮಾತುಂಗ ಪರಿಸರದಲ್ಲಿ ಕರ್ನಾಟಕದ ಹೆಮ್ಮೆಯ ಪುತ್ರ ಶ್ರೀ ವಿಶ್ವೇಶ್ವರಯ್ಯನವರ ಹೆಸರು ಹೊತ್ತು ೬೭೫ ಆಸನಗಳ ಹವಾನಿಯಂತ್ರಿತ ಸಭಾಗೃಹ ಹಾಗೂ ಕಿರು ಸಭಾಗೃಹವಿರುವ ಸ್ವಂತ ಕಟ್ಟಡವನ್ನು ಹೊಂದಿತ್ತು. ಸುಮಾರು ಎರಡು ಸಾವಿರಕ್ಕೂ ಹೆಚ್ಚು ಸದಸ್ಯರಿರುವ ಕರ್ನಾಟಕ ಸಂಘವು ಉತ್ತಮ ಗ್ರಂಥಾಲಯವನ್ನು ಹೊಂದಿದೆ. ಇದೀಗ ೨೦,೦೦೦ ಪುಸ್ತಕಗಳು

ಗ್ರಂಥಾಲಯದಲ್ಲಿವೆ. ಜೊತೆಗೆ ಕಂಪ್ಯೂಟರ್ ಅಳವಡಿಸಲಾದ ಕರ್ನಾಟಕ ಮಾಹಿತಿ ಕೇಂದ್ರವನ್ನು ಹೊಂದಿದೆ. ಮರಾಠಿ, ಕನ್ನಡ ತರಗತಿಗಳನ್ನು ನಡೆಸುತ್ತಾ ಬಂದಿರುವ ಸಂಘವು ಸ್ಥಳೀಯ ಜನರೊಡನೆ ಸೌಹಾರ್ದಯುತ ಸಂಬಂಧವನ್ನು ಉಳಿಸಿಕೊಂಡಿದೆ.

ಸಂಘಕ್ಕೆ ೬೦ ವರ್ಷ ತುಂಬಿದ ಸಲುವಾಗಿ ವಜ್ರಮಹೋತ್ಸವ ಸಮಾರಂಭವನ್ನು ಬಹಳ ಅದ್ದೂರಿಯಿಂದ ಆಚರಿಸಲಾಯಿತು. ವಜ್ರಮಹೋತ್ಸವದ ಅಂಗವಾಗಿ ಏರ್ಪಡಿಸಿದ್ದ ಏಳುದಿವಸಗಳ ಸಾಂಸ್ಕೃತಿಕ ಉತ್ಸವವನ್ನು ಕನ್ನಡಿಗರಾದ ಮುಂಬಯಿ ಉಚ್ಚನ್ಯಾಯಲಯದ ನ್ಯಾಯಮೂರ್ತಿ ಜ. ಮೈಕಲ್ ಸಲ್ಡಾನ್ ಅವರು ಉದ್ಘಾಟಿಸಿದರು. ಭರತನಾಟ್ಯ, ಕೋಲಾಟ, ಪ್ರದರ್ಶನ, ಗೀತ ಗುಂಜನ, ಭಾರತ್ ಕೂಡ್ಲೇಕರ್ ನಿರ್ದೇಶನದ 'ಚಿತ್ರದಲ್ಲೊಂದು ಶತ್ರು' ಮತ್ತು ರಮಾನಂದಚಾರ್ಯರ 'ನಾವಿಲ್ಲದಾಗ' ಕನ್ನಡ ನಾಟಕಗಳ ಪ್ರದರ್ಶನ ವಿಜಯತೆಂಡೂಲ್ಕರ್ ಅವರ 'ಅಂಜಿ', 'ಧ್ಯಾನಮನಿ' ಮರಾಠಿ ನಾಟಕಗಳ ಪ್ರದರ್ಶನ, 'ಪಂಚವಟಿ' ಮತ್ತು 'ವಾಲಿಮೋಕ್ಷ' ಯಕ್ಷಗಾನ, ಕುಮಾರಿ ಸೀಮಾ ಶಿವಾಜಿ ಶೆಟ್ಟಿರಿಂದ ಭರತ ನಾಟ್ಯ, ಶ್ರೀಮತಿ ದಕ್ಷ ಮಿಶ್ರೊವಾಚರ ಒಡಸ್ಸಿ ನೃತ್ಯ ಮೊದಲಾದ ಕಾರ್ಯಕ್ರಮಗಳು ನಡೆದವು.

'ಮುಂಬೈ ಕರ್ನಾಟಕ ಸಂಘ'ದ ಸಾಂಸ್ಕೃತಿಕ ಸಪ್ತಾಹ ಕಾರ್ಯಕ್ರಮದ ಅಂಗವಾಗಿ ಮಹಿಳಾ ಸಮ್ಮೇಳನದ ಅಂಗವಾಗಿ ಸಮ್ಮೇಳನ ಏರ್ಪಡಿಸಲಾಗಿತ್ತು. ಖ್ಯಾತ ಹಿಂದಿ ಲೇಖಕಿ ಶ್ರೀಮತಿ ಶಿಮಾಜೈಬಿ ಅಧ್ಯಕ್ಷತೆ ವಹಿಸಿದ್ದರು. ಜಾನಪದದಲ್ಲಿ ಸರಸ ಹಾಗೂ ಹಾಸ್ಯ ವಿಷಯ ಕುರಿತು ವಿಚಾರ ಸಂಕಿರಣ ನಡೆಯಿತು. ಹಿಂದಿ, ಮರಾಠಿ, ಕೊಂಕಣಿ, ಕನ್ನಡ ಭಾಷೆಗಳಲ್ಲಿನ ಜಾನಪದವನ್ನು ಕುರಿತು ಪ್ರಬಂಧಗಳನ್ನು ಮಂಡಿಸಲಾಯಿತು.

ಕನ್ನಡ ಹಾಗೂ ಮರಾಠಿ ಭಾಷಿಗರ ನಡುವೆ ಸ್ನೇಹ ಸೌಹಾರ್ದ ಸಂವರ್ಧನೆಗಾಗಿ ಗಣನೀಯ ಕಾರ್ಯವೆಸಗಿದ ವ್ಯಕ್ತಿಗಳಿಗೆ ಕರ್ನಾಟಕ ಸಂಘದ ಮಾಜಿ ಅಧ್ಯಕ್ಷರಾದ ದಿ. ವರದರಾಜ ಆದ್ಯರ ಹೆಸರಿನಲ್ಲಿ ಪ್ರಶಸ್ತಿ ನೀಡುತ್ತದೆ. ೧೯೯೨ನೇ ಸಾಲಿನ ವರದರಾಜ ಆದ್ಯ ಪ್ರಶಸ್ತಿ ಪ್ರಧಾನ ಸಮಾರಂಭವು ೧೯೯೩ರ ಮಾರ್ಚ್ ತಿಂಗಳಿನಲ್ಲಿ ನಡೆಯಿತು. ಗುಲಬರ್ಗಾದಲ್ಲಿ ಕನ್ನಡ ಮರಾಠಿ ಸ್ನೇಹ ಸೇತುವೆಯಂತೆ ಕಾರ್ಯನಿರ್ವಹಿಸುತ್ತಿರುವ ಪ್ರೊ. ಪಿ. ವಿ. ದೇವುಳ ಗಾವಂಕರ್ ಮತ್ತು ಅನುವಾದ ಸಾಹಿತ್ಯ ಮೂಲಕ ಇದೇ ಕಾರ್ಯವನ್ನು ಧಾರವಾಡದಿಂದ ನಡೆಸುತ್ತಿರುವ ಡಾ. ಎಸ್.ಪಿ. ಪಾಟೀಲ ಅವರಿಗೆ ಪಾಟೀಲ ಪುಟ್ಟಪ್ಪ ಅವರು ಪ್ರಶಸ್ತಿ ಪ್ರಧಾನ ಮಾಡಿದರು. ಪ್ರಶಸ್ತಿಯೊಂದಿಗೆ ಕೊಡುವ ೧೦,೦೦೦ ರೂಪಾಯಿಗಳನ್ನು ಇಬ್ಬರಿಗೂ ಹಂಚಿಕೊಡಲಾಯಿತು.

೧೯೯೩ನೇ ಸಾಲಿನ ವರದರಾಜ ಪ್ರಶಸ್ತಿ ಶ್ರೀಮತಿ ಮೀನ ವಾಂಗೀಕರ್ ಅವರಿಗೆ ಸಂದಿದೆ. ಖ್ಯಾತ ಸಾಹಿತಿ ಯಶವಂತ ಚಿತ್ತಾಲ, ವ್ಯಾಸರಾಯ್ ನಿಂಜೂರ್ ಮತ್ತು ಮುಂಬೈ ವಿ.ವಿ.ಯಿಂದ ಕನ್ನಡ ಡಾಕ್ಟರೇಟ್ ಪದವಿ ಪಡೆದ ವಿಶ್ವನಾಥ ಇವರನ್ನು ಕರ್ನಾಟಕ ಸಂಘದ ವತಿಯಿಂದ ಪ್ರಸಕ್ತ ವರ್ಷದಲ್ಲಿ ಹಾರ್ದಿಕವಾಗಿ ಸನ್ಮಾನಿಸಲಾಯಿತು.

ಕನ್ನಡ ನವ್ಯಕವಿಯಾದ ದಿ. ಪೇಜಾವರ ಸದಾಶಿವರಾಯರ ನೆನಪಿಗಾಗಿ ಕನ್ನಡ ಪ್ರತಿಭಾವಂತ ಹೊಸ ಕವಿಗಳಿಗೆ ಉತ್ತೇಜನವೀಯುವ ದೃಷ್ಟಿಯಿಂದ ಪ್ರತಿ ವರ್ಷವು ೧,೧೦೦ ರೂ. ಬಹುಮಾನ ಹಾಗೂ ಪ್ರಶಸ್ತಿ ಪತ್ರವನ್ನೀಯುವ ಯೋಜನೆಯನ್ನು, ಈ ಸಂಘವು ೧೯೯೩ನೇ ವರ್ಷದಲ್ಲಿ ರೂಪಿಸಿದೆ.

ಕಲಾಭಾರತಿ ವೇದಿಕೆಯ ಆಶ್ರಯದಲ್ಲಿ ಖ್ಯಾತ ನೃತ್ಯಾಂಗನೆ ವೈಜಯಂತಿ ಕಾಶಿಯವರ ಕುಚುಪುಡಿ ನೃತ್ಯ ಪ್ರದರ್ಶನ ನೀಡಲಾಯಿತು. ಶ್ರಾವಣ ಕವಿಸಮ್ಮೇಳನವನ್ನು 'ಅಕ್ಷಯ' ಪತ್ರಿಕೆ ಸಂಪಾದಕರಾದ ಎಂ.ಬಿ. ಕುಡ್ವಾನ್ ಉದ್ಘಾಟಿಸಿದರು. ಹಿರಿಯ ಕವಿ ಬಿ.ಎ. ಸನದಿಯವರ ಅಧ್ಯಕ್ಷತೆಯಲ್ಲಿ ಅನೇಕ ಕವಿಗಳು ವರ್ಷ ಕಾಲದ ಬಗೆಗಿನ ತಮ್ಮ ಕವನಗಳನ್ನು ವಾಚಿಸಿದರು.

ಕಿಟ್ಟೆಲ್ ಕೋಶದ ಶತಾಬ್ದಿಯನ್ನು ಕರ್ನಾಟಕ ಸಂಘವು ವೈವಿಧ್ಯಮಯವಾದ ಕಾರ್ಯಕ್ರಮಗಳೊಂದಿಗೆ ಆಚರಿಸಿತು. ಆಚರಣೆಯ ಅಂಗವಾಗಿ ಕನ್ನಡದಲ್ಲಿ ಪ್ರಕಟವಾದ ಶಬ್ದಕೋಶಗಳ ಪ್ರದರ್ಶನ ಏರ್ಪಡಿಸಿತ್ತು. ಮುಂಬಯಿ ವಿ.ವಿ.ಕನ್ನಡ ವಿಭಾಗದ ಮುಖ್ಯಸ್ಥ ಡಾ. ತಾಳ್ತಜೆ ವಸಂತ್‌ಕುಮಾರ್ ಅವರು ಪ್ರದರ್ಶನವನ್ನು ಉದ್ಘಾಟಿಸಿದರು. ಅಧ್ಯಕ್ಷತೆಯನ್ನು ಖ್ಯಾತ ಸಾಹಿತಿ ವ್ಯಾಸರಾಯ್ ಬಲ್ಲಾಳ ವಹಿಸಿದ್ದರು.

ಡೊಂಬಿವಿಲಿಯಾ ಕರ್ನಾಟಕ ಸಂಘವು ವಾಚನಾಲಯ ಸಮಿತಿ ರಂಗಭೂಮಿ ಬಗ್ಗೆ ಮಾಸಿಕ ಸಾಹಿತ್ಯ ಕಾರ್ಯಕ್ರಮವನ್ನು ಏರ್ಪಡಿಸಿತ್ತು. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪಡೆದ ಕವಿ ಬಿ.ಎ. ಸನದಿ ಕರ್ನಾಟಕ ಸಾಹಿತ್ಯ ಪ್ರಶಸ್ತಿ ಪಡೆದ ವ್ಯಾಸರಾವ್ ನಿಂಜೂರ್ ಮತ್ತು ಶ್ರೀ ಅರವಿಂದ ನಾಡಕರ್ಣಿ ಇವರನ್ನು ಸನ್ಮಾನಿಸಲಾಯಿತು. ಸಮಾರಂಭದ ಅಂಗವಾಗಿ ಕವಿಗೋಷ್ಠಿ, ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ರಸಪ್ರಶ್ನೆ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ಇದೇ ಸಂಘವು ವಿದ್ಯಾರ್ಥಿಗಳಿಗೆ ಮತ್ತು ಸಾಹಿತ್ಯಾಸಕ್ತರಿಗೆ ಕನ್ನಡ ನಾಟಕ, ಸಣ್ಣಕಥೆ, ಪ್ರವಾಸ ಕಥನ, ಕವನ ಸ್ಪರ್ಧೆಗಳನ್ನು ಏರ್ಪಡಿಸಿತ್ತು.

ಮಹಾರಾಷ್ಟ್ರದ ಕನ್ನಡ ಸಾಹಿತ್ಯ ಪರಿಷತ್ತು ಘಟಕ ಮತ್ತು ಕನ್ನಡ ಬಳಗದ ಸಂಯುಕ್ತ ಆಶ್ರಯದಲ್ಲಿ ನನ್ನ ಬರವಣಿಗೆಯ ಅನುಭವಗಳು ಎಂಬ ಕಾರ್ಯಕ್ರಮವನ್ನು ನಡೆಸಲಾಗಿತ್ತು. ಹಿರಿಯ ನಟ, ನಿರ್ದೇಶಕ ಡಾ. ಬಿ.ಆರ್. ಮಂಜುನಾಥ್ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ಅನುಭವಗಳನ್ನು ಹಂಚಿಕೊಳ್ಳಲು ಬಂದವರಲ್ಲಿ ಸುನೀತಾಶೆಟ್ಟಿ, ಬಿ.ಎಸ್. ಕುರ್ಕಾಲ, ಜಯರಾಮ ಆಳ್ವ, ಜಿ. ಕೆ. ಮಲ್ಯ, ಶ್ರೀಮತಿ ತುಳಸಿ, ವೇಣುಗೋಪಾಲ್ ಪ್ರಮುಖರು.

ಮುಂಬಯಿ ವಿಶ್ವವಿದ್ಯಾಲಯ ಕನ್ನಡ ವಿಭಾಗದಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಸಾಹಿತಿ ಶ್ರೀ ಸು.ರಂ. ಎಕ್ಕುಂಡಿ ಅವರೊಂದಿಗೆ ಸಾಹಿತ್ಯ ಸಂವಾದ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಹಿರಿಯ ಸಾಹಿತಿ ಕು.ಶಿ. ಹರಿದಾಸಭಟ್ಟರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಮಾತುಂಗದಲ್ಲಿರುವ ಕರ್ನಾಟಕ ಸಂಘವು ೧೯೯೩ರಲ್ಲಿ ಗಮನಾರ್ಹ ಕಾರ್ಯಕ್ರಮಗಳನ್ನು ಹಾಕಿಕೊಂಡಿತ್ತು. ಮುಂಬಯಿ

ಎಸ್.ಎಸ್.ಸಿ. ಮತ್ತು ಎಚ್.ಎಸ್.ಸಿ. ಬೋರ್ಡಿನ ಪರೀಕ್ಷೆಯಲ್ಲಿ ಕನ್ನಡ ವಿಷಯದಲ್ಲಿ ಅತೀ ಹೆಚ್ಚು ಅಂಕಗಳನ್ನು ಗಳಿಸಿದ ವಿದ್ಯಾರ್ಥಿಗೆ ನಗದು ಬಹುಮಾನ ಯೋಜನೆಯನ್ನು ಸಂಘವು ರೂಪಿಸಿದೆ. ಈ ಎರಡೂ ನಗದು ಬಹುಮಾನಗಳು ಮಧುಗಿರಿ ಮಠದ ಶಾಂತವೀರ ಪಾರ್ವತಮ್ಮ ಸ್ಮರಣಾರ್ಥ ದತ್ತಿ ನಿಧಿಯಿಂದ ಕೊಡಲಾಗುವುದು.

ನಟಸಾರ್ವಭೌಮ ಡಾ. ರಾಜ್‌ಕುಮಾರ್ ಅವರನ್ನು ಮುಂಬಯಿ ಅಭಿಮಾನಿಗಳ ಸಂಘ ಹೃತ್ಪೂರ್ವಕವಾಗಿ ಸನ್ಮಾನಿಸಿತು. ಪೇಜಾವರ ಮಠದ ವಿಶ್ವೇಶ್ವರ ತೀರ್ಥ ಸ್ವಾಮೀಜಿಯವರು ಸಮಾರಂಭದಲ್ಲಿ ಉಪಸ್ಥಿತರಿದ್ದು ಡಾ. ರಾಜ್ ಅವರನ್ನು ಆಶೀರ್ವದಿಸಿದರು.

೧೯೯೩ರಲ್ಲಿ ದತ್ತಿ ಉಪನ್ಯಾಸ ಸಾಹಿತ್ಯ ಸಂವಾದ ಕಾರ್ಯಕ್ರಮಗಳನ್ನು ಮುಂಬಯಿ ಕನ್ನಡಿಗರು ಏರ್ಪಡಿಸಿದ್ದರು. ಜಯಂತಕಾಯ್ಕಿಣಿ, ಕು.ಶಿ. ಹರಿದಾಸ ಭಟ್ಟ, ವ್ಯಾಸರಾಯ ಬಲ್ಲಾಳ, ಯಶವಂತ ಚಿತ್ತಾಲ ಮೊದಲಾದ ಗಣ್ಯರು ಭಾಗವಹಿಸಿದ್ದರು. ಜೂನ್ ಜುಲೈ, ತಿಂಗಳಲ್ಲಿ ಅನೇಕ ಯಕ್ಷಗಾನ ಪ್ರದರ್ಶನಗಳನ್ನು ಮುಂಬಯಿ ಕನ್ನಡಿಗರು ವ್ಯವಸ್ಥೆ ಮಾಡಿದ್ದರು.

ಮುಂಬಯಿಯಿಂದ ಕರ್ನಾಟಕ ಮಲ್ಲ, ಮೊಗವೀರ, ನೇಸರು, ಬಂಟರವಾಣಿ, ಪತ್ರಪುಷ್ಪ, ಅಕ್ಷಯ, ಗೋಕುಲವಾಣಿ, ಸಂಬಂಧ ಮೊದಲಾದ ಪತ್ರಿಕೆಗಳು ತಮ್ಮ ಕೈಂಕರ್ಯವನ್ನು ಹಿಂದಿನಂತೆಯೇ ಮುಂದುವರಿಸುತ್ತಾ ಬಂದಿವೆ. ೧೯೯೩ರಲ್ಲಿ 'ಉದಯದೀಪ'ಎಂಬ ದಿನ ಪತ್ರಿಕೆಯನ್ನು ಪ್ರಾರಂಭಿಸಿದ್ದಾರೆ.

**ಪುಣೆ**

'ಪುಣೆ ಕರ್ನಾಟಕ ಸಂಘ'ವು 'ತರಂಗ' ಮತ್ತು ಮರಾಠಿವಾರಪತ್ರಿಕೆ 'ಸಕಾಳ್' ಕುರಿತು ವಿಚಾರಗೋಷ್ಠಿಯನ್ನು ಏರ್ಪಡಿಸಿತ್ತು. 'ತರಂಗ'ವಾರಪತ್ರಿಕೆಯ ಸಂಪಾದಕರಾದ ಸಂತೋಷಕುಮಾರ್ ಗುಲ್ವಾಡಿ ಸಮಾರಂಭದ ಮುಖ್ಯ ಅತಿಥಿಗಳಾಗಿದ್ದರು. ಕನ್ನಡ ಮತ್ತು ಮರಾಠಿ ಭಾಷೆಗಳ ನಡುವಿನ ಸ್ನೇಹ ಸಂಬಂಧ ಹಾಗೂ ಕೊಡುಕೊಳ್ಳುವಿಕೆಯ ಬಗ್ಗೆ ಉಪಯುಕ್ತ ವಿಚಾರ ವಿನಿಮಯ ನಡೆಯಿತು.

ಅಂಬರನಾಥದಲ್ಲಿ ಕರ್ನಾಟಕ ವೈಭವ ಸಂಸ್ಥೆಯು ಶ್ರೀ ಎಸ್. ನಿಜಲಿಂಗಪ್ಪ ಕನ್ನಡ ಹೈಸ್ಕೂಲ್ ಕಟ್ಟಡದ ಭೂಮಿಪೂಜೆಯನ್ನು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮೀಜಿ, ಜಗದ್ಗುರು ವಿಶ್ವಾರಾಧ್ಯ ಸಿಂಹಾಸನ ಜಂಗಮವಾಡಿ ಮಠ ವಾರಣಾಸಿ ಇವರು ನೆರವೇರಿಸಿದರು.

**ದೆಹಲಿ**

ದೇಶದ ರಾಜಧಾನಿಯಲ್ಲೂ ಕನ್ನಡಿಗರು ತಮ್ಮ ಅನೇಕ ಚಟುವಟಿಕೆಗಳ ಮೂಲಕ ಗಮನ ಸೆಳೆದಿದ್ದಾರೆ. ಅವರಲ್ಲಿ 'ದೆಹಲಿ ಕನ್ನಡಿಗ ಪತ್ರಿಕೆ'ಯು ಪ್ರತಿವರ್ಷದಂತೆ ಈ ವರ್ಷವೂ ಬಹುಮುಖಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ೧೦ನೇ ರಾಷ್ಟ್ರೀಯ ಕನ್ನಡ

ಸಮ್ಮೇಳನವನ್ನು ದಿಲ್ಲಿಯಲ್ಲಿ ಮಾರ್ಚ್ ೨೮ರಂದು ಅದ್ದೂರಿಯಿಂದ ನಡೆಸಿತು. ಇದರಲ್ಲಿ ವಿಚಾರ ಸಂಕಿರಣ, ಕವಿಗೋಷ್ಠಿಯನ್ನು ವ್ಯವಸ್ಥೆ ಮಾಡಲಾಗಿತ್ತು. ಕನ್ಯಾಕುಮಾರಿಯಲ್ಲೂ ಸಮ್ಮೇಳನವನ್ನು ನಡೆಸಿದ ಹೆಗ್ಗಳಿಕೆ ದೆಹಲಿ ಕನ್ನಡ ಪತ್ರಿಕೆಯದು. ಡಿಸೆಂಬರ್ ೮ ರಂದು ಯಕ್ಷಗಾನ ಭವಿಷ್ಯ ಕುರಿತು ವಿಚಾರ ಸಂಕಿರಣವನ್ನು ಏರ್ಪಡಿಸಿತ್ತು. ಇದನ್ನು ರಂಗ ನಿರ್ದೇಶಕಿ ಶಕುಂತಳಾ ಪಾಲನ್ ಅವರು ಉದ್ಘಾಟಿಸಿದರು. ಯಕ್ಷಗಾನ ಭಾಗವತರಾದ ಗಣಪತಿಭಟ್ಟ, ಕಲಾವಿದರಾದ ಪಾವಂಜೆ ಶಿವರಾಮಭಟ್ಟ, ಎಂ.ಕೆ. ರಮೇಶ ಆಚಾರ್ಯ, ಜಯರಾಂಭಟ್ಟ, ವೇಣೂರು ಸುಂದರ ಆಚಾರ್ಯ ಮೊದಲಾದವರು ತಮ್ಮ ಅಭಿಪ್ರಾಯ ಮಂಡಿಸಿದರು.

ದೆಹಲಿಯಲ್ಲಿ ಡಿಸೆಂಬರ್ ೨೫ ರಿಂದ ೨೬ ರವರೆಗೆ ಕನ್ನಡ ಏಕಾಂಕ ನಾಟಕ ಸ್ಪರ್ಧೆಯನ್ನು ನಡೆಸಿಕೊಟ್ಟಿತು. ಅದರಲ್ಲಿ ಶ್ರೇಷ್ಠ ನಾಟಕ (೧) 'ಆನಿಬಂತಾನಿ' - ಚಾಲುಕ್ಯತಂಡ (೨). ವೈನಾಟ್ - ಜನಕಪುರಿ ಕನ್ನಡ ಕೂಟ; ಶ್ರೇಷ್ಠ ನಿರ್ದೇಶನ (೧) ಮುರಳಿಧರ ಮುಧೋಳ (೧) ಎಚ್.ಎಸ್. ಕುಲಕರ್ಣಿ, ಶ್ರೇಷ್ಠ ನಟ (೧) ಎಸ್. ಎಸ್. ಸೂರ್ಯ ನಾರಾಯಣ (೨) ಬಿ. ಶ್ರೀನಿವಾಸ; ಶ್ರೇಷ್ಠ ನಟ (೧) ವೀಣಾಯಾಧವ್ (೨) ವಿದ್ಯಾರಾವ್ ಮೊದಲಾದವರು ಬಹುಮಾನ ಪಡೆದರು. ವ್ಯಂಗ್ಯ ಚಿತ್ರಪ್ರದರ್ಶನ, ಕವಿಗೋಷ್ಠಿ ಇತ್ಯಾದಿ ಕಾರ್ಯಕ್ರಮಗಳನ್ನು ಹಾಕಿಕೊಂಡ ದೆಹಲಿ ಕನ್ನಡಿಗ ಪತ್ರಿಕೆಯೂ ಸುಪ್ರಸಿದ್ಧ ಕಲಾಕಾರರಾದ ರಂಗ ಅವರ ವ್ಯಂಗ್ಯ ಚಿತ್ರ ಪ್ರದರ್ಶನವನ್ನು ಏರ್ಪಡಿಸಿತ್ತು. ಹೀಗೆ ವೈವಿಧ್ಯಮಯ ಚಟುವಟಿಕೆಯಲ್ಲಿ ತೊಡಗಿದ್ದ ದೆಹಲಿ ಕನ್ನಡಿಗ ಪತ್ರಿಕೆಯ ಸಂಪಾದಕ ಬಾ. ಸಾಮಗರ ಉತ್ಸಾಹ ಮೆಚ್ಚುವಂತಹದ್ದು. 'ದೆಹಲಿ ಕರ್ನಾಟಕ ಸಂಘ'ವು ರಾಷ್ಟ್ರಮಟ್ಟದ ವಿಚಾರ ಸಂಕಿರಣ, ಬಸವ ಜಯಂತಿ, ಮಹಾವೀರ ಜಯಂತಿ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಡಾ. ಚಿದಾನಂದಮೂರ್ತಿ, ಎಚ್.ಎಸ್. ಶಿವಪ್ರಕಾಶ, ಡಾ. ಶಿವಾನಂದ ಮೊದಲಾದವರು ಭಾಗವಹಿಸಿದ್ದರು. ದೆಹಲಿಯ ವಿಷಮ ವಾತಾವರಣದ ಮಧ್ಯೆಯೂ ಸಂಘದ ಆಶ್ರಯದಲ್ಲಿ ಸಂಗೀತ ನೃತ್ಯಗಳಲ್ಲದೆ ಚಿತ್ರ ನಟ ಕಲ್ಯಾಣಕುಮಾರ್ ಮತ್ತು ಸಂಗಡಿಗರಿಂದ 'ಮಂಗಳೂರು ಮಾವ',' ಮಮತೆಯ ಬಂಧನ' ಮೊದಲಾದ ನಾಟಕಗಳ ಪ್ರದರ್ಶನಗಳು ನಡೆದವು. ಸಂಘದ ಆವರಣದಲ್ಲಿ ಜಿ.ವಿ. ಅಯ್ಯರ್, ಪಂಚಾಕ್ಷರಿ ಗವಾಯಿ, ಮಜ್ಜೀಖಾನ್ ಮೊದಲಾದವರನ್ನು ಸತ್ಕರಿಸಲಾಯಿತು. ಡಾ. ಶಾಂತಿನಾಥ ದೇಸಾಯಿ, ಪ್ರಸನ್ನ ಮೊದಲಾದವರ ಉಪಸ್ಥಿತಿಯಲ್ಲಿ ಯು.ಆರ್. ಅನಂತಮೂರ್ತಿ ಅವರನ್ನು ಕೇಂದ್ರಸಾಹಿತ್ಯ ಅಕಾಡೆಮಿ ಅಧ್ಯಕ್ಷರಾದ ಸಂದರ್ಭದಲ್ಲಿ ಅಭಿನಂದಿಸಲಾಯಿತು.

ದೆಹಲಿ ಕರ್ನಾಟಕ ಸಂಘದ ಕನ್ನಡ ರಾಜ್ಯೋತ್ಸವ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಸಚಿವರಾದ ಎಚ್.ವಿಶ್ವನಾಥ ಅವರು ಮುಖ್ಯ ಅತಿಥಿಗಳಾಗಿದ್ದರು. ಕರ್ನಾಟಕ ಸರ್ಕಾರ ದೆಹಲಿಯ ಕನ್ನಡಿಗರಿಗಾಗಿ ಕರ್ನಾಟಕದಲ್ಲಿರುವ ಜಾನಪದ, ನಾಟಕ, ನೃತ್ಯ, ಸಂಗೀತದ ಬಗ್ಗೆ ಪರಿಚಯ ಹಾಗೂ ಮನೋರಂಜನೆ ನೀಡಲು ಅನೇಕ ತಂಡಗಳನ್ನು ಕಳುಹಿಸಿತ್ತು. ಶ್ರೀಮತಿ ವೈಜಯಂತಿ ಕಾಶಿ ಅವರಿಂದ 'ಮಹಿಷಾಸುರ ಮರ್ಧಿನಿ' ನೃತ್ಯನಾಟಕ, ಕುಮಾರಿ ಸುಹಾಸಿನಿ ಅವರ ಭರತನಾಟ್ಯ, ಉದಯಜಾದುಗಾರರ ಇಂದ್ರಜಾಲ ಪ್ರದರ್ಶನ, ಬೀಳಗಿಯ ಸನಾದಿ ಅಪ್ಪಣ್ಣ ಅವರಿಂದ ಜಾನಪದ ನೃತ್ಯ, ವಿಜಾಪುರ ತಂಡದಿಂದ ' ಕೃಷ್ಣಾಪಾರಿಜಾತ' ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳ

ಪ್ರದರ್ಶನ ಮಾಡಲಾಗಿತ್ತು.

'ಅರಾವಳಿ' ಕನ್ನಡ ಸಂಘ, ಕರ್ನಾಟಕ ಲೇಡಿಸ್ ಕ್ಲಬ್ ಇತ್ಯಾದಿ ಸಂಘಟನೆಗಳು ಸಹ ಸಾಂಸ್ಕೃತಿಕ ಸಾಹಿತ್ಯಕ ಚಟುವಟಿಕೆಗಳನ್ನು ಹಮ್ಮಿಕೊಂಡು ದೆಹಲಿಯಲ್ಲಿ ಕನ್ನಡದ ಕಂಪನ್ನು ಸೂಸುತ್ತಿವೆ. ಕರ್ನಾಟಕ ಸಂಘ ಪ್ರಕಟಿಸುವ ಮಾಸ ಪತ್ರಿಕೆ 'ಅಭಿಮತ' ದೆಹಲಿ ಕನ್ನಡಿಗರ ಚಟುವಟಿಕೆಯನ್ನು ಯಶಸ್ವಿಯಾಗಿ ದಾಖಲಿಸಿದೆ.

ತಿರುವನಂತಪುರದ ಕರ್ನಾಟಕ ಅಸೋಸಿಯೇಷನ್, ಪಾಲಕ್‌ಕಾಡ್‌ನ ಕನ್ನಡಸಂಘ, ಕೊಯಮತ್ತೂರಿನ ಕನ್ನಡಸಂಘ, ದೆಹಲಿಯ ಕನ್ನಡಸಂಘ, ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದ ಕನ್ನಡ ವಿಭಾಗ, ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಕನ್ನಡ ವಿಭಾಗ ಮೊದಲಾದವು ಮತ್ತು ಕನ್ನಡ ಪರ ಸಂಘ ಸಂಸ್ಥೆಗಳು ವಿವಿಧ ಬಗೆಯ ಸಾಹಿತ್ಯಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಾ ಜೀವಂತವಾಗಿ ಉಳಿದುಕೊಂಡಿವೆ.

ಸಾಂಗ್ಲಿ ಮತ್ತು ಮೀರಜ್‌ನ ಕನ್ನಡಿಗರು ಕರ್ನಾಟಕ ಯಕ್ಷಗಾನದ ನಾಟಕ ಸಭಾದ ಭಾಗವತರಾಗಿರುವ ಶ್ರೀ ಕಡಬ ಮೋಹನ ಬೈಪಡಿತ್ತಾಯರಿಗೆ ಸನ್ಮಾನವನ್ನು ಏರ್ಪಡಿಸಿದ್ದರು. ಗುಜರಾತಿನ ಸೂರತ್‌ನಲ್ಲಿ ಮೊತ್ತ ಮೊದಲ ಬಾರಿಗೆ ಕನ್ನಡ ಯಕ್ಷಗಾನ ಪ್ರದರ್ಶನ ನಡೆಯಿತು. ಸೂರತ್ ಆಸುಪಾಸಿನ ನಗರಗಳಿಂದಲೂ ಕನ್ನಡಿಗರು ದೊಡ್ಡಸಂಖ್ಯೆಯಲ್ಲಿ ಆಗಮಿಸಿ ತಮ್ಮ ನಾಡಿನ ಕಲೆಯನ್ನು ವೀಕ್ಷಿಸಿದರು.

ಹೊರನಾಡಿನ ಕನ್ನಡಿಗರ ಚಟುವಟಿಕೆಗಳನ್ನು ಹೇಳುವಲ್ಲಿ ಅವರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ನಾಲ್ಕುಮಾತು ಹೇಳಬೇಕು ಎನಿಸುತ್ತದೆ. ಹೊರನಾಡ ಕನ್ನಡಿಗರಿಗೆ ತಮ್ಮ ಸಾಂಸ್ಕೃತಿಕ ಮಹತ್ವವನ್ನು ಕಾಪಾಡುವುದರ ಜೊತೆಗೆ ಅನ್ಯ ಸಂಸ್ಕೃತಿಯ ಜೊತೆಗೆ ಸಖ್ಯವನ್ನು ಬೆಳೆಸಬೇಕಾದ ಹೊಣೆ ಇದೆ. ಗಡಿನಾಡಾದ ಕಾಸರಗೋಡಿನ ನೆಲದಲ್ಲಿನ ಕನ್ನಡ ಶಾಲೆಗಳನ್ನು ವಿದ್ಯಾರ್ಥಿಗಳ ಕೊರತೆಯ ಕಾರಣ ನೀಡಿ ಸರಕಾರ ಮುಚ್ಚುವ ಸನ್ನಾಹದಲ್ಲಿದೆ. ಪ್ರೌಢಶಾಲೆಗಳಲ್ಲಿ ಕನ್ನಡ ಅಧ್ಯಾಪಕರನ್ನು ನೇಮಿಸದೇ ಕೆಲವು ತಿಂಗಳಿಗಾಗಿ ಹಂಗಾಮಿಯಾಗಿ ಕರೆಸಿಕೊಳ್ಳಲಾಗುತ್ತಿದೆ. ಕನ್ನಡೇತರ ಹಿಂದಿ ಅಧ್ಯಾಪಕರನ್ನು ಕನ್ನಡ ಮಕ್ಕಳಿಗೆ ಪಾಠ ಹೇಳಲು ಸರ್ಕಾರ ನೇಮಿಸಿದೆ. ಮದರಾಸು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ತರಗತಿಗೆ ಪಾಠ ಹೇಳಲು ಅಧ್ಯಾಪಕರ ನೇಮಕಾತಿಯಲ್ಲಿ ತಮಿಳುನಾಡು ಸರಕಾರ ಉದಾಸೀನವಾಗಿದೆ. ಮದರಾಸು ದೂರದರ್ಶನ ವಾರಕ್ಕೆ ಮೂರುದಿನ ಪ್ರಸಾರ ಮಾಡುತ್ತಿದ್ದ ಕನ್ನಡ ಕಾರ್ಯಕ್ರಮಗಳನ್ನು ೧೯೯೩ರಲ್ಲಿ ರದ್ದು ಪಡಿಸಿದೆ.

ಕನ್ನಡ ಚಟುವಟಿಕೆಗಳಿಗೆ ಇವೆಲ್ಲ ತೊಡಕುಗಳಿದ್ದು ಭೌಗೋಳಿಕವಾಗಿ ಕರ್ನಾಟಕದ ಹೊರಗುಳಿದ ಕನ್ನಡಿಗರು ಭಾವನಾತ್ಮಕವಾಗಿ ಕನ್ನಡ ನಾಡು ನುಡಿಗಳ ಮೇಲೆ ಅಭಿಮಾನ ಉಳ್ಳವರಾಗಿದ್ದಾರೆ. ಅದನ್ನು ಪ್ರಕಟಿಸುವಲ್ಲಿ ಹೆಚ್ಚಿನ ಶ್ರದ್ಧೆ ಉತ್ಸಾಹ ತೋರಿದ್ದಾರೆ ಎಂಬುದು ೧೯೯೩ನೇ ವರ್ಷದ ಅವರ ಸಾಂಸ್ಕೃತಿಕ ಚಟುವಟಿಕೆಗಳಿಂದ ತಿಳಿದು ಬರುತ್ತದೆ. ಹೀಗೆ ಹೊರರಾಜ್ಯಗಳಲ್ಲಿ ಮಾತ್ರವಲ್ಲದೆ ಹೊರದೇಶಗಳಲ್ಲಿಯೂ ಕನ್ನಡಪರ ಚಟುವಟಿಕೆಗಳು ಹೆಚ್ಚಾಗುತ್ತಿವೆ.



# ಅಗಲಿದ ಗಣ್ಯರು

## ಜನರಲ್ ಕಾರ್ಯಪ್ಪ

*- ರಾ. ವೆಂಕಟೇಶ ಇಂದ್ವಾಡಿ*

ಸ್ವತಂತ್ರ ಭಾರತದ ಮೊದಲನೇ ಭಾರತೀಯ ಮಹಾದಂಡನಾಯಕರಾಗಿದ್ದ ಕೆ. ಎಂ. ಕಾರ್ಯಪ್ಪನವರು ಕೊಡಗಿನ ಕೊಡಂದೇರ ಕುಟುಂಬದಲ್ಲಿ ೧೯೦೦ ಜನವರಿ ೨೦ ರಂದು ಜನಿಸಿದರು. ಮಡಕೇರಿಯ ಸೆಂಟ್ರಲ್ ಹೈಸ್ಕೂಲ್‌ನಲ್ಲಿ ಆಂಗ್ಲಮಾಧ್ಯಮ ಶಾಲೆಯಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ ನಂತರ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಓದಿದ ಇವರು ಸೇನೆಯ ಪ್ರತಿಷ್ಠಿತ ಕಿಂಗ್ಸ್ ಕಮಿಷನರ್‌ಗೆ ಅರ್ಜಿ ಹಾಕಿ ಆಯ್ಕೆಯಾದರು. ಸೈನ್ಯಾಧಿಕಾರಿಗಳ ಶಿಕ್ಷಣರೀತಿ, ಜೀವನವಿಧಾನ ಮೊದಲಾದವುಗಳನ್ನು ಅಭ್ಯಾಸ ಮಾಡಲು ೧೯೨೫ ರಲ್ಲಿ ಪ್ರಪಂಚದ ಅನೇಕ ದೇಶಗಳಿಗೆ ಭೇಟಿಕೊಟ್ಟರು. ೧೯೪೯ ರಲ್ಲಿ ಜನವರಿ ೧೫ರಂದು ಭಾರತೀಯ ಸೈನ್ಯದ ಅತ್ಯುನ್ನತ ಪದವಿಯಾದ ಸೈನ್ಯದ ಮಹಾದಂಡನಾಯಕರಾಗಿ ಇಡೀ ದೇಶದ ರಕ್ಷಣೆಯ ಭಾರವನ್ನು ವಹಿಸಿಕೊಂಡರು. ೪ವರ್ಷಗಳ ಸೇವೆಯ ನಂತರ ೧೯೫೩ರ ಜನವರಿ ೧೪ರಂದು ನಿವೃತ್ತರಾದರು. ಅನಂತರ ೧೯೫೩ರ ಜುಲೈನಿಂದ ೧೯೫೬ರ ಮೇ ತಿಂಗಳವರೆಗೆ ಆಸ್ಟ್ರೇಲಿಯದಲ್ಲಿ ಭಾರತದ ಹೈ ಕಮಿಷನರ್ ಆಗಿದ್ದರು.

೧೯೮೬ ರಲ್ಲಿ ಭಾರತ ಸರ್ಕಾರವು ಇವರಿಗೆ 'ಫೀಲ್ಡ್ ಮಾರ್ಷಲ್' ಪದವಿಯನ್ನು ಕೊಟ್ಟು ಗೌರವಿಸಿತು. ಇಷ್ಟೇ ಅಲ್ಲದೆ ವಿದೇಶಗಳಿಂದಲೂ ಇವರಿಗೆ ಗೌರವ ಪ್ರಶಸ್ತಿಗಳು ಸಂದಿವೆ. ಶಿಸ್ತು, ದಕ್ಷತೆ, ದೇಶಾಭಿಮಾನಗಳಿಗೆ ಹೆಸರಾದ ಫೀಲ್ಡ್‌ಮಾರ್ಷಲ್ ಕಾರ್ಯಪ್ಪನವರು ತಮ್ಮ ಕೊನೆಯ ದಿನಗಳನ್ನು ಕಳೆಯಲು ಆಯ್ದುಕೊಂಡ ಸ್ಥಳ ತಮ್ಮ ಹುಟ್ಟೂರಾದ ಕರ್ನಾಟಕದ ಕೊಡಗು. ೧೫.೫.೧೯೯೩ ರಲ್ಲಿ ತಮ್ಮ ಪ್ರೀತಿಯ ಎಸ್ಟೇಟ್ ಆದ 'ರೋಷನಾರಾ'ದಲ್ಲಿ ಸಾರ್ಥಕ ಬದುಕಿನ ಕೊನೆಯ ಉಸಿರೆಳೆದರು.



## ಎಸ್. ಆರ್. ಸ್ವಾಮಿ

*- ಅ. ಲ. ನರಸಿಂಹನ್*

ಸಂಪ್ರದಾಯಸ್ಥ ಶೈವಾಗಮ ಅರ್ಚಕರ ಮನೆತನದಲ್ಲಿ ಮೈಸೂರಿನಲ್ಲಿ (೧೯೧೬) ಜನಿಸಿದ ಶ್ರೀಕಂಠಯ್ಯ ರಾಮಸ್ವಾಮಿ ಅವರಿಗೆ ಶಾಲಾಶಿಕ್ಷಣದಲ್ಲಿ ಆಸಕ್ತಿ ಬರದೆ; ಕಲಾಮಂದಿರದ ಸುಬ್ಬರಾಯರಲ್ಲಿ ಕಲೆಯ ಪ್ರಾಥಮಿಕ ರಚನೆ ಅಭ್ಯಸಿಸಿ ಮದ್ರಾಸ್‌ನಿಂದ ಹಾಗೂ ರ್‍ಯಾಂಕರ್ ಎಂಬ ಕಳಾವಿದರಿಂದ ಹೆಚ್ಚಿನ ಅಭ್ಯಾಸ ಮಾಡಿದರು. ಲಂಡನ್ನಿನ ಜಾನ್ ಹಾನ್ಸ್ ಶಾಲೆಯಿಂದ ಅಂಚೆಯಲ್ಲಿಯೂ ಕಲಾಭ್ಯಾಸ ಮಾಡಿದರು. ಎಚ್. ಎ. ಎಲ್.ನಲ್ಲಿ ಕಲಾವಿದರಾಗಿಯೂ ಕೆಲವು ಸಲ ಶಾಲೆಗಳಲ್ಲಿ ಅಧ್ಯಾಪಕರಾಗಿಯೂ ದುಡಿದರು. ಸಾಹಿತಿಗಳ ಪರಿಚಯದಿಂದಾಗಿ ನೂರಾರು ಸಾಂದರ್ಭಿಕ ಚಿತ್ರಗಳ ರಚನೆ ಮಾಡಿದರು. ತೆಳುವಾದ ಆದರೆ ದೃಢವಾದ ನೀಳಕಾಯದ ವ್ಯಕ್ತಿಗಳ ಚಿತ್ರಣ, ಜಲವರ್ಣದಲ್ಲಿ ' ವಾಷ್ ಮೆಥೆಡ್'ನಲ್ಲಿ ರಚನೆ ಇವರ ವೈಶಿಷ್ಟ್ಯ. ತೆಳುವಾಗಿ ಪದರ ಪದರವಾಗಿ ಬಣ್ಣ ಹಚ್ಚುತ್ತಾ ಹೋಗಿ, ಮೃದುವಾಗಿ ಛಾಯಂಕನಗೊಳಿಸುವ, ತೆಳುವಾದ ಹೊರರೇಖೆಯಿಂದ ಕೂಡಿದ ಈ ಬಗೆಯ ರಚನೆ ಶಾಂತಿನಿಕೇತನದಿಂದ ಬಂದುದು. ಸಂಸಾರ, ಜೀವನದ ಏರು ಪೇರು, ಅಸಮಾನತೆ, ಗೃಹಕೃತ್ಯ, ಹೆಣ್ಣಿನ ಶೋಷಣೆ, ಶೃಂಗಾರ ಇತ್ಯಾದಿಗಳು ಇವರ ಚಿತ್ರಕ್ಕೆ ವಸ್ತುವಾಗಿದ್ದವು. ಸ್ವಾಮಿಯವರಿಗೆ ರಾಜ್ಯಲಲಿತಕಲಾ ಅಕಾಡೆಮಿಯಿಂದ ೧೯೭೦ರಲ್ಲಿ ರಾಜ್ಯ ಅಕಾಡೆಮಿ ಪ್ರಶಸ್ತಿ ಬಂದಿತ್ತು. ಇವರು ೧೯೯೩ರ ಜನವರಿ ೨೬ ರಂದು ಕೊನೆಯುಸಿರೆಳೆದರು.

●



## ಡಿ. ವಾದಿರಾಜ್

*- ಅ. ಲ. ನರಸಿಂಹನ್*

ದೇವಲಕೊಂಡ ವಾದಿರಾಜ್ ಅವರು ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ದೇವಲಕೊಂಡ ಗ್ರಾಮದವರು. ಕಾರಣಾಂತರದಿಂದ ಶೃಂಗೇರಿ, ಹರಿಹರ, ನಂಜನಗೂಡು ಇತ್ಯಾದಿಗಳಲ್ಲಿ ಸಂಚರಿಸು

ತ್ತಿದ್ದಾಗ ಅಲ್ಲಿಯ ಶಿಲ್ಪಕಲೆಯಿಂದ ಪ್ರಭಾವಿತರಾದರು. ಆರ್ಥಿಕವಾಗಿ ಅನುಕೂಲವಿಲ್ಲದಿದ್ದರೂ ಮೈಸೂರಿನ ಸಿ. ಟಿ. ಐ. ನಲ್ಲಿ ಕೆಲಕಾಲ ಕಲಿತು ಕಲಾವಿದ ಹರಿಹರನ್ ಅವರಲ್ಲಿ ಶಿಲ್ಪಕಲೆಯ ಸಮಸ್ತವನ್ನೂ ಅರಿತರು. ಸ್ವಲ್ಪಕಾಲ ಪ್ರಾದೇಶಿಕ ಕರಕುಶಲ ಕಲಾಕೇಂದ್ರದಲ್ಲಿ ಮರಗೆತ್ತನೆಯ ವಿಭಾಗದ ಪ್ರಾಧ್ಯಾಪಕರಾಗಿದ್ದರು. ''ಛಲ, ಕಷ್ಟ, ಸಹಿಷ್ಣುತೆ, ನಿರಂತರ ಕಾರ್ಯಾನುಭವ, ಗ್ರಂಥಾವಲೋಕನ, ದೇಶವಿದೇಶಗಳ ಪರ್ಯಟನೆ'' ಇತ್ಯಾದಿಗಳಿಂದಾಗಿ ಸಂಪ್ರದಾಯ ಶಿಲ್ಪಕಲೆಯ ಬಗ್ಗೆ ಅಧಿಕಾರಯುತವಾಗಿ ಮಾತಾಡಬಲ್ಲವರಾಗಿದ್ದರಲ್ಲದೆ ಹಲವಾರು ಸಾಂಪ್ರದಾಯಿಕ ಶೈಲಿಯಲ್ಲಿ ಹಲವಾರು ಮಾಧ್ಯಮಗಳಲ್ಲಿ ಶಿಲ್ಪ ರಚನೆಯನ್ನೂ ಮಾಡುತ್ತಿದ್ದರು. ಹಲವಾರು ಪ್ರಶಸ್ತಿಗಳು, ಅರ್ಹತಾಪತ್ರಗಳು ಇತ್ಯಾದಿ ಪಡೆದಿದ್ದ ವಾದಿರಾಜ್ ಅವರಿಗೆ ೧೯೯೧ ನೇ ಸಾಲಿನಲ್ಲಿ ರಾಜ್ಯ ಅಕಾಡೆಮಿ ಪ್ರಶಸ್ತಿ ದೊರೆತಿತ್ತು. ೧೯೨೦ ನೇ ಮಾರ್ಚಿ ತಿಂಗಳಲ್ಲಿ ಜನ್ಮ ತಳೆದ ವಾದಿರಾಜರು ೧೯೯೩ ನೇ ಫೆಬ್ರವರಿ ೨೭ರಂದು ನಿಧನ ಹೊಂದಿದರು.

●



## ಎಸ್. ಎಂ. ಪಂಡಿತ್

*- ಅ. ಲ. ನರಸಿಂಹನ್*

ಸದಾನಂದ ಮೋನಪ್ಪ . ಪಂಡಿತರು ಗುಲಬರ್ಗದಲ್ಲಿ ಕಂಚುಗಾರ ಮನೆತನದಲ್ಲಿ ೨೫.೩. ೧೯೧೯ ರಲ್ಲಿ ಜನಿಸಿದರು. ಕಲಾವಿದ ಆಳಂದಕರ್ ಅವರಲ್ಲಿ ಅಭ್ಯಾಸ ಮಾಡಿ ಮೊದಲು ಮದ್ರಾಸ್‌ನಿಂದ ನಂತರ ಜೆ. ಜೆ. ಶಾಲೆಯಿಂದ ಹೆಚ್ಚಿನ ಅಭ್ಯಾಸ ನಡೆಸಿದ ಎಸ್. ಎಂ. ಪಂಡಿತರು ಮುಂಬಯಿಯನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಆಯ್ಕೆಮಾಡಿಕೊಂಡು ಇಹಲೋಕ ಯಾತ್ರೆಯನ್ನೂ ಅಲ್ಲಿಯೇ ಮುಗಿಸಿದರು. ಮೊದಲಿಗೆ ಪೋಸ್ಟರ್ ವರ್ಣದಿಂದ (ಅಪಾರದರ್ಶಕ ಜಲವರ್ಣ) ಕಲಾಜೀವನ ಆರಂಭಿಸಿ ಆ ಪದ್ಧತಿಯಲ್ಲಿ ಪ್ರಥಮವೆನಿಸಿಕೊಂಡರು. ಮುಂಬಯಿಯ 'ಮೆಟ್ರೊ' ಸಿನಿಮಾದವರಿಗಾಗಿ ಸಿನಿಮಾದ ಭಿತ್ತಿಪತ್ರಗಳು ಹಾಗೂ 'ಫಿಲ್ಮ್ ಇಂಡಿಯಾ' ಎಂಬ ಸಿನಿಮಾ ಪತ್ರಿಕೆಯ ಮುಖಪುಟಕ್ಕೆ ಚಿತ್ರ ರಚಿಸಲಾರಂಭಿಸಿದರು. ಪಂಡಿತರು ಪ್ರಸಿದ್ಧರಾಗಿರುವುದು ಅವರ ಪೌರಾಣಿಕ ಕಥಾಸಂದರ್ಭಗಳ ಚಿತ್ರಣದಿಂದಾಗಿ. ರಬಟೆಯಾಗಿ, ದಪ್ಪದಪ್ಪ ಪದರಗಳಲ್ಲಿ ಬಣ್ಣ ಹಚ್ಚಿಯೂ ಅದರಲ್ಲಿ ಹೆಣ್ಣಿನ ಕೋಮಲತೆ, ಗಂಡಿನ ಪೌರುಷವನ್ನು ಯಶಸ್ವಿಯಾಗಿ ತರುತ್ತಿದ್ದರು.

ವಿಶ್ವಾಮಿತ್ರ-ಮೇನಕೆ, ಪುಂಡರೀಕ-ಮಹಾಶ್ವೇತೆ, ಶಕುಂತಲಾ-ದುಶ್ಯಂತ, ಉಮರ ಖಯ್ಯಾಂ, ಶಿವ, ಶ್ರೀರಾಮ ಇತ್ಯಾದಿ ದೇವದೇವತೆಗಳ ಚಿತ್ರಣಕ್ಕೆ ಅಧಿಕ ಬೇಡಿಕೆಯಿತ್ತು. ಪ್ರಕೃತಿ ದೃಶ್ಯ ಹಾಗೂ ರಾಜಕೀಯ ವ್ಯಕ್ತಿಗಳ ಭಾವಚಿತ್ರ ರಚನೆಯಲ್ಲೂ ಅಗ್ರಸ್ಥಾನ ಪಡೆದಿದ್ದರು. ರಾಜ್ಯ ಲಲಿತಕಲಾ ಅಕಾಡೆಮಿ ೧೯೮೨ರಲ್ಲೂ ರಾಜ್ಯಸರ್ಕಾರ ೮೫ರಲ್ಲೂ ಪ್ರಶಸ್ತಿ ನೀಡಿ ಇವರನ್ನು ಸನ್ಮಾನಿಸಿದ್ದುವು. ಇವರು ೩೦. ೩. ೧೯೯೩ ರಂದು ಕಲಾಜಗತ್ತನ್ನು ಅಗಲಿದರು.

●



## ಎನ್. ಎಸ್. ಸುಬ್ಬಕೃಷ್ಣ

*- ಅ. ಲ. ನರಸಿಂಹನ್*

ನಂಜನಗೂಡಿನ ಸಂಪ್ರದಾಯಸ್ಥ ಮನೆತನದಲ್ಲಿ ಜನಿಸಿದ ಎನ್. ಎಸ್. ಸುಬ್ಬಕೃಷ್ಣ ಅವರು ಮೈಸೂರಿನ ಚಾಮರಾಜೇಂದ್ರ ಶಾಲೆಯಲ್ಲಿ ಚಿತ್ರಕಲೆ ಕಲಿತವರಲ್ಲದೆ ಸಂಗೀತದಲ್ಲೂ ಪರಿಶ್ರಮ ಹೊಂದಿದ್ದರು. ನಿಸರ್ಗ ಚಿತ್ರರಚನೆ ಇವರ ಮೊದಲ ಒಲವಾಗಿತ್ತು. ಭಗ್ನ ದೇವಾಲಯ, ಕೋಟೆಕೊತ್ತಲಗಳ ಹಿನ್ನೆಲೆಯ ಜಲವರ್ಣ, ಭೂದೃಶ್ಯ ರಚನೆ - ಅಂದಿನ ಮೈಸೂರಿನ ಕಲಾವಿದರಲ್ಲಿ ಹೆಚ್ಚು ಜನಪ್ರಿಯವಾಗಿತ್ತು. ಕೆಲಕಾಲ ಪಿಂಗಾಣಿ ಕಾರ್ಖಾನೆಯಲ್ಲಿದ್ದು ಗ್ವಾಲಿಯರ್‌ಗೆ ತೆರಳಿ ದೀರ್ಘಕಾಲ ಅಲ್ಲಿಯೇ ನಿಲ್ಲುವಂತಾಯಿತು. ಮಹಾತ್ಮ ಗಾಂಧಿ, ನೆಹರು, ಲಾಲ್ ಬಹಾದ್ದೂರ್ ಶಾಸ್ತ್ರಿ, ರಾಜೇಂದ್ರ ಪ್ರಸಾದ್, ಜೈಲ್‌ಸಿಂಗ್, ಕುವೆಂಪು ಸೇರಿದಂತೆ ಇವರಿಂದ ರಚಿತವಾದ ನೂರಾರು ವ್ಯಕ್ತಿಚಿತ್ರಗಳು ಹಾಗೂ ದೆಹಲಿಯ ಪಾರ್ಲಿಮೆಂಟ್ ಭವನದ ಚಿತ್ರಣವೂ ಸೇರಿದಂತೆ ಜಗತ್ತಿನಾದ್ಯಂತ ಹರಡಿವೆ. ಇವುಗಳಲ್ಲಿ ಅನೇಕ ಚಿತ್ರಗಳನ್ನು ಆಯಾ ವ್ಯಕ್ತಿಗಳನ್ನು ರೂಪದರ್ಶಿಯಾಗಿ ಕುಳ್ಳಿರಿಸಿ ರಚಿಸಿದಂತಹವು. ಇವಲ್ಲದೆ ತಾಷ್ಕೆಂಟ್ ಯುದ್ಧ, ನಿರೀಕ್ಷೆ, ಶಕುಂತಲಾ ಇತ್ಯಾದಿ ಚಿತ್ರಗಳನ್ನೂ ರಚಿಸಿದ್ದಾರೆ. ರಾಜ್ಯಸರ್ಕಾರ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ ನೀಡಿ ಸುಬ್ಬಕೃಷ್ಣ ಅವರನ್ನು ಸನ್ಮಾನಿಸಿತ್ತು. ಇವರು ೧೮.೬.೯೩ ರಂದು ನಿಧನ ಹೊಂದಿದರು.

●



## ಬಿ. ಕೇಸರ ಸಿಂಗ್

*- ಆ.ಲ. ನರಸಿಂಹನ್*

ಕೋಲಾರ ಜಿಲ್ಲೆಯ ಮಾಲೂರಿನಲ್ಲಿ ೧೯೦೦ರಲ್ಲಿ ಬಿ.ಕೇಸರ ಸಿಂಗ್ ಅವರು ಜನಿಸಿದರು. ಸಿಂಗ್ ಅವರು ಚಿತ್ರ ಕಲಾವಿದರಾಗಬೇಕೆಂದು ಬಯಸಿ ಅ. ನ. ಸುಬ್ಬರಾಯರಲ್ಲಿ ಅಭ್ಯಸಿಸಿ ವ್ಯಂಗ್ಯ ಚಿತ್ರಕಲೆಯಲ್ಲಿ ಪರಿಣಿತರೆನಿಸಿ ಕೆಲವು ಪತ್ರಿಕೆಗಳಿಗೆ ಕಳಿಸಿದರಲ್ಲದೆ, ಆಂಗ್ಲ ಪತ್ರಿಕೆಗಳಿಗೆ ಛಾಯಾಚಿತ್ರ ಸಹಿತ ಲೇಖನಗಳನ್ನು ಬರೆದರು. ೧೯೩೩ರಲ್ಲಿ ಸ್ವಂತ ಸ್ಟುಡಿಯೋ ಸ್ಥಾಪಿಸಿ ಹಲವಾರು ವರ್ಷಗಳು ನಡೆಸಿದರು. ೧೯೫೨ರಲ್ಲಿ ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಛಾಯಾಗ್ರಾಹಕರಾಗಿ ಕಾರ್ಯ ನಿರ್ವಹಿಸತೊಡಗಿದರು. ನಿವೃತ್ತಿಯ ನಂತರವೂ ಛಾಯಾಗ್ರಹಣದ ಪ್ರವೃತ್ತಿಯಲ್ಲಿ ತೊಡಗಿದ್ದರು. ದೇಶದಾದ್ಯಂತ ಸಂಚರಿಸಿದ್ದ ಅವರು ತಮ್ಮ ಸಂಗ್ರಹದಲ್ಲಿನ ಸಾವಿರಾರು ಛಾಯಾಚಿತ್ರಗಳ ಮೂಲ ಪ್ರತಿಗಳ (ನೆಗಟಿವ್) ಚಿತ್ರಗಳನ್ನು ಬೇಕಿದ್ದ ಗ್ರಾಹಕರಿಗೆ ಪೂರೈಸುತ್ತಿದ್ದರು. ಮುಖ್ಯವಾಗಿ ಪ್ರೇಕ್ಷಣೀಯ ಸ್ಥಳಗಳ ಪ್ರಾಚೀನ ದೇವಾಲಯಗಳು, ಜಲಪಾತ ಇತ್ಯಾದಿ ಪ್ರಕೃತಿ ಸೌಂದರ್ಯಕ್ಕೆ ಸಂಬಂಧಿಸಿದ ಚಿತ್ರಗಳಿದ್ದು ಪತ್ರಿಕೆಗಳಿಗೆ ಆಯಾ ಲೇಖನಗಳಿಗೆ ತಕ್ಕಂತೆ ಛಾಯಾಚಿತ್ರ ನೀಡುತ್ತಿದ್ದರು. ಅಗತ್ಯ ಬಿದ್ದರೆ ತಮ್ಮ ಸಂಗ್ರಹದಲ್ಲಿ ಇಲ್ಲದಿದ್ದರೂ ತಮ್ಮ ಎಂಬತ್ತರ ಇಳಿವಯಸ್ಸಿನಲ್ಲಿ ಕೂಡ ಆಯಾ ಪ್ರದೇಶಕ್ಕೆ ಹೋಗಿ ಸೂಕ್ತ ವಾತಾವರಣಕ್ಕೆ ಕಾದಿದ್ದು ಛಾಯಾಚಿತ್ರಗಳನ್ನು ತೆಗೆದು ಪೂರೈಸುತ್ತಿದ್ದ ಅಪರೂಪದ ವ್ಯಕ್ತಿಯಾಗಿದ್ದರು. ಛಾಯಾಚಿತ್ರಗಳೂ ಸಹ ಕೇವಲ ಪ್ರತಿಕೃತಿಯಾಗಿರದೆ ಕಲಾತ್ಮಕತೆಯ ಅಂಶದಿಂದ ಕೂಡಿದ, ನೆರಳು ಬೆಳಕಿನಾಟಗಳ ಕಲಾಕೃತಿ ಎಂಬಂತಿದ್ದವು. ಆರಂಭ ಕಾಲದ ಸಾಮಾನ್ಯ ದರ್ಜೆಯ ಕ್ಯಾಮರಾಗಳಿಂದ ಹಿಡಿದು ಆಧುನಿಕ ಕಾಲದ ಸೂಕ್ಷ್ಮಾತಿಸೂಕ್ಷ್ಮ ಕ್ಯಾಮರಾಗಳ ವರೆಗೆ ನೂರಾರು ಬಗೆಯ ಯಂತ್ರಗಳನ್ನು ಬಳಸಿ ಆ ಬಗ್ಗೆ ಆಳವಾಗಿ ಪಾಂಡಿತ್ಯ ಹೊಂದಿದ್ದ ಸಿಂಗ್ ಅವರು ತಮ್ಮ ಅನುಭವಗಳನ್ನು ಗಂಟೆಗಟ್ಟಲೆ ರಸವತ್ತಾಗಿ ವರ್ಣಿಸುತ್ತಿದ್ದುದು ಕೇಳುವುದೇ ಒಂದು ರೋಚಕ ಅನುಭವವಾಗಿರುತ್ತಿತ್ತು. ಹಲವಾರು ಗೌರವಾದರಗಳಿಗೆ ಪಾತ್ರರಾಗಿದ್ದ ಸಿಂಗ್ ಅವರು ೧೯.೬.೯೩ ರಂದು ನಿಧನರಾದರು. .

●

## ಪ್ರೊ. ಚಿದಂಬರ ಕೆ. ದೀಕ್ಷಿತ

*- ಸುಬ್ಬಣ್ಣ ರೈ*

ಪ್ರಾಧ್ಯಾಪಕ ಚಿದಂಬರ ದೀಕ್ಷಿತರು ೩.೧೦.೧೯೯೩ ರಂದು ನಿಧನರಾದರು. ಧಾರವಾಡ ಜಿಲ್ಲೆಯ ಹಾವೇರಿ ತಾಲೂಕಿನ ದೇವಿ ಹೊಸೂರು ಎಂಬ ಹಳ್ಳಿಯೊಂದಲ್ಲಿ ೧೪. ೨. ೧೯೨೨ ರಂದು ಹುಟ್ಟಿದರು. ೧೯೫೪ ರಿಂದ ೧೯೭೯ರವರೆಗೆ ಅವರು ಮುಂಬಯಿಯ ರೂಪರೇಲ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ೧೯೭೯ರಲ್ಲಿ ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ದೀಕ್ಷಿತರು ಆ ವಿಭಾಗದ ಮೊತ್ತಮೊದಲ ಪ್ರಾಧ್ಯಾಪಕ ಮತ್ತು ಮುಖ್ಯಸ್ಥರು. ೧೯೮೨ರ ತನಕ ವಿಭಾಗದ ಕರ್ಣಧಾರತ್ವವನ್ನು ವಹಿಸಿ, ತಮಗೆ ಸಿಕ್ಕ ಹೊಣೆಗಾರಿಕೆಯನ್ನು ಸಮರ್ಥವಾಗಿ ನಿರ್ವಹಿಸಿದರು. ಚಿದಂಬರರು ಕವಿಗಳು; ಭಾಷಾ ಶಾಸ್ತ್ರಜ್ಞರು; ವಾಗ್ಮಿಗಳು. ನವೋದಯದ ರಮ್ಯ ಚಿತ್ರಣವುಳ್ಳ 'ಮುಂಬೆಳಗು', 'ಶಬ್ದರಶ್ಮಿ' ಗಳಂತಹ ಕವನ ಸಂಕಲನಗಳಿಂದ ಓದುಗರಿಗೆ ಕೆಲಮಟ್ಟಿಗೆ ಪರಿಚಯ. ಅವರ ನಿಧನದೊಂದಿಗೆ ಮುಂಬಯಿ ಕನ್ನಡಿಗರ ಮಟ್ಟಿಗಂತೂ ಆ ಪರಂಪರೆಯ ಕೊಂಡಿ ಕಳಚಿಕೊಂಡಂತಾಗಿದೆ.

●



## ಸ್ವೆತಾಸ್ಲಾವ್ ರೋರಿಚ್

*-ಎನ್. ಮರಿಶಾಮಾಚಾರ್*

ಡಾ. ಸ್ವೆತಾಸ್ಲಾವ್ ರೋರಿಚ್ ಅವರು ತಮ್ಮ ೮೯ನೇ ವಯಸ್ಸಿನಲ್ಲಿ ಬೆಂಗಳೂರಿನಲ್ಲಿ ೩೦ನೇ ಜನವರಿ ೯೩ರಂದು ನಿಧನ ಹೊಂದಿದರು. ಹೆಸರಾಂತ ಕಲಾವಿದ ನಿಕೋಲಸ್ ರೋರಿಚ್ ಅವರ ಮಗನಾಗಿ ೧೯೦೪ ರಲ್ಲಿ ರಷ್ಯಾದ ಸೇಂಟ್ ಪೀಟರ್ಸ್ ಬರ್ಗ್‌ನಲ್ಲಿ ಸ್ವೆತಾಸ್ಲಾವ್ ಜನಿಸಿದರು. ಸ್ವೆತಾಸ್ಲಾವ್ ರೋರಿಚ್ ಅವರು ಪೀಟರ್ಸ್ ಬರ್ಗ್‌ನಲ್ಲಿದ್ದ 'ಮೇ ಗ್ಲಾಮರ್' ಶಾಲೆಯಲ್ಲಿ ತಮ್ಮ ಮೊದಲ ಚಿತ್ರಕಲೆಯ ಪಾಠಗಳನ್ನು ೧೯೧೪ ರಿಂದ ೧೯೧೬ರವರೆಗೆ ಕಲಿತರು. ಸ್ವೆತಾಸ್ಲಾವ್ ಅವರು ಲಂಡನ್ನಿನಲ್ಲಿ ಕಲಾಭ್ಯಾಸವನ್ನು ಮತ್ತು ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣವನ್ನು ಪಡೆದು, ಯೂರೋಪ್ ಮತ್ತು ಅಮೆರಿಕಾ ದೇಶಗಳಿಗೆ ಭೇಟಿಯಿತ್ತು ಅಲ್ಲಿನ ಕಲಾ ಚಳುವಳಿಗಳ ಬಗ್ಗೆ ತಿಳಿದುಕೊಂಡರು.

೧೯೩೩ರಲ್ಲಿ ಅವರ ಇಡೀ ಕುಟುಂಬ ಭಾರತಕ್ಕೆ ಬಂದಿತು. ಮೂವತ್ತರ ದಶಕದಲ್ಲಿ ಅವರು ಹಲವು ಭಾವಚಿತ್ರಗಳನ್ನು ಮತ್ತು ಹಿಮಾಲಯದ ಅಂಚಿನಲ್ಲಿರುವ ಕುಲು ಕಣಿವೆಯ ರಮ್ಯ ಪ್ರಕೃತಿ ಚಿತ್ರಗಳನ್ನು ರಚಿಸಿದರು ಮತ್ತು ತಮಗಾಗಿ ಕುಲುನಲ್ಲಿ ಒಂದು ಸ್ಟುಡಿಯೋವನ್ನು ಕಟ್ಟಿಕೊಂಡಿದ್ದರು. ಆಗ ಖ್ಯಾತ ಸಿನಿಮಾ ತಾರೆ ಆಗಿದ್ದ ದೇವಿಕಾರಾಣಿಯನ್ನು ೧೯೪೬ರಲ್ಲಿ ವಿವಾಹವಾದರು. ಅನಂತರ ಅವರು ಬೆಂಗಳೂರಿನ ಸಾಂಸ್ಕೃತಿಕ ಜೀವನಕ್ಕೆ ಹೊಂದಿಕೊಂಡು ಕಲಾಲೋಕಕ್ಕೆ ಮೆರಗು ತುಂಬಿದರು.

೧೯೬೦ ಮತ್ತು ೧೯೭೪ರಲ್ಲಿ ಮಾಸ್ಕೊ ಮತ್ತು ಲೆನಿನ್‌ಗ್ರಾಡ್‌ನಲ್ಲಿ ಸ್ವೆತಾಸ್ಲಾವ್ ಅವರ ಕಲಾ ಪ್ರದರ್ಶನ ನಡೆದಿದೆ. ರೋರಿಚ್ ಅವರು ''ನಾನು ರಷ್ಯನ್ ವಾಸ್ತವವಾದದಿಂದ ಪ್ರಭಾವಿತನಾಗಿದ್ದು, ಈ ಕಲೆಯೊಂದಿಗೆ ನಾನು ಮನತುಂಬಿಕೊಂಡಿದ್ದೇನೆ. ನಾನು ಹೆಚ್ಚಾಗಿ ಇಷ್ಟಪಡುವ ಸುಂದರ ಭವ್ಯ ದೇಶವಾದ ಭಾರತ ನನಗೆ ಆಂತರಿಕ ಅರಿವನ್ನೇ ತಿಳಿಸಿದೆ. ಭಾರತೀಯ ಕಲೆಯನ್ನು ತಿಳಿಯಲು ದೀರ್ಘ ಕಾಲದವರೆಗೆ ಇಲ್ಲಿ ನೆಲೆಸಬೇಕು. ಅದನ್ನು ನಿರಂತರವಾಗಿ ಅಧ್ಯಯನ ಮಾಡಬೇಕು. ಇಲ್ಲಿನ ವಿವಿಧ ಕಲಾತ್ಮಕ ಪರಂಪರೆ ನಿಜವಾಗಿಯೂ ಅಭ್ಯಾಸ ಮಾಡುವಂತಹದು'' ಎಂದಿದ್ದಾರೆ. ರಷ್ಯಾ, ಪಶ್ಚಿಮ ಯೂರೋಪ್ ಮತ್ತು ಭಾರತೀಯ ಕಲೆಗಳ ಬೇರುಗಳು ರೋರಿಚ್‌ರ ಚಿತ್ರಗಳಲ್ಲಿ ಪರಿಚಯವಾಗಿದೆ. ಅವರು ರಚಿಸಿರುವ ಚಿತ್ರಗಳು ಕುಲು ಮತ್ತು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತು, ಪ್ರಪಂಚದ ರಾಷ್ಟ್ರೀಯ ವಸ್ತು ಸಂಗ್ರಹಾಲಯಗಳಲ್ಲಿವೆ. ರೋರಿಚ್ ಅವರಿಗೆ ೧೯೬೧ರಲ್ಲಿ ಭಾರತ ಸರ್ಕಾರವು 'ಪದ್ಮಭೂಷಣ' ಪ್ರಶಸ್ತಿಯನ್ನು ಹಾಗೂ ೧೯೮೭ರಲ್ಲಿ ಕೇಂದ್ರ ಲಲಿತಕಲಾ ಅಕಾಡೆಮಿ 'ಫೆಲೋಷಿಪ್'ಅನ್ನು ನೀಡಿ ಗೌರವಿಸಿದೆ.

●

## ವಾಸುದೇವ ಗಿರಿಮಾಜಿ

*ಸ. ಚಿ. ರಮೇಶ್*

ವಾಸುದೇವ ಗಿರಿಮಾಜಿ ಅವರು ರಂಗಭೂಮಿ ಹಾಗೂ ಚಲನಚಿತ್ರ ರಂಗದಲ್ಲಿ ಅಪಾರ ಸೇವೆ ಸಲ್ಲಿಸಿದವರು. ಶ್ರೀಯುತರು ೧೬ ಮಾರ್ಚ್ ೧೯೧೨ ರಂದು ಜನಿಸಿದರು. ತಂದೆ ಗೋವಿಂದರಾವ್, ತಾಯಿ ತುಂಗಮ್ಮ. ತಂದೆಯವರು ಅಂದಿನ ಮೈಸೂರು ಸರಕಾರದ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗಳಲ್ಲಿ ಸೂಪರಿಂಟೆಂಡೆಂಟ್ ಆಗಿ ಕೆಲಸ ನಿರ್ವಹಿಸುತ್ತಿದ್ದರು. ಮೈಸೂರು, ಕೋಲಾರ, ಬೆಂಗಳೂರುಗಳಲ್ಲಿ ವಿದ್ಯಾಭಾಸ; ಗಿರಿಮಾಜಿ ಅವರು ಮಹಮ್ಮದ್‌ಪೀರ್ ನಾಟಕ ಕಂಪನಿಯಲ್ಲಿ ಗೇಟ್‌ಕೀಪರ್ ಆಗಿ ಕೆಲಸಕ್ಕೆ ಸೇರಿಕೊಂಡರು. ರಾಮಾಯಣದ 'ಮಂಡೋದರಿ' ಪಾತ್ರವನ್ನು ಯಶಸ್ವಿಯಾಗಿ ಅಭಿನಯಿಸಿ ಕಂಪನಿ ಮಾಲೀಕರ ಮನಸ್ಸು ಗೆದ್ದರು. ಸಂಸಾರನೌಕೆ, ಗೌತಮಬುದ್ಧ,

ಷಹಜಹಾನ್, ಪ್ರೇಮಲೀಲಾ ಮುಂತಾದ ನಾಟಕಗಳಲ್ಲಿ ಪ್ರಮುಖ ಸ್ತ್ರೀಪಾತ್ರಗಳನ್ನು ಅಭಿನಯಿಸುವುದರ ಮೂಲಕ ಜನ ಮೆಚ್ಚುಗೆ ಪಡೆದರು.

ಗುಬ್ಬಿ ತಂಡ (೧೯೪೧) ತೆಗೆದ 'ಸುಭದ್ರ' ಚಿತ್ರದಲ್ಲಿ ಕೃಷ್ಣನ ಪಾತ್ರವನ್ನು ಮಾಡಿದರು. ಈ ಹೊತ್ತಿಗಾಗಲೇ ಶ್ಯಾಮಲಾ ದೇವಿಯವರೊಂದಿಗೆ ಮದುವೆಯಾಗಿತ್ತು. ಪ್ರಸಿದ್ಧ ನಿರ್ದೇಶಕ ದೇವಕಿಕುಮಾರ್ ಬೋಸ್ ಅವರನ್ನು ಕಲ್ಕತ್ತೆಗೆ ಕರೆಯಿಸಿಕೊಂಡರು. ಅಲ್ಲಿ ಗಿರಿಮಾಜಿ, ಅವರ ಆರು ಚಿತ್ರಗಳಲ್ಲಿ ಸಹಾಯಕ ನಿರ್ದೇಶಕರಾಗಿ ದುಡಿದರು. ಅಲ್ಲದೆ ಪಿ.ಸಿ. ಬರುವಾರವರ ಐದು ಚಿತ್ರಗಳಿಗೆ ಸಹಾಯಕರಾಗಿ ದುಡಿದು ಕಲ್ಕತ್ತದಿಂದ ಮದ್ರಾಸಿಗೆ ಹೋದರು. ಸಿಂಗಾಪುರದಲ್ಲಿ (೧೯೫೨) 'ಅರ್ಜುನ' 'ಇಸ್ತಾನ್ ಇಂಪಿಯಾಸ್' ಎಂಬ ಎರಡು ಮಲಯಾ ಭಾಷೆಯ ಚಿತ್ರಗಳನ್ನು ಸ್ವತಂತ್ರವಾಗಿ ನಿರ್ದೇಶಿಸಿದರು. ನಟರಾಗಿ ಅಣ್ಣತಂಗಿ, ಕೈವಾರಮಹಾತ್ಮೆ, ಹರಿಭಕ್ತಿ, ಮಹಿಷಾಸುರಮರ್ದಿನಿ, ಧ್ರುವಚರಿತ್ರೆ, ಭರ್ಜರಿ ಬೇಟೆ, ರೌಡಿ ಎಂ.ಎಲ್.ಎ., ಸಂಕ್ರಾಂತಿ ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು.

೧೯೯೧ ರಿಂದ ಮೈಸೂರಿನಲ್ಲಿ ನೆಲೆಸಿದರು. ಅಲ್ಲಿ ನಡೆಯುವ ರಂಗಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಮೈಸೂರಿನ ಗೆಳೆಯರೆಲ್ಲ ಸೇರಿ ಅವರಿಗೆ ೮೦ ವರ್ಷ ತುಂಬಿದ್ದಕ್ಕಾಗಿ ನೆನಪಿನ ಸಂಚಿಕೆ ಹೊರತಂದು ಸನ್ಮಾನಿಸಿದರು. ಚಲನಚಿತ್ರ ವಾಣಿಜ್ಯ ಮಂಡಳಿ, ಸಿಂಡಿಕೇಟ್ ಬ್ಯಾಂಕ್ ಕಲಾರಂಗ, ಹೊನ್ನಪ್ಪ ಭಾಗವತರ ಟ್ರಸ್ಟ್, ಕರ್ನಾಟಕ ಅಕಾಡೆಮಿಗಳು ಇವರನ್ನು ಗೌರವಿಸಿ ಪ್ರಶಸ್ತಿಗಳನ್ನು ನೀಡಿವೆ. ಅಲ್ಲದೆ ಸರಕಾರ ಅವರಿಗೆ ಗೌರವ ಮಾಸಾಶನವನ್ನು ನೀಡಿತ್ತು. ಇವರು ಹೈದರಾಬಾದಿನ ತಮ್ಮ ಮಗನ ಮನೆಯಲ್ಲಿ ೨೪ ಆಗಸ್ಟ್ ೯೩ ರಂದು ಮರಣ ಹೊಂದಿದರು.

●



## ಚಿ. ಉದಯಶಂಕರ್

- ಡಿ. ಪಾಂಡುರಂಗ ಬಾಬು

ಕನ್ನಡ ಚಲನಚಿತ್ರದಲ್ಲಿ ತಮ್ಮ ಮಧುರಗೀತೆ ಹಾಗೂ ಸಂಭಾಷಣೆಗಳಿಂದ ಚಿತ್ರ ಸಾಹಿತಿಯಾಗಿ, ನಟರಾಗಿ ಚಿರಪರಿಚಿತರಾಗಿರುವ ಚಿ. ಉದಯಶಂಕರ್ ಹುಟ್ಟಿದ್ದು

೧೯ ಫೆಬ್ರವರಿ ೧೯೩೪ ರಂದು ಚಿಕ್ಕನಹಳ್ಳಿಯಲ್ಲಿ. ಇವರ ತಂದೆ ಚಿತ್ರ ಸಾಹಿತಿ ಚಿ.ಸದಾಶಿವಯ್ಯನವರು. ಅವರು ಆರನೇ ವಯಸ್ಸಿಗೆ 'ನಾನು ಚಂದ್ರ ಕೆರೆ ಕಟ್ಟಿದವೆ', ಹನ್ನೊಂದನೆ ವಯಸ್ಸಿಗೆ 'ಕರಡಿಗಳು ಸಿನಿಮಾ' ಎಂಬ ಕಥೆಗಳನ್ನು ಬರೆದಿದ್ದರು. ಅಖಿಲ ಕರ್ನಾಟಕ ಮಕ್ಕಳ ಕೂಟದ 'ಮಕ್ಕಳ ಬಾವುಟ'ದ ಸಂಪಾದಕರಾಗಿ ೧೩ನೇ ವಯಸ್ಸಿನಲ್ಲಿ 'ಸಕ್ಕರೆ ಅಚ್ಚು' ಕಾವ್ಯ ಸಂಕಲನವನ್ನು ಪ್ರಕಟಿಸಿದರು.

'ಶಿವರಾತ್ರಿ ಮಹಾತ್ಮೆ', 'ಸಂತ ತುಕಾರಾಂ' ಚಿತ್ರಗಳಿಗೆ ಸಾಹಿತ್ಯ ರಚಿಸಿ ಬೆಳಕಿಗೆ ಬಂದರು. ಅಂದಿನಿಂದ ಇಂದಿನವರೆಗೆ ಪೌರಾಣಿಕ, ಐತಿಹಾಸಿಕ, ಕೌಟುಂಬಿಕ, ಹಾಸ್ಯ ಹೀಗೆ ಎಲ್ಲ ಬಗೆಯ ಚಿತ್ರಗಳಿಗೂ ಒಗ್ಗುವ ಸಂಭಾಷಣೆ ಹಾಗೂ ಅನೇಕ ಗೀತೆಗಳನ್ನು ರಚಿಸಿದ್ದಾರೆ. 'ಕುಲಗೌರವ', 'ಪ್ರೇಮದ ಕಾಣಿಕೆ', 'ನಾಗರ ಹಾವು' ಮುಂತಾದ ಚಿತ್ರಗಳಿಗೆ ಬರೆದ ಇವರ ಸಾಹಿತ್ಯ ರಚನೆಗೆ ರಾಜ್ಯಪ್ರಶಸ್ತಿ, 'ಬಂಗಾರದ ಹೂವು', 'ಸಂತ ತುಕಾರಾಂ' ಚಿತ್ರಗಳ ಗೀತೆಗಳಿಗೆ ರಾಷ್ಟ್ರಪ್ರಶಸ್ತಿಗಳು ಲಭಿಸಿವೆ. ೧೯೮೫-೮೬ರಲ್ಲಿ 'ಆನಂದ' ಮತ್ತು 'ಭಾಗ್ಯದ ಲಕ್ಷ್ಮಿಬಾರಮ್ಮ' ಚಿತ್ರಗಳಿಗಾಗಿ ಸಿಂಗೀತಂ ಶ್ರೀನಿವಾಸ ಅವರೊಂದಿಗೆ ಪ್ರಶಸ್ತಿ ಹಂಚಿಕೊಂಡರು. ಚಿತ್ರ ರಸಿಕರು ನೀಡಿದ ಅನೇಕ ಪ್ರಶಸ್ತಿಗಳು ಇವರಿಗೆ ಲಭ್ಯವಾಗಿವೆ. ಚಲನಚಿತ್ರ ಗೀತಕಾರರಾದ ಚಿ. ಉದಯಶಂಕರ್ ಅವರು ೨.೭.೧೯೯೩ ರಂದು ದೈವಾಧೀನರಾದರು.

●



## ಜಿ. ಕೆ. ವೆಂಕಟೇಶ್

- ಡಿ. ಪಾಂಡುರಂಗ ಬಾಬು

ಸಂಗೀತವನ್ನೇ ಪ್ರೀತಿಸಿ, ಆರಾಧಿಸಿ ಉಸಿರಾಡಿದ ಜಿ.ಕೆ. ವೆಂಕಟೇಶ್ ಆರನೇ ವಯಸ್ಸಿಗೆ ವೀಣೆ ಹಿಡಿದವರು. ೧೧ನೇ ವಯಸ್ಸಿಗೆ ಚಲನಚಿತ್ರದ ಹುಚ್ಚಿನಿಂದ ಮದ್ರಾಸ್ ಸೇರಿ ಬಾಲನಟನಾಗಿ ಗುಂಪುಗಾಯಕರಾಗಿ ಬೆಳೆದರು. ಕೆ.ವಿ.ನಾಯ್ಡು, ಸಿ.ಆರ್. ವೆಂಕಟರಾಮನ್ ಮುಂತಾದವರ ಕೈಕೆಳಗೆ ದುಡಿದು ೧೯೪೮ರಲ್ಲಿ ಮೊದಲಿಗೆ ಮಲೆಯಾಳಂ ಚಿತ್ರಕ್ಕೆ ಸಂಗೀತ ನಿರ್ದೇಶಕರಾದರು. ೧೯೫೬ರಲ್ಲಿ 'ಸೋದರಿ' ಕನ್ನಡ ಚಿತ್ರಕ್ಕೆ ಅನಂತ ಪದ್ಮನಾಭ ಶಾಸ್ತ್ರಿಗಳಿಗೆ ಸಹಾಯಕರಾಗಿ ಕೆಲಸ ಮಾಡಿ 'ಹರಿಭಕ್ತ'ಚಿತ್ರದ ಮೂಲಕ ಕನ್ನಡದಲ್ಲಿ ಸ್ವತಂತ್ರ ಸಂಗೀತ ನಿರ್ದೇಶಕರಾದರು. ತಮ್ಮ ಪ್ರಯೋಗಶೀಲತೆಯ ನಿರಂತರ ಹುಡುಕಾಟದ ಮೂಲಕ ಕೆ.ಎಸ್. ನರಸಿಂಹಸ್ವಾಮಿ,

ಕುವೆಂಪು, ಬೇಂದ್ರೆ, ಎಂ.ವಿ. ಸೀತಾರಾಮಯ್ಯ ಮುಂತಾದ ಕನ್ನಡದ ಮೇರು ಕವಿಗಳ ಕವನಗಳನ್ನು ಚಲನಚಿತ್ರ ಸಂಗೀತದ ಮೂಲಕ ಜನಸಾಮಾನ್ಯರವರೆಗೂ ಕೊಂಡೊಯ್ದರು. ಕನ್ನಡದ ಮೇರು ನಟ ಡಾ. ರಾಜ್‌ಕುಮಾರ್ ಅವರನ್ನು ಗಾಯಕರಾಗಿ ಪರಿಚಯಿಸಿದ ಕೀರ್ತಿ ಜಿ.ಕೆ. ವೆಂಕಟೇಶ್‌ರವರಿಗೆ ಸಲ್ಲುತ್ತದೆ. ಅಲ್ಲದೆ ಅನೇಕ ಹೊರನಾಡ ಕಲಾವಿದರಾದ ಮನ್ನಾಡೆ, ಸುಮನ್ ಕಲ್ಯಾಣಪುರ್, ಆಶಾಬೋಸ್ಲೆ, ಬಿಸ್ಮಿಲ್ ಖಾನ್ ಮುಂತಾದವರಲ್ಲದೆ ಪಿ. ಕಾಳಿಂಗರಾವ್, ಭೀಮಸೇನ್‌ಜೋಷಿ, ಬಾಲಮುರಳಿ ಕೃಷ್ಣರಂತಹ ಸಂಗೀತ ವಿದ್ವಾಂಸರನ್ನು ಕನ್ನಡ ಚಿತ್ರರಂಗಕ್ಕೆ ಪರಿಚಯಿಸಿದರು. ಇವರ ಸ್ವರ ಸಂಯೋಜನೆಯಿಂದ ಬಂದ ಗೀತೆಗಳು ಅಸಂಖ್ಯಾತ. ಜಿ. ಕೆ. ವೆಂಕಟೇಶ ಅವರು 'ತುಂಬಿದ ಕೊಡ', 'ಧೈರ್ಯಲಕ್ಷ್ಮಿ', 'ಇಮ್ಮಡಿ ಪುಲಿಕೇಶಿ' ಚಿತ್ರಗಳನ್ನು ನಿರ್ಮಿಸಿ ಉತ್ತಮ ನಿರ್ಮಾಪಕರು ಎನಿಸಿದ್ದರು. 'ಭಕ್ತಕುಂಬಾರ' ಚಿತ್ರದ ಸಂಗೀತ ನಿರ್ದೇಶನಕ್ಕೆ ಅವರಿಗೆ ರಾಜ್ಯ ಪ್ರಶಸ್ತಿ ಲಭಿಸಿದೆ. ಅವರು ೧೭ನೇ ನವೆಂಬರ್ ೧೯೯೩ ರಂದು ತಮ್ಮ ೬೭ನೇ ವಯಸ್ಸಿನಲ್ಲಿ ನಿಧನರಾದರು.

●

## ಸುಂದರ ಕೃಷ್ಣ ಅರಸ್

*- ಡಿ. ಪಾಂಡುರಂಗ ಬಾಬು*



ಕನ್ನಡ ಚಲನ ಚಿತ್ರ ರಂಗದಲ್ಲಿ ಕಂಠದಾನ ಕಲಾವಿದರಾಗಿ, ಪೋಷಕ ನಟರಾಗಿ, ದಿಗ್ದರ್ಶಕರಾಗಿ, ನಿರ್ಮಾಪಕರಾಗಿ ಮೆರೆದ ಸುಂದರಕೃಷ್ಣ ಅರಸ್ ಅವರು ನವೆಂಬರ್ ೪, ೧೯೪೧ರಲ್ಲಿ ಮೈಸೂರಿನ ಸಮೀಪದ ಉತ್ತವಳ್ಳಿಯಲ್ಲಿ ಜೆ.ಪಿ. ಬಸವರಾಜ ಅರಸ್‌ರ ಪುತ್ರರಾಗಿ ಜನಿಸಿದರು. ಶಾಲೆಯ ದಿನಗಳನ್ನು ಹುಣಸೂರಿನಲ್ಲಿ ಪೂರೈಸಿ ೧೯೬೪ರಲ್ಲಿ ಮೈಸೂರು ಬನುಮಯ್ಯ ಕಾಲೇಜಿನ ಪದವೀಧರರಾದರು. ಚಿತ್ರರಂಗಕ್ಕೆ ಸೇರುವ ಮೊದಲು ಮೇಕಪ್ ಪಟುವಾಗಿ, ರಂಗನಟರಾಗಿ ಕೆಲಸ ಮಾಡಿದ್ದಾರೆ. ದಿ. ಕಲ್ಪನಾ ಅವರೊಂದಿಗೆ ಕರ್ನಾಟಕದಾದ್ಯಂತ ನಾಟಕಗಳನ್ನು ಆಡಿಸಿ, ಆಡಿದ್ದಾರೆ. ಚದುರಂಗರ ಪ್ರಶಸ್ತಿ ಚಿತ್ರ 'ಸರ್ವಮಂಗಳ' ಚಿತ್ರದಲ್ಲಿ ನಟಿಸುವ ಅವಕಾಶ ಸಿಕ್ಕಿದರೂ ಅದನ್ನು ತಪ್ಪಿಸಿಕೊಂಡು ಚದುರಂಗರಿಗೆ ಸಹಾಯಕ ನಿರ್ದೇಶಕರಾಗಿ ದುಡಿದರು. ಮುಂದೆ ಪುಟ್ಟಣ್ಣರ ಗರಡಿಯಲ್ಲಿ ಎಂಟು ವರ್ಷಗಳ ಕಾಲ ಸಹನಿರ್ದೇಶಕರಾಗಿ ಕೆಲಸ

ಮಾಡಿ'ಗೆಜ್ಜೆಪೂಜೆ' ಚಿತ್ರದಲ್ಲಿ ಸಣ್ಣಪಾತ್ರವೊಂದರಲ್ಲಿ ಕಾಣಿಸಿಕೊಂಡಿದ್ದರು. ಗಿರೀಶ ಕಾರ್ನಾಡರ ಪ್ರಶಸ್ತಿ ವಿಜೇತ ಚಿತ್ರ 'ಒಂದಾನೊಂದು ಕಾಲದಲ್ಲಿ', ನಂತರ ಖಳನಾಯಕರಾಗಿ, ಪೋಷಕ ನಟರಾಗಿ ಹಾಗೂ ಸುಮಾರು ೨೫೦ ಕ್ಕೂ ಹೆಚ್ಚು ಚಿತ್ರಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ನಟಿಸಿದ್ದಾರೆ. 'ಒಂದಾನೊಂದು ಕಾಲದಲ್ಲಿ' ಚಿತ್ರದ ಅಭಿನಯಕ್ಕಾಗಿ ಅವರಿಗೆ ಶ್ರೇಷ್ಠ ಪೋಷಕನಟ ಪ್ರಶಸ್ತಿ ಲಭಿಸಿದೆ. ನಿರ್ದೇಶಕರಾಗಿ 'ಸಂಗಮಸಾಕ್ಷಿ' ಎಂಬ ತುಳು ಚಿತ್ರವೊಂದನ್ನು ನಿರ್ದೇಶಿಸಿದರು. ಇವರ ನಿರ್ದೇಶನದ 'ಸಂಗ್ಯಾ ಬಾಳ್ಯಾ' ಚಿತ್ರ ೧೯೯೨ರ ಭಾರತೀಯ ಪನೋರಮಾಗೆ ಆಯ್ಕೆ ಆಗಿದ್ದಲ್ಲದೆ ಇದು ಮದರಾಸಿನ ಫಿಲಂ ಫ್ಯಾನ್ಸ್ ಪ್ರಶಸ್ತಿಯನ್ನು ಪಡೆಯಿತು. ಅವರು ಮುಂದೆ ತಮ್ಮದೇ ನಿರ್ದೇಶನದಲ್ಲಿ 'ಚಕ್ರ' ಎಂಬ ಚಿತ್ರವನ್ನು ನಿರ್ಮಿಸಿದರು. ಇತ್ತೀಚೆಗೆ 'ಸೂಪರ್ ನೋವಾ ೪೫೯' ಮಕ್ಕಳ ಸಾಹಸ ಪ್ರಧಾನ ಫ್ಯಾಂಟಸಿ ಚಿತ್ರವೊಂದನ್ನು ನಿರ್ದೇಶಿಸಿ ನಿರ್ಮಿಸಿದರು. ಆದರೆ ಆ ಚಿತ್ರ ತೆರೆ ಕಾಣುವ ಮುಂಚೆಯೇ ತಮ್ಮ ೫೨ರ ಮಧ್ಯೆ ವಯಸ್ಸಿನಲ್ಲಿ ಅಂದರೆ ೯ನೇ ನವೆಂಬರ್ ೧೯೯೩ರಂದು ವಿಧಿವಶರಾದರು.



## ಅಗರಂ ರಂಗಯ್ಯ

*-ರಾಜಶೇಖರ ಕೋಟಿ*

ಪತ್ರಿಕೋದ್ಯಮಿ ಹಾಗೂ ಸ್ವಾತಂತ್ರ್ಯ ಹೋರಾಟಗಾರ ಅಗರಂ ರಂಗಯ್ಯ ಅವರು ಡಿಸೆಂಬರ್ ೪, ೧೯೯೩ ರಂದು ನಿಧನರಾದರು. ಯಳಂದೂರು ತಾಲೂಕು ಅಗರಂ ಗ್ರಾಮದಲ್ಲಿ ೧೯೦೧ ರಲ್ಲಿ ಜನಿಸಿದ ರಂಗಯ್ಯನವರು ಪತ್ರಿಕೋದ್ಯಮದಲ್ಲಿ ಪದವಿ ಪಡೆದವರಲ್ಲಿ ಮೊದಲಿಗರು. ತಮ್ಮ ಪತ್ರಿಕೋದ್ಯಮದ ಅನುಭವವನ್ನು ಸ್ವಾತಂತ್ರ್ಯ ಚಳುವಳಿಯಲ್ಲಿ ಬಳಸಲು ವೆಂಕಟಕೃಷ್ಣಯ್ಯನವರ ಪತ್ರಿಕಾಲಯದಲ್ಲಿ ದುಡಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಡಿ. ಸುಬ್ಬಯ್ಯ ರಸ್ತೆಯಲ್ಲಿರುವ ತಮ್ಮ ಮನೆಯಲ್ಲಿ ನಡೆಸುತ್ತಿದ್ದ ಶ್ರೀರಾಮ ಪ್ರೆಸ್‌ನಿಂದ ಬ್ರಿಟಿಷರ ವಿರುದ್ಧ ಕರಪತ್ರ, ಭಿತ್ತಿಪತ್ರಗಳನ್ನು ಮುದ್ರಿಸಿ ವಿತರಿಸಿ ಜನರಲ್ಲಿ ಜಾಗೃತಿಯನ್ನು ಉಂಟು ಮಾಡಿದರು. ಬೆಳಗಾವಿಯಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಮೇಳದಲ್ಲಿ ಸಕ್ರಿಯವಾಗಿ ಭಾಗವಹಿಸಿ ಮದನಮೋಹನ ಮಾಳವೀಯ ಅವರಿಂದ ರಾಜ್ಯದ ಹೆಮ್ಮೆಯ ವ್ಯಕ್ತಿಯೆಂದು ಗೌರವಕ್ಕೆ ಪಾತ್ರವಾಗಿದ್ದ ಅವರು ಕ್ವಿಟ್ ಇಂಡಿಯ ಚಳುವಳಿಯಲ್ಲಿ ಪಾಲ್ಗೊಂಡು ೧೫ ತಿಂಗಳ ಕಾಲ ಸೆರೆಮನೆ

ವಾಸ ಅನುಭವಿಸಿದರು. ೧೯೩೬ರಲ್ಲಿ 'ಸ್ವಾದಿ' ಪತ್ರಿಕೆಯನ್ನು ಪುನರಾರಂಭಿಸಿ ೧೩.೧೧.೧೯೫೮ ರಿಂದ ತೀರ ಇತ್ತೀಚಿನವರೆಗೂ ಅದರ ಸಂಪಾದಕರಾಗಿ ನಡೆಸಿಕೊಂಡು ಬಂದಿದ್ದರು. ನಗರ ಪುರಸಭೆಯ ಸದಸ್ಯರೂ ಆಗಿದ್ದ ಅವರಿಗೆ ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಪತ್ರಿಕಾ ಅಕಾಡೆಮಿ ಪ್ರಶಸ್ತಿ ಸೇರಿದಂತೆ ಹಲವಾರು ಪ್ರಶಸ್ತಿ, ಸನ್ಮಾನಗಳು ಸಂದಿದ್ದವು.

●



## ಡಾ. ಎಂ. ಎಚ್. ಮರೀಗೌಡ

- ಅಗ್ರಹಾರ ಕೃಷ್ಣಮೂರ್ತಿ

ಎಂ. ಎಚ್. ಮರೀಗೌಡರು ೧೯೧೬ರಲ್ಲಿ ಆಗಸ್ಟ್ ೮ ರಂದು ಹುಟ್ಟಿದರು. ಬಿ.ಎಸ್ಸಿ ಪದವಿ ಪಡೆದ ನಂತರ ಮರೀಗೌಡರು ಮೊದಲಿನಿಂದಲೂ ಬಡ ರೈತರ ಜೀವನಕ್ಕೆ ನೇರವಾಗಿ ಉಪಯೋಗವಾಗುವಂತಹ ಉದ್ಯೋಗಕ್ಕಾಗಿ ಹಂಬಲಿಸುತ್ತಿದ್ದರು. ೧೯೪೨ ರಲ್ಲಿ ತೋಟಗಾರಿಕೆ ಇಲಾಖೆಯ ಸಹಾಯಕ ಸೂಪರಿಂಟೆಂಡೆಂಟರಾಗಿ ಕರ್ನಾಟಕದಾದ್ಯಂತ ತೋಟಗಾರಿಕೆಯ ಅಭಿವೃದ್ಧಿ ಮಾಡುವ ಕನಸು ಕಾಣತೊಡಗಿದರು. ವಿಶೇಷ ಅಧ್ಯಯನಕ್ಕಾಗಿ ವಿದೇಶಕ್ಕೆ ಹೋದ ಅವರು ಹಾರ್ವರ್ಡ್‌ನಲ್ಲಿ ಪಿಎಚ್.ಡಿ. ಪದವಿ ಪಡೆದರು. ತಮ್ಮ ಅಧಿಕಾರದ ಅವಧಿಯಲ್ಲಿ ಸುಮಾರು ೧೮ ಎಕರೆ ಹೊಲವನ್ನು ತಮ್ಮ ಇಲಾಖೆಯ ಪರಿಧಿಗೆ ಸೇರಿಸಿಕೊಂಡು ಹಣ್ಣು, ಹೂವು, ತರಕಾರಿಗಳ ಮಹಾಪೂರವನ್ನೇ ಹರಿಸಿದರು. ಕರ್ನಾಟಕದಲ್ಲಿ ತೋಟಗಾರಿಕೆ ಸಂಸ್ಕೃತಿಯ ಹರಿಕಾರರಾದರು. ಸುಮಾರು ೩೯೦ ತೋಟಗಳನ್ನು ಆಯಾ ನೆಲ, ಜಲ, ಮಣ್ಣಿಗನುಗುಣವಾಗಿ ಬೆಳೆಗಳ ಮೂಲಕ ಬೆಳೆಸಿದರು. ಕೋಲಾರದ ಬಳಿ ಹಲವಾರು ಜಾತಿಯ ಹಲಸಿನ ತೋಟ, ಮದ್ದೂರ ಬಳಿಯ ಸಪೋಟ, ಹೊಗಳಗೆರೆಯ ಮಾವಿನ ತೋಟ, ಶಿಡ್ಲಘಟ್ಟದ ಗೋಡಂಬಿ ತೋಟ, ಬೆಳ್ಳಾರದ ತೆಂಗಿನ ತೋಟ, ದೊಡ್ಡಬಳ್ಳಾಪುರದ ಬೆಣ್ಣೆ ಹಣ್ಣಿನ ತೋಟ ಮುಂತಾದವು ಅದಕ್ಕೆ ಸಾಕ್ಷಿ. ಅವರು ಇಲಾಖೆಯ ನಿರ್ದೇಶಕರಾದಾಗ ಕೇವಲ ನೂರು ಎಕರೆ ಗದ್ದೆ ಇದ್ದ ಲಾಲ್‌ಬಾಗನ್ನು ಎಂಟು ಹತ್ತು ವರ್ಷಗಳಲ್ಲಿ ಇನ್ನೂರೈವತ್ತು ಎಕರೆಗೆ ವಿಸ್ತರಿಸಿದರು. ಅದನ್ನೊಂದು ಸಸ್ಯಸಂಶೋಧನ ಕೇಂದ್ರವನ್ನಾಗಿ ರೂಪಿಸಿ ಜಗತ್ತಿನ ಗಮನ ಸೆಳೆದರು. ವಿದ್ಯಾರ್ಥಿಗಳಿಗೆ

ಮತ್ತು ರೈತರ ಮಕ್ಕಳಿಗೆ ತರಬೇತಿ ಯೋಜನೆಯನ್ನು ಇಡೀ ದೇಶದಲ್ಲೇ ಮೊದಲಬಾರಿಗೆ ಪ್ರಾರಂಭಿಸಿದರು. ಒಣ ಭೂಮಿಯ ತೋಟಗಾರಿಕೆಯ ಮಹತ್ವವನ್ನು ತಿಳಿಸಲು ಐದರಿಂದ ಸಾವಿರಾರು ಎಕರೆಗಳವರೆಗಿನ ಹಲವಾರು ತೋಟಗಳನ್ನು ರಾಜ್ಯದಾದ್ಯಂತ ರೂಪಿಸಿದರು. ೧೯೭೭ಳರಲ್ಲಿ ಅವರು ಇಲಾಖೆಯಿಂದ ನಿವೃತ್ತರಾದರು. ಅನಂತರವು ಅವರು ತೋಟಗಾರಿಕೆಯ ಬೆಳವಣಿಗೆಗೆ ಕೆಲಸ ಮಾಡಿದರು. ಅವರು ೧೩.೧೦.೧೯೯೩ ರಂದು ತೀರಿಕೊಂಡರು.

●



## ಶ್ರೀಮತಿ ಜುಬೇದಬಾಯಿ

- *ಶಿವಾನಂದ*

ರಂಗಭೂಮಿಗೆ ಅಮೋಘ ಸೇವೆ ಸಲ್ಲಿಸಿದ ಶ್ರೀಮತಿ ಜುಬೇದಬಾಯಿ ಅವರಿಗೆ ಕರ್ನಾಟಕದ ರಾಜ್ಯೋತ್ಸವ ಪ್ರಶಸ್ತಿಯನ್ನು ೧೯೯೨ ನವೆಂಬರ್ ೧ ರಂದು ನೀಡಿ ಗೌರವಿಸಿತು. ಮೂವತ್ತರ ದಶಕದಲ್ಲಿ ಸ್ತ್ರೀಯರು ರಂಗಭೂಮಿಯನ್ನು ಪ್ರವೇಶಿಸದೆ ಇದ್ದ ಕಾಲದಲ್ಲಿ, ಅದರಲ್ಲೂ ಸಂಪ್ರದಾಯಸ್ಥ ಮುಸ್ಲಿಂ ಕುಟುಂಬದ ಮಹಿಳೆ ಜುಬೇದಬಾಯಿ ಅವರು ತಮ್ಮ ಎಂಟನೇ ವಯಸ್ಸಿನಲ್ಲೇ ದಿಟ್ಟತನದಿಂದ ರಂಗಭೂಮಿಗೆ ತಮ್ಮನ್ನು ತಾವೇ ತೊಡಗಿಸಿಕೊಂಡದ್ದು ನಿಜಕ್ಕೂ ಶ್ಲಾಘನೀಯ. ಅವರು ಮುಂದೆ ಹಲವು ಕಂಪನಿಗಳಲ್ಲಿ ವಿಶಿಷ್ಟವಾದ ಅಭಿನಯ ಹಾಗೂ ಹಾಡುಗಾರಿಕೆಯಿಂದ ಜನಜನಿತರಾದರು. ಇವರು ಧಾರವಾಡ ಜಿಲ್ಲೆಯ ಹಾವೇರಿಯಲ್ಲಿ ೧೯೨೮ರಲ್ಲಿ ಜನಿಸಿದರು. 'ಹರಿಶ್ಚಂದ್ರ' ನಾಟಕದ ಲೋಹಿತಾಶ್ವನಾಗಿ ರಂಗಕ್ಕೆ ಪರಿಚಿತರಾದ ಜುಬೇದಬಾಯಿ ದೇವಗಿರಿಯ ಶಿವಮೂರ್ತಿ ಮಾಸ್ತರರ ಕಂಪನಿಯಲ್ಲಿ ಮಿಂಚಿ ನಂತರ ನರೇಗಲ್ಲ ಚನ್ನಬಸವಯ್ಯನವರ ಕಂಪನಿ, ಹಲಗೇರಿಯ ಹಾಲಸಿದ್ದೇಶ್ವರ ನಾಟ್ಯಸಂಘ ಮೊದಲಾದ ಕಂಪನಿಗಳಲ್ಲಿ ವಿಶಿಷ್ಟವಾಗಿ ಅಭಿನಯಿಸಿ ಪ್ರೇಕ್ಷಕರ ಮನ ಸೆಳೆದ ಪ್ರತಿಭಾವಂತ ಕಲಾವಿದೆ.

ಅನೇಕ ಹೆಸರಾಂತ ಹಿರಿಯ ಕಲಾವಿದರೊಂದಿಗೆ ಅವರು ಪಾತ್ರವಹಿಸಿ, ಹಾಡಿ ರಂಜಿಸಿದರು. ಕರ್ನಾಟಕ ನಾಟ್ಯಸಂಘದ ಪನ್ನಾದಾಸಿಯ ದಾಸಿ, ಚಿತ್ರಾಂಗದದ ಉಲೂಪಿ, ಮಂಡೋದರಿ, ಕೈಕೆ ಮೊದಲಾದ ಪಾತ್ರಗಳಿಗೆ ಜೀವ ತುಂಬಿದರು. ಕಂದಗಲ್ಲರ ಮೆಚ್ಚಿನ ನಾಯಕಿ ನಟಿಯಾಗಿ, ಗಜಾನನ ನಾಟ್ಯಸಂಘ ಹಾಗೂ ಮಹೇಶ ನಾಟ್ಯಸಂಘದಲ್ಲೂ

ಕಲಾವಿದೆಯಾಗಿ ದುಡಿದರು. 'ಜಯಕನ್ನಡ ಸಂಗೀತ ಸಂಘ ಹಾವೇರಿ' ಸಂಸ್ಥೆಯನ್ನು ಯಶಸ್ವಿಯಾಗಿ ನಡೆಸಿ ಅನೇಕ ಕಲಾವಿದರನ್ನು ರಂಗಕ್ಕೆ ಪರಿಚಯಿಸಿದರು. ಹವ್ಯಾಸಿ ತಂಡಗಳಲ್ಲೂ ಅಭಿನಯಿಸಿ ಸೊಗಸಾದ ಹಾಡುಗಾರ್ತಿಯಾಗಿ ವಿಶಿಷ್ಟ ಸಾಧನೆ ಮಾಡಿರುವ ಜುಬೇದಬಾಯಿ ರಂಗಗೀತೆಗಳ ಗಾಯನದಲ್ಲಿ ದೊಡ್ಡ ಹೆಸರು ಗಳಿಸಿ, ಅನೇಕ ಧ್ವನಿ ಮುದ್ರಿಕೆಗಳಿಗೆ ಹಾಡಿ ರಂಗ ಸಂಗೀತದ ವೈಭವವನ್ನು ಶಾಶ್ವತಗೊಳಿಸಿದ್ದಾರೆ.

●



## ಕೆ. ಎಸ್. ನಾಗರತ್ನಮ್ಮ

*- ಸಿ. ಆರ್. ಗೋವಿಂದರಾಜು*

ಶ್ರೀಮತಿ ಕೆ. ಎಸ್. ನಾಗರತ್ನಮ್ಮ ಅವರು ಹುಟ್ಟಿದ್ದು ೧೯೩೩ರ ನವೆಂಬರ್ ೨೩ ರಂದು. ಇವರ ಹುಟ್ಟೂರು ಮೈಸೂರು ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಕಬ್ಬಳ್ಳಿ ಗ್ರಾಮ. ತಂದೆ ಸಿ.ಆರ್. ಗೌಡರು, ಸಮಾಜ ಕಾರ್ಯಕರ್ತರು. ತಾಯಿ ಚಿನ್ನಮ್ಮ. ಸಾಹುಕಾರ್ ಕೆ.ಸಿ. ಸುಬ್ಬಣ್ಣ ಇವರ ಪತಿ. ಬೆಂಗಳೂರು ಯೂರೋಪಿಯನ್ ಕಾನ್ವೆಂಟಿನಲ್ಲಿ ಕೇಂಬ್ರಿಡ್ಜ್ ಪರೀಕ್ಷೆಯನ್ನು ಪಾಸು ಮಾಡಿದ್ದ ನಾಗರತ್ನಮ್ಮನವರು ಉತ್ತಮ ಕ್ರೀಡಾಪಟುಗಳು ಆಗಿದ್ದರು. ಕಲೆ, ಕ್ರೀಡೆ, ಜಾತ್ಯಾತೀತ ಗುಣಗಳನ್ನು ಅವರು ಮೈಗೂಡಿಸಿಕೊಂಡಿದ್ದರು. ಗುಂಡ್ಲುಪೇಟೆ ವಿಧಾನಸಭಾ ಕ್ಷೇತ್ರದಿಂದ ಏಳುಬಾರಿ ಆಯ್ಕೆ ಆಗಿದ್ದ ನಾಗರತ್ನಮ್ಮ ಅವರು ಕೆಳಮನೆಯ ಅಧ್ಯಕ್ಷಸ್ಥಾನ ಪಡೆದ ಮಹಿಳೆಯರ ಪೈಕಿ ಮೊದಲಿಗರು ಎಂದು ದಾಖಲಾಗಿದ್ದಾರೆ. ಅಲ್ಲದೆ ವಿಧಾನಸಭೆಯ ವಿರೋಧ ಪಕ್ಷದ ನಾಯಕಿ ಸ್ಥಾನ ಅಲಂಕರಿಸಿದ ಮಹಿಳೆಯರಲ್ಲಿ ಅವರೇ ಮೊದಲಿಗರು. ಶ್ರೀ ದೇವರಾಜು ಅರಸು ಅವರು ಮುಖ್ಯಮಂತ್ರಿಯಾಗಿದ್ದಾಗ ೧೯೭೨ರಲ್ಲಿ ಇವರು ವಿಧಾನಸಭೆಯ ಅಧ್ಯಕ್ಷೆಯಾಗಿದ್ದರು; ಅದೇ ವರ್ಷ ಸಂಸದೀಯ ನಿಯೋಗದ ಸದಸ್ಯೆಯಾಗಿ ಕೆನಡಾಕ್ಕೂ ಹೋಗಿದ್ದರು. ಶ್ರೀ ರಾಮಕೃಷ್ಣ ಹೆಗಡೆಯವರ ಸಂಪುಟದಲ್ಲಿ ವಿರೋಧ ಪಕ್ಷದ ನಾಯಕಿಯಾಗಿಯೂ, ಶ್ರೀ ಬಂಗಾರಪ್ಪ ಅವರ ಸಂಪುಟದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವೆಯಾಗಿಯೂ ಕಾರ್ಯ ನಿರ್ವಹಿಸಿದ್ದಾರೆ.

ಮೈಸೂರು ವಲಯ ಅಖಿಲ ಭಾರತ ಮಹಿಳಾ ಸಮ್ಮೇಳನ ಅಧ್ಯಕ್ಷರು, ಮೈಸೂರು ಭಾರತ್ ಸ್ಕೌಟ್ ಮತ್ತು ಗೈಡ್‌ನ ಉಪಾಧ್ಯಕ್ಷರು, ಮೈಸೂರಿನಲ್ಲಿರುವ ಮಾತೃಮಂಡಳಿಯ ಸದಸ್ಯರು, ಮೈಸೂರು ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರು, ಪ್ರದೇಶ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷರು ಆಗಿ ಅನೇಕ ಸಂಘ ಸಂಸ್ಥೆಗಳಲ್ಲಿ ಬಾಂಧವ್ಯವಿಟ್ಟುಕೊಂಡು ವಿವಿಧ ನೆಲೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ರೈತರ ಆಗು-ಹೋಗುಗಳಿಗೆ ಪ್ರತಿಸ್ಪಂದಿಸುತ್ತಿದ್ದ ಅವರು ಕೃಷಿಯ ಆಧುನೀಕರಣಕ್ಕಾಗಿ ವಿದೇಶಗಳಿಗೆ ಭೇಟಿ ನೀಡಿ ಅಧ್ಯಯನ ಮಾಡಿದ್ದರು. ಇಂದಿನ 'ಕರ್ನಾಟಕ ಚಿತ್ರಕಲಾ ಪರಿಷತ್ತಿನ' ಕಟ್ಟಡವನ್ನು ೬೫ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಿದ ರೂವಾರಿ. ಅಲ್ಲದೆ ಇವರು ಅದರ ಅಧ್ಯಕ್ಷರೂ ಆಗಿದ್ದರು. ಸುಮಾರು ೩೦ ಲಕ್ಷ ರೂಪಾಯಿಯ ಮೌಲ್ಯದ ಸಾಂಪ್ರದಾಯಿಕ ಚಿತ್ರಕಲೆಗಳನ್ನು ಮತ್ತು ಕರಕುಶಲ ವಸ್ತುಗಳನ್ನು ಸಂಗ್ರಹಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಅವರು ಅಕ್ಟೋಬರ್ ೧೭, ೧೯೯೩ ರಂದು ಬೆಳಗಿನ ಜಾವ ೫.೧೫ ಕ್ಕೆ ಹೃದಯಾಘಾತದಿಂದ ಅಸುನೀಗಿದರು.

•



## ಆರ್. ಗುಂಡೂರಾವ್

*- ಸಿ. ಆರ್. ಗೋವಿಂದರಾಜು*

ಶ್ರೀ ಆರ್. ಗುಂಡೂರಾವ್ ಹುಟ್ಟಿದ್ದು ಕೊಡಗು ಜಿಲ್ಲೆಯ ಕುಶಾಲನಗರದಲ್ಲಿ, ೧೯೩೭ರ ಸೆಪ್ಟೆಂಬರ್ ೨೭ರಂದು. ತಂದೆ ರಾಮ್‌ರಾವ್ ಒಬ್ಬ ಬಡ ಮಾಸ್ತರರು. ತಾಯಿ ಚೆನ್ನಮ್ಮ. ಆರಂಭದಲ್ಲಿ ಖಾಸಗಿ ಉದ್ಯೋಗಿಯಾಗಿ ಕೆಲಸ ಮಾಡುತ್ತಿದ್ದ ರಾಯರು 'ಶಕ್ತಿ' ಪತ್ರಿಕೆಯಲ್ಲಿ ಪತ್ರಕರ್ತರಾಗಿದ್ದು ಉಂಟು. ಕಾಂಗ್ರೆಸ್ ಪಕ್ಷವನ್ನು ಸೇರಿದ ಅವರು ೧೯೬೫ರಲ್ಲಿ ಕುಶಾಲನಗರದ ಪುರಸಭಾ ಅಧ್ಯಕ್ಷರಾಗಿ ಆಯ್ಕೆಗೊಂಡರು. ೧೯೭೩ರಲ್ಲಿ ಶಾಸಕರಾಗಿ ಆಯ್ಕೆಯಾಗಿ ದೇವರಾಜು ಅರಸು ಅವರ ಸಂಪುಟದಲ್ಲಿ ವಾರ್ತಾ ಮಂತ್ರಿಗಳಾಗಿ ಮತ್ತು ೧೯೭೫ರಲ್ಲಿ ವಸತಿ ಮತ್ತು ಯುವಜನ ಸೇವಾ ಸಚಿವರಾಗಿ ಸೇವೆ ಸಲ್ಲಿಸಿದರು. ೧೯೭೮ರಲ್ಲಿ ಸೋಮವಾರಪೇಟೆಯಿಂದ ವಿಧಾನಸಭಾ ಕ್ಷೇತ್ರಕ್ಕೆ ಆಯ್ಕೆ ಆಗಿ ಬಂದ ರಾಯರು ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರಾದರು. ಎಪ್ಪತ್ತರ ದಶಕದಲ್ಲಿ ರಾಷ್ಟ್ರೀಯ ರಾಜಕಾರಣದ ನೆಲೆ ಸಂಘರ್ಷಣಾತ್ಮಕವಾಗಿತ್ತು.

ಅಂಥ ಸಂದರ್ಭದಲ್ಲಿ ಶ್ರೀಮತಿ ಇಂದಿರಾಗಾಂಧಿ ಅವರ ಪರವಾಗಿ ನಿಂತ ರಾಯರು ಕೆಲವು ದಿನಗಳು ವಿರೋಧ ಪಕ್ಷದ ನಾಯಕರಾಗಿಯೂ ಕಾರ್ಯ ನಿರ್ವಹಿಸಿದರು. ಕರ್ನಾಟಕ ಪ್ರದೇಶ ಕಾಂಗ್ರೆಸ್ಸಿನ ಸಂಪೂರ್ಣ ಹೊಣೆ ಹೊತ್ತ ಗುಂಡೂರಾವ್ ಕನ್ನಡಿಗರ ಅಭಿಮಾನಕ್ಕೆ ಪಾತ್ರರಾದರು. ಇದರ ಪರಿಣಾಮವಾಗಿ ೧೯೮೦ರ ಜನವರಿ ೧೨ರಂದು ಕರ್ನಾಟಕದ ಮುಖ್ಯಮಂತ್ರಿಗಳಾದರು. ರಾಜ್ಯದ ರಾಯರಿಗೆ ಆಗ ಕೇವಲ ೪೩ ವರ್ಷ ಮಾತ್ರ. ಇವರು ಕರ್ನಾಟಕದ ಒಂಭತ್ತನೆಯ ಮುಖ್ಯಮಂತ್ರಿಗಳು. ೧೯೮೨ರಲ್ಲಿ ಏಳನೆಯ ನಡೆದ ವಿಧಾನಸಭೆಗೆ ಆಯ್ಕೆಯಾಗಲಿಲ್ಲ. ೧೯೮೯ರಲ್ಲಿ ಬೆಂಗಳೂರು ದಕ್ಷಿಣ ಕ್ಷೇತ್ರದಿಂದ ಲೋಕಸಭೆಗೆ ಆಯ್ಕೆಯಾದರು.

ಕೃಷ್ಣಾನದಿಗೆ ಕಾಲುವೆ ನಿರ್ಮಾಣ, ಕೃಷಿಗಾಗಿ ರೈತರ ಪಂಪ್‌ಸೆಟ್‌ಗಳಿಗೆ ವಿದ್ಯುಚ್ಛಕ್ತಿ ರಿಯಾಯಿತಿ, ಅಂಬೇಡ್ಕರ್ ಪ್ರತಿಮೆ ಮತ್ತು ಮೆಡಿಕಲ್ ಕಾಲೇಜುಗಳ ಸ್ಥಾಪನೆ, ಬೆಂಗಳೂರು ಬಸ್ ನಿಲ್ದಾಣದ ಸ್ಥಾಪನೆ, ಕಾವೇರಿ ಎರಡನೆಯ ಹಂತದ ಯೋಜನೆಗಳ ಜಾರಿ ಹಾಗೂ ವಿಶ್ವ ಕನ್ನಡ ಸಮ್ಮೇಳನದ ಯಶಸ್ಸಿಗೆ ಗುಂಡುರಾಯರು ಕಾರಣಕರ್ತರು. ಇವರು ೨೨.೮.೧೯೯೩ ರಂದು ಲಂಡನ್ನಿನ ರಾಯಲ್ ಫ್ರೀ ಹಾಸ್ಪೆಲ್‌ನಲ್ಲಿ ದೈವಾಧೀನರಾದರು.



## ಪುಂಡಲೀಕ ಶೇಟ್

*- ವೀರೇಶ ಬಡಿಗೇರ*

'ಹುಬ್ಬಳ್ಳಿಯಾಂವ' ಅಂಕಣದಿಂದ 'ಲಂಕೇಶ್ ಪತ್ರಿಕೆ'ಯ ಮೂಲಕ ಗಮನ ಸೆಳೆದ ಶ್ರೀ ಪುಂಡಲೀಕ ಶೇಟ್ ಅವರ (ಜನನ : ೨೭.೩.೧೯೫೨, ಮರಣ : ೧೮.೮.೯೩) ವ್ಯಕ್ತಿತ್ವ ಹಾಸ್ಯ ಸ್ವಭಾವದ್ದು. ದಿವಂಗತರು ತಮ್ಮ ಹುಬ್ಬಳ್ಳಿಯ ವಿಶಿಷ್ಟ ಭಾಷಾ ಶೈಲಿಯಿಂದಾಗಿ ನಾಡಿನ ತುಂಬಾ ಓದುಗ ಅಭಿಮಾನಿಗಳನ್ನು ಹೊಂದಿದ್ದರು.

ಸದಾ ಬಡತನದಲ್ಲಿಯೇ ಬದುಕಿದ್ದ ಶೇಟ್ ಖಂಡಿತವಾದಿ. ಸ್ವತಃ ಪತ್ರಿಕೋದ್ಯಮಿಯಾಗಿದ್ದು 'ಪುಂಡಲೀಕ ಪತ್ರಿಕೆ' ಎಂಬ ತಮ್ಮ ಹೆಸರಿನ ಪತ್ರಿಕೆಯನ್ನು ಹೊರತರುತ್ತಿದ್ದರು. ಇವರು ದೇವರು, ಧರ್ಮ, ಮೂಢನಂಬಿಕೆ, ಬೂಟಾಟಿಕೆ, ಭ್ರಷ್ಟಾಚಾರಗಳ ವಿರುದ್ಧ ತಮ್ಮ ಲೇಖನವನ್ನು ಅಸ್ತ್ರವನ್ನಾಗಿ ಬಳಸಿದರು. ಇದೇ ಅವರ

ಅಂಕಣಗಳ ವೈಶಿಷ್ಟ್ಯವಾಗಿತ್ತು. ಯಾವಾಗಲು ಇಬ್ಬರು ಜನ ಸಾಮಾನ್ಯರು ಹುಬ್ಬಳ್ಳಿಯ ಮಾತಿನ ಜಾಡಿನಲ್ಲಿ ದೇಶದ ಸಿನೆಮಾ, ರಾಜಕೀಯ, ಆಡಳಿತ, ಶಿಕ್ಷಣ ಕುರಿತು ಚರ್ಚಿಸುವುದು ಅವರ 'ಹುಬ್ಬಳ್ಳಿಯಾಂವ' ಅಂಕಣದ ಜೀವಾಳವಾಗಿತ್ತು. ಈ ಬರಹ ವ್ಯಂಗ್ಯ, ವಿನೋದ, ವಿಚಾರಶೀಲತೆಯಿಂದ ಕೂಡಿರುತ್ತಿತ್ತು. ಸದಾ ಹುರುಪಿನ ಈ ವ್ಯಕ್ತಿ ತುಮಕೂರು ಹತ್ತಿರ ಬಸ್ ಅಪಘಾತದಲ್ಲಿ ತೀರಿಕೊಂಡರು. ದಿವಂಗತರಿಗೆ ಪತ್ನಿ, ಮಕ್ಕಳು ಇದ್ದಾರೆ. ಕರ್ನಾಟಕ ಜನತೆ ಇವರ ಕುಟುಂಬಕ್ಕೆ ೧,೪೨,೫೦೭ ರೂಪಾಯಿಗಳನ್ನು ಸಂಗ್ರಹಿಸಿ ೩೦.೧೨.೧೯೯೩ ರಂದು ಅರ್ಪಿಸಿತು.

●

## ರಸಿಕ ಪುತ್ತಿಗೆ

*- ವೀರೇಶ ಬಡಿಗೇರ*

'ರಸಿಕ ಪುತ್ತಿಗೆ' ಎಂದೇ ಹೆಸರು ಗಳಿಸಿದ ದಿವಂಗತರ ನಿಜನಾಮ ಪುತ್ತಿಗೆ ಸುಬ್ರಮಣ್ಯ ಆಚಾರ್. ಇವರು ೫.೬.೧೯೩೨ ರಲ್ಲಿ ಪಿ. ವೆಂಕಟರಮಣಚಾರ್ ಮತ್ತು ನಾಗವೇಣಿಯವರ ಮಗನಾಗಿ ಕಾರ್ಕಳ ತಾಲ್ಲೂಕಿನ ಪುತ್ತಿಗೆಯಲ್ಲಿ ಜನಿಸಿದರು. ಚನ್ನಪಟ್ಟಣದ ಸಾರ್ವಜನಿಕ ವಿದ್ಯಾಸಂಸ್ಥೆಯಲ್ಲಿ ೧೯೬೦ ರಿಂದ ೧೯೯೦ ರವರೆಗೆ ಕನ್ನಡ ಮತ್ತು ಹಿಂದಿ ಭಾಷಾ ಪಂಡಿತರಾಗಿ ಸೇವೆ ಸಲ್ಲಿಸಿದರು.

ಸಾಹಿತ್ಯ ಕೈಂಕರ್ಯದಲ್ಲಿ ನಿರಂತರವಾಗಿ ತೊಡಗಿದ್ದ ರಸಿಕ ಪುತ್ತಿಗೆಯವರು ರಾಷ್ಟ್ರೀಯ ಪ್ರಶಸ್ತಿ ಮೊದಲ್ಗೊಂಡು ಮರಾಠಿ, ಹಿಂದಿ, ಭಾಷೆ ಸಾಹಿತ್ಯಗಳಿಂದಲೂ ಪ್ರಶಸ್ತಿ ಪಡೆದವರಾಗಿದ್ದಾರೆ. ವಿಶೇಷವಾಗಿ ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹಿಂದೀ ಪ್ರದೇಶಗಳಿಗೆ ಪರಿಚಯಿಸುವಲ್ಲಿ, ಹಿಂದಿ ಸಾಹಿತ್ಯದ ಅನುರೂಪತೆಯನ್ನು ಕನ್ನಡ ಸಾಹಿತ್ಯಕ್ಕೆ ತರುವಲ್ಲಿ ಇವರ ಶ್ರಮ ಗಮನಾರ್ಹವಾದುದು. ರಾಜಾಭಕೃಹರಿ, ಭಕೃ ಹರಿಯ ನೀತಿಶತಕ, ಬೀರಬಲ್ಲನ ವಿನೋದ, ವಿದುರ ನೀತಿ, (ಕನ್ನಡಕ್ಕೆ ಅನುವಾದಿಸಿದವು) ಏನೆನ್ನುತ್ತೀರಿ ಮಹಾಸ್ವಾಮಿ, ಸಿಂಹನಾದ (ಕವನ ಸಂಕಲನ) ಅಗ್ನಿಪರೀಕ್ಷೆ, ತಿಲೋತ್ತಮೆ (ನಾಟಕಗಳು) ಮುಕ್ತಾ, ವಿಷಸೂಚಿ (ಕಾದಂಬರಿಗಳು) ಬೇಡದ ಬಾಳು (ಸಣ್ಣ ಕಥೆ) ಕೋಟಿ ಚೆನ್ನಯ್ಯ, ತುಳಸಿದಾಸ (ಬಾಲ ಸಾಹಿತ್ಯ) ಕನ್ನಡದ ಕಣ್ಣು ಉತ್ತರದ ಮಣ್ಣು (ಪ್ರವಾಸ ಸಾಹಿತ್ಯ) ಇವು ಅವರ ಕೃತಿಗಳು. ಸಾಹಿತ್ಯ ಕ್ಷೇತ್ರದಲ್ಲಿ ಮಾತ್ರವಲ್ಲದೆ 'ಕನ್ನಡ ಪ್ರಭ' ದ ವರದಿಗಾರರಾಗಿ ಮತ್ತು ಬಯಲುಸೀಮೆ, ಮಂಜುವಾಣಿ, ವಿಕ್ರಮ - ಮುಂತಾದ ಪತ್ರಿಕೆಗಳಲ್ಲಿ ಅಂಕಣಕಾರರಾಗಿ ಪುತ್ತಿಗೆಯವರು ಸೇವೆಗೈದಿದ್ದಾರೆ. ಮಧ್ಯಪ್ರದೇಶದ ರಾಜಧಾನಿ ಭೂಪಾಲ ಸಾಂಸ್ಕೃತಿಕ ಸಂಘದ ಗೌರವ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ವಿಭಿನ್ನ ರೀತಿಯ ರಚನಾತ್ಮಕ ಕಾರ್ಯಗಳನ್ನು ಮಾಡಿದ ರಸಿಕ ಪುತ್ತಿಗೆಯವರು, ಫೆಬ್ರವರಿ ೭, ೧೯೯೩ ರಂದು ಹೃದಯಾಘಾತದಿಂದ ನಿಧನರಾದರು.

●



# ಡಾ. ರಂ. ಶ್ರೀ. ಮುಗಳಿ

*- ಎಸ್. ಆರ್. ಮಳಗಿ*

ರಂಗನಾಥ ಶ್ರೀನಿವಾಸರಾವ್ ಮುಗಳಿಯವರು ಹುಟ್ಟಿದ್ದು ಜುಲೈ ೧೫, ೧೯೦೯ ರಂದು. ಅವರು 'ರಸಿಕರಂಗ'ರಾಗಿ ವಿಶಿಷ್ಟ ವ್ಯಕ್ತಿತ್ವ ಪಡೆದುದು ಬೇಂದ್ರೆಯವರ ಪ್ರಭಾವದಿಂದ; ಬೇಂದ್ರೆಯವರ ಮಾತಿನ ಮೋಡಿಗೆ ಇವರು ಹೊಸ ಮನುಷ್ಯರೇ ಆದರು, ಕವಿಗಳಾದರು, ಜೀವನ ರಸಿಕರಾದರು. ತಾವು ಹುಟ್ಟಿ ಬೆಳೆದಿದ್ದ ಕನ್ನಡ ನಾಡು-ನುಡಿಯ ಬಗ್ಗೆ ಕಳಕಳಿ ತಳೆದರು. ಮುಗಳಿಯವರು ಮೊದಲು ಹುಬ್ಬಳ್ಳಿಯ 'ನ್ಯೂ ಇಂಗ್ಲಿಷ್ ಸ್ಕೂಲಿ'ನಲ್ಲಿ ಶಿಕ್ಷಕರಾಗಿ ನಾಲ್ಕು ವರ್ಷ ಸೇವೆ ಸಲ್ಲಿಸಿ, ಅನಂತರ ಮಹಾರಾಷ್ಟ್ರದ ಸಾಂಗಲಿಯ 'ವಿಲಿಂಗ್ಡನ್ ಕಾಲೇಜಿ'ನಲ್ಲಿ ಕನ್ನಡ, ಇಂಗ್ಲಿಷ್, ಸಂಸ್ಕೃತ ವಿಷಯಗಳಲ್ಲಿ ಪರಿಣತರಾಗಿ, ಪ್ರಾಧ್ಯಾಪಕರಾಗಿ, ಕೊನೆಯ ಐದು ವರ್ಷ ಪ್ರಾಂಶುಪಾಲರಾಗಿ - ಒಟ್ಟು ೩೩ ವರ್ಷಗಳ ಸೇವೆ ಸಲ್ಲಿಸಿದರು. ಅನೇಕ ಮರಾಠಿ ಸಾಹಿತಿಗಳ ಸ್ನೇಹ-ಸಂಪರ್ಕವಿರಿಸಿಕೊಂಡಿದ್ದ ಇವರಿಗೆ ಮರಾಠಿ ಭಾಷೆಯನ್ನು ರೂಢಿಸಿಕೊಳ್ಳುವುದು ಕಷ್ಟವಾಗಲಿಲ್ಲ. ಇದೇ ಸುಮಾರಿಗೆ ಇವರ 'ಕನ್ನಡ ಸಾಹಿತ್ಯ ಚರಿತ್ರೆ'ಗೆ ರಾಷ್ಟ್ರಪ್ರಶಸ್ತಿ ಹಾಗೂ ಡಿ.ಲಿಟ್ ಪದವಿ ದೊರೆತವು.

೧೯೬೩ರಲ್ಲಿ ಶ್ರೇಷ್ಠ ಸಾಹಿತಿಗೆ ದೊರೆಯುವ ಅತ್ಯುನ್ನತ ಸ್ಥಾನವಾದ 'ಕನ್ನಡ ಸಾಹಿತ್ಯ ಸಮ್ಮೇಳನ'ದ ಅಧ್ಯಕ್ಷ ಪದಕ್ಕೂ ಅವರ ಆಯ್ಕೆಯಾಯಿತು. ತುಮಕೂರು ಜಿಲ್ಲೆಯ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ೪೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ಅಲಂಕರಿಸಿದರು. 'ಗಡಿನಾಡಿನ ಕನ್ನಡದ ದೀಪ', 'ಗಡಿಪ್ರದೇಶದಲ್ಲಿ ಕನ್ನಡದ ಧ್ವಜ ಹಾರಿಸಿದ ಅಗ್ರಗಣ್ಯ' ಮುಂತಾಗಿ ಕನ್ನಡಿಗರಿಂದ ಪ್ರಶಸ್ತಿ ಪಡೆದರು. ೧೯೬೪ರಲ್ಲಿ 'ಇಂಕ್ಲಾ' ಸಂಸ್ಥೆಯ ಪರವಾಗಿ 'ಪ್ರಿಭು'ವಿನಲ್ಲಿ ಸೇರಿದ್ದ ಜಾಗತಿಕ ಸಮ್ಮೇಳನದಲ್ಲಿ ಪಾಲ್ಗೊಂಡರು. ಕನ್ನಡ ರಾಜ್ಯೋತ್ಸವ ಸಾಹಿತ್ಯ ಪ್ರಚಾರ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಕರ್ನಾಟಕ ಸರ್ಕಾರದ ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿ, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಮುಖ್ಯಸ್ಥರಾಗಿ, ಯು.ಜಿ.ಸಿ. ಪ್ರಾಧ್ಯಾಪಕರಾಗಿ, 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'ಯ ಸಂಪುಟಗಳ ಕಾರ್ಯ ನಿರ್ವಾಹಕ ಸಂಪಾದಕರಾಗಿ ಕಾರ್ಯವೆಸಗಿದರು. ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಯೋಜನೆ, ಪುಸ್ತಕ ಪ್ರಕಾಶನ, ಅಂತರ ಭಾರತಿ ಯೋಜನೆಗಳಲ್ಲಿ ದುಡಿದರು. 'ಶ್ರೀ ಅರವಿಂದ ಮಕರಂದ' ಮತ್ತು 'ಸಾವಿತ್ರಿ' ಮಹಾಕಾವ್ಯದ ನಾಲ್ಕು ಸಂಪುಟಗಳು ಕನ್ನಡಕ್ಕೆ ಅವರು

ಒದಗಿಸಿದ ಅಮೂಲ್ಯ ಕೊಡುಗೆಗಳು. ಮುಗಳಿಯವರು ಎಂಬತ್ತೇಳರ ತುಂಬುಬಾಳನ್ನು ಬಾಳಿದರು. ಕೊನೆಯ ೩-೪ ವರ್ಷಗಳಲ್ಲಿ ವೃದ್ಧಾಪ್ಯದ ಅಶಕ್ತತೆ ಅವರನ್ನು ತುಸು ಕಾಡಿತು. ಆದರೂ ಅವರ ಸ್ಮೃತಿಶಕ್ತಿ, ಬುದ್ಧಿಶಕ್ತಿ, ವಿನೋದ ಪ್ರವೃತ್ತಿಗಳು ಜಾಗೃತ ಸ್ಥಿತಿಯಲ್ಲಿತ್ತು; ಯಾವ ಬಗೆಯ ಯಾತನೆಯನ್ನೂ ತೋರಗೊಡದೆ ಶಾಂತ ರೀತಿಯಲ್ಲಿ ಫೆಬ್ರವರಿ ೨೦, ೧೯೯೩ ರಂದು ಕೊನೆಯುಸಿರೆಳೆದರು.

●

## ಡಾ. ವರದರಾಜ ಹುಯಿಲಗೋಳ

*- ಎಫ್. ಟಿ. ಹಳ್ಳಿಕೇರಿ*

ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳದಲ್ಲಿ ೧೯೧೭ ಆಗಸ್ಟ್ ೧೨ ರಂದು ಶ್ರೀ ರಾಜೇರಾವ ಮತ್ತು ಶ್ರೀಮತಿ ಗೋದಾವರಿ ಅವರ ಪುತ್ರರಾಗಿ ಜನಿಸಿದರು; ಮುದ್ದೇಬಿಹಾಳ, ಗದಗ, ಸಾಂಗ್ಲಿ, ಕೊಲ್ಹಾಪುರಗಳಲ್ಲಿ ಪ್ರಾಥಮಿಕ, ಪ್ರೌಢ, ಸ್ನಾತಕೋತ್ತರ ಉನ್ನತ ಶಿಕ್ಷಣವನ್ನು ಪೂರೈಸಿ ಧಾರವಾಡದಲ್ಲಿ ಅಧ್ಯಾಪಕ ವೃತ್ತಿಯನ್ನು ಕೈಗೊಂಡರು. ವಿದ್ಯಾರ್ಥಿಗಳಿಗೆ ಮನಮುಟ್ಟುವಂತೆ ಪಾಠ ಮಾಡುವುದು ಅವರ ಬೋಧನಾಕ್ರಮದ ಮೂಲ ಧ್ಯೇಯವಾಗಿತ್ತು. ಪಠ್ಯ ಪುಸ್ತಕಗಳಿಗೆ ಕೊಡುತ್ತಿದ್ದ ಗಮನವನ್ನು ಪಠ್ಯೇತರ ಚಟುವಟಿಕೆಗಳಿಗೂ ಕೊಡುತ್ತಿದ್ದರು. ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ವಿದ್ಯಾರ್ಥಿಗಳನ್ನು ಹುರಿದುಂಬಿಸುತ್ತಿದ್ದರು. ಗಿರೀಶ ಕಾರ್ನಾಡ, ಸಿದ್ಧಲಿಂಗ ಪಟ್ಟಣಶೆಟ್ಟಿ, ಸುರೇಶ ಹೆಬ್ಳಿಕರ್, ಮಾಧವ ಮಹಿಷಿ, ಮಾಧವ ಗುಡಿ ಇನ್ನೂ ಅನೇಕಾನೇಕ ಇಂದಿನ ವಿದ್ವಾಂಸರು, ಸಾಹಿತಿಗಳು, ಕಲಾವಿದರು ಇವರ ಶಿಷ್ಯರಾಗಿದ್ದರು.

'ಲೋಕೋಪಕಾರ', 'ಸಾವಿತ್ರಿ', 'ಕಾಲಚಕ್ರ', 'ನಮ್ಮ ಸರಸ್ವತಿ', 'ನಿನಗೊಂದು ಮಾತು', 'ಇತಿಶ್ರೀ', 'ಅಂದಿನ ವಸಂತ' ಇವು ಇತರ ಕೃತಿಗಳು. ಹಳಗನ್ನಡ ಕಾವ್ಯಗಳಲ್ಲಿ ಚಿತ್ರಿತವಾಗಿರುವ ಪ್ರಸಂಗಗಳನ್ನು ಆಯ್ದುಕೊಂಡು ಯಶೋಧರ ಚರಿತೆಯ 'ಅಮೃತಮತಿ', ಪ್ರಭುಲಿಂಗಲೀಲೆಯ 'ಮಾಯೆಯ ಮೋಹ' ಎಂಬ ನಾಟಕಗಳನ್ನೂ ರಚಿಸಿದ್ದಾರೆ. 'ದುರ್ಗಸಿಂಹನ ಪಂಚತಂತ್ರ ಸಮೀಕ್ಷೆ' ವರದರಾಜರ ಸಂಶೋಧನ ಕ್ಷೇತ್ರಕ್ಕೆ ನೀಡಿದ ಪಿಎಚ್.ಡಿ. ಕೃತಿ. ಸತತಾಭ್ಯಾಸ, ಪ್ರಾಮಾಣಿಕತೆ, ಪರಿಶ್ರಮದಿಂದ ರಂ. ಶ್ರೀ ಮುಗಳಿಯವರ ಮಾರ್ಗದರ್ಶನದಲ್ಲಿ ದುರ್ಗಸಿಂಹನ 'ಪಂಚತಂತ್ರ'ವನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಆಲೂರು ವೆಂಕಟರಾಯರು, ಶಂಬಾ ಜೋಶಿ, ವರಕವಿ ಬೇಂದ್ರೆ, ವಿ.ಕೃ. ಗೋಕಾಕ, ಉತ್ತಂಗಿ ಚೆನ್ನಪ್ಪ ಅವರ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. ಡಾ. ವರದರಾಜರಿಗೆ ಎಪ್ಪತ್ತು ವರ್ಷತುಂಬಿದ ಸಂದರ್ಭದಲ್ಲಿ ನಾಡಿನ

ಸಾಹಿತಿಗಳು, ಅಭಿಮಾನಿಗಳು ವಿದ್ಯಾರ್ಥಿಗಳು, ಸನ್ಮಾನಿಸಿ, 'ಮಂದಾರ' ಎಂಬ ಸ್ಮರಣಗ್ರಂಥವನ್ನು ಅರ್ಪಿಸಿ ಗೌರವಿಸಿದ್ದರು. ಇವರು ಅಕ್ಟೋಬರ್ ೧೦, ೧೯೯೩ ರಂದು ನಿಧನರಾದರು.



## ಎ. ಕೆ. ರಾಮಾನುಜನ್

*- ರಹಮತ್ ತರೀಕೆರೆ*

ಮೈಸೂರಿನಲ್ಲಿ ಹುಟ್ಟಿ ಬೆಳೆದ ತಮಿಳು ಮಾತೃಭಾಷೆಯ ಅತ್ತೀಪೇಟೆ ಕೃಷ್ಣಸ್ವಾಮಿ ರಾಮಾನುಜನ್ (೧೯೨೯-೧೯೯೩) ಕನ್ನಡದ ಲೇಖಕರು.

ಭಾರತದ ನಿಜವಾದ ಸಂಸ್ಕೃತಿಯಿರುವುದು ಈ ದೇಶದ ಮೌಖಿಕ ಪರಂಪರೆಯಲ್ಲಿ ಎಂದು ಗಾಢವಾಗಿ ನಂಬಿ ರಾಮಾನುಜನ್, ಭಾರತದ ಜಾನಪದ ಅಧ್ಯಯನಕ್ಕೆ ಒಂದು ವಿಸ್ತಾರವಾದ ಹಾಸನ್ನು ಸಿದ್ಧಗೊಳಿಸುತ್ತಿದ್ದರು. ನಗರದಲ್ಲಿ ಹುಟ್ಟಿ ಬೆಳೆದ, ಉದ್ಯೋಗಕ್ಕಾಗಿ ಅಮೆರಿಕೆಯ ಮಹಾನಗರವನ್ನಾಯ್ದುಕೊಂಡ, ಶಿಷ್ಟ ಅನುಭವಗಳ ನವ್ಯಲೇಖಕ ಮೊದಲು ಆರಿಸಿಕೊಂಡಿದ್ದ ಭಾಷಾಶಾಸ್ತ್ರವನ್ನು ಕೈಬಿಟ್ಟು ಜಾನಪದದ ಬೆನ್ನುಹತ್ತಿ ಭಾರತೀಯ ಸಂಸ್ಕೃತಿಯ ದೇಸೀ ಮೂಲಗಳಿಗೆ ಹೋಗಿ, ಅಲ್ಲಿ ಸಮುದಾಯದ ಪ್ರತಿಭೆಯನ್ನು, ಸೃಜನಶೀಲತೆಯನ್ನು ಅರಸತೊಡಗಿದರು. ಅವರು ಹೊರಜಗತ್ತಿಗೆ ಭಾರತದ್ದೆಂದು ತೋರಿಸಿದ್ದು ಸಂಸ್ಕೃತ ಅಥವಾ ಭಾರತೀಯ ಇಂಗ್ಲಿಷ್ ಸಾಹಿತ್ಯವನ್ನಲ್ಲ, ಲಿಪಿಯೇ ಇಲ್ಲದ ಎಷ್ಟೋ ಭಾಷೆಗಳು ಎಷ್ಟೋ ವರ್ಷಗಳಿಂದ ಗಳಿಸಿಕೊಂಡಿರುವ ಶ್ರೀಮಂತವಾದ ಪರಂಪರೆಯನ್ನು ಅವರ 'ಫೋಕ್‌ಟೇಲ್ಸ್ ಫ್ರಂ ಇಂಡಿಯಾ'ಕೃತಿಯಲ್ಲಿ ನಾಗಾ, ಗೊಂಡಿ, ಸಂತಾಲಿ, ಕೋಟಾ (ಈ ಬುಡಕಟ್ಟಿನ ಜನಸಂಖ್ಯೆ ಸಾವಿರಕ್ಕೂ ಕಡಿಮೆ) ಮೊದಲಾದ ಬುಡಕಟ್ಟುಲೋಕದ ಜನಪದಕತೆಗಳು ಎದ್ದು ಕಾಣುತ್ತವೆ; ಕರ್ನಾಟಕದಿಂದ ಕನ್ನಡ ಕತೆಗಳ ಜತೆಯಲ್ಲಿ ತುಳು ಕತೆಗಳಿವೆ. ''ಭಾರತದಲ್ಲಿ ಹಲವು ಭಾರತಗಳಿವೆ'' ಎಂದು ಸೇರಿಸಿಕೊಳ್ಳಬೇಕು ಎಂದು ಹೇಳುತ್ತಿದ್ದ ರಾಮಾನುಜನ್ನರ ಸಾಂಸ್ಕೃತಿಕ ಧೋರಣೆಯು ಅವರ ಅನುವಾದಗಳ ಆಯ್ಕೆಯಲ್ಲಿಯೂ ಕಾಣುತ್ತದೆ. ಅವರು ತಮಿಳು ಕನ್ನಡದಂಥ ದ್ರಾವಿಡಭಾಷೆಗಳ ಪ್ರಾಚೀನ ಸಾಹಿತ್ಯವನ್ನು ಅನುವಾದಿಸಿದರು. 'ಸ್ಪೀಕಿಂಗ್ ಆಫ್ ಶಿವ' ಎಂಟು ನೂರು ವರ್ಷಗಳ ಹಿಂದೆ ಮೂರನೇ ದೇಶದ ಪ್ರಾಂತೀಯ ಭಾಷೆಯೊಂದು ಮುಟ್ಟಿದ ಎತ್ತರವನ್ನು ಇಂಗ್ಲಿಷ್

ಮಾತನಾಡುವ ದೇಶಗಳಿಗೆ ಮನಗಾಣಿಸಿದರು. ಶೌರಿಯವರ ಇಂಗ್ಲಿಷ್ ಕಾದಂಬರಿ ಮೂಲದಲ್ಲಿ ಪ್ರಕಟವಾಗುವ ಮುಂಚೆಯೇ 'ಹಳದಿ ಮೀನು' ಇವರ ಅನುವಾದದಲ್ಲಿ ಪ್ರಸಿದ್ಧವಾಯಿತು. ಅನಂತಮೂರ್ತಿಯವರ 'ಸಂಸ್ಕಾರ' ದ ಅನುವಾದವಂತೂ ಅಮೆರಿಕೆಯ ಹಲವು ವಿಶ್ವವಿದ್ಯಾಲಯಗಳಲ್ಲಿ ಪಠ್ಯಪುಸ್ತಕವಾಗಿದೆ. ರಾಮಾನುಜನ್ ಸುಮಾರು ಅರ್ಧಶತಮಾನದ ಅವಧಿಯಲ್ಲಿ ಕನ್ನಡದಲ್ಲಿ ಬರೆದಿದ್ದು ಎರಡು ಕತೆ, ಒಂದು ಕಾದಂಬರಿ ಹಾಗೂ ಮೂರು ಸಂಕಲನಗಳ ಪದ್ಯಗಳು ಮಾತ್ರ. ಅವರ 'ಹೊಕ್ಕುಳಲ್ಲಿ ಹೂವಿಲ್ಲ' ಕವಿತೆಗಳು ಅವರ 'ಮತ್ತೊಬ್ಬನ ಆತ್ಮಚರಿತ್ರೆ' ಕಾದಂಬರಿಯಲ್ಲಿ ಎಷ್ಟೋ ವಿಶಿಷ್ಟವಾದ ಪ್ರಸಂಗಗಳಿವೆ. ರಾಮಾನುಜನ್ ಬರೆದ ಎರಡು ಕತೆಗಳು'ಅಣ್ಣಯ್ಯನ ಮಾನವಶಾಸ್ತ್ರ' ಮತ್ತು 'ಮದುರೆಯಲ್ಲಿ ಕಂಡ ತಲೆ'. ಅವರ ನಿಜವಾದ ಸಾಧನೆಯಿರುವುದೇ ಸಂಸ್ಕೃತಿ ಚಿಂತನೆಯಲ್ಲಿ. ಇದಕ್ಕಾಗಿ ಈ ಕವಿ, ಕತೆಗಾರ, ಅನುವಾದಕ, ಭಾಷಾಶಾಸ್ತ್ರಜ್ಞ, ಜಾನಪದ ವಿದ್ವಾಂಸ - ತನ್ನೆಲ್ಲ ಗಮನವನ್ನು ಒಂದುಕಡೆ ಕೂಡಿಸಿದ್ದರು. ಪ್ರತಿಷ್ಠಿತ ಮೆಕಾರ್ಥರ್ ಫೆಲೋಶಿಪ್ (ಜೀನಿಯಸ್ ಅವಾರ್ಡ್) ಪಡೆದು, ಶಿಕಾಗೋ ವಿಶ್ವವಿದ್ಯಾಲಯದಲ್ಲಿ ದಕ್ಷಿಣ ಏಷಿಯಾದ ಭಾಷೆ ಮತ್ತು ನಾಗರಿಕತೆಗಳ ಪ್ರಾಧ್ಯಾಪಕರಾಗಿದ್ದ ಕನ್ನಡ ಲೇಖಕರೊಬ್ಬರು, ಹೀಗೆ ತಟ್ಟನೆ ೧೩.೭.೯೩ ರಂದು ಇಲ್ಲವಾಗಿದ್ದಾರೆ. ಆದರೆ ಅವರ ಪುಸ್ತಕಗಳು ನಮ್ಮ ಜತೆಯಲ್ಲಿ ಉಳಿದಿವೆ.

●



## ಜಿ. ಬಿ. ಜೋಶಿ

*- ಧನ್ಯಕುಮಾರ ಮಿಣಜಗಿ*

ಜಿ. ಬಿ. ಜೋಶಿಯವರು (ಜನನ ೨೯.೭.೧೯೦೪) ಡಿಸೆಂಬರ್ ೨೬, ೧೯೯೩ ರಂದು ಕಣ್ಮರೆಯಾದರು. ಅವರು ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಶಿಕ್ಷಣಕ್ಕೆ ಶರಣು ಹೊಡೆದರು. ಓದುವ ಹವ್ಯಾಸವನ್ನು ಬೆಳೆಸಿಕೊಂಡಿದ್ದ ಅವರು ಮೂಲತಃ ನಾಟಕಕಾರರಾಗಿದ್ದರೂ ಕೂಡ, ಕಾವ್ಯ ರಚನೆ (ಜೀವಫಲ) ಕಾದಂಬರಿ (ಧರ್ಮಸೆರೆ) ಮತ್ತು ಪ್ರಬಂಧ (ಜಡಭರತನ ಕನಸುಗಳು)ಗಳನ್ನೂ ಬರೆದಿದ್ದಾರೆ. 'ಕದಡಿದ ನೀರು', 'ಮೂಕ ಬಲಿ', 'ಆ ಊರು ಈ ಊರು', 'ಸತ್ತವರ ನೆರಳು', 'ನಾನೇ ಬಿಜ್ಜಳ' ಮತ್ತು 'ಪರಿಮಳದವರು'ಇವು ಇವರ ನಾಟಕಗಳು.

ಜಿ. ಬಿ. ಅವರು ಮನೋಹರ ಗ್ರಂಥಮಾಲೆ ಕಟ್ಟುವುದರಲ್ಲಿಯೇ ತಮ್ಮ ಇಡೀ ಆಯುಷ್ಯವನ್ನು ತೇಯ್ದರು. ಮನೋಹರ ಗ್ರಂಥಮಾಲೆಯ ಪುಸ್ತಕಗಳು ಹೊತ್ತಿಗೆ ಸರಿಯಾಗಿ ಬರಬೇಕಿತ್ತು. ಆದರೆ ಹೊತ್ತಿಗೆ ತಪ್ಪಿ ಪ್ರಕಟಗೊಂಡಾಗ, ತಮ್ಮ ಚಂದಾದಾರರಿಗೆ ಅವುಗಳನ್ನು ತಲುಪಿಸುವಾಗ ಸಂಕಟಪಟ್ಟದ್ದುಂಟು. ತಡವಾದುದಕ್ಕೆ ಸಬೂಬು ಹೇಳದೆ ನೇರವಾಗಿ ಕ್ಷಮೆಯಾಚಿಸುವ ಹೃದಯ ವೈಶಾಲ್ಯ ಅವರದು. ಗ್ರಂಥಮಾಲೆಯ ಲೇಖಕರ ಬಳಗ ಬಹುದೊಡ್ಡದು. ಹಿಂದಿನ ತಲೆಮಾರಿನ ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ, ಗೊರೂರು, ಮಾಸ್ತಿ, ಅ. ನ. ಕೃ., ದೇವುಡು, ಆನಂದಕಂದರಿಂದ ಹಿಡಿದು ಇಂದಿನ ಕೀರ್ತಿನಾಥ ಕುರ್ತಕೋಟಿ, ಶಾಂತಿನಾಥ ದೇಸಾಯಿ, ಚಂದ್ರಶೇಖರ ಕಂಬಾರ, ಗಿರೀಶ್ ಕಾರ್ನಾಡ್, ಯು. ಆರ್. ಅನಂತಮೂರ್ತಿ, ಕಾಮರೂಪಿ, ಕೃಷ್ಣಾನಂದ ಕಾಮತ್, ಪಿ. ಲಂಕೇಶ್, ತೇಜಸ್ವಿ, ಎ. ಕೆ. ರಾಮಾನುಜನ್, ಶ್ರೀ ಕೃಷ್ಣ ಆಲನಹಳ್ಳಿ ಅವರುಗಳವರೆಗೆ ಅವರ ಲೇಖಕರ ಬಳಗ ಹಬ್ಬಿದೆ. ೧೯೮೬ ರಲ್ಲಿ ಪದ್ಮಶ್ರೀ ಮತ್ತು ರಾಜ್ಯ ಹಾಗೂ ಕೇಂದ್ರ ನಾಟಕ ಅಕಾಡೆಮಿ ಪ್ರಶಸ್ತಿಗಳು ಇವರಿಗೆ ದೊರೆತಿದ್ದವು.

ಗ್ರಂಥಮಾಲೆ ತನ್ನ ಬೆಳ್ಳಿಹಬ್ಬದ ನೆನಪಿಗಾಗಿ ಹೊರತಂದದ್ದು 'ನಡೆದು ಬಂದ ದಾರಿ'.ಚಿನ್ನದ ಹಬ್ಬದ ನೆನಪಿಗೆ ತಂದ 'ಪುಟ ಬಂಗಾರ'.ಗ್ರಂಥಮಾಲೆಯ ಇನ್ನೊಂದು ಮಹತ್ವದ ಕೊಡುಗೆ 'ಮನ್ವಂತರ'ವೆಂಬ ವಿಮರ್ಶೆಗೆ ಮೀಸಲಾದ ಪತ್ರಿಕೆ. ಧಾರವಾಡದ ಸಾಂಸ್ಕೃತಿಕ ನೆಲೆಗಳಲ್ಲಿ ಜಿ. ಬಿ. ಅವರ ಅಟ್ಟವೂ ಒಂದು. ಸುಭಾಸ ರಸ್ತೆಯ ಈ ಅಟ್ಟಕ್ಕೆ ಬರುವ ಎಲ್ಲರಿಗೂ ಯಜಮಾನರದ್ದೇ ಸ್ವಾಗತ. ಅಟ್ಟದ ಒಡ್ಡೋಲಗದ ಮೂಲ ಸೂತ್ರಧಾರ ಜಿ. ಬಿ. ಅವರು. ಮಾಲೆಯ ಜೀವನಾಡಿಯಾಗಿದ್ದ ಅವರು ಇನ್ನಿಲ್ಲ.

## ಕೆ. ಎಸ್. ನಾರಾಯಣ ಸ್ವಾಮಿ

*- ಅಪರ್ಣಾ*



ಕೆ.ಎಸ್.ನಾರಾಯಣಸ್ವಾಮಿ ಅವರು ಹುಟ್ಟಿದ್ದು ೨-೩-೧೯೨೮ ರಂದು, ಅರಸೀಕೆರೆಯಲ್ಲಿ. ಗದ್ದೆ, ತೆಂಗಿನ ತೋಟಗಳಿದ್ದ ದೊಡ್ಡ ಕುಟುಂಬದಲ್ಲಿ, ಕಣಕಟ್ಟೆ ಸೀತಾರಾಮಯ್ಯ ಹಾಗು ಶಂಕರಮ್ಮನವರ ಹಿರಿಯ ಮಗನಾಗಿ ಜನನ. ಅರಸೀಕೆರೆ ಹಾಸನ ಶಿವಮೊಗ್ಗೆಯಲ್ಲಿ ಶಾಲಾ ಶಿಕ್ಷಣ. ಮುಂದೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿಎಸ್ಸಿ ತನಕ ಓದು.

೧೯೫೬ ರಲ್ಲಿ ಪ್ರಜಾವಾಣಿಗೆ ಉಪಸಂಪಾದಕರಾಗಿ ಕಾಲಿಟ್ಟ ಅವರು ೩೬ ವರ್ಷಗಳ ಕಾಲ ಪತ್ರಕರ್ತರಾಗಿ ಹಲವು ಮಜಲುಗಳನ್ನು ಕಂಡರು. 'ಪ್ರಜಾವಾಣಿ'ಯಲ್ಲಿ ಹನ್ನೊಂದು ವರ್ಷಗಳು, 'ಕನ್ನಡಪ್ರಭ'ದಲ್ಲಿ ಇಪ್ಪತ್ತೊಂದು ವರ್ಷಗಳು; ಇಲ್ಲಿ ನಿವೃತ್ತಿಯಾದ ನಂತರ ಹೊಸದಿನಪತ್ರಿಕೆ 'ಅಭಿಮಾನ'ದಲ್ಲಿ ಕೆಲಕಾಲ, ಬಳಿಕ 'ಕರ್ಮವೀರ'ಕ್ಕಾಗಿ ಒಂದು ವರ್ಷ, ಅನಂತರ 'ಪ್ರಜಾಮತ'ದಲ್ಲಿ ಎರಡು ವರ್ಷಗಳು ವಿವಿಧ ಹುದ್ದೆಗಳಲ್ಲಿ ಅವಿರತವಾಗಿ ದುಡಿದರು.

ಇವರ ಮೊದಲ ಕಾದಂಬರಿ ' ಕರುಣಾಳು ಬಾ ಬೆಳಕೆ'; ಐಬಿಹೆಚ್ ಪ್ರಕಾಶನಕ್ಕೆ ರಂಗನಟ 'ನಾಗೇಶರಾಯರ'ಜೀವನ ಚರಿತ್ರೆ ಬರೆದರು. 'ವಿಶ್ವ ಕಥಾಕೋಶ'ಕ್ಕಾಗಿ ಹಂಗೇರಿಯನ್ - ರುಮೇನಿಯನ್ ಸಣ್ಣಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದರು. ('ಮಂಜುಹೂವಿನ ಮದುವಣಗಿ'). ಪ್ರೊ.ಇನಾಂದಾರರ 'ಶಾಪ' ಕಾದಂಬರಿ ಆಧರಿಸಿ, ಎನ್.ಲಕ್ಷ್ಮೀನಾರಾಯಣ್ ನಿರ್ದೇಶನದಲ್ಲಿ 'ಮುಕ್ತಿ'ಚಲನಚಿತ್ರ ತಯಾರಿಸಿದರು. ಸಾಹಿತಿ ವಿಶುಕುಮಾರ್ ನಿರ್ದೇಶನದ 'ಕರಾವಳಿ', ಎಂ.ಆರ್.ವಿಠಲ್ ನಿರ್ದೇಶಿಸಿದ 'ಪುನರ್ಮಿಲನ' ಚಿತ್ರಗಳಿಗೆ ಸಂಭಾಷಣಕಾರರಾಗಿಯೂ ದುಡಿದಿದ್ದಾರೆ. ಕನ್ನಡ ಸಾಹಿತ್ಯ, ಸಿನಿಮಾ, ಸಂಸ್ಕೃತಿ, ಪತ್ರಿಕೋದ್ಯಮಕ್ಕೆ ಅವರಿಂದ ಸೇವೆ ಸಂದಿದೆ. ೧೯೯೧ರ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗೆ ಪಾತ್ರರಾಗಿದ್ದರು. ೧೯೭೬ರಲ್ಲಿ ಹೃದಯಘಾತಕ್ಕೆ ತುತ್ತಾದಾಗಿನಿಂದ, ಕೊನೆಯತನಕ ಅನಾರೋಗ್ಯದಿಂದ ಬಳಲಿ ೧೯೯೩ ಫೆಬ್ರವರಿ ೭ ರಂದು ನಿಧನ ಹೊಂದಿದರು.



# ವಾರ್ಷಿಕದ ಲೇಖಕರು

**ಎಂ.ಎಂ. ಶಿವಪ್ರಕಾಶ್**, ಕಿರಿಯ ಸಹಾಯಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಬಿ. ಪಾರ್ಥಸಾರಥಿ** *ಐ.ಎ.ಎಸ್,* ವಿಭಾಗಾಧಿಕಾರಿ, ಬೆಂಗಳೂರು.

**ಎಂ. ವೀರಪ್ಪ ಮೊಯಿಲಿ,** ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ.

**ನಾಗೇಶ ಹೆಗಡೆ,** ಪ್ರಧಾನ ಉಪಸಂಪಾದಕರು, ಸುಧಾ, ಬೆಂಗಳೂರು.

**ಕೆ.ಜಿ. ವಾಸುಕಿ,** ನಿರ್ದೇಶಕ, ಮಾಹಿತಿ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

**ದಿನೇಶ ಅಮೀನಮಟ್ಟು,** ವರದಿಗಾರ ಪ್ರಜಾವಾಣಿ, ಸೌಜನ್ಯ, ಮಂಜುನಾಥ ಹೌಸಿಂಗ್ ಸೊಸೈಟಿ, ಶಿವಗಿರಿ, ಜಯನಗರ, ಧಾರವಾಡ.

**ರಾಜು ಅಡಕಳ್ಳಿ,** ವರದಿಗಾರ ಪ್ರಜಾವಾಣಿ, ೧೦-೩-೫೪ ಶ್ರೀನಿಕೇತನ, ವಿಠಲನಗರ, ಗುಲ್ಬರ್ಗಾ.

**ಪದ್ಮರಾಜ್ ದಂಡಾವತಿ,** ವರದಿಗಾರ, ಪ್ರಜಾವಾಣಿ, ವಡಗಾಂವ, ಬೆಳಗಾವಿ.

**ಎಚ್.ಎಸ್. ನಿರಂಜನಾರಾಧ್ಯ,** ರೀಡರ್, ಪ್ರಾಣಿಶಾಸ್ತ್ರ ವಿಭಾಗ, ಸಿದ್ಧಗಂಗ ವಿಜ್ಞಾನ ಕಾಲೇಜು, ತುಮಕೂರು.

**ಬಿ.ವಿ. ರಜನಿ, ಭಾಷಾಂತರಕಾರ್ತಿ,** ಕೆ.ಎಂ.ಎಫ್. ಕೇಂದ್ರ ಕಛೇರಿ, ಬೆಂಗಳೂರು.

**ಡಾ. ಹೆಚ್.ಡಿ. ಚಂದ್ರಪ್ಪಗೌಡ,** ೬೪, ಶ್ರೀನಿವಾಸ ನಿಲಯ, ಮಿಷನ್ ಕಾಂಪೌಂಡ್, ಶಿವಮೊಗ್ಗ.

**ಡಾ.ಎಂ.ಎ. ನಾರಾಯಣ ರೆಡ್ಡಿ,** ಪ್ರಾಧ್ಯಾಪಕರು, ತೋಟಗಾರಿಕೆ ವಿಭಾಗ, ಜಿ.ಕೆ.ವಿ.ಕೆ , ಬೆಂಗಳೂರು.

**ಡಾ.ವೈ.ಟಿ. ನಾರಾಯಣ ರೆಡ್ಡಿ,** ಪ್ರಾಧ್ಯಾಪಕರು, ತೋಟಗಾರಿಕೆ ವಿಭಾಗ, ಜಿ.ಕೆ.ವಿ.ಕೆ, ಬೆಂಗಳೂರು.

**ರವಿರಾಜ್ ಕುಂಬಾಸಿ**, ಜೀವವಿಮಾ ಅಭಿವೃದ್ಧಿ ಅಧಿಕಾರಿ, ಹೆಬ್ರಿ, ಕಾರ್ಕಳ ತಾಲೂಕು.

**ಪ್ರೊ. ಆ.ಷ. ಸೀತಾರಾಂ,** ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಯ ಅಧ್ಯಯನ ಸಂಸ್ಥೆ, ನಾಗರಬಾವಿ, ಬೆಂಗಳೂರು.

**ಡಾ.ಕೆ.ವಿ. ನಾರಾಯಣ, ಕುಲಸಚಿವರು,** ಕನ್ನಡ ವಿಶ್ವವಿದ್ಯಾಲಯ, ಪಂಪಿ, ವಿದ್ಯಾರಣ್ಯ.

**ಡಾ.ಎಂ. ಚಿದಾನಂದ ಮೂರ್ತಿ,** ಮಿಂಚು, ೬/ಎ ೪ನೇ ಕ್ರಾಸ್, ೩ನೇ ಮೇನ್, ವಿಜಯನಗರ, ೨ನೇಹಂತ, ಬೆಂಗಳೂರು.

**ಶ್ರೀ ಟಿ.ಪಿ. ಅಶೋಕ,** ಅಗ್ರಹಾರ, ಸಾಗರ, ಶಿವಮೊಗ್ಗ ಜಿಲ್ಲೆ.

**ಬಿ.ಎಂ. ಪುಟ್ಟಯ್ಯ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಎಸ್. ಸುಗತ,** ನಂ. ೮, ಚಿರಂಜೀವಿ ಹಳೆ ಈಜುಕೊಳದ ರಸ್ತೆ, ಕೋದಂಡರಾಮಪುರ, ಬೆಂಗಳೂರು.

**ಎಂ.ಕೆ. ಶ್ರೀಧರ,** ಸಂಸ್ಕೃತ ಉಪನ್ಯಾಸಕ, ನ್ಯಾಷನಲ್ ಕಾಲೇಜು, ಬಸವನಗುಡಿ, ಬೆಂಗಳೂರು.

**ವಿಶ್ವನಾಥ ಬದಿಕಾನ**, ಸಂಶೋಧನಾ ವಿಧ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಎ.ಆರ್. ಪ್ರಕಾಶ್,** ವಾರ್ತಾಧಿಕಾರಿ, ವಾರ್ತಾ ಮತ್ತು ಪ್ರಚಾರ ಇಲಾಖೆ, ಹೊಸಪೇಟೆ.

**ಕೆ.ಎಸ್. ಶ್ರೀನಿವಾಸಮೂರ್ತಿ,** ೩೯೭, ೪೩ನೇ ಅಡ್ಡರಸ್ತೆ, ೪ನೇ ಬ್ಲಾಕ್, ಜಯನಗರ, ಬೆಂಗಳೂರು.

**ಶಿವಾನಂದ,** ಓಬಳಪ್ಪ ಗಾರ್ಡನ್, ಯಡಿಯೂರು, ಬೆಂಗಳೂರು.

**ಮುರಲೀಧರ ಖಜಾನೆ,** ೩೭೪, ೯ನೇ ಮೇನ್, ಹನುಮಂತನಗರ, ಬೆಂಗಳೂರು.

**ವಿಜು ಪೂಣಚ್ಚ,** ಉಪಸಂಪಾದಕರು, ಪ್ರಜಾವಾಣಿ, ಬೆಂಗಳೂರು.

**ಮಲ್ಲೇಪುರಂ ಜಿ. ವೆಂಕಟೇಶ್,** ರೀಡರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ವೀರೇಂದ್ರ ಸಿಂಪಿ,** ಅಧ್ಯಾಪಕರು, ಬಿ.ವಿ.ವಿ. ಕಾಲೇಜು, ಬೀದರ್.

**ಎ.ವಿ. ನಾವಡ,** ರೀಡರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಅಮರೇಶ ನುಗಡೋಣಿ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಮಾಧವ ಪೆರಾಜೆ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ವಿಠಲರಾವ್ ಟಿ. ಗಾಯಕ್ವಾಡ್,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಡಾ. ಎಫ್. ಟಿ. ಹಳ್ಳಿ ಕೇರಿ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

**ಡಾ.ಎಚ್.ಎಸ್. ಶ್ರೀಮತಿ,** ರೀಡರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಡಾ. ಪುರುಷೋತ್ತಮ ಬಿಳಿಮಲೆ,** ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಪ್ರೊ. ಹಿ.ಚಿ. ಬೋರಲಿಂಗಯ್ಯ,** ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಪ್ರೊ. ಓ.ಎಲ್. ನಾಗಭೂಷಣಸ್ವಾಮಿ,** ಪ್ರಾಧ್ಯಾಪಕರು,. ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಡಾ. ರಹಮತ್ ತರೀಕೆರೆ**, ರೀಡರ್, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಡಾ.ಹೆಚ್.ಎಸ್. ರಾಘವೇಂದ್ರರಾವ್,** ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಶಿವಾನಂದ ವಿರಕ್ತಮಠ,** ಸಹಾಯಕ ನಿರ್ದೇಶಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಅಶೋಕ ಕುಮಾರ ರಂಜೇರೆ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಬಿ. ಸುಜ್ಞಾನ ಮೂರ್ತಿ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಎಸ್.ಎಸ್. ಹಿರೇಮಠ,** ರೀಡರ್, ವೀರಶೈವ ಪ್ರಥಮ ದರ್ಜೆ ಕಾಲೇಜು, ಹರಪನಹಳ್ಳಿ.

**ಡಾ. ಚಂದ್ರಶೇಖರ ಕಂಬಾರ,** ಕುಲಪತಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಸಾ. ಮಂಚಯ್ಯ,** ೧೧೯೨, ೩೫ನೇ ಬಿ ಕ್ರಾಸ್, ೨೮ನೇ ಮುಖ್ಯರಸ್ತೆ, ೪ನೇ ಟಿ ಬ್ಲಾಕ್, ಜಯನಗರ, ಬೆಂಗಳೂರು.

**ಬಿ.ಎ. ಶ್ರೀಧರ,** ೫, ಅಚ್ಚೋದ ೨ನೇ ಮೇನ್ ೩ನೇ ಘಟ್ಟ, ಜೆ.ಪಿ. ನಗರ, ಬೆಂಗಳೂರು.

**ಎಸ್. ಶ್ರೀನಿವಾಸನ್,** ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

**ಹಾ ಸಾ ಕೃ,** ೧೨/೪ ಆಂಜನೇಯ ದೇವಸ್ಥಾನದ ೨ನೇ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು.

**ಕೆ. ಮುಕುಂದನ್,** ರಿಜಿಸ್ಟ್ರಾರ್, ಲಲಿತಕಲಾ ಅಕಾಡೆಮಿ, ಬೆಂಗಳೂರು.

**ದುರ್ಗಾ ಸಿ. ಆವರ್ತಿ,** ರಿಜಿಸ್ಟ್ರಾರ್, ಸಂಗೀತ ಮತ್ತು ನೃತ್ಯ ಅಕಾಡೆಮಿ, ಬೆಂಗಳೂರು.

**ಎಂ. ಜಯಕುಮಾರ,** ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.

**ಡಾ. ಮೋಹನ ಕುಂಟಾರ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ರಾ. ವೆಂಕಟೇಶ ಇಂದ್ವಾಡಿ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಅ.ಲ. ನರಸಿಂಹನ್,** ನಂ. ೧೩, ೧೫ನೇ ಅಡ್ಡರಸ್ತೆ, ಹೊಸದೇವಸ್ಥಾನದ ಹತ್ತಿರ, ಮಲ್ಲೇಶ್ವರಂ, ಬೆಂಗಳೂರು.

**ಡಾ. ಸುಬ್ಬಣ್ಣ ರೈ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಎನ್. ಮರಿಶಾಮಾಚಾರ್,** ೮೮, ಮೊದಲನೆ ಎ ಕ್ರಾಸ್, ೨ನೇ ಮೇನ್ ೩ನೇ ಬ್ಲಾಕ್, ಜಯನಗರ, ಬೆಂಗಳೂರು.

**ಸ.ಚಿ. ರಮೇಶ,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಡಾ. ಪಾಂಡುರಂಗ ಬಾಬು,** ಅಧ್ಯಾಪಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ರಾಜಶೇಖರ ಕೋಟಿ,** ಸಂಪಾದಕ, ಆಂದೋಲನ, ಮೈಸೂರು.

**ಅಗ್ರಹಾರ ಕೃಷ್ಣಮೂರ್ತಿ,** ಪ್ರಾದೇಶಿಕ ಕಾರ್ಯದರ್ಶಿ, ಸಾಹಿತ್ಯ ಅಕಾಡೆಮಿ, ಎ.ಡಿ.ಎ ರಂಗ ಮಂದಿರ, ಜೆ.ಸಿ. ರಸ್ತೆ, ಬೆಂಗಳೂರು.

**ಸಿ.ಎರ್. ಗೋವಿಂದರಾಜು,** ಸಂಶೋಧನಾ ವಿಧ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ವೀರೇಶ ಬಡಿಗೇರ,** ಸಹಾಯಕ ನಿರ್ದೇಶಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಎಸ್.ಆರ್. ಮಳಗಿ,** ೧೦ ಬಿ ೧ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು.

**ಡಾ. ಕರೀಗೌಡ ಬೀಚನಹಳ್ಳಿ,** ನಿರ್ದೇಶಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಅಪರ್ಣಾ,** ೪೨, ೪ನೇ ಕ್ರಾಸ್, ಈಜುಕೊಳದ ಬಡಾವಣೆ, ಮಲ್ಲೇಶ್ವರಂ, ಬೆಂಗಳೂರು.

**ಧನ್ಯಕುಮಾರ ಮಿಣಜಗಿ,** ಉಪಗ್ರಂಥಪಾಲಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.



'ಕನ್ನಡ ವಾರ್ಷಿಕ' ಕರ್ನಾಟಕದ ಆಯಾಯಾ ವರ್ಷದ ಸಾಂಸ್ಕೃತಿಕ ಅಭಿವ್ಯಕ್ತಿ ಹಾಗೂ ಸಾಧನೆಗಳನ್ನು ಕುರಿತ ಸಮೀಕ್ಷೆ. ಇದು ಕೇವಲ ಮಾಹಿತಿಗಳ ವಿವರ ಮಾತ್ರವಾಗದೆ, ಸಾಂಸ್ಕೃತಿಕ ಮೌಲ್ಯಗ್ರಹಿಕೆ ಹಾಗೂ ಸಮೀಕ್ಷೆಗಳನ್ನು ಒಳಗೊಂಡಿರುವುದರಿಂದ ವಿಶಿಷ್ಟ ಮೂಲಕೃತಿಯೊಂದರ ಸ್ವರೂಪ ಅದಕ್ಕೆ ತಾನಾಗಿಯೇ ಪ್ರಾಪ್ತವಾಗಿದೆ. ಕರ್ನಾಟಕದ ಪ್ರಜ್ಞಾವಂತರು ಇಟ್ಟ ಹೆಜ್ಜೆಯನ್ನು, ಸಾಧಿಸಿದ ಸಾಧನೆಗಳನ್ನು ಲೋಕದಲ್ಲಿ ಸಾಂಕೇತಿಕವಾಗಿ ಗೌರವಿಸಿದಾಗ ಅವುಗಳ ಸತ್ವ ಹಾಗೂ ಅರ್ಥವನ್ನು ಹುಡುಕಿ ವಿವರಿಸುವುದು. ಜೊತೆಗೆ ಕರ್ನಾಟಕದಲ್ಲಿ ಆಯಾಯಾ ವರ್ಷ ಸಂಭವಿಸಿದ ಪ್ರಮುಖವಾದ ಸಾಮಾಜಿಕ, ಸಾಂಸ್ಕೃತಿಕ ಸಂಗತಿಗಳ ವಿಶ್ಲೇಷಣೆ; ವರ್ಷದಲ್ಲಿ ಅಭಿವ್ಯಕ್ತಗೊಂಡ ಕಾವ್ಯ, ನಾಟಕ, ಕತೆ, ಕಾದಂಬರಿ, ವಿಮರ್ಶೆ ಮುಂತಾದ ಸೃಜನಶೀಲ ಅಭಿವ್ಯಕ್ತಿ ಪ್ರಕಾರಗಳ ಪರಿಶೀಲನೆ; ರಾಜಕಾರಣ, ಶಿಕ್ಷಣ, ಸಂಗೀತ, ಕಲೆ, ರಂಗಭೂಮಿ, ಸಿನೆಮಾ, ವಿಜ್ಞಾನ, ತಂತ್ರಜ್ಞಾನ, ವೈದ್ಯಕೀಯ ಮುಂತಾದ ಕ್ಷೇತ್ರಗಳಲ್ಲಿ ಆಗಿರುವ ಬೆಳವಣಿಗೆಗಳ ಸಮೀಕ್ಷೆ; ಕನ್ನಡ ನಾಡು, ನುಡಿ ಹಾಗೂ ಜನರ ಕುರಿತು ನಡೆದಿರುವ ಚರ್ಚೆ, ವಾಗ್ವಾದಗಳ ಸಮೀಕ್ಷೆ - ಹೀಗೆ ಕನ್ನಡ ಸಂಸ್ಕೃತಿಯ ವಿವಿಧ ಸ್ವರೂಪಗಳನ್ನು ಅರಿಯುವ ಪ್ರಯತ್ನ ಕನ್ನಡ ವಾರ್ಷಿಕದ ಪ್ರಧಾನ ಆಶಯವಾಗಿದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

